# ನಾಗಚಂದ್ರ ಕವಿಯ ಪಂಪರಾಮಾಯಣ

ಗದ್ಯರೂಪ - ಡಾ. ಪಿ.ವಿ. ನಾರಾಯಣ



ಕಾಮಧೇನು
ಪುಸ್ತಕ ಭವನ

# ನಾಗಚಂದ್ರ ಕವಿಯ

# ಪಂಪ ರಾಮಾಯಣ

ಡಾ. ಪಿ. ವಿ. ನಾರಾಯಣ




ನಂ. ೫/೧, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು-೫೬೦ ೦೨೦

**PAMPA RAMAYANA** - a modern Kannada prose narration by Dr. P.V. Narayana of the old Kannada Classic of the 12th century by poet Nagachandra.

Published by : Prof. D.K. Shyamasundara Rao for
Kamadhenu Pustaka Bhavana,
# 5/1, Nagappa Street, Sheshadripura, Bengaluru - 560 020

| | | |
|---|---|---|
| First Edition | : | 2013 |
| Pages | : | vi + 226 = 232 |
| Copies | : | 500 |
| Copy Right | : | Dr. P.V. Narayana |
| Paper | : | 70 GSM Maplitho |
| Price | : | ₹ 150/- |
| Cover Design | : | Sri Ganjeefa Raghupati Bhat |

**ಪಂಪ ರಾಮಾಯಣ (ಗದ್ಯ ಕಥನ)**

ಲೇಖಕರು : ಡಾ|| ಪಿ.ವಿ. ನಾರಾಯಣ, 'ತಂಗಾಳಿ' ನಂ. 30, ಆರ್.ಬಿ.ಐ. ಕಾಲೋನಿ, ಜಯನಗರ 3ನೇ ಬ್ಲಾಕ್, ಬೆಂಗಳೂರು - 560 011.

ಪ್ರಕಾಶಕರು : ಪ್ರೊ. ಡಿ.ಕೆ. ಶ್ಯಾಮಸುಂದರರಾವ್, ಕಾಮಧೇನು ಪುಸ್ತಕ ಭವನ, ನಂ. 5/1, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು-560020

| | | |
|---|---|---|
| ಕೃತಿಸ್ವಾಮ್ಯ | : | ಡಾ|| ಪಿ.ವಿ. ನಾರಾಯಣ |
| ಮೊದಲ ಮುದ್ರಣ | : | 2013 |
| ಬೆಲೆ | : | ₹ 150/- |
| ರಕ್ಷಾಪುಟ ವಿನ್ಯಾಸ | : | ಶ್ರೀ ಗಂಜೀಫಾ ರಘುಪತಿ ಭಟ್ |

**ಮುದ್ರಣ** : ಪರಿಶ್ರೀ ಪ್ರಿಂಟರ್ಸ್, ನಂ.38/3, 2ನೇ ಅಡ್ಡರಸ್ತೆ, ನಾಗಪ್ಪ ಬ್ಲಾಕ್, ಶ್ರೀರಾಮಪುರಂ, ಬೆಂಗಳೂರು - 560 021, ✆ 2312 8286,
email: info@parishree.com; web: www.parishree.com

# 'ಪಂಪರಾಮಾಯಣ'ದ ಕರ್ತೃ ನಾಗಚಂದ್ರ

ಹಳಗನ್ನಡ ಸಾಹಿತ್ಯವು ಹತ್ತನೆಯ ಶತಮಾನದ ಪಂಪನಿಂದ ಶಿಖರಸ್ಥಿತಿಯನ್ನು ಪಡೆದು, ಅವನು ಹಾಕಿಕೊಟ್ಟ ಮಾರ್ಗದಲ್ಲಿಯೇ ಮುಂದುವರೆಯಿತು. ಅವನನ್ನು ತುಂಬ ಭಕ್ತಿ–ಗೌರವಗಳಿಂದ ಅನುಸರಿಸಿದ ಕವಿಗಳಲ್ಲಿ ಪ್ರಮುಖನಾದವನೆಂದರೆ ಹನ್ನೊಂದನೆಯ ಶತಮಾನದ ದ್ವಿತೀಯಾರ್ಧ ಹಾಗೂ ಹನ್ನೆರಡನೆಯ ಶತಮಾನದ ಪೂರ್ವಾರ್ಧಗಳಲ್ಲಿ ಜೀವಿಸಿದ್ದ ನಾಗಚಂದ್ರ. ಅವನು ವಿಜಯಪುರ(ಈಗಿನ ಬಿಜಾಪುರ)ದವನು. ಅಲ್ಲಿ ಅವನು ಮಲ್ಲಿಜಿನೇಂದ್ರ ಬಸದಿಯನ್ನು ಕಟ್ಟಿಸಿದಂತೆ ಕವಿಯೇ ಹೇಳಿಕೊಂಡಿದ್ದಾನೆ. ಚಾಲುಕ್ಯ ಚಕ್ರವರ್ತಿಯಾದ ನಾಲ್ವಡಿ ಸೋಮೇಶ್ವರ (ಕ್ರಿ.ಶ. ೧೧೦೦–೧೧೨೬)ನ ಆಶ್ರಯದಲ್ಲಿ ನಾಗಚಂದ್ರನು ಇದ್ದನೆಂದು ಕೆಲವರು ಹೇಳುವರಾದರೂ ಅದಕ್ಕೆ ಆಧಾರಗಳಿಲ್ಲ. ಈತನ ಗುರುಗಳು ಬಲಚಂದ್ರ ಮೇಘಚಂದ್ರಯತಿಗಳು. ಇವನಿಗೆ 'ಭಾರತೀಕರ್ಣಪೂರ', 'ಕವಿತಾಮನೋಹರ', 'ಸಾಹಿತ್ಯ ವಿದ್ಯಾಧರ', 'ಚತುರಕವಿ, 'ಜನಸ್ಥಾನರತ್ನಪ್ರದೀಪ', 'ಸಾಹಿತ್ಯಸರ್ವಜ್ಞ', 'ಸೂಕ್ತಿಮುಕ್ತಾವತಂಸ' ಮುಂತಾದ ಬಿರುದುಗಳಿದ್ದವು. ಪಂಪನ ಬಗ್ಗೆ ನಾಗಚಂದ್ರನಿಗೆ ಅಮಿತ ಗೌರವ. ಇವನು ತನ್ನನ್ನು 'ಅಭಿನವ ಪಂಪ'ನೆಂದು ಕರೆದುಕೊಂಡು ಸಂತೋಷ ಪಟ್ಟಿದ್ದಾನೆ. ಅವನಂತೆಯೇ ಇವನೂ ಎರಡು ಕಾವ್ಯಗಳನ್ನು ಬರೆದಿದ್ದಾನೆ: 'ಮಲ್ಲಿನಾಥ ಪುರಾಣ' ಮತ್ತು 'ರಾಮಚಂದ್ರಚರಿತ ಪುರಾಣ'. ಅವನ ರಾಮಾಯಣವು 'ರಾಮಚಂದ್ರಚರಿತ ಪುರಾಣ'ವಾದರೂ 'ಪಂಪ ರಾಮಾಯಣ'ವೆಂಬ ಹೆಸರನ್ನೇ ಪಡೆಯಿತು. ಪಂಪನು ಒಂದು ಲೌಕಿಕ ಕಾವ್ಯ ಮತ್ತೊಂದು ಧಾರ್ಮಿಕ ಕಾವ್ಯವನ್ನು ಬರೆದಿರುವನಾದರೂ, ಅಭಿನವಪಂಪನೆನಿಸಿದ ನಾಗಚಂದ್ರನು ತನ್ನ ಎರಡೂ ಕಾವ್ಯಗಳಲ್ಲಿ ಧಾರ್ಮಿಕತೆಯನ್ನೇ ಮೆರೆದಿದ್ದಾನೆ. ತನ್ನ ಎರಡೂ ಕೃತಿಗಳನ್ನು ಅವನು ಧರ್ಮಪ್ರತಿಪಾದನೆಗೆ ಮಿಸಲಿರಿಸಿದ್ದಾನೆ. 'ಮಲ್ಲಿನಾಥ ಪುರಾಣ'ವು ಹತ್ತೊಂಬತ್ತನೇ ತೀರ್ಥಂಕರನ ಕತೆಯನ್ನು ನಿರೂಪಿಸುತ್ತದೆ. ಅದರಲ್ಲಿ ತನ್ನ ಹಿಂದಿನ 'ರತ್ನತ್ರಯ' (ಪಂಪ–ಪೊನ್ನ–ರನ್ನ)ರು ಅನುಸರಿಸಿದ ಕೆಲವು ಅಂಶಗಳನ್ನು ಕೈಬಿಟ್ಟಿದ್ದಾನೆ. ಇದರಲ್ಲಿ ಭವಾವಳಿಯ ಗೋಜಲಿಲ್ಲ; ಅಂತೆಯೇ ಚಕ್ರವರ್ತಿಯೊಬ್ಬನ ಕತೆಯ ಜೋಡಣೆಯೂ ಇಲ್ಲ.

'ರಾಮಚಂದ್ರಚರಿತ ಪುರಾಣ' ಅಥವಾ 'ಪಂಪರಾಮಾಯಣ'ವು ನಾಗಚಂದ್ರನಿಗೆ ಕೀರ್ತಿಯನ್ನು ತಂದಿತ್ತಿರುವ ಕಾವ್ಯ. ಇದು ವಾಲ್ಮೀಕಿಯನ್ನು ಅನುಸರಿಸದೆ ಜೈನಪರಂಪರೆಯ ರಾಮಕತೆಯನ್ನು ನಿರೂಪಿಸುವ ಕಾವ್ಯ. ಅದಕ್ಕನುಗುಣವಾಗಿ ಇದು 'ಉದಾತ್ತ ರಾಘವ'ನ

ಕತೆಯನ್ನೊಳಗೊಂಡಿದೆ. ಈ ಕಾವ್ಯದ ಕಥಾವಸ್ತು ಅನೇಕ ರೀತಿಯಿಂದ ವಾಲ್ಮೀಕಿ ರಾಮಾಯಣದಕ್ಕಿಂತ ಭಿನ್ನ. ಇಲ್ಲಿನ ರಾಮನು ತ್ರಿಷಷ್ಠಿ ಶಲಾಕಾಪುರುಷರಲ್ಲಿ ಒಬ್ಬನಾದ ಬಲದೇವ; ಲಕ್ಷ್ಮಣನು ವಾಸುದೇವ; ರಾಣನಾದರೋ ಪ್ರತಿವಾಸುದೇವ. ರಾವಣನನ್ನು ಕೊಲ್ಲುವವನು ಲಕ್ಷ್ಮಣನೇ ಹೊರತು ರಾಮನಲ್ಲ. ಸೀತೆ ಇದರಲ್ಲಿ ಅಯೋನಿಜೆಯಾಗಿ ಚಿತ್ರಿತಳಾಗಿಲ್ಲ; ಅವಳು ಪ್ರಭಾಮಂಡಲನ ತಂಗಿ, ಜನಕನ ಔರಸಪುತ್ರಿ. ಸುಗ್ರೀವ ಹನುಮಂತ ಮುಂತಾದವರು ಕಪಿಗಳಲ್ಲ, ಕಪಿಧ್ವಜರು; ಇವರು ಸಮುದ್ರವನ್ನು ದಾಟುವುದು ಹಾರುವುದು ಆಕಾಶಗಾಮಿನೀ ವಿದ್ಯೆಯ ಬಲದಿಂದ. ಕಪಿಧ್ವಜರು ರಾಕ್ಷಸರ ಬಂಧುಗಳು; ಹನುಮಂತನು ರಾವಣನ ತಂಗಿಯ ಅಳಿಯ. ರಾವಣ ಖೇಚರ ರಾಜನೇ ವಿನಾ ರಾಕ್ಷಸನಲ್ಲ. ಹನುಮಂತ ಇಲ್ಲಿ ಬ್ರಹ್ಮಚಾರಿಯಲ್ಲ, ಸಂಸಾರಿ. ಈ ಕಾವ್ಯದಲ್ಲಿ ಪುತ್ರಕಾಮೇಷ್ಠಿಯಾಗದ ಪ್ರಸಂಗವಾಗಲೀ ಮಾಯಾಜಿಂಕೆಯ ಸನ್ನಿವೇಶವಾಗಲೀ ಮಂಥರೆಯ ಪಾತ್ರವಾಗಲೀ ಇಲ್ಲ. ಈ ಬಗೆಯ ರಾಮಾಯಣವನ್ನು ಹಿಂದೆ ವಿಮಲಸೂರಿ, ರವಿಷೇಣ, ಹೇಮಚಂದ್ರ ಮುಂತಾದವರು ಪ್ರಾಕೃತ-ಸಂಸ್ಕೃತಗಳ ಕವಿಗಳು ರಚಿಸಿದ್ದರು.

ಇವನು ಪಂಪನಷ್ಟು ಸಮರ್ಥ ಕವಿಯಲ್ಲದಿದ್ದರೂ, ಪಾತ್ರಸೃಷ್ಟಿಯಲ್ಲಿ ಹೊಸತನವನ್ನು ತೋರಿಸಿ ಗಣ್ಯತೆಯನ್ನು ಸಂಪಾದಿಸಿದ್ದಾನೆ. ಅವನು ಹೇಗೆ ಮಹಾಭಾರತದ ದುರ್ಯೋಧನನ ಪಾತ್ರವನ್ನು ಮಾನವೀಯಗೊಳಿಸಿದ್ದನೋ ಹಾಗೆಯೇ ನಾಗಚಂದ್ರನು ರಾವಣನ ಪಾತ್ರಚಿತ್ರಣದಲ್ಲಿ ಹೊಸತನವನ್ನು ಮೆರದಿದ್ದಾನೆ. ಇಲ್ಲಿನ ರಾವಣನು ಜೈನಧರ್ಮದ ನಿಷ್ಠಾವಂತ ಅನುಯಾಯಿ. ಅವನು ಯುದ್ಧಗಳನ್ನು ಕೈಗೊಳ್ಳುವುದು ಜೈನಧರ್ಮ ಸಂಸ್ಥಾಪನೆಗಾಗಿ. ಅವನು 'ಪರಾಂಗನಾವಿರತಿವ್ರತ'ವನ್ನು ಕಟ್ಟುನಿಟ್ಟಾಗಿ ಅನುಸರಿಸುವ ಸಂಯಮಿ. ದುರ್ಲಂಘ್ಯಪುರದರಸು ನಳಕೂಬರನ ಹೆಂಡತಿ ಉಪರಂಭೆ, ಅವನ ಕೀರ್ತಿಯನ್ನು ಕೇಳಿ ರಾವಣನ ಬಗ್ಗೆ ಮೋಹ ತಳೆದಿದ್ದವಳು ಪ್ರಣಯಕಾತರೆಯಾಗಿ ಬಂದಾಗಲೂ ಅವಳಿಗೆ ಬುದ್ಧಿ ಹೇಳಿ ಗಂಡನೊಡನೆ ಕೂಡಿ ಬಾಳುವಂತೆ ಮಾಡಿದ್ದವನು. ಆದರೆ ರಾಮಲಕ್ಷ್ಮಣರೊಡನೆ ಇದ್ದ ಸೀತೆಯನ್ನು ಕಂಡ ತಕ್ಷಣ ಅವನ ವ್ರತಕ್ಕೆ ಚ್ಯುತಿಯುಂಟಾಯಿತು. ಇದಕ್ಕೆ ಕಾರಣ ಅವನ ವಿರುದ್ಧ ವಿಧಿ ಮಾಡಿದ ಸಂಚು. ಕೊನೆಯಲ್ಲಿ, ಸೀತೆಯ ಬಗ್ಗೆ ಗೌರವವುಂಟಾಗಿ, ರಾಮನ ಮೇಲೆ ಯುದ್ಧಮಾಡಿ ಗೆದ್ದನಂತರ ಸೀತೆಯನ್ನು ಅವನಿಗೆ ಕಾಣಿಕೆಯಾಗಿ ಒಪ್ಪಿಸುವ ನಿರ್ಧಾರ ಮಾಡುತ್ತಾನೆ. ಆದರೆ ಅದೇ ವಿಧಿಯ ಹುನ್ನಾರದಿಂದಾಗಿ ಅನಿರೀಕ್ಷಿತ ಬೆಳವಣಿಗೆಗಳಾಗಿ ಲಕ್ಷ್ಮಣನಿಂದ ಹತನಾಗುತ್ತಾನೆ. ವಿಧಿ ಅಥವಾ ಕಾಲವು ಮನುಷ್ಯನ ಬಾಳಿನಲ್ಲಿ ವಹಿಸುವ ಪಾತ್ರ ಅವನ ಬದುಕಿನಲ್ಲುಂಟುಮಾಡುವ ತಿರುವುಗಳ ಬಗ್ಗೆ ಕವಿ ಇಲ್ಲಿ ಚಿಂತನೆ ನಡೆಸುವಂತೆ ಕಾಣುತ್ತದೆ. ಬಿ.ಎಂ.ಶ್ರೀ ಅವರು ನಾಗಚಂದ್ರನ ರಾವಣನದು ದುರಂತಪಾತ್ರವೆಂದು ವಿಶ್ಲೇಷಿಸಿದರು. ಮನುಷ್ಯನ ಬಾಳಿನಲ್ಲಿನ ಅಗೋಚರ ಶಕ್ತಿಗಳು ಕೆಲಸಮಾಡುವ ಈ ಬಗೆಯ ಚಿಂತನೆಯಿಂದಾಗಿ ನಾಗಚಂದ್ರ ಮಹತ್ವದ ಕವಿಯೆನಿಸುತ್ತಾನೆ. ವಿಧಿ ಬೇಟೆಗಾರನಂತೆ ಹೊಂಚು ಹಾಕುತ್ತ ಮಾನವನ ಬಾಳಿನಲ್ಲಿ ಕೋಲಾಹಲವುಂಟುಮಾಡುವ ಬಗೆಗಿನ ಚಿಂತನೆ ಮುಂದಿನ ಜನ್ನ ಮುಂತಾದ ಕವಿಗಳಲ್ಲೂ ಮುಂದುವರೆಯಿತು. ಪಂಪನಿಂದ ಆರಂಭಗೊಂಡ ಈ ಬಗೆಯ ಚಿಂತನೆಯನ್ನು ಮುಂದುವರೆಸಿ ಮುಂದಿನ ಕವಿಗಳಿಗೆ ಮಾರ್ಗದರ್ಶಕನಾದ ಈ ಕವಿ ಈ ಕಾರಣದಿಂದ ಗಮನಾರ್ಹ.

ನಾಗಚಂದ್ರ ಈ ಕಾವ್ಯವನ್ನು ಲಲಿತಶೈಲಿಯಲ್ಲಿ ರಚಿಸಿದ್ದಾನೆ. ಮಾನವನ ಮಾನಸಿಕ ಚಿತ್ರಣವನ್ನು ಕೊಡುವುದರಲ್ಲಿ ಅವನದು ಎತ್ತಿದ ಕೈ. ಅಕಸ್ಮಾತ್ತಾಗಿ ಕಾಡಿನಲ್ಲಿ ಆಕಾಶದಿಂದ ಸೀತೆಯನ್ನು ಕಂಡ ರಾವಣ ಮನಸ್ಸು ವಿಚಲಿತಗೊಂಡ ರೀತಿಯನ್ನು ಕವಿ ಚಿತ್ರಿಸುವ ರೀತಿ ಅನ್ಯಾದೃಶವಾದದ್ದು. ಆ ಸನ್ನಿವೇಶದಲ್ಲಿ ಬಹುರೂಪಿಣಿ ವಿದ್ಯಾಧಿದೇವತೆ ಇವನಿಗೆ ಬುದ್ಧಿ ಹೇಳುವಾಗಿನ ರೀತಿ, ರಾವಣ ತನ್ನ ವಿಮಾದಲ್ಲಿ ಸೆಳೆದೊಯ್ಯುವಾಗ ದುಃಖವಿಹ್ವಲಳಾಗುವ ಸೀತೆಯ ವರ್ಣನೆ, ಸೀತಾವಿಯೋಗದಿಂದ ಪರಿತಪಿಸುವ ರಾಮನ ಶೋಕ, ಇಂತಹ ಕಡೆಗಗಳಲ್ಲಿ ನಾಗಚಂದ್ರ ಮಿಗಿಲೆನಿಸುತ್ತಾನೆ. ಅವನ ಮಾತುಗಾರಿಕೆ, ಮಾನವಸ್ವಭಾವ ಪರಿಚಯ, ಸೂಕ್ಷ್ಮ ಪಾತ್ರಚಿತ್ರಣ, ಅರ್ಥಾಂತರನ್ಯಾಸ ಅಲಂಕಾರದ ಬಳಕೆಯ ವೈಖರಿ – ಇವುಗಳು ಉನ್ನತ ಮಟ್ಟದವು.

ಇಂತಹ ಕಾವ್ಯವು ಇಂದಿನ ಓದುಗರಿಗೆ ಅರ್ಥವಾಗುವುದು ಹಳಗನ್ನಡ ಭಾಷೆಯ ಸ್ವರೂಪದಿಂದಾದಿ ಕಷ್ಟವೆನಿಸುತ್ತದೆ. ಆದರೆ ಕನ್ನಡ ಸಾಹಿತ್ಯದ ಮುಖ್ಯ ಕೃತಿಗಳ ಪರಿಚಯ ಪ್ರಜ್ಞಾವಂತ ಕನ್ನಡಿಗರಿಗೆ ಇರಬೇಕಾದುದು ಅಗತ್ಯ. ಅಲ್ಲದೆ, ಜೈನರಾಮಾಯಣದ ವಿನ್ಯಾಸವನ್ನು ಪರಿಚಯಿಸುವುದೂ ಒಂದು ಉದ್ದೇಶ. ಹಾಗಾಗಿ ಈ ಕಾವ್ಯವನ್ನು ಸರಳವಾದರೂ, ಕವಿಯ ಶೈಲಿಯನ್ನು ಉಳಿಸಿಕೊಂಡು ಈಗಿನ ಓದುಗರಿಗೆ ಕಟ್ಟಿಕೊಡುವ ಆಕಾಂಕ್ಷೆಯಿಂದ ಹೊಸಗನ್ನಡ ಕಥನರೂಪದಲ್ಲಿ ನಿರೂಪಿಸುವ ಪ್ರಯತ್ನ ಮಾಡಿದ್ದೇನೆ. ಈ ಕೃತಿ ಎರಡನೇ ಆವೃತ್ತಿಯನ್ನು ಪ್ರಕಟಿಸುತ್ತಿರುವ 'ಕಾಮಧೇನು ಪುಸ್ತಕ ಭವನ'ವಿನ ಪ್ರೊ. ಡಿ.ಕೆ. ಶ್ಯಾಮಸುಂದರ ರಾವ್ ಅವರಿಗೆ ನಾನು ಆಭಾರಿಯಾಗಿದ್ದೇನೆ. ಪುಸ್ತಕವನ್ನು ಸುಂದರವಾಗಿ ಮುದ್ರಿಸಿರುವ ಪರಿಶ್ರೀ ಮುದ್ರಣಾಲಯದ ಶ್ರೀ ಆರ್. ಶ್ರೀನಾಥ್ ಮತ್ತು ಸಿಬ್ಬಂದಿಗೆ ಅವರಿಗೂ ನನ್ನ ವಂದನೆಗಳು.

ಬೆಂಗಳೂರು

**ಪಿ.ವಿ. ನಾರಾಯಣ**

# ಪರಿವಿಡಿ


| | | ಪುಟ ಸಂಖ |
|---|---|---|
| | 'ಪಂಪರಾಮಾಯಣ'ದ ಕರ್ತೃ ನಾಗಚಂದ್ರ | i |
| ೧. | ಹಿನ್ನೆಲೆ | ೧ |
| ೨. | ಇಕ್ಷ್ವಾಕುವಂಶದ ಬಳ್ಳಿ | ೧೦ |
| ೩. | ರಾಮಚಂದ್ರಜನನ | ೧೮ |
| ೪. | ಜನಕನನ್ನು ಹೊತ್ತು ತಂದ ಮಾಯಾಕುದುರೆ | ೩೫ |
| ೫. | ಸೀತೆಯ ಸ್ವಯಂವರ | ೪೪ |
| ೬. | ಕಾಡಿಗೆ ಹೋದುದು | ೫೪ |
| ೭. | ವನಪ್ರವೇಶ | ೬೮ |
| ೮. | ಚಾರಣದರ್ಶನ | ೮೪ |
| ೯. | ಸೀತಾಪಹರಣ | ೯೫ |
| ೧೦. | ರಾವಣ ವಂಶವಿವರ | ೧೧೭ |
| ೧೧. | ಲಂಕಾದಹನ | ೧೪೫ |
| ೧೨. | ಲಂಕಾ ದಿಗ್ವಿಜಯ ಯಾತ್ರೆ | ೧೬೧ |
| ೧೩. | ಬಲಾಚ್ಯುತರ ಪುಣ್ಯಪ್ರಭಾವೋದಯ | ೧೬೯ |
| ೧೪. | ರಘುವೀರ ವಿಜಯ | ೧೮೦ |
| ೧೫. | ಸೀತಾ ಪರಿತ್ಯಾಗ | ೧೯೯ |
| ೧೬. | ರಾಮಚಂದ್ರ ಪರಿನಿರ್ವಾಣ | ೨೧೨ |

# ೧. ಹಿನ್ನೆಲೆ

ವಿಪುಲಾಚಲದಲ್ಲಿ ವೀರಜಿನನ ಪಕ್ಕದಲ್ಲಿ ಗೌತಮ ಗಣಾಗ್ರಣಿಗಳು ಅಪೂರ್ವವಾದ ರಾಮಕತೆಯನ್ನು ಮಗಧಾಧಿಪತಿಗೆ ಈ ರೀತಿಯಲ್ಲಿ ನಿರೂಪಿಸಿದರು: ಕಡೆಯಿಲ್ಲದ ಆಗಸದ ನಡುವೆ ವಾಯುತ್ರಯವು ಬೀಸಲು ಅಗ್ಗಳಿಕೆವಡೆದ ಅಧಃ ತಿರ್ಯಕ್ ಊರ್ಧ್ವ ಎಂಬ ತ್ರಿಲೋಕಗಳಿವೆ. ಅವು ಆರು ದ್ರವ್ಯಗಳಿಂದ ಮೈವಡೆದು ಹದಿನಾಲ್ಕು ರಜ್ಜುಗಳಷ್ಟು ವಿಸ್ತೀರ್ಣವನ್ನು ಪಡೆದಿದೆ. ಅನತಿಶಯವಾದ ಆ ತ್ರಿಭುವನಲಕ್ಷ್ಮಿಯ ಮಧ್ಯವೆನಿಸಿದ ಮಧ್ಯಮಲೋಕದ ಜನಹೃದಯಹಾರಿಯಾದ ನಾಭಿಮಂಡಲದಂತೆ ಜಂಬೂದ್ವೀಪವು ಕಂಗೊಳಿಸುತ್ತಿತ್ತು. ಮೇಲಣ ದಿವವನ್ನು ಮುಟ್ಟಿ, ಕೆಳಗಡೆಯ ವಜ್ರೆಯನ್ನು ಮೆಟ್ಟಿ, ದೃಷ್ಟಿಗೆ ಸೀಮೆ ಎನಿಸುವಂತೆ ಜಿನನ ಜನ್ಮಾಭಿಷೇಕ ನಡೆಯುವ ಹೊನ್ನಬೆಟ್ಟವು ರಂಜಿಸಿತು. ಈ ಪರ್ವತದ ದಕ್ಷಿಣ ದಿಕ್ಕಿನಲ್ಲಿ ಚಂದ್ರಖಂಡದ ಹಾಗೆ ತ್ರಿಖಂಡವನ್ನುಳ್ಳ ಆರ್ಯಖಂಡವು ಸುಖದ ಆವಾಸವೆನಿಸಿತ್ತು.

ಅಲ್ಲಿ ಉತ್ಸರ್ಪಣ ಅವಸರ್ಪಣ ಎಂಬ ಯುಗಸ್ವರೂಪ ನಿರ್ಣಯಾತ್ಮಕವಾದ ಎರಡು ಬಗೆಯಲ್ಲಿ ಕಾಲವು ವರ್ತಿಸುತ್ತಿತ್ತು. ಉತ್ಸರ್ಪಣದಲ್ಲಿ, ಜಿನಪುಂಗವರಲ್ಲದ ಅಣುವನ್ನು ಅಣು ದಾಟುವ ಹೊತ್ತು ಸಮಯ; ಸಮಯ ಸಮೂಹವು ಅಸಂಖ್ಯಾತವಾದರೆ ಆವಳಿ ಎನಿಸುತ್ತದೆ; ಸಂಖ್ಯಾತವಾದರೆ ಉಚ್ಛ್ವಾಸ ಎನಿಸುತ್ತದೆ; ಏಳು ಉಚ್ಛ್ವಾಸಗಳು ಸೇರಿ ಒಂದು ಸ್ತೋಕ; ಏಳು ಸ್ತೋಕಗಳು ಒಂದು ಲವ; ಅಂಥದು ಮೂವತ್ತೆಂಟೂವರೆ ಸೇರಲು ನಾಳಿಕೆಯಾಗುತ್ತದೆ; ಎರಡು ನಾಳಿಕಾ ಕಾಲಗಳು ಸೇರಿದರೆ ಒಂದು ಮುಹೂರ್ತ; ಮೂವತ್ತು ಮುಹೂರ್ತಗಳಿಗೆ ಒಂದು ದಿವಸ; ಹದಿನೈದು ದಿವಸಗಳು ಒಂದು ಪಕ್ಷ; ಎರಡು ಪಕ್ಷಗಳು ಸೇರಿ ಒಂದು ಮಾಸ; ಎರಡು ಮಾಸಗಳು ಒಂದು ಋತುವೂ ಹೌದು; ಋತುತ್ರಯಗಳು ಒಂದು ಅಯನ; ಅಯನದ್ವಯವು ಜಿನಶಾಸನದಂತೆ ಒಂದು ವರ್ಷ; ಐದು ವರ್ಷಗಳು ಒಂದು ಯುಗ; ಎರಡು ಯುಗಗಳು ದಶವರ್ಷ; ಕಾಲಾನುಕ್ರಮದಲ್ಲಿ ದಶಗುಣವು ಹೆಚ್ಚುತಿದ್ದರೆ ಅಂತಹ ಕಾಲಕಲಾ ಪರಿಸಂಖ್ಯೆಯನ್ನು ಯಾರು ಅರಿಯುವರೋ ಅವನೇ ದೇವನೆನಿಸುತ್ತಾನೆ. ನಿನ್ನೆಗಳು ಮತ್ತೆ ಬಾರವು, ನಾಳೆಗಳು ಸವೆಯವು; ಹೀಗಾಗಿ ಅದರ ಲೆಕ್ಕವಿಡುವುದೂ ಅದರ ಸ್ವರೂಪವನ್ನು ವರ್ಣಿಸುವುದೂ ಅಸಾಧ್ಯ.

ಅವಸರ್ಪಣದಲ್ಲಿ ಕಾಲವ್ಯವಸ್ಥೆ ಷಡ್ವಿಧವಾದುದು: ಉತ್ಸರ್ಪಣದಂತೆಯೇ ಅದರಲ್ಲಿಯೂ ಕಾಲವು ಪ್ರವರ್ತಿಸುತ್ತದೆ; ಅವುಗಳಿಗೆ ಸುಷುಮ ಅಸುಷುಮ ಎಂಬ

ಹೆಸರುಗಳಿವೆ. ಎರಡನೆಯ ಅಸುಷುಮ ಕಾಲದ ಅಂಚಿನಲ್ಲಿ ಮೂರನೆಯ ಸುಷಮದುಷ್ಷಮ ಕಾಲವು ಚರಿಸುತ್ತದೆ. ನಾಲ್ಕನೆಯದು ದುಷ್ಷಮಸುಷಮವಾಗುತ್ತದೆ. ಐದನೆಯದು ದುಷ್ಷಮಕಾಲ; ಆರನೆಯದು ಅತಿದುಷ್ಷಮವಾಗುತ್ತದೆ. ಈ ರೀತಿಯು ರಹಟಘಟಿಕಾ ನ್ಯಾಯದಂತೆ ನಡೆಯುತ್ತದೆ. ಉತ್ಸರ್ಪಣದಲ್ಲಿ ಮನುಷ್ಯರ ಶರೀರ ಮತ್ತು ಭೋಗಗಳ ಆಯುಷ್ಯವು ಹೆಚ್ಚುತ್ತವೆ; ಅವಸರ್ಪಣದಲ್ಲಿ ಇವು ಕುಂದುತ್ತವೆ. ಎರಡು ಯುಗಗಳು ಸೇರಿ ಒಂದು ಕಲ್ಪವಾಗುತ್ತದೆ; ಇವು ಕೃಷ್ಣ-ಶುಕ್ಲಪಕ್ಷಗಳಂತೆ ನಿರಂತರವಾದವು. ಈ ಕಲ್ಪಗಳ ಮುಂದುವರಿಕೆಗೆ ಕೊನೆಯೇ ಇಲ್ಲ.

ಅನಂತಾನಂತ ಕಲ್ಪ ಪರಿವರ್ತನದಲ್ಲಿ ಆರ್ಯಖಂಡದ ಅವಸರ್ಪಣದ ಮೊದಲ ಕಾಲದಲ್ಲಿ ಎಲ್ಲವೂ ಬೆಳಗು; ಕತ್ತಲೆಯ ಮಾತೇ ಇಲ್ಲ. ಆದ್ದರಿಂದ ಚಂದ್ರಸೂರ್ಯರೂ ಕಾಣಿಸುವುದಿಲ್ಲ. ಋತುಭೇದಗಳಾಗಲೀ ಹಗಲಿರುಳಿನ ವ್ಯತ್ಯಾಸವಾಗಲೀ ಇಲ್ಲ. ಆಳು-ಅರಸ ಎಂಬ ಭೇದವೂ ಇಲ್ಲ. ಎಲ್ಲರೂ ಋಜುಸ್ವಭಾವದವರೇ. ಯಾರಿಗೂ ರೋಗದ ಭಯವಿಲ್ಲ, ಆತುರವಿಲ್ಲ. ಹೀಗೆ ಸುಷಮಸುಷಮ ಕಾಲವು ಆಶ್ಚರ್ಯಜನಕವಾದುದು. ಅಲ್ಲಿ ಹುಟ್ಟುವವರು ಬರೀ ದಂಪತಿಗಳೇ. ಯಾರ ಮನಸ್ಸಿನಲ್ಲಿಯೂ ಕೆಟ್ಟ ಆಲೋಚನೆ ಸುಳಿಯದು. ಎಲ್ಲರೂ ನಿರತಿಶಯ ರೂಪಕಲಾಸಂಪನ್ನರೆನಿಸಿ ಕೊನೆಗೆ ಸುರಗತಿಯನ್ನು ಪಡೆಯುವರು. ಯಾರಿಗೂ ಅಲ್ಲಿ ಅಪಮೃತ್ಯು ಸಂಭವಿಸದು; ಆಗ ಆಯುಷ್ಯವು ಮೂರು ಪಳಿತಗಳಷ್ಟು ಕಾಲ. ಮೂರು ದಿನಕ್ಕೊಮ್ಮೆ ಸಂಸಾರಸೌಖ್ಯಪ್ರದ; ದಿವ್ಯಾಹಾರಗಳನ್ನು ಸೇವಿಸುತ್ತ ದಂಪತಿಗಳು ಬದುಕುವರು. ನೆಲದ ಮೇಲೆಲ್ಲ ಇಂದ್ರಚಾಪದ ಬೆಳಸಿನ ಹರವರಿಯೇ. ಮೃಗದಂಪತಿಗಳು ನಾಲ್ಕಂಗುಲ ಉದ್ದದ ಎಳೆ ಗರಿಕೆಯನ್ನು ತಿಂದು ತಿಳಿನೀರು ಕುಡಿದು ಕಾಮಕ್ರೀಡಾರತರಾಗಿರುವವು. ಇಂಥ ಉತ್ತಮಭೋಗಗಳ ಪ್ರಥಮಕಾಲವು ಭೂಮಿಸ್ಥಿತಿಯಿಂದ ನಾಲ್ಕು ಕೋಟಿ ಕೋಟಿ ಸಾಗರ ವರ್ಷಗಳಷ್ಟು. ಇದು ಕ್ರಮೇಣ ಕುಂದುತ್ತ ಸುಷುಮದ ಎರಡನೆಯ ಕಾಲದ ಮಧ್ಯಮಭೋಗ ಭೂಮಿಸ್ಥಿತಿಯಲ್ಲಿ ಮನುಷ್ಯ ಶರೀರವು ನಾಲ್ಕು ಸಾವಿರ ಬಿಲ್ಲ ಉದ್ದವಿರುತ್ತದೆ; ಆಯುಷ್ಯ ಎರಡು ಪಳಿತಗಳಷ್ಟು. ಜನರು ಎರಡು ದಿನಕ್ಕೊಮ್ಮೆ ಊಟಮಾಡುವರು. ಈ ಕಾಲ ಮೂರು ಕೋಟಿ ಕೋಟಿ ಸಾಗರ ಪ್ರಮಾಣದ್ದು. ಮೂರನೆಯ ಕನಿಷ್ಠ ಭೋಗಭೂಮಿಸ್ಥಿತಿಯಲ್ಲಿ ಮಿಥುನಗಳು ಒಂದು ಪಳಿತದಷ್ಟು ಆಯುಷ್ಯ ಹೊಂದಿ ಎರಡು ಸಾವಿರ ಬಿಲ್ಲು ಉದ್ದವಿರುವರು. ಸುಧಾಸಾರ ಹಾಗೂ ನೆಲ್ಲಿಯಂತಹ ಕಾಯನ್ನು ದಿನ ಬಿಟ್ಟು ದಿನ ತಿನ್ನುವರು. ಅದರ ಪ್ರಮಾಣ ಎರಡು ಕೋಟಿ ಕೋಟಿ ಸಾಗರದಷ್ಟು.

ಇದರ ಕಡೆಯ ಪಳಿತದ ಎಂಟನೆಯ ಭಾಗ ಉಳಿದಾಗ ಕುಲಧರಾವತಾರವಾಗುತ್ತದೆ. ಆಗ ಅಜ್ಞಾನತ್ರಯರಹಿತರೂ ತ್ರಿಜ್ಞಾನಧರರೂ ವಿದೇಹದಿಂದ ಬಂದವರೂ ಅಧಿಕಪ್ರಜ್ಞರೂ ಆದ ಹದಿನಾಲ್ಕು ಜನ ಮನುಗಳು ಈ ನೆಲದ ಆಜ್ಞಾಮುದ್ರಿತರೆನಿಸಿ ಹುಟ್ಟುತ್ತಾರೆ. ಅವರಲ್ಲಿ ಮೊದಲನೆಯ ಕುಲಧರನು ಪ್ರತಿಶ್ರುತಿ ಎಂಬುವವನು. ಆ ಕಾಲದಲ್ಲಿ, ಪ್ರದಕ್ಷಿಣೆ ಬರುವ ಕಾಲಪುರುಷನ ಬೆಳ್ಳಿಬಂಗಾರಗಳ ವಿಶಾಲ ಕರ್ಣಕುಂಡಲಯುಗಳವನ್ನು ಸೋಲಿಸಲೆಂದು ಬಂದ ಸೂರ್ಯಚಂದ್ರಮಂಡಲಗಳು ಪ್ರಕಾಶಮಾನವಾಗಿ ಗಗನದ ಎರಡೂ ಕಡೆಗಳಲ್ಲಿದ್ದವು. ಅವುಗಳನ್ನು ನೋಡಿದಾಗ ಎರಡು ಉತ್ಪಾತಗಳಾದವೆಂದು

ಆರ್ಯರೆಲ್ಲರೂ ಭೀತಗೊಂಡರು: ಆಗ, ಅವು ಚಂದ್ರಾದಿತ್ಯರ ವಿಮಾನಗಳು, ಇಲ್ಲಿಂದ ದೂರದಲ್ಲಿ ಯಾವಾಗಲೂ ಇದ್ದವು, ಅವುಗಳಿಗೆ ಹೆದರಬೇಡಿರೆಂದು ಪ್ರತಿಶ್ರುತಿಯು ಜನರ ಮನದ ಶಂಕೆಯನ್ನು ಕಳೆದನು. ಎರಡನೆಯ ಕುಲಧರನು ಸನ್ಮತಿ ಎಂಬ ಹೆಸರಿನವನು. ಮುಸ್ಸಂಜೆಯು ಪಸರಿಸಿ ಎಲ್ಲೆಡೆ ಮಬ್ಬು ಆವರಿಸಲು ಆರ್ಯರು ಭಯಪಟ್ಟರು. ಆಗ, ಸೂರ್ಯನು ಮುಳುಗುವಾಗ ಅವನ ಬಿಸುಪಾರಿದ ಕಿರಣಗಳು ನಿಷಧಪರ್ವತದಿಂದ ಒಗೆದ ಕೆಂಪು ಹೊಳಪಿನಲ್ಲಿ ಸೇರಿ ಸಂಜೆಯಾಗುವುದಾಗಿಯೂ, ಅದು ಹರಿದಾಗ ಕತ್ತಲೆ ಕವಿದು ನಕ್ಷತ್ರಗಳೂ ಗ್ರಹಗಳೂ ಕಾಣಿಸುವುವೆಂದೂ, ಇನ್ನು ಮುಂದೆ ಹೀಗೆ ಹಗಲು–ರಾತ್ರಿಗಳೆಂಬ ಭೇದವುಂಟಾಗುವುದೆಂದೂ ಅವರ ಆತಂಕವನ್ನು ಸನ್ಮತಿಯು ಹೋಗಲಾಡಿಸಿದನು.

ಮೂರನೆಯ ಕುಲಧರನ ಹೆಸರು ಕ್ಷೇಮಂಕರ ಎಂದು. ಸಿಂಹ ಶರಭ ಶಾರ್ದೂಲ ವ್ಯಾಳ ಮೃಗಮಿಥುನಗಳು ಕಾಲಸ್ವಭಾವದಿಂದಾಗಿ ತಮ್ಮ ಋಜುಸ್ವಭಾವವನ್ನು ಬಿಟ್ಟು ರೌದ್ರವನ್ನು ಪಡೆಯುತ್ತವೆ, ಅವುಗಳ ಉಪದ್ರವವನ್ನು ನೀವು ದಂಡಪಾಶಗಳಿಂದ ಕಳೆದುಕೊಳ್ಳಿರೆಂದು ಆರ್ಯರಿಗೆ ಅವನು ಉಪದೇಶ ಮಾಡಿದ. ಅವನ ಬಳಿಕ ಬಂದವನು ನಾಲ್ಕನೆಯವನಾದ ಕ್ಷೇಮಂಧರ. ಕತ್ತಲೆಯಾವರಿಸಿದಾಗ ಕ್ಷುದ್ರಪಶುಗಳಿಂದ ಹಿಂಸೆಯುಂಟಾದರೆ, ಸೂರ್ಯರಶ್ಮಿಯಂತೆ ಪ್ರಕಾಶಮಾನವಾದ ಬೆಂಕಿಯನ್ನು ಮಾಡಿ ಪ್ರಾಣಿಗಳನ್ನು ಅಂಜಿಸುವ ಉಪಾಯವನ್ನು ತನ್ನ ಪ್ರಜೆಗಳಿಗೆ ಆತ ಹೇಳಿಕೊಟ್ಟ. ಆ ಬಳಿಕ ಬಂದವನು ಐದನೆಯ ಕುಲಧರನಾದ ಸೀಮಂಕರ. ಕಲ್ಪತರುಗಳ ಫಲಗಳು ಸಾಕಾಗದೇ ಹೋಗಲು, ಒಬ್ಬೊಬ್ಬನಿಗೂ ಸೇರಿದುವೆಂಬ ಮರಗಳ ಒಡೆತನವನ್ನು ನಿಗದಿಪಡಿಸಿ ಅವರ ನಡುವಣ ಗೊಂದಲವನ್ನು ನಿವಾರಿಸಿದನು. ಆರನೆಯ ಕುಲಧರನೆಂದರೆ ಸೀಮಂಧರ. ಸುರತರುಸಂಕುಲ ತಮ್ಮದು ಎಂದು ಆರ್ಯರು ತಮ್ಮಲ್ಲಿಯೇ ಹೊಡೆದಾಡಲು ತೊಡಗಿದಾಗ ಅವರ ನಡುವೆ ವೈಮನಸ್ಯವನ್ನು ತೊಲಗಿಸಿದ.

ಇನ್ನು, ಏಳನೆಯ ಕುಲಧರ ವಿಮಲವಾಹನ. ಆ ಹೊತ್ತಿಗೆ ತಮ್ಮ ಮೃದು ಪಾದಗಳನ್ನೂರಿ ಮನುಷ್ಯರು ನಡೆಯಲಾರದಷ್ಟು ಭೂಮಿ ಒರಟಾದುದರಿಂದ, ಅವರಿಗೆ ಕುದುರೆ ಮುಂತಾದವುಗಳ ಸವಾರಿ ಮಾಡುವುದನ್ನೂ ವಾಹನಗಳನ್ನು ಬಳಸುವುದನ್ನೂ ಅವನು ಕಲಿಸಿದ. ಆ ಬಳಿಕ ಬಂದವನು ಎಂಟನೆಯ ಕುಲಧರನಾದ ಚಕ್ಷುಷ್ಮ. ಆ ಕಾಲದ ದಂಪತಿಗಳು ತಮ್ಮ ಸಂತಾನದ ಬಗ್ಗೆ ಅತೀವ ಕುತೂಹಲವನ್ನು ತಳೆದಿದ್ದರು. ತಾಯ್ತಂದೆಯರು ಮೊದಲು ಇಲ್ಲಿ ಸ್ವಲ್ಪ ಕಾಲ ಮಕ್ಕಳನ್ನು ನೋಡಿ ಸಾಯುತ್ತಾರೆ, ಆ ಬಳಿಕ ಸ್ವರ್ಗದಲ್ಲಿ ಹುಟ್ಟುತ್ತಾರೆ; ಈಗ ಇಲ್ಲಿ ಕರ್ಮಭೂಮಿಯು ಆರಂಭಗೊಂಡಿದೆ ಎಂದು ಜನರಿಗೆ ಅರ್ಥವಾಗುವಂತೆ ಅವನು ಕಾಲಸ್ಥಿತಿಯನ್ನು ವಿವರಿಸಿದ. ಒಂಬತ್ತನೆಯ ಕುಲಧರನೇ ಯಶಸ್ವಿ ಎಂಬುವವನು. ಈ ಮೊದಲು ಎಲ್ಲರೂ ಆರ್ಯರೆನ್ನಿಸಿಕೊಂಡಿದ್ದರು; ಯಶಸ್ವಿಯು ವಿವಿಧ ವರ್ಗದ ಮಾನವರಿಗೆ ಬೇರೆ ಬೇರೆ ಹೆಸರಿಟ್ಟು ಮನುಗಳಲ್ಲಿ ಹೆಸರುಗೊಂಡ.

ಹತ್ತನೆಯ ಕುಲಧರ ಅಭಿಚಂದ್ರ. ತನ್ನ ಕಾಲದಲ್ಲಿ ಅವನು ಹಿರಿಯರು ಮಕ್ಕಳಿಗೆ ಚಂದ್ರ ನಕ್ಷತ್ರ ಮುಂತಾದವನ್ನು ತೋರಿಸಿ ಅವರು ತಾಯ್ತಂದೆಯರ ಕಿವಿಗಳಿಗೆ ಆನಂದಕರವಾಗುವಂತೆ ಮಾತನಾಡುವುದನ್ನು ಕಲಿಸಿದ. ಹನ್ನೊಂದನೆಯವನು

ಚಂದ್ರಾಭನೆಂಬ ಕುಲಧರ. ಮಂಜು ಮತ್ತು ಮೋಡಗಳು ಆವರಿಸಿದಾಗ ಸೂರ್ಯಚಂದ್ರರು ಕಾಣಿಸದಿರುವುದು, ಅವು ಸರಿದಾಗ ಬೆಳ್ಳನೆ ಬೆಳಗುವುದು ಇವುಗಳ ಹಿಂದಣ ಭೂ ಆವರ್ತನದ ಬಗೆಯನ್ನು ಜನರಿಗೆ ತಿಳಿಸಿ ಅವರ ಆತಂಕವನ್ನು ಹೋಗಲಾಡಿಸಿದ. ಹನ್ನೆರಡನೆಯ ಕುಲಧರನೇ ಮರುದ್ದೇವ. ಮಳೆ, ಮಿಂಚು, ಕಾಮನಬಿಲ್ಲು ಇವುಗಳನ್ನು ಕಂಡು ಬೆಗಡುಗೊಂಡ ಜನರಿಗೆ ಮೋಡ ಮಳೆಗಳ ವಿಷಯವನ್ನು ವಿವರಿಸಿ ಅವರ ಉಮ್ಮಳವನ್ನು ನಿವಾರಿಸಿದ. ಅವನ ಅನಂತರ ಬಂದವನು ಹದಿಮೂರನೆಯ ಕುಲಧರನಾದ ಪ್ರಸೇನಜಿತ್ತು. ಅವನ ಕಾಲದಲ್ಲಿ ಹಳ್ಳಕೊಳ್ಳಗಳೂ, ದಿನ್ನೆತಗ್ಗುಗಳೂ, ನದಿಸಮುದ್ರಗಳೂ ಹುಟ್ಟಿದವು; ಪ್ರವಾಹದಿಂದ ಅಪಮೃತ್ಯು ಹುಟ್ಟಿತು; ಇದರಿಂದ ಮಾನಸರು ಶೋಕವನ್ನು ಹೊಂದಿದರು. ಹಿಂದೆ, ಎಣ್ಣೆ ತೀರಲು ದೀಪವು ನಂದುವಂತೆ, ಆಯುಸ್ಸು ಮುಗಿದ ಮೇಲೆ ಜನರು ಸಾಯುತ್ತಿದ್ದರು; ಆದರೆ ಈಗ ಜೋರಾಗಿ ಗಾಳಿ ಬೀಸಲು ದೀಪ ಆರುವಂತೆ ಆಯುಸ್ಸು ಮುಗಿಯುವ ಮುನ್ನವೇ ಸಾಯುವ ಸಂಭವವೊದಗಿತು. ಬಡಿದಾಗ ಕಾಯಿಹಣ್ಣುಗಳು ಉದುರುವಂತೆ ಕಿರಿಯರು ಹಿರಿಯರು ಅನುಕ್ರಮವಾಗಿ ಸಾಯುವುದಲ್ಲದೆ, ಕತ್ತರಿಸಿದರೆ ಬಾಳಮರವು ಬೀಳುವಂತೆ ಅಪಮೃತ್ಯುವೂ ಉಂಟಾಗಲು ತೊಡಗಿತು. ಸೂರ್ಯೋದಯ ಮಧ್ಯಾಹ್ನ ಸೂರ್ಯಾಸ್ತಗಳಂತೆ ಶೈಶವ ಯೌವನ ಮುಪ್ಪುಗಳು ಬಂದು ಸಾಯುವ ಬಗೆಯಲ್ಲಿ ಈತನು ಕಾಲಸ್ವರೂಪನಿರ್ಣಯ ಮಾಡಿದ.

ಈವರೆಗೆ ಹೇಳಿದ ಕುಲಧರಸಂಕುಲದಲ್ಲಿ, ಮೊದಲನೆಯ ಮನುವಿಗೆ ಒಂದು ಪಳಿತದ ಹತ್ತನೇ ಒಂದು ಭಾಗದಷ್ಟು ಪರಮಾಯುಷ್ಯ; ಆ ಮುಂದೆ ಪ್ರತಿ ಮನುವಿಗೂ ತನ್ನ ಹಿಂದಿನ ಮನುವಿನ ಪರಮಾಯುಷ್ಯದ ಹತ್ತನೇ ಒಂದು ಭಾಗದಷ್ಟು ಆಯುಷ್ಯವಾಯಿತು. ಮೊದಲನೆಯವನ ಎತ್ತರ ಸಾವಿರದೆಂಟುನೂರು ಬಿಲ್ಲುಗಳಷ್ಟು; ಎರಡನೆಯವನಿಗೆ ಇದರಲ್ಲಿ ಐನೂರು ಬಿಲ್ಲುಗಳಷ್ಟು ಕಡಿಮೆ; ಉಳಿದವರಿಗೆ ಕ್ರಮವಾಗಿ ಇಪ್ಪತ್ತೈದು ಬಿಲ್ಲುಗಳಷ್ಟು ಕಡಿಮೆ. ಚಂದ್ರಾಭನು ಪಾಂಡುರವರ್ಣದ ದೇಹವಿದ್ದವನು; ಪ್ರಸೇನಜಿತ್ತು ಮತ್ತು ಚಕ್ಷುಷ್ಮರು ತಾವರೆದಳದ ಬಣ್ಣದವರು; ಉಳಿದ ಕುಲಧರರು ಚಿನ್ನದ ಬಣ್ಣದವರು. ಮೊದಲ ಮನ್ವಂತರದ ಎಂಬತ್ತರಷ್ಟು ಭಾಗ ಎರಡನೆಯದು; ಆನಂತರ ಪ್ರಸೇನಜಿತ್ತುವಿನವರೆಗೆ ಕ್ರಮವಾಗಿ ಅದರ ಹತ್ತನೇ ಒಂದು ಭಾಗ ಮಾತ್ರ. ಕ್ರಮವಾಗಿ ಮೊದಲ ಐದು ಮಂದಿ ಮನುಗಳಿಂದ ಹಾ ದಂಡ; ಮುಂದಿನ ಐವರಿಂದ ಹಾಮಾದಂಡ; ಆ ಮುಂದಿನ ಐವರಿಂದ ಹಾಮಾಧಿಕ್ ದಂಡನ ಉಂಟಾಯಿತು; ಭರತನಿಂದ ದೇಹದಂಡನೆ ಮೊದಲಾಯಿತು.

ಕೊನೆಯಲ್ಲಿ ಬಂದ ಹದಿನಾಲ್ಕನೆಯ ಕುಲಧರನು ನಾಭಿರಾಜ ಎಂಬುವವನು. ಅವನು ಐನೂರಿಪ್ಪತ್ತೈದು ಬಿಲ್ಲುಗಳಷ್ಟು ಎತ್ತರ, ಕೋಟಿ ವರ್ಷಗಳಷ್ಟು ಪರಮಾಯುಷ್ಯವುಳ್ಳವನಾಗಿದ್ದ. ಹಿಂದಿನ ಜನ್ಮಗಳ ಪುಣ್ಯವೇ ಬಂದಿತೆಂಬಂತೆ ಅವನೊಡನೆ ಮತಿ ಶ್ರುತ ಅವಧಿಜ್ಞಾನವು ಹುಟ್ಟಿತು. ಇಂತಹ ನಾಭಿಯು ಕುಲಧರರಲ್ಲೆಲ್ಲ ಯಶಸ್ಸನಾಭಿಯೇ ಸರಿ! ಅವನು ಭೂಮಿಯ ಜನರಿಗೆ ಕೃಷಿ ವ್ಯವಹಾರ ಮುಂತಾದ ಜೀವನೋಪಾಯವೃತ್ತಿಗಳನ್ನು ತೋರಿಸಿಕೊಟ್ಟ; ಇದರಿಂದ ಕೃತಯುಗವೆಂಬ ವಿಭೇದವುಂಟಾಯಿತು. ಕಬ್ಬಿನ ಬಿಲ್ಲನ್ನು ಹಿಂಡಿ ಅದರ ರಸವನ್ನು ಬಳಸುವ ವಿಧಾನವನ್ನಿವನು ತೋರಿಸಿದ; ಆ ಕಾರಣದಿಂದ

ಆ ವಂಶವು ಇಕ್ಷ್ವಾಕುವಂಶ ಎಂಬ ಹೆಸರನ್ನು ಪಡೆಯಿತು. ನಾಭಿರಾಜನ ಕಣ್ಣುಗಳು ತಾವರೆಯಂತೆ, ವಕ್ಷಸ್ಥಳವು ವಜ್ರವೇದಿಯಂತೆ, ಮುಖ ಕಮಲದ ಹಾಗೆ, ಕೈಗಳು ಆನೆಯ ಸೊಂಡಿಲುಗಳಂತೆ, ಉಗುರು ಚಂದ್ರನಂತೆ, ಮೊಳಕಾಲು ಬಾಳೆಯ ದಿಂಡುಗಳಂತೆ ಚೆಲ್ವುವಡೆದವು. ಅವನ ವಲ್ಲಭೆ ಮರುದೇವಿ; ಈ ದಂಪತಿಗಳ ಅನುರೂಪತೆ ಅಪರೂಪದ್ದು. ಸುರಸುಂದರಿಯರೇ ಪರಿಚಾರಿಕೆಯರಾಗಿ, ಇಂದ್ರನೇ ಪೂಜಿಸುವ ಪುರುದೇವನು ಈಕೆಯ ಹಿರಿಯ ಮಗನಾಗಿ ಹುಟ್ಟಲಿದ್ದನೆಂದ ಮೇಲೆ ಅವಳ ಮಹಿಮೆಯನ್ನೇನು ಬಣ್ಣಿಸುವುದು! ಮರುದೇವಿಗೆ ಭೂರಮಣಿಯೇ ಸವತಿ ಎನ್ನಿಸುವಂತೆ ನಾಭಿರಾಜನು ಧರಣಿಯನ್ನಾಳುತ್ತಿದ್ದ.

ಸ್ವರ್ಗದಿಂದ ಇಳಿದುಬಂದು ಪುರುದೇವನು ಈ ಮರುದೇವಿಯಲ್ಲಿ ಹುಟ್ಟುವನು ಎಂಬುದನ್ನು ಅವಧಿಜ್ಞಾನದಿಂದ ಅರಿತ ಸಾಕ್ಷಾತ್ ಪುರಂದರನೇ ಅಯೋಧ್ಯಾನಗರವನ್ನು ವಿಶೇಷ ರೀತಿಯಲ್ಲಿ ನಿರ್ಮಿಸಿದ. ನಾಡುಗಳಲ್ಲೆಲ್ಲ ಕೌಶಲ ಮತ್ತು ನಗರಗಳಲ್ಲೆಲ್ಲ ಸಾಕೇತ ಇವುಗಳನ್ನು ಕ್ರೀಡೆ ಮತ್ತು ಆವಾಸಗಳಿಗೆ ಯೋಗ್ಯವನ್ನಾಗಿ ಮಾಡಿದನು; ಮನ್ಮಥನು ಸ್ವತಃ ಅವುಗಳಿಗೆ ಬಣ್ಣ ಹಾಕಿದನು. ಅಂದ ಮೇಲೆ ಆ ನಾಡುಬೀಡುಗಳನ್ನು ಒಂದೇ ನಾಲಗೆಯಲ್ಲಿ ವರ್ಣಿಸಲು ಸಾಧ್ಯವಾಗದು. ಆ ಬೀಡು ಸುಕೃತ ಹಾಗೂ ಚೆಲುವಿಗೆ ಆಡುಂಬೊಲದಂತಿತ್ತು, ಕೌಶಲ ದೇಶವು ಸುಖಕ್ಕೆ ಆಶ್ರಯವೆನಿಸಿತ್ತು. ಹಾಗಾಗಿ ಅದು ನಾಡಾಡಿಯ ನಾಡಾಗದೆ ನಾಡುಗಳಲ್ಲಿ ಉತ್ಕೃಷ್ಟವೆನಿಸಿಕೊಂಡಿತ್ತು. ಆ ದೇಶದ ಪರ್ವತಸಾನು ಪ್ರದೇಶವು ಸಕಲ ಮಣಿಗಳಿಂದಲೂ, ಅಲ್ಲಿಯ ಉದ್ಯಾನವನಗಳು ಎಲ್ಲ ಬಗೆಯ ಹಣ್ಣುಗಳನ್ನು ಎಲ್ಲ ಕಾಲಗಳಲ್ಲಿಯೂ ಈವ ಮರಗಳಿಂದಲೂ, ಅಲ್ಲಿನ ಅರಣ್ಯಪ್ರದೇಶವು ಸಕಲ ಬಗೆಯ ಗಿಡಗಳು ಮರಗಳು ಹಾಗೂ ಬಳ್ಳಿಗಳಿಂದಲೂ ಶೋಭಿಸುತ್ತಿದ್ದವು. ಅಲ್ಲಿನ ಜನರು ಅಶೇಷ ಲಕ್ಷ್ಮಿಯಿಂದಲೂ ಎಲ್ಲ ಒಳ್ಳೆಯ ಗುಣಗಳಿಂದಲೂ ಕೂಡಿದ್ದರು. ಹೀಗೆ ಆ ನಾಡು ಸರ್ವಸುಖಾವಹವಾಗಿ ಮೆರೆಯುತ್ತಿತ್ತು.

ಆ ನಾಡಿನಲ್ಲಿ ಪಯಣಿಸುವ ಪಾಂಥಿಕರಿಗೆ ನೀರಡಿಕೆಯನ್ನೂ ಶ್ರಮವನ್ನೂ ತೀರಿಸುತ್ತಿದ್ದ ರೀತಿ ವಿಶಿಷ್ಟ: ಅರವಟ್ಟಿಗೆಗಳಲ್ಲಿದ್ದ ಪ್ರಪಾಂಗನೆಯರ ಮುಗುಳುನಗೆಯು ಸುಧೆಯನ್ನೇ ಸುರಿಸುತ್ತಿದ್ದವು, ಅರಳಿದ ಕಣ್ಣುಗಳು ಬೆಳುದಿಂಗಳನ್ನೇ ಎರೆಯುತ್ತಿದ್ದವು. ಅವರ ಪೆರ್ಮೊಲೆಗಳೆಂಬ ಕೊಡಗಳು ಲಾವಣ್ಯವನ್ನು ಸೂಸುತ್ತಿರಲು ಯಾತ್ರಿಕರು ಅವುಗಳನ್ನು ನೋಡಿದ ಮಾತ್ರದಿಂದಲೇ ತಮ್ಮ ನೀರಡಿಕೆ ಮತ್ತು ಪ್ರಯಾಣದ ಪರಿಶ್ರಮವನ್ನು ಮರೆಯುತ್ತಿದ್ದರು. ಆ ನಾಡಿನ ಊರುಗಳಲ್ಲಿದ್ದ ಕೊಳಗಳು ಅರಳಿದ ತಾವರೆ ನೆಯ್ದಿಲೆಗಳಿಂದ ತುಂಬಿ ಚೆಲ್ವಿನಿಂದ ಒಪ್ಪುತ್ತಿದ್ದವು. ಕಲ ಕಂಠಕ್ಕೆ, ಅತನುಗೆ ಚಾಪಲತಾರೋಹಣ, ವಿಕಾರವು ಅಳಿಗೆ, ಮಾವಿನ ಮರಗಳಿಗೆ ಮಧುವಿಕೃತಿ ಇರುವುದೇ ಹೊರತು ಅಲ್ಲಿನ ಜನಗಳಿಗೆ ಇವಾವುವೂ ಕನಸಿನಲ್ಲಿಯೂ ಇಲ್ಲ. ಅಲ್ಲಿ ಬೀಸುವ ಸುಗಂಧಭರಿತ ಗಾಳಿಯು ದಂಪತಿಗಳ ಸಮರತಸಂಜನಿತ ಪರಿಶ್ರಮವನ್ನು ಪರಿಹರಿಸುವುದು. ಹೀಗೆ ಆ ವಿಷಯವಿಲಾಸಿನಿಗೆ ಮಣಿಮಯವಾದ ಕನ್ನಡಿಯಂತೆ ಅಲ್ಲಿನ ಬನಗಳಲ್ಲಿ ಆರೂ ಋತುಗಳು ಕಣ್ಣೆವೆಯಿಕ್ಕದೆ ಇರುತ್ತಿದ್ದವು; ಅಲ್ಲಿನ ಹೊಲಗದ್ದೆಗಳನ್ನು ಸಿರಿಯು ಕಣ್ಣೆವೆಯಿಕ್ಕದೆ ಕಾಯುತ್ತಿದ್ದವು; ಹಕ್ಕಿಗಳನ್ನು ಓಡಿಸುವ ಸುಂದರಿಯರನ್ನು ಹಾದುಹೋಗುವ ಪಥಿಕರು ಕಣ್ಣೆವೆಯಿಕ್ಕದೆ ನೋಡುತ್ತಿದ್ದರು; ಹೀಗೆ ಆ ಸಾಕೇತ

ನಗರವು ಮನೆಗಳ ಬೆಳಕಿನ ಮೂಲಕ ಸುರಲೋಕವನ್ನು ನೋಡಿ ನಗುತ್ತದೆ ಎನ್ನುವಂತೆ ಶೋಭಿಸುವುದು.

ಆ ಪುರದ ಉಪವನದಲ್ಲಿ ಮನ್ಮಥನೆಂಬ ಸಿಂಹದ ಮರಿ ಗಜರಿ ಗರ್ಜಿಸದ ಕೃತಕಗಿರಿಗಳಿಲ್ಲ; ಕಾಮನ ಗೆಲವಿನ ಬಾವುಟಗಳೆನ್ನಿಸುವ ಮೀನುಗಳು ಸಂಚರಿಸದ ಸರೋವರಗಳಿಲ್ಲ; ಪುಷ್ಪಬಾಣನ ಹೂಬಾಣಗಳಿಂದ ತುಂಬಿರದ ಬತ್ತಳಿಕೆಯೆಂಬಂತಹ ತೋಟಗಳಿಲ್ಲ; ಕಾಮದ ಉರಿಯನ್ನು ಪಟುಗೊಳಿಸದ ತಂಗಾಳಿಯಿಲ್ಲ; ರತಿಯ ಲಾವಣ್ಯವನ್ನು ಚಿಗುರಿಸದ ಮಾವಿನ ತೋಪುಗಳಿಲ್ಲ; ಕಾಮರಾಗರಸವನ್ನು ಪ್ರವಾಹವಾಗಿ ಹರಿಸದ ಅಶೋಕವನವಿಲ್ಲ; ಮನ್ಮಥನೆಂಬ ಹಾವು ಸಂಚರಿಸದ ಚಂದನನಂದನವಿಲ್ಲ; ಮನೋಜರಾಜನ ನೀರಾಜನದ ದೀಪವನ್ನು ಬೆಳಗಿಸದ ಚಂಪಕವನವಿಲ್ಲ; ಕಾಮನ ಕತ್ತಿಗಳಂತೆ ಗೊಂಚಲುಗಳಲ್ಲಿ ತೂಗಿ ತೊನೆಯದ ಪೂಗವನಗಳಿಲ್ಲ; ಮದನಮೋಹಾಂಧಕಾರವನ್ನು ಹರಡದ ಹೊಂಗೆಯ ತೋಪುಗಳಿಲ್ಲ; ರತಿಯ ಮಧುಪಾನಗೋಷ್ಠಿಯ ಹೊನ್ನ ಬಟ್ಟಲುಗಳಂತೆ ಕಾಣದ ಕರ್ಣಿಕಾರ(ಬೆಟ್ಟದಾವರೆ) ಗಳಿಲ್ಲ; ಮನ್ಮಥನ ವಿಜಯ ಪತಾಕೆಯನ್ನು ಹಾರಿಸದ ದವನದ ಮಂದವನದ ವೇದಿಕೆಗಳಿಲ್ಲ; ಮಧುಮಹಾದೇವಿಯು ಪಟ್ಟಗಟ್ಟದ ಮಾಧವೀಲತೆಗಳಿಲ್ಲ; ಕಾಮವೆಂಬ ಮದ್ದಾನೆಯು ಅಡ್ಡಾಡದ ಏಲಾವನವೀಥಿಗಳಿಲ್ಲ; ಮದನಜಗದ್ವಶೀಕರಣತಿಲಕ ಎನ್ನಿಸದ ತಿಲಕವನವಿಲ್ಲ; ಮನೋಭವನ ವಿಜಯವನ್ನು ನಿರಾಕುಲವಾಗಿ ಮಾಡದ ಬಕುಲವನವಿಲ್ಲ; ಕಾಮನ ಕೀರ್ತಿಯ ಬಳ್ಳಿ ಎನ್ನಿಸುವ ಅರಳಿದ ಮಲ್ಲಿಗೆಗಳಿಂದ ತುಂಬಿರದ ಬಳ್ಳಿಗಳಿಲ್ಲ; ಕುಸುಮಶರಮಂತ್ರಗಳನ್ನು ಮಣಮಣಿಸದ ಕೋಗಿಲೆಗಳಿಲ್ಲ; ಹೊಗಳುಭಟರಂತೆ ಸ್ಮರನ ಗುಣಗಾನ ಮಾಡದ ಅರಗಿಳಿಗಳು ಅಲ್ಲಿಲ್ಲ; ಮದನನ ಬಿಲ್ಲನಾರಿಯಂತೆ ಠೇಂಕಾರ ಮಾಡದ ದುಂಬಿಗಳು ಅಲ್ಲಿಲ್ಲ; ಜಲದೇವತೆಗೆ ತಮ್ಮ ಕೂಜನದಿಂದ ಉಪದೇಶ ಮಾಡದ ಸಾರಸಪಕ್ಷಿಗಳು ಇಲ್ಲ; ದಾರಿಹೋಕರುಗಳಿಗೆ ಮನ್ಮಥನ ಚಾಡಿಮಾತುಗಳನ್ನು ಹೇಳದ ಪಾರಿವಾಳಗಳಿಲ್ಲ; ದರ್ಪಕನ ದರ್ಪವನ್ನು ಉದ್ದೀಪನಗೊಳಿಸದ ಚಕ್ರವಾಕಪಕ್ಷಿಗಳು ಅಲ್ಲಿಲ್ಲ; ವನದೇವತೆಗೆ ತನ್ನ ಗರಿಯ ಚಾಮರ ಬೀಸದ ನವಿಲುಗಳು ಅಲ್ಲಿಲ್ಲ.

ಆ ಊರಿನ ಆರಾಮದಲ್ಲಿ ಬೀಸುವ ಕುಸುಮಸೌರಭಯುಕ್ತ ಮಂದ ಸಮೀರವು ಹಾದಿಹೋಕರ ಅಳ್ಳೆದೆಗಳನ್ನು ಮನ್ಮಥನ ಬಾಣಗಳಂತೆ ಚುಚ್ಚುವುದು; ಬಂಡನ್ನುಂಡು ಹೂಗೊಂಚಲುಗಳಲ್ಲಿ ಮೊರೆಯುವ ದುಂಬಿಗಳ ಝೇಂಕಾರವು ಎಂಥವರ ಮನಸ್ಸಿನಲ್ಲಾದರೂ ಮದನೋತ್ಸವದ ಹರ್ಷವನ್ನು ಉಕ್ಕಿಸುವುದು. ಮಾವು, ಅಶೋಕ, ರಂಭಾ, ತಿಲಕ, ಪುನ್ನಾಗ, ಕರ್ಪೂರವಲ್ಲಿಗಳ ಬಳ್ಳಿಮಾಡಗಳಲ್ಲಿ, ಕೆಳಗೆ ಉದುರಿದ ಎಳೆಯ ಹವಳದಂತಹ ತೊಟ್ಟುಗಳಿರುವ ಮಲ್ಲಿಗೆಯ ಹಾಸಿನಲ್ಲಿ ಮೈಯುಬ್ಬುವಂತೆ ಕೇಳಿಬರುವ ನಾನಾ ವಿಹಗಗಳ ಕೂಜನವು ವಾರನಾರೀಕದಂಬದ ಸಂಭೋಗಕೇಲೀಕುಹರವ್ಯಾಪಾರ ದಂತಿರುವುದು. ಆ ಪುರದ ಉಪವನದಲ್ಲಿ ಹೆಣ್ಣುದುಂಬಿಗಳ ಗುಂಪಿನಿಂದ ಕಪ್ಪಾದ ನೆಯ್ದಿಲ ಕೊಳ, ಹಂಸಗಳು ವಿಹರಿಸುವ ತಾವರೆಗೊಳ, ಚಿಗುರಿನಿಂದ ಕೂಡಿದ ಏಲಾವನವು ಒಡ್ಡುಗೊಂಡ ಬಾಳೆಯ ವನ, ಸಾಲಾದ ಮಾವಿನ ಮರಗಳು, ಚಂದನತರುಗಳು, ಸಂಪಗೆಯ ತೊಂಗಲುಗಳಿಂದ ಕೂಡಿದ ಮಾಧವೀಮಂಟಪ – ಇವೆಲ್ಲವೂ ಸಂತಸವನ್ನು

ಬೀರುತ್ತವೆ. ವನರಾಜಿಯೂ, ವಿಹಗಗಳ ಕೂಜನರಾಜಿಯೂ ಸೇರಿ ಮನೋಹರವಾದ ಆ ಊರಿನ ಬಹಿರುದ್ಯಾನವು ರತಿಗೆ ಹೊಸ ಯೌವನ ಪ್ರಾಪ್ತವಾದಂತೆ ಕಾಣಿಸುವುದು. ಬೇರಿನಿಂದಲೇ ಹಣ್ಣುಗಳು ಜಗ್ಗಿ ಬಿಟ್ಟಿರುವ ಹಲಸು, ಎಳೆನೀರಿನ ಪ್ರವಾಹವನ್ನೇ ಸುರಿಸುವ ತೆಂಗು, ಹೊಂಬಾಳೆಗಳಿಂದ ತುಂಬಿರುವ ಅಡಕೆಮರಗಳು, ಹೊಳೆಯುವ ಎಳೆಯ ಎಲೆಬಳ್ಳಿಗಳು ಆ ಪುರವನದಲ್ಲಿ ಶೋಭಿಸುತ್ತವೆ. ಹೀಗೆ ಆ ಬಹಿರುದ್ಯಾನವು ಕಾಮನೆಂಬ ಆನೆಯ ವಿಹಾರದ ಬೀದಿಯಂತೆಯೂ, ಸುಕೃತವೆಂಬ ಕಾಮಧೇನುವು ಅಡ್ಡಾಡುವ ಜಾಗದಂತೆಯೂ, ಕಣ್ಣುಗಳ ಪಾಪೆಗಳಿಗೆ ಶೋಭೆಯನ್ನು ತರುವ ಸದನದಂತೆಯೂ, ಲಕ್ಷ್ಮಿಯು ಲೀಲೆಯಿಂದ ಲಾಸ್ಯಗೈಯುವ ಮಂಗಲರಂಗದಂತೆಯೂ ಮನಸೂರೆಗೊಳ್ಳುವಂತಿತ್ತು.

ಬಡಬಾನಲನಿಗೆ ಹೆದರಿ ಸಮುದ್ರವೇ ಅಮರಶೈಲವನ್ನು ಶರಣುವೊಕ್ಕಿದೆಯೋ ಎಂಬಂತೆ ಕಾಣುವ ನೀರ್ಗಾದಿಗೆಯು (ಕಂದಕ) ಆ ಊರಿನ ಹೊನ್ನ ಕೋಟೆಯನ್ನು ಸುತ್ತುವರೆದಿದೆ. ಚೆಂಬಣ್ಣದ ಕೋಟೆಯು ಹೊಳೆಯುವ ಎಳೆಯ ನೇಸರಿನಂತೆ ಕಂದಕದಲ್ಲಿ ತುಂಬಿರುವ ನೀರುಹೂಗಳ ನಾನಾ ಬಣ್ಣಗಳು ಎಂಥವರ ಕಣ್ಣಗಳನ್ನೂ ಸೆರೆಹಿಡಿಯುತ್ತವೆ. ಇದು ಮಂದರಕಂದರವೋ ಏನೋ ಎಂಬ ಸಂದೇಹದಿಂದ ಸಾರಥಿಯು ಕೂಗಿದಾಗ ಸೂರ್ಯನ ಕುದುರೆಗಳು ಕಡಿವಾಣವನ್ನು ಕಚ್ಚಿಕೊಂಡು ರಥವನ್ನು ಕೋಟೆಯೆಡೆಗೆ ವೇಗವಾಗಿ ಎಳೆಯುತ್ತವೆ. ಮುಗಿಲಿನಷ್ಟು ಎತ್ತರವಾದ ಅಟ್ಟಳೆಗಳ ಪಕ್ಕದಲ್ಲಿರುವ ಅಂಬುಗಂಡಿಗಳಿಂದ ನುಸುಳಿ ಬರುವ ಸೂರ್ಯನ ಕುದುರೆಯಿಂದಾದ ಬೇಗೆಯನ್ನು ಗಗನದಲ್ಲಿ ಹಾರಾಡುವ ಬಾವುಟಗಳ ತಂಗಾಳಿಯ ತೀಟವು ನೀಗಿಸುತ್ತದೆ.

ಹೀಗೆ ಏರಲು ಅಸಾಧ್ಯವಾದುದೂ, ಆಗಸದೆತ್ತರಕ್ಕೆ ಎದ್ದು ನಿಂತಿರುವುದೂ ಆದ ನಾನಾ ಅಟ್ಟಳಿಗೆಗಳಂತಿರುವ ಕನಕ ಪ್ರಾಕಾರದ ಒಳಗೆ ತಮ್ಮ ಕಣ್ಣುಗಳ ಬೆಳುದಿಂಗಳ ನೋಟವೆಂಬ ಧಾರೆಯು ಸೋರುತ್ತಿರಲು, ಚಂದ್ರಕಾಂತಶಿಲೆಯು ಒಸರುವ ನೀರಿನ ಧಾರೆಯಿಂದ ಬರೆದ ವಿಚಿತ್ರಪತ್ರನಿಚಯವು ಹರಿಯಲು, ಕೋಪದಿಂದ ಕಣ್ಣುಗಳನ್ನು ಕೆಂಪಾಗಿಸಿಕೊಂಡು ಹಸುರಾದ ಗೋಡೆಗಳ ಮೇಲೆ ಊರಿನ ವನಿತಾಸಮೂಹವು ಅಭಂಗುರಪತ್ರಗಳನ್ನು ಬರೆಯಲು ತೊಡಗುತ್ತದೆ. ತಮ್ಮ ಕೈಗಳ ಕೆಂಪಿನಿಂದ ಹಿಡಿದ ಗಿಳಿಯು ಪದ್ಮರಾಗದ ಗಿಳಿಯಂತೆ ಕಾಣಲು, ತಮ್ಮ ಕಣ್ಣೋಟವೆಂಬ ಬೆಳುದಿಂಗಳು ಚಂದ್ರಕಾಂತದಿಂದ ಮಾಡಿದ ಗಿಳಿಯಂತೆ ತೋರಲು ಅಚ್ಚರಿಗೊಂಡ ಆ ಮುಗ್ಧೆಯರು ಇದು ಮಾಯದ ಗಿಳಿ ಎಂದು ಭಾವಿಸಿ ಅದನ್ನು ಮಾತನಾಡಿಸಲು ಹೆದರಿ ಪಂಜರದಲ್ಲಿರಿಸಲು ಪ್ರಯತ್ನಿಸುವರು. ಒಂದೆಡೆ, ಘಟ್ಟಿವಳ್ತಿಯರು ಗಂಧವನ್ನು ತೇಯುತ್ತಿರಲು, ಅವರ ತೋರಮೊಲೆಗಳು ಮನ್ಮಥನೆಂಬ ಆನೆಯು ತನ್ನ ಮುಖವಾಡವನ್ನು ಕಳಚಿತು ಎನ್ನಿಸಿದರೆ, ಅವರ ಚಂಚಲವಾದ ಕುಡಿನೋಟವು ಮೀನುಗಳಿಗೆ ಆಸೆ ಪಡುವ ಚಂದ್ರಕಿರಣಗಳಂತೆ ಕಾಣಿಸುತ್ತಿತ್ತು; ಕರ್ಣಯುಗಳದ ಆಭರಣವನ್ನು ಸುತ್ತುವರೆದ ಬೆವರಿನ ಹನಿಗಳು ಹಣೆಯ ಮೇಲೆ ಬೆಳುದಿಂಗಳೆಂಬ ಅಮೃತದ ಹನಿಗಳಂತೆ ತೋರುತ್ತಿದ್ದವು. ಅರೆಯುವ ಅವರ ನಳಿದೋಳುಗಳು ಅಂಗಭವಪಾಶಗಳಂತೆ ಕಾಣಿಸುತ್ತಿದ್ದವು.

ಅವರ ನರುಸುಯ್ಲಳಿಗೂ ಧರಿಸಿದ ಮಾಲೆಗಳ ಹೂಗಳಿಗೂ ಎರಗುವ ದುಂಬಿಗಳು,

ನೋಡಿದವರ ಮೈಮರೆಸುವಂತಹ ತೋಳುಗಳು, ಕಾಂತಿಯುಕ್ತವಾದ ಕಣ್ಣುಗಳೆಂಬ ಹೂಗಳು, ಬಳ್ಳಿಮಿಂಚುಗಳನ್ನು ಸೂಸುವ ಮಾಲೆವೂಗಳು, ನೀರ ಮೇಲೆ ಗುರಿಯಿಟ್ಟು ಹೊಡೆಯಲು ಪೊದೆಗೆದರಿದ ಹಾಗೆ ಪುಷ್ಪಲಾವೀಕದಂಬವು ಶೋಭಿಸುವುದು. ಇಂದ್ರನ ವಜ್ರವೂ, ಹರಿಯ ಕೌಸ್ತುಭವೂ, ಶಿವನ ಚಂದ್ರಲೇಖೆಯೂ, ವರುಣನ ಮುತ್ತಿನ ಏಕಾವಳಿಯೂ, ಗರುಡದ ಪಚ್ಚೆಯೂ, ನಾಗರಾಜನ ಹೆಡೆವಣಿಯೂ ಬೆಲೆಗೆ ನಿಲುಕುವಂತಹುದಲ್ಲ ಎಂಬ ಪೆಂಪಿನಿಂದ ರತ್ನದ ಅಂಗಡಿಯು ರೋಹಣಪರ್ವತವನ್ನೇ ಗೆಲ್ಲಲು ಬಂದಂತಿದೆ. ತಾವರೆಗೆ ಕೆಸರು ಮೆತ್ತಿದೆ, ಗೋವರ್ಧನನ ಎದೆಯು ಗೋವಳಿತಿಯ ಮೊಲೆಯ ಒತ್ತಿಗೆ ಸಿಕ್ಕಿದೆ, ಬಡಬಾನಲನ ಧೂಮಾಗ್ನಿಯಿಂದ ಹಾಲುಗಡಲು ಅಪಾಯಸ್ಥಾನವಾಯಿತು ಎಂದು ಬಗೆದ ಲಕ್ಷ್ಮಿಯು ತನ್ನ ಚಾಂಚಲ್ಯವನ್ನು ಮರೆತು ಆ ಊರಿನ ವಣಿಜರ ಸೌಧಗಳಲ್ಲಿ ನಿಶ್ಚಿಂತೆಯಿಂದ ನೆಲೆಸಿದ್ದಾಳೆ. ಆ ಊರಿನ ಮನೆಗಳೆಲ್ಲ ನವರತ್ನಗಳಿಂದಾದವು; ಇವು ಸಹಜವಾದ ದೇವವಿಮಾನಗಳು, ಇವು ನಿರ್ಮಾಣಗೊಂಡವು ಎಂಬ ಭೇದವೇ ಅವುಗಳಲ್ಲಿ ಕಾಣಿಸುವುದಿಲ್ಲ. ಇರುಳುಹಗಲೆನ್ನದೆ ಅಲ್ಲಿನ ಮನೆಗಳಲ್ಲಿ ಪದ್ಮರಾಗಗೃಹಗಳ ಎಳೆವಿಸಿಲೂ ನೀಲಗೃಹಗಳ ಕತ್ತಲೆಯೂ ಶಶಿಕಾಂತಗೃಹದ ಬೆಳುದಿಂಗಳು ಬೆರೆತಿರುತ್ತವೆ. ಇದನ್ನು ರಚಿಸಿದ ಶಿಲ್ಪಿಯು ಕಲ್ಪಪತಿಸಂಕಲ್ಪನೇ ಸರಿ; ಅದಕ್ಕೇ ರತ್ನಶಿಲೆಯಿಂದ ಇದನ್ನು ನಿರ್ಮಿಸಿದ್ದಾನೆ. ಇಲ್ಲದಿದ್ದರೆ ಗಾಂಪನಂತೆ ಇದು ಶೋಭಾತಲ್ಪವೆಂದು ತಿಳಿಯದೆ ಬೇರೆಯದನ್ನು ಆಲೋಚಿಸುತ್ತಿದ್ದ. ಹೀಗಾಗಿ ನೆಲೆಮಾಡದ ಹೊಸ ಚೆಲುವಿನ ನೆಲೆಯು ಸಕಲಜನರ ಕಣ್ಣುಮನಸ್ಸುಗಳಲ್ಲಿ ನೆಲೆಸುವಂತಾಯಿತು; ಇಲ್ಲದಿದ್ದರೆ ಕೀಳು ಸದನದಂತೆ ಸ್ವಲ್ಪವೂ ರುಚಿಸುತ್ತಿರಲಿಲ್ಲ.

ರಾಣಿವಾಸದ ಬಳ್ಳಿಮಾಡದ ಉಜ್ವಲವಾದ ಮಣಿಭಿತ್ತಿ ಚಿತ್ರಗಳು ಅಪೂರ್ವ ಚೆಲುವಿನಿಂದ ಕೂಡಿವೆ: ಅವುಗಳಲ್ಲಿ ಹಸುರು ಕಲ್ಲುಗಳ ಕಾಂತಿಯನ್ನು ಕಂಡು ಮೃಗಸಂಕುಲವು ಎಳೆ ಗರುಕೆಯೆಂದು ಭಾವಿಸುತ್ತವೆ; ಮಾಣಿಕ್ಯದ ಚೆಂಬೊಳಪನ್ನು ಕಂಡು ಚಕ್ರವಾಕಗಳು ಬಿಸಿಲೆಂದು ತಪ್ಪು ತಿಳಿದು ನಡುರಾತ್ರಿಯಲ್ಲಿ ಮೇಳೈಸುತ್ತವೆ; ಅಲ್ಲಿ ನೇತಾಡುತ್ತಿರುವ ಮುತ್ತಿನ ಸರಗಳನ್ನು ಎಳೆಯ ಮೃಣಾಳವೆಂದು ಭಾವಿಸಿ ಕಲಹಂಸಸಂಕುಲವು ಕುಟುಕಲು ಬಯಸುತ್ತವೆ. ಗಿಳಿಯು ಹೆಣ್ಣು ಗಿಳಿಗೆ ಮಾವಿನ ಹಣ್ಣುಗಳನ್ನೂ, ಹಂಸವು ಕಲಹಂಸಿಗೆ ತಾವರೆಯ ದಂಟನ್ನೂ, ಆನೆಯು ಹೆಣ್ಣಾನೆಗೆ ಲವಂಗದಳಗಳನ್ನೂ ನೀಡುವುದನ್ನು ವರ್ಣಿಸುವ ಮನೋಹರ ಸಂಗತಿಗಳು ಅಲ್ಲಿವೆ. ಮಯನೂ ಬೆರಗುಗೊಂಡು ಬೆರಳನ್ನು ಮಿಡಿಯುವಂತೆ ಮಾಡುವ, ಪುಲಕಿಸುವ, ತಲೆದೂಗಿಸುವ ರೀತಿಯಲ್ಲಿ ಅರಮನೆಯ ಕುಸುರಿಗೆಲಸವು ಶೋಭಿಸುತ್ತದೆ. ನೆರೆದಿರುವವರು ಚತುರಾನನರು, ಹೀಗಾಗಿ ತನಗೆ ರಾಜಬಾಧೆಯೂ ಕಂಟಕರಾಜಿಯೂ ರಜವೂ ತೊಂದರೆ ಕೊಡಲಾರವು, ಆದ್ದರಿಂದ ತನ್ನ ಒಪ್ಪವು ಸದಾ ಕೆಡದಂತಿರುವುದು ಎಂಬುದಾಗಿ ಬ್ರಹ್ಮಪುರಕ್ಕೆ ತನ್ನ ನೀಲರತ್ನಕಾಂತಿಯಿಂದ ದೈನ್ಯವನ್ನುಂಟುಮಾಡುತ್ತದೆ.

ಈ ಬಗೆಯಲ್ಲಿ ಅತಿಶಯವೆನಿಸುವ ಅಯೋಧ್ಯಾಪುರದ ರಾಜನೆಂದರೆ ಮನುಚೂಡಾಮಣಿಯೆನಿಸಿದ ನಾಭಿ. ಅವನ ಮಗ ಬ್ರಹ್ಮ; ಅವನ ಮಗ ಎಲ್ಲರಿಗಿಂತಲೂ ಮಿಗಿಲೆನಿಸಿದ ಭರತ; ಅವನು ಷಟ್ಖಂಡಗಳನ್ನೂ ಗೆದ್ದು ಆಳಿದವನು; ಅವನ ತನಯ

ಅರ್ಕಕೀರ್ತಿ; ಸದ್ಗುಣಗಳ ಕಾರಣದಿಂದಾಗಿ ಅವನ ವಂಶವು ಔನ್ನತ್ಯಕ್ಕೇರಿತು. ಅವನು ಮರ್ಯಾದೆಯಿಂದ ನೆಲವನ್ನು ಆಳಿ, ವರ್ಣಾಶ್ರಮಾಚಾರವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದ. ಸ್ವಲ್ಪವೂ ದೋಷ ಹೊದ್ದದ ಹಾಗೆ ಇಂದ್ರಿಯಸುಖಗಳನ್ನು ಹೊಂದಿ ಸಂತಸದಿಂದ ಬಾಳಿ ಆತ್ಯಂತಿಕಸುಖವನ್ನು ಪಡೆದ ರಾಜಾಧಿರಾಜರ ಅವಿಚ್ಛಿನ್ನಪರಂಪರೆಯಿಂದಾಗಿ ಇಕ್ಷ್ವಾಕುಕುಲವು ಕುಲನದಿಯಂತೆ ನಿರಂತರವಾಗಿ ಹರಿಯಿತು.

ನಾಭಿರಾಜನಿಂದ ಮೊದಲುಗೊಂಡು ಉತ್ತಮಕ್ರಮವನ್ನು ಕೆಡಿಸದೆ ಉನ್ನತಿಯನ್ನು ಪಡೆದ ಆ ವಂಶವು ಮುನಿಯಾದ ಸುವ್ರತರ ಕರುಣೆಯಿಂದ ಉದಾತ್ತವೆನಿಸಿತು. ಅವನ ಕಾಲದಲ್ಲಿಯೇ ಆ ವಂಶದಲ್ಲಿ ವಿಜಯರಥನು ಹುಟ್ಟಿದ. ಅವನ ಸತಿ ಹೇಮಮಾಲಿನಿ ಎಂಬ ಲತಾಂಗಿ. ವಿಜಯರಥನು ತನ್ನ ವಿಜಿಗೀಷುವೃತ್ತಿಯಿಂದ ಭೂಮಂಡಲದ ರಾಜರನ್ನೆಲ್ಲ ತನ್ನ ಅಧೀನರನ್ನಾಗಿಸಿಕೊಂಡು ಆಳಿದ. ಆ ನರೇಂದ್ರನ ಮಗನೇ ಸುರೇಂದ್ರಮನ್ಯು ಮಹಾರಾಜ. ಅವನು ತನ್ನ ವೈರಿರಾಜರ ಹೆಂಡತಿಯರ ಕಣ್ಣೀರಿನಿಂದಲೇ ತನ್ನ ಕೀರ್ತಿ ಬಳ್ಳಿಯು ಬೆಳೆಯುವಂತೆ ಮಾಡಿದವನು. ಅವನಿಗೆ ಕೀರ್ತಿಶ್ರೀ ಎಂಬ ಕೋಮಲೆಯು ಮಹಾರಾಣಿಯಾದಳು. ಆ ದಂಪತಿಗಳಿಗೆ ಮನ್ಮಥನ ರೂಪವೂ ಕೇಸರಿಯ ಅಳವೂ ಇದ್ದ ವಜ್ರಬಾಹು ಪುರಂದರ ಎಂಬ ಹೆಸರಿನ ಇಬ್ಬರು ಮಕ್ಕಳಾದರು. ಅವರಲ್ಲಿ ವಜ್ರಬಾಹು ಕುಮಾರನು ಇಂದ್ರನು ಕುಲಪರ್ವತಗಳನ್ನು ಕತ್ತರಿಸಿದಂತೆ ವಿಪಕ್ಷವನ್ನು ತುಂಡರಿಸಿದನು, ಅಂತೆಯೇ ಪುರಂದರನು ದಿಕ್ಕುದಿಕ್ಕುಗಳಲ್ಲೂ ಉರಿ ಹರಡುವ ಹಾಗೆ ಅರಿನೃಪಪುರಗಳನ್ನು ಉರುಪಿ ನೃಪಪುರಂದರನೆನಿಸುವಂತೆ ತನ್ನ ತೇಜಸ್ಸನ್ನು ಮೆರೆದ. ತನ್ನ ಒಬ್ಬ ಮಗ, ಅವನ ಇಬ್ಬರು ಮಕ್ಕಳು ವಿಜಯರಥನಿಗೆ ಮೂರುಕಣ್ಣುಗಳಂತೆ ಮೂರೂ ಜಗತ್ತುಗಳನ್ನು ತಂದೆರೆಗಿಸಿದರು. ಈ ರೀತಿಯಲ್ಲಿ ವಿಜಯರಥನು ಇಡೀ ಭೂಮಂಡಳಕ್ಕೆ ಮನೋರಥಸಿದ್ಧಿಯನ್ನಿತ್ತನು. ಅವನ ವಕ್ತ್ರಪಂಕಜದಲ್ಲಿ ವಾಗ್ವಧು ರಂಜಿಸಿದಳು; ಅವನ ಕೀರ್ತಿಯು ದಿಗ್ಗಜಗಳವರೆಗೆ ಹಬ್ಬಿತು. ಅವನಿಗೆ ಜಗಜ್ಜನಕಂಠಭೂಷಣ ಎಂಬ ಹೆಸರಾಯಿತು.

* * * * *

# ೨. ಇಕ್ಷ್ವಾಕುವಂಶದ ಬಳ್ಳಿ

ಆ ವಿಜಯರಥ ನರನಾಥನು ಒಂದು ದಿನ ಒಡ್ಡೋಲಗವನ್ನಿತ್ತು ಸಕಲಕ್ಷತ್ರಕಿರೀಟತಾಡಿತನಾಗಿ ಕುಳಿತಿದ್ದ. ಆಗ ಕೈಯಲ್ಲಿ ಲತೆಯಂತಹ ಬೆತ್ತವನ್ನು ಹಿಡಿದ, ಬಿಳಿಯ ಉತ್ತರೀಯವನ್ನು ಹೊದ್ದ, ನೀಳವಾದ ಗಡ್ಡವನ್ನು ಹೊತ್ತ, ಬಿಳಿಯ ಕಂಚುಕವನ್ನು ಧರಿಸಿದ ಪ್ರತೀಹಾರನೊಬ್ಬನು ಬಂದು ಕಾರ್ಯವಿಜ್ಞಾಪನೋತ್ಸುಕನಾಗಿ ಸಿಂಹಾಸನದ ಬಳಿ ಮೊಗಸಾಲೆಯಲ್ಲಿ ಮೈಯಿಕ್ಕಿ ನಿಂತ. ತನ್ನ ಮೊಗಸುತ್ತಿನ ದುಕೂಲದ ಸೆರಗನ್ನು ತೆಗೆದು ಬಾಯಿ ಮುಚ್ಚಿಕೊಂಡು ಇಂತೆಂದ: "ದೇವಾ, ನಾಗಪುರವನ್ನಾಳುವ ಇಭವಾಹನ ಮಹಾರಾಜರ ಮಗ ಉದಯಸುಂದರಕುಮಾರರು ಅರಮನೆಯ ಬಾಗಿಲಿಗೆ ಬಂದು ತಮ್ಮ ಅಪ್ಪಣೆಗಾಗಿ ಕಾಯುತ್ತ ನಿಂತಿದ್ದಾರೆ" ಎಂದು ಬಿನ್ನವಿಸಿದ. ಮಹಾರಾಜನು ಅವನನ್ನು ಕರೆತರಲು ಆಜ್ಞಾಪಿಸಿದ.

ಹಗಲಿನಲ್ಲಿ ಬೆಳುದಿಂಗಳನ್ನು ಹರಡುವಂತಹ ಎಳೆಯ ಹವಳದ ಸರವನ್ನು ಧರಿಸಿ ರೂಪದಲ್ಲಿ ಮದನ್‌ನನ್ನು ಅಲ್ಲಗಳೆಯುವಷ್ಟು ಚೆಲುವನಾದ ರಾಜಕುಮಾರನು ಆಸ್ಥಾನವನ್ನು ಪ್ರವೇಶಿಸಿದ. ವಿಶಾಲವಾದ ಎದೆಯ ಮೇಲೆ ಸ್ಫಾರಹಾರವನ್ನು ಧರಿಸಿದ ವಾಸವಸೌಂದರನಾದ ಅವನು ಆಗಮಿಸಲು ರಾಜರಿಂದ ತುಂಬಿದ ಆ ಸಭೆಯೆಲ್ಲ ಆಕರ್ಷಣೆಗೊಳಗಾಯಿತು. ಅಲ್ಪಸಂಖ್ಯೆಯ ಪರಿಜನರಿಂದ ಕೂಡಿದ ರಾಜಕುಮಾರನು ಬೆಳುಗೊಡೆಯ ನೆಳಲಲ್ಲಿ ಬರುತ್ತಿರಲು ನೈದಿಲ ಹೂವಿನ ನೆಳಲಲ್ಲಿನ ಹಂಸದ ಮರಿಯಂತೆ ಕಾಣುತ್ತಿದ್ದ. ಸಭಾಸದನವನ್ನು ಹೊಕ್ಕವನೇ ಉದಯಸುಂದರನು ತಾನು ತಂದಿದ್ದ ಬೆಳಗುವ ಮಣಿಖಚಿತ ಉಡುಗೊರೆಗಳನ್ನು ರಾಜನ ಪಾದಕಮಲಗಳಲ್ಲಿ ತಣ್ಬಿಸಿಲನ್ನು ಅರ್ಪಿಸಿದಂತೆ ಒಪ್ಪಿಸಿದ. ವಜ್ರಬಾಹು ಮತ್ತು ಪುರಂದರಲ್ಲಿಯೂ ವಿನಯವೃತ್ತಿಯನ್ನು ಮೆರೆದು ಸಮುಚಿತಾಸನದಲ್ಲಿ ಕುಳಿತ.

ಆನಂತರ ಕೈಮುಗಿದುಕೊಂಡು, "ಸಕಲಕ್ಷತ್ರಪವಿತ್ರಚರಣಾಂಭೋಜರಾದ ತಮ್ಮ ಸೇವೆ ಮಾಡಲು ಸಮುತ್ಸುಕರಾದ ನಮ್ಮ ತಂದೆ ಇಭವಾಹನ ಮಹಾರಾಜರು, ಶ್ರೀನಟೀನಾಟ್ಯವೇದಿಕೆಯಂತಿರುವ ಅನಂಗೋನ್ಮಾದೆಯಾದ ನನ್ನ ತಂಗಿ ಗುಣೋದೆಯನ್ನು ವಜ್ರಬಾಹುಕುಮಾರರಿಗೆ ಮದುವೆ ಮಾಡಿಕೊಡುವ ಪ್ರಸ್ತಾವನೆಯೊಂದಿಗೆ ನನ್ನನ್ನು ಇಲ್ಲಿಗೆ ಕಳುಹಿಸಿರುವರು" ಎಂದು ಬಿನ್ನವಿಸಿದ. ಅದನ್ನು ಕೇಳಿದ ವಿಜಯರಥ ಮಹೀನಾಥನು ಉದಯಸುಂದರನ ಮುಖಾರವಿಂದವನ್ನು ನೋಡಿ, "ಕನ್ಯೆಯು ವಜ್ರಬಾಹುವಿಗೆ

ಅನುರೂಪೆ, ನಿಜ. ಅಲ್ಲದೆ ಹೆಣ್ಣು ಕೊಡಲು ಸಿದ್ಧನಿರುವ ಇಭವಾಹನ ಮಹಾರಾಜರು ಜಗನ್ಮಾನ್ಯರು. ನಮ್ಮನ್ನು ಸಮಾನರೆಂದು ಭಾವಿಸಿ ನಂಟತನ ಬೆಳೆಸುವುದೇನು ಸಾಮಾನ್ಯ ವಿಷಯವೇ!" ಎಂದು ಮಧುರವಚನಗಳಿಂದ ಅವನನ್ನು ತಣಿಸಿದ. ಇದರಿಂದ ಉದಯಸುಂದರ ಆನಂದತುಂದಿಲನಾದ. ವಿಜಯರಥ ಮಹಾರಾಜನು ನಾನಾ ಬಗೆಯಲ್ಲಿ ಸಂತೋಷಗಳನ್ನು ಒದವಿಸಿ ಆಶೀರ್ವಚನಗಳನ್ನಾಡಿ ಉಚಿತ ಮಂಗಳೋಪಕರಣಗಳನ್ನಿತ್ತು ಆನಂತರ ಅವನನ್ನು ಬೀಳ್ಕೊಟ್ಟ.

ಒಂದು ದಿನ ಶುಭಮುಹೂರ್ತದಲ್ಲಿ ವಜ್ರಬಾಹುಕುಮಾರನು ದಿಕ್ಕರಿಯನ್ನು ದಿಕ್ಕುಮಾರನೇರುವ ರೀತಿಯಲ್ಲಿ ಆನೆಯನ್ನೇರಿಕೊಂಡು ಹೊರಟ. ಪಟಹ ಶಂಖಗಳ ನಿನಾದವು ದಿಕ್ತಟವನ್ನು ತಟ್ಟುತ್ತಿರಲು, ಗಂಡಮಂಡಲದಲ್ಲಿ ಮಣಿಕುಟಿಲರುಚಿಯು ಹೊಮ್ಮುತ್ತಿರುವ ತನ್ನ ಆನೆಯನ್ನು ಮುನ್ನಡೆಸಿದ. ಎರಡು ಪಕ್ಕಗಳಲ್ಲಿಯೂ ಕನ್ನೆಯರು ಚಾಮರವಿಕ್ಕುತ್ತಿದ್ದರು; ಕಾಲ್ಗಾಪಿನಿಂದ ಆವೃತನಾಗಿ ಬೆಳುಗೊಡೆಯ ನೆಳಲಲ್ಲಿ ಸಿಂಧುರವನ್ನೇರಿದ ಮೈಗಲಿಯಾದ ವಜ್ರಬಾಹುವು ವಜ್ರಾಯುಧದಂತೆ ಸಾಗುತ್ತಿದ್ದ. ಅವನ ಪಕ್ಕದಲ್ಲಿ ಕೆಲವು ಮಂದಿ ರಾಜಕುಮಾರರೂ ಇದ್ದರು; ಭಟರು ರಾಜಚಿಹ್ನವಿದ್ದ ಪಾಳಿಧ್ವಜಗಳನ್ನು ಹೊತ್ತು ತರುತ್ತಿದ್ದರು. ಹೀಗೆ ಕಟಕದ ಮುಂಚೂಣಿಯಲ್ಲಿ ವಜ್ರಬಾಹು ಪಯಣಿಸಿದ.

ಮುಂದೆ ಅವನಿಗೆ ಮೇರುವಿನಂತಿದ್ದ ವಸಂತಗಿರಿ ಕಾಣಿಸಿತು. ಮುಗಿಲವರೆಗೂ ಏರಿದ್ದ ಅದರ ರತ್ನಕೂಟದ ಪ್ರಭೆಯು ಜ್ಯೋತಿರ್ವಿಮಾನಗಳನ್ನು ಕಂಡು ನಗುವಂತಿತ್ತು; ಅದರಲ್ಲಿ ಹರಿಯುವ ನಿರ್ಝರಪ್ಲವಗಳು ಗಂಗೆಯನ್ನು ಅಪಹಾಸ್ಯ ಮಾಡುವಂತಿದ್ದವು; ಗಿರಿಯ ಮೇಲೆಲ್ಲ ಕಲ್ಪತರುವಿನಿಂದ ಕೂಡಿದ ಉದ್ಯಾನವು ಆವರಿಸಿತ್ತು. ಆ ಗಿರಿಯ ಮೇಲೆ ವಿಹರಿಸುವಾಗ, ವಿದ್ಯಾಧರಸ್ತ್ರೀಯರ ಸೋರ್ಮುಡಿಯಿಂದ ಹೊಮ್ಮುವ ಹೊನ್ನ ಕೇದಗೆಯ ಕಿರಿ ಎಸಳುಗಳು, ಮದನಕೇಳಿಯ ಸಮಯದಲ್ಲಿ ಸಿದ್ಧಕಾಮಿನಿಯರ ಕೆನ್ನೆಗಳ ಮೇಲಿನ ಮಕರಿಕಾಪತ್ರಗಳಿಂದ ಉದುರಿದ ಕಸ್ತೂರಿ, ಕಿಂಪುರುಷದಂಪತಿಗಳ ಸುರತಕೋಲಾಹಲದಿಂದ ಕೂಡಿ ಮದನನ ಸಂಗೀತಸದನದಂತೆ ತೋರುವ ಎಳೆಯ ಬಳ್ಳಿಗಳ ಜೊಂಪೆಗಳು, ಕಿನ್ನರ ನಿತಂಬಿನಿಯರು ಕೆಂಪುಶಿಲೆಗಳ ಮೇಲೆ ಚೆನ್ನೈದಿಲ ಎಸಳುಗಳಿಂದ ರಚಿಸಿದ ಹಸೆಗಳು, ಪರಿಮಳಕ್ಕೆ ಆಸೆಪಟ್ಟು ತಮ್ಮನ್ನು ಸುತ್ತುವ ದುಂಬಿಗಳ ನಾದಕ್ಕೆ ಬೆಚ್ಚಿ ಗಂಧರ್ವಗಣಿಕೆಯರು ಬಿಸುಟ ಕರ್ಣಪೂರ ಪಾರಿಜಾತಗಳ ಗೊಂಚಲುಗಳು, ಒಂದೆಡೆಯಲ್ಲಿ ಸಂಜೆಯ ಕೆಂಗದಿರನ್ನು ಹೊಮ್ಮಿಸುವ ಕಲ್ಲುಗಳು, ಮತ್ತೊಂದೆಡೆ ಅಂಧಕಾರವನ್ನು ಉಂಟುಮಾಡುವ ಇಂದ್ರನೀಲಶಿಲೆಯ ರಾಶಿಗಳು, ಅಲ್ಲಲ್ಲಿ ನೀರಿಲ್ಲದೆಯೇ ನೀರಿನ ಕಾಂತಿಯನ್ನೊಡರಿಸುವ ವೈಡೂರ್ಯಶಿಖರಗಳು, ಅಂತೆಯೇ ಎಳವೆಳುದಿಂಗಳನ್ನು ಹರಡುವ ಚಂದ್ರಕಾಂತಶಿಲೆಯ ಹೆಬ್ಬಂಡೆಗಳು, ಎಲ್ಲ ದಿಕ್ಕುಗಳಿಗೂ ತಣ್ಬಿಸಿಲನ್ನು ಅಟಯಿಸುವ ವಜ್ರಶಿಲೆಗಳು, ನಾನಾ ಬಗೆಯಲ್ಲಿ ಮಾಣಿಕ್ಯದ ಕಾಂತಿಯನ್ನು ಬೀರುವ ಸೂರ್ಯಕಾಂತಶಿಲೆಗಳು – ಇವೆಲ್ಲ ರಾಜಕುಮಾರನ ಕುತೂಹಲವನ್ನು ಕೆಣಕಿದವು.

ಹೀಗೆ ಬರುತ್ತಿರಲು ಇದ್ದಕ್ಕಿದ್ದಂತೆಯೇ ಕಟ್ಟದಿರಿನಲ್ಲಿ, ಮಧ್ಯಾಹ್ನದ ಬಿಸಿಲೇ

ಬೆಳುದಿಗಳಾಯಿತೆಂಬಂತೆ ಬಾಹ್ಯೇಂದ್ರಿಯವಿಹೀನನಾಗಿ ನಿರ್ವಾಣಸಾಮ್ರಾಜ್ಯನಿವಾಸಕ್ಕೆ ಅಂತರ್ಮುಖಿಯಾಗಿ ಆದಿತ್ಯಬಿಂಬದಂತಿದ್ದ ಯೋಗೀಂದ್ರನೊಬ್ಬನು ರೆಪ್ಪೆ ಮಿಟುಕಿಸದೆ ರತ್ನಕೂಟದಂತೆ ಹೊಳೆಯುತ್ತಿದ್ದುದು ರಾಜಕುಮಾರನ ಕಣ್ಣಿಗೆ ಬಿತ್ತು. ಸಹಜವಾಗಿಯೇ ಆತ ನಯನಾತಿಥಿಯಾದ. ರಾಜಕುಮಾರನ ಕರಕಮಲಗಳು ತಾವಾಗಿ ಮುಗಿದವು; ದಿಟ್ಟಿಗಳು ಋಷಿಯ ಮುಖಾಂಬುಜವನ್ನು ಮುಸುರಿದವು. ಈ ಧೀರಮುನಿಯು ದಾರುಣ ಸಂಸಾರವೆಂಬ ವಿಷವೃಕ್ಷವನ್ನು ಕಿತ್ತು ಹಾಕುವ ಉಜ್ಜುಗದಲ್ಲಿ ತೊಡಗಿದ್ದಾನೆ ಎಂದು ಮುನಿಯ ಮನಸ್ಸನ್ನು ಊಹಿಸಿದ. ಸೂರ್ಯನನ್ನು ಕಂಡ ಕ್ಷಣವೇ ಕತ್ತಲೆ ತೊಲಗುವ ಹಾಗೆ ಮುನಿಪತಿಯ ಮುಖದರ್ಶನದಿಂದ ರಾಜಕುಮಾರನ ಚಿತ್ತಕತ್ತಲೆ ಕಣ್ಮರೆಯಾಯಿತು. ಕತ್ತಿಯ ಅಲಗಿನ ಮೇಲಿನ ಜೇನುತುಪ್ಪವನ್ನು ನೆಕ್ಕುವಂತೆ ತಾನು ಸಂಸಾರಸುಖಕ್ಕೆ ಆಸೆಪಟ್ಟರೆ ವಿಷಯಲೋಭವು ತನ್ನನ್ನು ಅಳಲಿಸದೆ ಇರದು ಎಂದು ಅವನಿಗನ್ನಿಸಿತು. ಒಂದು ನಿರ್ಧಾರದಿಂದ ಅವನು ಮುನಿಯನ್ನೇ ದಿಟ್ಟಿಸುತ್ತಿದ್ದ. ಹೀಗೆ ನೋಡುತ್ತಿದ್ದ ವಜ್ರಬಾಹುವಿನ ಮುಖವನ್ನು ಉದಯಸುಂದರನು ನೋಡುತ್ತ ಹೀಗೆಂದ: "ಬಾವ, ಮುನೀಂದ್ರರನ್ನು ನೀನು ಒಂದೇ ಸಮನೆ ನೋಡುತ್ತಿದ್ದೀಯಲ್ಲ! ಮನಸ್ಸು ಒಲಿದರೂ ಈ ತಪಶ್ರೀವಧುವು ಇತರ ಕಾಮಿನೀಜನರಂತೆ ನಿನಗೆ ಪ್ರೀತಿಯನ್ನು ನೀಡುವಳೇ? ಈ ಹೆಣ್ಣು ಗರ್ವಿಷ್ಠೆ; ವಸ್ತ್ರಭೂಷಣಗಳನ್ನೂ ಕಚಾವಳಿಯನ್ನೂ ನೀಡದವರನ್ನು ಇವಳು ಹತ್ತಿರ ಬಿಟ್ಟುಕೊಳ್ಳುವುದಿಲ್ಲ" ಎಂದು ಸರಸವಾಡಿದ. ಅದಕ್ಕೆ ವಜ್ರಬಾಹುವು, "ನಾನು ತಪಸ್ಸನ್ನು ಕೈಗೊಂಡರೆ ನೀನೇನು ಮಾಡುತ್ತೀಯೆ?" ಎಂದು ಉದಯಸುಂದರನನ್ನು ಕೇಳಿದ. "ನಿನ್ನ ಜೊತೆ ನಾನೂ ತಪಸ್ಸನ್ನು ಕೈಗೊಳ್ಳುತ್ತೇನೆ" ಎಂದು ಅವನು ತಕ್ಷಣವೇ ಉತ್ತರಿಸಿದ. ಅವನನ್ನು ತನ್ನ ವಾಗ್ವಿಡಂಬದಿಂದ ಒಡಂಬಡಿಸಿ, ತನ್ನ ಬಂಧನವನ್ನು ಬಿಡಿಸಿಕೊಳ್ಳುವ ಆತುರದಿಂದ ಆನೆಯಿಂದ ಕೆಳಗಿಳಿದು, ತೊಡರು ಹರಿದ ಕಾಡಾನೆಯಂತೆ ನೇರವಾಗಿ ಮುನಿಯು ಕುಳಿತಿದ್ದ ದಿಬ್ಬವನ್ನೇರಿದ.

ನಗೆ ಮಾತು ನಿರ್ಧಾರವಾದುದನ್ನು ಕಂಡು ಬಳಿಯಿದ್ದ ಉದಯಸುಂದರ ಹಾಗೂ ಇತರ ಸ್ನೇಹಿತರೆಲ್ಲರೂ ಕೈಮುಗಿದು ಕೇಳಿಕೊಂಡರು. ಆದರೆ ತನ್ನ ನಿರ್ಧಾರ ಅಚಲವಾದುದೆಂದು ಅವನು ತೋರಿಸಿಕೊಂಡ. "ಈ ಮುನಿಯನ್ನೂ ಈ ಮನಸ್ಸನ್ನೂ, ಈ ದೇಹವನ್ನೂ ಈ ಮನುಷ್ಯಗತಿಯನ್ನೂ ಯೋಗಾಯೋಗದಿಂದ ನಾನು ಪಡೆದೆ. ಇನ್ನು ಇಲ್ಲಿಯೇ ಅಘಟನವಿಘಟನವನ್ನು ಎದುರಿಸುತ್ತೇನೆ" ಎಂದು ತನ್ನ ಮನಸ್ಸಿನಲ್ಲಿದ್ದ ಭಾವನೆಯನ್ನು ನಾಲಗೆಗೆ ತಂದುಕೊಂಡು ಪರಿಜನವನ್ನು ಒಪ್ಪಿಸಿದ.

ತನ್ನ ಕಬ್ಬಿನ ಬಿಲ್ಲನ್ನಿಟ್ಟು ಮದನನು ಓಡಿಹೋಗುತ್ತಿರಲು ಹುತ್ತದ ದಿಬ್ಬವನ್ನು ರಾಜಕುಮಾರನು ಏರಿಹೋಗಿ, ಕೀರ್ತಿಯು ಮೂರುಲೋಕಗಳಲ್ಲಿಯೂ ಹರಡುವ ಹಾಗೆ ಕಳಚಿದ ಮೋಹಪಾಶದೊಡನೆ ತನ್ನ ಕೇಶಪಾಶವನ್ನು ಮುನಿಮುಖ್ಯರ ಪಾದಗಳಲ್ಲಿ ಅರ್ಪಿಸಿದ. ಈ ಬಗೆಯಲ್ಲಿ ವಜ್ರಬಾಹುಕುಮಾರನು ಗುಣಸಾಗರ ಭಟ್ಟಾರಕರ ಅಡಿದಾವರೆಗಳಲ್ಲಿ ತಪಸ್ಸನ್ನಾಚರಿಸಲು ತೊಡಗಿದ. 'ನನ್ನ ಜೊತೆಯಲ್ಲಿ ಬಂದ ಅಂತಕನನ್ನು ಜಿತಾತ್ಮನಾದ ವಜ್ರಬಾಹುವು ಅಟ್ಟಿಸಿಕೊಂಡು ಹೋಗಲು ನಿರ್ಧರಿಸಿದ್ದಾನೆ; ನಾನು ಇದಕ್ಕೆ ಹಿಂಜರಿದರೆ ಭಂಗವಾಗುತ್ತದೆ; ಭಂಗಕ್ಕೆ ಬೇರೆ ಕೋಡುಗಳಿವೆಯೇನು – ಎಂದು

ಉದಯಸುಂದರನು ನಿರ್ಧರಿಸಿ ಇತರ ಇಪ್ಪತ್ತುಮೂವರು ಅರಸುಮಕ್ಕಳ ಸಮೇತ ತಾನೂ ಗುಣಸಾಗರರ ಚರಣೋಪಾಂತದಲ್ಲಿ ತಪಸ್ಸನ್ನು ಕೈಗೊಂಡ. ತನ್ನ ಅಣ್ಣನು ಜಿನದೀಕ್ಷೆಯನ್ನು ಕೈಗೊಂಡ ವಿಷಯವನ್ನು ಕೇಳಿದ ಗುಣೋದೆಯೂ ತಾನೂ ಜಿನದೀಕ್ಷೆಯನ್ನು ಪಡೆದಳು. ಲಬ್ಧಿಗ್ರಹಣದಲ್ಲಿ ಒಳ್ಪುವಡೆಯುವುದೇನು ಆಶ್ಚರ್ಯಕರವೇ!

ಇತ್ತ ವಿಜಯರಥ ಮಹೀನಾಥನು ತನ್ನ ಮೊಮ್ಮಗನಾದ ವಜ್ರಬಾಹುವಿನ ತಪಸ್ಸಿನ ವಿಚಾರವನ್ನು ತಿಳಿದು, ಮದುವೆಗೆ ಹೋಗುವುದೆಲ್ಲಿ, ಗಿರಿಕಂದರದ ಬಳಿ ಕಟ್ಟೆದುರಾಗಿ ಮುನಿಯನ್ನು ಕಾಣುವುದೆಲ್ಲಿ, ಅದೇ ಕಾರಣದಿಂದ ಮೋಹಪಾಶವನ್ನು ಕಳಚಿ ದಿಕ್ಕುದಿಕ್ಕುಗಳಲ್ಲಿ ತನ್ನ ಕೀರ್ತಿಯು ಹರಡುವಂತೆ ಮಾಡಿಕೊಂಡುದೆಲ್ಲಿ; ಈ ರೀತಿಯಲ್ಲಿ ಮಾಡಿದ ವಜ್ರಬಾಹುವಿನ ಕಾರ್ಯವು ಹೊಗಳಿಕೆಗೆ ಪಾತ್ರವಲ್ಲವೇ! ಎಂದು ಅಚ್ಚರಿವಟ್ಟ. ಯುವರಾಜನು ದೇಹದ ತುಂಬ ನವಯೌವನವನ್ನು ತುಂಬಿಕೊಂಡಿರುವವನು. ಆದರೂ ಅದನ್ನು ದೀಕ್ಷೆಗೊಡ್ಡಿದ. ಮೋಹವೆಂಬ ವಿಷಸರ್ಪದ ಹಲ್ಲು ಕಿತ್ತ ಕುಮಾರನು ಅದೆಂಥ ಅವಿಚಲ ಮನಸ್ಸಿನವನು ಎಂದು ಅಭಿಮಾನಪಟ್ಟ. ಅವನಂತಹ ಕಿರುವರೆಯದವನು ವಿಷಯಸುಖವನನ್ನು ತೊರೆದು ತಪಸ್ಸನ್ನು ಆರಿಸಿಕೊಂಡ; ಆದರೆ ತಾನು ಇದುವರೆಗೂ ವ್ಯಾಮೋಹದಲ್ಲಿ ಮುಳುಗಿದ್ದೆ; ಅವನು ನನ್ನ ಮನಸ್ಸಿನಲ್ಲಿಯೂ ದೃಢನಿರ್ಧಾರವನ್ನುಂಟು ಮಾಡಿದ್ದಾನೆ ಎಂದು ಭಾವಿಸಿದ. ಆನಂತರ ವಿಜಯರಥನು ಮತ್ತೊಬ್ಬ ಮೊಮ್ಮಗನಾದ ಪುರಂದರನಿಗೆ ರಾಜ್ಯವನ್ನಿತ್ತು ಮಗನಾದ ಸುರೇಂದ್ರಮನ್ಯುವಿನ ಜೊತೆಗೆ ಹೋಗಿ ನಿರ್ವಾಣಘೋಷರೆಂಬ ಮುನಿಮುಖ್ಯರ ಬಳಿ ತಪೋದೀಕ್ಷೆಯನ್ನು ಪಡೆದ. ಪುರಂದರನು ಸಕಲ ಸಾಮ್ರಾಜ್ಯಸುಧಾರಸದಿಂದ ತಣಿದು ಕಾಲಾನಂತರದಲ್ಲಿ ವೈರಾಗ್ಯಪರನಾಗಿ ಕ್ಷೇಮಂಕರ ಮುಮುಕ್ಷುಗಳ ಬಳಿ ದೀಕ್ಷೆ ಪಡೆದು ತಪಸ್ಸಿಗೆ ನಿಂತ. ಅವನ ಕೀರ್ತಿಯು ದಿಗ್ದಂತಿಯ ದಂತವನ್ನು ಮುಟ್ಟಿತು. ಅವನ ನಂತರ ಅವನ ಮಗನಾದ ಕೀರ್ತಿಧರನು ಇಳೆಯ ಭಾರವನ್ನು ಹೊತ್ತ.

ಕೀರ್ತಿಧರ ನರೇಂದ್ರನು ಒಂದು ದಿನ ಮಣಿಮಯಾಸನದಲ್ಲಿ ಆಪ್ತ ಪರಿಜನದೊಡನೆ ಮಣಿಮಾಡದ ಮೇಲೆ ಸಿಂಹಾಸನಾವಿಷ್ಟನಾಗಿ ಕುಳಿತಿದ್ದ. ಆ ಸಮಯದಲ್ಲಿ ಸ್ವರ್ಭಾನು ನುಂಗಿದುದರಿಂದ ಸೂರ್ಯಮಂಡಲವು ಕಳೆಗುಂದಿತು. ಅದನ್ನು ಕಂಡ ರಾಜನಿಗೆ ನಿರ್ವೇದವುಂಟಾಯಿತು, ಅವನು ವೈರಾಗ್ಯವನ್ನು ಕೈಗೊಂಡ. ಜಗತ್ತನ್ನೇ ಬೆಳಗುವ ಚಂಡಾಂಶುವಿಗೂ ರಾಹುವಿನಿಂದ ಈ ಗತಿ ಉಂಟಾಗುವುದೆಂದ ಮೇಲೆ ತನ್ನಂತಹ ರಾಜನನ್ನು ಕಾಲವೆಂಬ ಹಾವು ಉಗಿಬಗಿ ಮಾಡದಿರುತ್ತದೆಯೇ ಎಂಬ ತೀವ್ರ ವೈರಾಗ್ಯದಿಂದ ನಾಲ್ಕು ಕಡಲುಗಳ ನಡುವಣ ಇಳೆಯನ್ನು ಹುಲ್ಲುಕಡ್ಡಿಯಂತೆ ಬಗೆದು ತೊರೆಯಲು ನಿರ್ಧರಿಸಿದ. ಆಗ ಅವನ ಸಾಮಂತರೂ ಮಂತ್ರಿಗಳೂ ಸಾಮ್ರಾಜ್ಯ ಮತ್ತು ಭಂಡಾರಗಳನ್ನು ಅನ್ಯರ ವಶ ಮಾಡಿ ತಪಸ್ಸಿಗೆ ಹೋಗುವುದು ನಯವಲ್ಲ; ನಿನ್ನ ತಂದೆಯು ನಿನಗೆ ಸಾಮ್ರಾಜ್ಯವಿತ್ತು ತಪಸ್ಸಿಗೆ ಹೋದಂತೆ ನೀನೂ ಮಾಡದಿದ್ದರೆ ಮಾತ್ಸ್ಯನ್ಯಾಯವಾಗಿ ಹೋಗುತ್ತದೆ; ಆದ್ದರಿಂದ ರಾಜ್ಯ ರಕ್ಷಣೆ ಮಾಡಬಲ್ಲ ಒಬ್ಬ ಮಗನನ್ನು ಪಡೆದ ಬಳಿಕ ದೀಕ್ಷೆಯನ್ನು ಕೈಗೊಳ್ಳುವಂತೆ ಕೀರ್ತಿಧರನಿಗೆ ತಿಳಿವಳಿಕೆ ಹೇಳಿದರು. ಅದಕ್ಕೆ ರಾಜನು ಒಡಂಬಟ್ಟು ಆಳ್ವಿಕೆಯನ್ನು ಮುಂದುವರೆಸಿದ.

ಕಾಲಾನಂತರದಲ್ಲಿ ಅವನ ಹೆಂಡತಿ ಸಹದೇವಿಯ ಮೊಲೆತೊಟ್ಟು ಕಪ್ಪಾಗಿ, ಮುಖವು ಬಿಳಿಪಾಗಿ ಗರ್ಭಚಿಹ್ನವು ತಲೆದೋರಿತು; ಅವಳ ಮನಸ್ಸಿನಲ್ಲಿ ಹರ್ಷವಿಷಾದಗಳ ಸಂಗಮವಾಯಿತು. ರಾಜ್ಯರಕ್ಷಣೆಗೆ ಮಗನಾದ ಸಂತಸ ಒಂದೆಡೆಯಾದರೆ, ರಾಜನು ತಪಸ್ಸಿಗೆ ಹೋಗುವನೆಂಬ ಚಿಂತೆ ಮತ್ತೊಂದೆಡೆ. ಆಗ ಮಹಾರಾಣಿಯು ತನ್ನ ಅಂತರಂಗವನ್ನು ವಿರುದ್ಧ ರಂಗವನ್ನಾಗಿ ಪರಿವರ್ತಿಸಿದಳು. ಆಕೆ ತನ್ನ ಗರ್ಭವಿಚಾರವನ್ನು ಯಾರಿಗೂ ತಿಳಿಸದೆ ಗೂಢಗರ್ಭದಿಂದ ಬಡವನು ನಿಧಿಯನ್ನು ಪಡೆದಂತೆ ಗಂಡುಮಗುವನ್ನು ಹೆತ್ತಳು; ರಹಸ್ಯವಾಗಿಯೇ ಅದನ್ನು ಬೆಳೆಸುತ್ತಿದ್ದಳು. ಆದರೆ ಒಬ್ಬ ಆಸೆಬುರುಕನು ಈ ವಿಷಯವನ್ನು ಹೇಗೋ ತಿಳಿದುಕೊಂಡು, ಮೆಚ್ಚನ್ನು ಪಡೆಯುವ ಆಸೆಯಿಂದ ರಾಜನಿಗೆ ಇದನ್ನು ತಿಳಿಸಿದ. ಇದರಿಂದ ರಾಜನಿಗೆ ತನ್ನ ಆಸೆ ಕೈಗೂಡುವ ಕಾಲ ಬಂತೆಂದು ಸಂತಸವಾಯಿತು. ತಪಃಪ್ರೀತಿಯ ಕಾರಣದಿಂದ ಅವನು ಸಾಕೆನಿಸುವಷ್ಟು ಚಿನ್ನದ ರಾಶಿ, ವಸ್ತ್ರವಿಲೇಪನಗಳನ್ನೆಲ್ಲ ದಾನಮಾಡಿದ. ತೊಟ್ಟಿಲ ಮಗನಿಗೇ ಪಟ್ಟ ಕಟ್ಟಿದ ಕೀರ್ತಿಧರನು ಸಾಮ್ರಾಜ್ಯವನ್ನು ತೊರೆದು ಜಿನದೀಕ್ಷೆಯನ್ನು ಕೈಗೊಂಡ.

ಆನಂತರ ಕುಮಾರನಾದ ಸುಕೌಶಲನು ನಿರಂತರ ಆರೈಕೆಯಿಂದ ನವಯೌವನಭರಿತನಾಗಿ ಬೆಳೆದ. ರಾಜ್ಯದ ಒಡೆಯನಾಗಿ ವಿರೋಧಿಗಳನ್ನು ಸದೆಬಡಿದು ಸುತ್ತಲ ಕಡಲವರೆಗೂ ತನ್ನ ನೆಲವನ್ನು ವಿಸ್ತರಿಸಿಕೊಂಡ; ಅಂತೆಯೇ ಅವನ ಕೀರ್ತಿಯೂ ವಿಸ್ತಾರಗೊಂಡಿತು. ಚತುರುದಧಿಯೇ ಸೀಮೆಯಾದ ವಸುಧಾದೇವಿಗೆ ದಿಕ್ಪಾಲಕರೇ ಬೆಂಗಾವಲಾಗುವಂತೆ ಸುಕೌಶಲನು ಸಾರ್ವಭೌಮೋನ್ನತಿಯನ್ನು ಪಡೆದ.

ಹೀಗಿರಲು ಒಂದು ದಿನ ತಾಯಿ ಸಹದೇವಿಯು ಸಹಚರಿಯರೊಡನೆ ಮಣಿಮಾಡದಲ್ಲಿ ಆಸನದಲ್ಲಿ ಮಂಡಿತಳಾಗಿದ್ದಳು. ಆಗ ಊರು ಅಡವಿ ಎಂಬ ಭೇದವಿಲ್ಲದೆ, ಅತಿ ವೇಗ ಅಥವಾ ಅತಿ ನಿಧಾನಗತಿಯಲ್ಲದ ರೀತಿಯಲ್ಲಿ ವಿಹಾರ ಬಂದ ಒಬ್ಬ ಕಾಂತಿಯುಕ್ತನಾದ ಯತಿಯು ಆ ಊರನ್ನು ಸೇರಿದ. ಈ ಮುನಿಯನ್ನು ಕಂಡಾಕ್ಷಣವೇ ತನ್ನ ಮಗನು ದೀಕ್ಷೆ ಕೈಗೊಳ್ಳಬಹುದೆಂಬ ಅಂಜಿಕೆಯಿಂದ ಸಹಚರಿಯು ಸಲ್ಲದ ನಿರ್ಧಾರವನ್ನು ಮಾಡಿದಳು; ಧರ್ಮಹಾನಿಯ ಬಗ್ಗೆ ಯೋಚಿಸದ ಆ ಗುಣಹೀನೆಯು ಉಪವಾಸದ ಪಾರಣೆಯ ದಿನವೇ ಆ ಯತಿಯನ್ನು ಊರಿಂದ ಓಡಿಸಿದಳು. ಆ ಯತಿಯು ದೀಕ್ಷೆ ಕೈಗೊಂಡಿದ್ದ ತನ್ನ ಗಂಡ ಕೀರ್ತಿಧರನೆಂಬುದನ್ನು ತಿಳಿಯದೆ, ಮುನಿಯಾಗಿ ಆತನು ಲೋಕಸ್ತುತನಾಗಿರುವನೆಂಬುದನ್ನು ಬಗೆಯದೆ ಅವಳು ದುರ್ಮೋಹದಿಂದ ಯತಿಯನ್ನು ಊರಿಂದ ಓಡಿಸಿ ಚರ್ಯಾವಿಘ್ನವನ್ನು ಮಾಡಿದಳು. ಆದರೆ ಅವಳ ದಾದಿಯಾದ ವಸಂತಮಾಲೆಯು ಅವನ ಗುರುತು ಹಿಡಿದು, ತನ್ನ ಒಡತಿಯು ಕೀರ್ತಿಧರ ಮುನಿಗೆ ಅವಮಾನಮಾಡಿದುದನ್ನು ಕಂಡು ತುಂಬ ನೊಂದುಕೊಂಡಳು.

ತನ್ನ ಬಸಿರನ್ನು ಹೊಸೆದುಕೊಳ್ಳುತ್ತ ಅಳುವ ವಸಂತಮಾಲೆಯ ದುಃಖದ ಕಾರಣವೇನೆಂದೂ, ಅದಕ್ಕೆ ಕಾರಣರಾದವರ ವಿರುದ್ಧ ಕಠಿಣಕ್ರಮ ಕೈಗೊಳ್ಳುವೆನೆಂದು ಭರವಸೆಯಿತ್ತು ಸುಕೌಶಲನು ತುಂಬ ಒತ್ತಾಯ ಮಾಡಿದ ಮೇಲೆ ತನ್ನ ಶೋಕದ ಕಾರಣವನ್ನು ತಿಳಿಸಿದಳು. ಹಸುಗೂಸಾದ ತನಗೆ ಸಾಮ್ರಾಜ್ಯವನ್ನಿತ್ತು ತಪೋರಾಜ್ಯವನ್ನು ಹೊಕ್ಕ ಆ ಮುನೀಶ್ವರನ ಪಾದಮೂಲದಲ್ಲಿಯೇ ತಾನೂ ದೀಕ್ಷೆಯನ್ನು ಪಡೆದು

ನಿರ್ವೃತಿಸೌಖ್ಯವನ್ನು ಪಡೆಯುತ್ತೇನೆ, ವಿಷಯಸೌಖ್ಯವು ತನಗೆ ಮುಖ್ಯವಲ್ಲ ಎಂದು ವೈರಾಗ್ಯಪರನಾದ. ಆ ಮುನಿಯ ಪಾರಣೆಯ ಊಟವು ವಿಘ್ನಗೊಂಡದ್ದು ತನ್ನ ತಾಯಿಯಿಂದಲೇ, ಅಂದರೆ ತನ್ನ ಕಾರಣದಿಂದ ಎಂಬುದರಿಂದಾಗಿ ತಾಯಿಯ ಮೇಲೆ ಕೋಪಗೊಳ್ಳಲಾರದೆ, ದೀಕ್ಷೆ ಪಡೆಯುವವರೆಗೂ ಉಪವಾಸವಿರಲು ನಿರ್ಧರಿಸಿದ. ಆನಂತರ ಬೆಳುಗೊಡೆ, ಪಟ್ಟದಾನೆ, ಧ್ವಜಗಳು, ಚಾಮರಗಳು ಮುಂತಾದ ರಾಜ್ಯಲಕ್ಷ್ಮಿಯ ತೊಡವುಗಳನ್ನೆಲ್ಲ ತೊರೆದು ಅರಮನೆಯಿಂದ ಹೊರಬಿದ್ದ.

ಕಾಲುನಡಿಗೆಯಿಂದ ಸಾಗಿದ ಸುಕೌಶಲನು ಊರ ಹೊರಗಿನ ಉಪವನವನ್ನು ಹೊಕ್ಕು ಕೀರ್ತಿಧರ ಭಟ್ಟಾರಕರನ್ನು ಮೂರು ಸಾರಿ ಬಲವಂದು ದೀಕ್ಷೆಯನ್ನು ಕೃಪೆಮಾಡಬೇಕೆಂದು ಬೇಡಿ ಕುಳಿತುಕೊಂಡ. ಈ ಹೊತ್ತಿಗೆ ಅವನ ಪರಿವಾರಜನರೆಲ್ಲ ಗುಂಪಾಗಿ ಅಲ್ಲಿಗೆ ಬಂದರು. ಮಾಂಡಳಿಕರು ಸಾಮಂತರು ಮಂತ್ರಿಗಳು ಅಂತಃಪುರ ವಿಲಾಸಿನಿಯರು ಮುಂತಾದವರೆಲ್ಲರೂ ತಮಗಿನ್ನಾರು ಗತಿಯೆಂದು ಬಾಯ್ಬಿಟ್ಟು ಗೋಳಾಡಿದರು. ತನ್ನ ಹೆಂಡತಿಯ ಗರ್ಭದಲ್ಲಿರುವ ಮಗುವೇ ಅವರೆಲ್ಲರ ಯೋಗಕ್ಷೇಮವನ್ನು ಮುಂದೆ ಹೊರುವನೆಂದು ವಿವರಿಸಿ ಅವರನ್ನೆಲ್ಲ ತನ್ನ ಮಹಾದೇವಿಯಾದ ಚಿತ್ರಮಾಲೆಗೆ ಒಪ್ಪಿಸಿದ. ತೊಟ್ಟಿಲ ಮಗುವಾದ ತನಗೆ ಬೆಂಬಲವಿತ್ತು ರಾಜನನ್ನಾಗಿ ಮಾಡಿದ ಬಾಹುಬಲದಿಂದಲೇ ತನ್ನ ಹೆಂಡತಿಯ ಗರ್ಭದಲ್ಲಿರುವ ಮಗುವನ್ನು ರಾಜನನ್ನಾಗಿ ಮಾಡಿರೆಂದು ಪರಿವಾರದವರನ್ನು ಒಡಂಬಡಿಸಿ ಕೀರ್ತಿಧರಮುಮುಕ್ಷುಗಳ ಬಳಿ ದೀಕ್ಷೆ ಪಡೆದ.

ಆಗಮಜ್ಞಾನದ ಅಗ್ಗಳಿಕೆ ಮತ್ತು ತಪಸ್ಸಿನ ಉನ್ನತಿಕೆಗಳು ತುಂಬಿಕೊಳ್ಳುವಂತೆ ಸುಕೌಶಲವ್ರತಿಯು ಅರಿಷಡ್ವರ್ಗವನ್ನು ಗೆದ್ದು ಅವಿಶ್ರಾಂತ ತಪಃಶ್ರೀಯನ್ನು ಅನುಸರಿಸಿದ. ಹೀಗೇ ಕಾಲ ಕಳೆಯಲು ಒಮ್ಮೆ ಮಳೆಗಾಲ ಬಂತು. ಕದಂಬವೃಕ್ಷಗಳು ಹೂಬಿಟ್ಟವು; ಮೊಲ್ಲೆಯ ಬಳ್ಳಿಯಲ್ಲಿ ಹೂಗೊಂಚಲು ಮೂಡಿದವು; ನವಿಲುಗಳು ಕೇಕೆ ಹಾಕಿದವು; ಕೇದಗೆಗಳು ಬೆಳ್ಳಗೆ ಕುಡಿಯೊಡೆದವು; ದಪ್ಪದಪ್ಪನೆಯ ಮಳೆಯ ಹನಿಗಳನ್ನು ಚಾತಕ ಪಕ್ಷಿಗಳು ಕುಡಿದು ಸಂತಸಗೊಂಡವು. ಆ ಸಮಯದಲ್ಲಿ ಆ ಇಬ್ಬರು ಮುನಿಗಳು ವೃಕ್ಷಮೂಲ ನಿಯೋಗನಿರ್ವರ್ತನಾನಂತರ ಯೋಗ್ಯ ಕಾಲದ ನಿರೀಕ್ಷಣೆಯಲ್ಲಿ ಕಾಂತಾರಭಿಕ್ಷೆಗೆಂದು ಹೊರಟರು. ಮುನಿಗೆ ಅವಮಾನ ಮಾಡಿದ ಪಾಪಕ್ಕಾಗಿ ಆ ಕಾಡಿನಲ್ಲಿಯೇ ಹೆಣ್ಣು ಹುಲಿಯಾಗಿ ಹುಟ್ಟಿದ್ದ ಸಹದೇವಿಯು ಬರುತ್ತಿದ್ದಳು. ಹುಲಿಯನ್ನು ಕಂಡರೂ ಅಳುಕದ ಅವರು ಕಣ್ಣೆದುರಿನಲ್ಲಿಯೇ ನಿರ್ವೃತಿಯ ಪರಿಣಾಮವುಂಟಾಗಿರುವುದನ್ನು ಧರ್ಮಶುಕ್ಲದ ಮೂಲಕ ಅರಿತು ಉಪಸರ್ಗಸಹಿಷ್ಣುಗಳಾಗಿ ಚಲಿಸದೆ ನಿಂತರು. ದೇಹಗಳನ್ನು ಮನಸ್ಸಿನಿಂದ ಬೇರ್ಪಡಿಸಿಕೊಂಡು, ಅನುಪ್ರೇಕ್ಷೆಯನ್ನು ತಾಳಿ, ಮನಸ್ಸನ್ನು ಜಿನಪಾದಾಂಬುಜಗಳಲ್ಲಿ ನಿಶ್ಚಲವಾಗಿರಿಸಿ, ನಾಲಗೆಯಲ್ಲಿ ಪಂಚನಮಸ್ಕಾರಗಳನ್ನು ಜಪಿಸುತ್ತ, ಗಂಜದ್ಗುಹಾರಂಜಿತವಾದ ಎರಡು ಮಂದರಪರ್ವತಗಳಂತೆ ನಿಶ್ಚಲರಾಗಿ ನಿಂತರು. ಅವರನ್ನು ಕಂಡು ಕೋಪದಿಂದ ಬಾಲವನ್ನಲ್ಲಾಡಿಸುತ್ತ, ಕಣ್ಣಿನಲ್ಲಿ ಉರಿಯುಗುಳುತ್ತ, ಬಾಯಿ ತೆರೆದು ನಾಲಗೆಯನ್ನು ಚಾಚಿ ಗರ್ಜಿಸುತ್ತ ಗಾಳಿಯಂತೆ ರಭಸದಿಂದ ಮುನ್ನುಗ್ಗಿ ಮೃಗರಕ್ತಸೇವನಾನುರಕ್ತಿಯಿಂದ ಮಾಂಸಖಂಡಗಳನ್ನು ಬಾಯಿಂದ ಕೀಳಲು ಸಿಡಿಲಿನಂತೆ ಕೈಕಾಲುಗಳನ್ನು ಚಾಚಿ ಅವರ ಮೇಲೆ ಅಪ್ಪಳಿಸಿತು. ಹುಲಿಯು ಅಗಿಬಗಿ ಮಾಡಿದರೂ

ಸೈರಿಸಿಕೊಂಡ ಕೀರ್ತಿಧರ ಯೋಗಿಯು ಘಾತಿ ಅಘಾತಿಕರ್ಮಗಳನ್ನು ನಾಶಮಾಡಿ ಮುಕ್ತಿಗೆ ಸಂದ; ಸುಕೌಶಲಮುನಿಯು ಘಾತಿಕ್ಷಯದಿಂದ ಕೈವಲ್ಯಾತಿಶಯವನ್ನು ಪಡೆದ.

ಇತ್ತ ವಿಚಿತ್ರಮಾಲೆಗೆ ಗಂಡುಮಗುವಾಯಿತು. ಹಿರಣ್ಯಗರ್ಭ ಎಂಬ ಹೆಸರಿನ ಅವನು ಮುಂದೆ ರಾಜನಾದ; ತನ್ನ ಯಶೋದುಕೂಲದಿಂದ ಎಂಟು ದಿಕ್ಕುಗಳನ್ನೂ ಆವರಿಸಿದ. ಪರಪುರಕ್ಕೆ ಗರ್ಭಸ್ರಾವವುಂಟಾಗುವಂತೆ ಮಾಡಿದ ಅವನು ಭೂಮಿಯು ಹರ್ಷಗರ್ಭವೆನ್ನಿಸುವಂತೆ ಪಾಲಿಸಿದ. ಅವನ ಮಗ ನಹುಷನು ಅರಿನೃಪರನ್ನು ಅಡಗಿಸಿ ನಾಲ್ಗಡಲವರೆಗಿನ ವಸುಂಧರೆಯನ್ನು ಪರಾಕ್ರಮದಿಂದ ಆಳಿದ. ಅವನ ಹಿರಿಯ ಮಗನಾದ ಸಂವಾಸನು ಸಕಲಧರಿತ್ರಿಯನ್ನು ತನ್ನ ಉಗ್ರ ಭುಜಾಸಿಯಲ್ಲಿ ಅಳವಡಿಸಿದ; ಮುಂದೆ ಅವನ ಮಗ ಸಿಂಹರಥನು ಹೆಸರಿಗನುಗುಣವಾಗಿ ಶತ್ರುಗಳೆಂಬ ಆನೆಗಳನ್ನು ಸಂಹರಿಸಿ ಬೀರಸಿರಿಗೆ ವಲ್ಲಭನಾದ; ಆನಂತರ, ಅವನ ಸುತ ಬ್ರಹ್ಮರಥನು ಅಯೋಧ್ಯಾ ಸಿಂಹಾಸನಕ್ಕೆ ಒಡೆಯನಾಗಿ ತನ್ನ ಬಾಣದ ಮೊನೆಯಿಂದ ಮಾರ್ಬಲವನ್ನು ಅಡಗಿಸಿದ; ಅವನ ಪುತ್ರ ಚತುರ್ಮುಖನು ಚಾಪಾಗಮಚತುರನಾಗಿ ಸಮರದಲ್ಲಿ ತನ್ನ ಬಾಣಗಳಿಂದ ಶತ್ರುಗಳನ್ನು ಯಮನಿಗೆ ಅಭಿಮುಖರನ್ನಾಗಿಸಿದ; ಅವನ ಮಗ ಶ್ರುತಿಮುಖನು ತನ್ನ ಹೆಸರಿಗನುಗುಣವಾಗಿ ಬಾಳಿದ; ಅವನ ಮಗ ಇಂದುರಥನು ವೈರಿಗಳ ಮನೋರಥವನ್ನೂ ರಥಾಂಗವನ್ನೂ ಮುರಿದುಹಾಕಿದ. ಅವನ ಮಗ ಭಾನುರಥನು ತನ್ನ ತೇಜಸ್ಸಿನಿಂದ ಪರರಾಜಮಂಡಲವನ್ನು ನಿಸ್ತೇಜಗೊಳಿಸಿದ.

ಮುಂದೆ ಆ ವಂಶದಲ್ಲಿ ಕ್ರಮವಾಗಿ ಮಯ, ಮಾಂಧಾತೃ, ವೀರಸೇನ, ಕಮಲಬಂಧು, ವಸಂತತಿಲಕ, ಕುಬೇರದತ್ತ, ಮೃಗಾರಿದಮನ, ದ್ವಿಪರಥ, ಹಿರಣ್ಯಕಶ್ಯಪು, ಅರ್ಕರಥ, ದಿಲೀಪ, ರಘುವೀರ ಮುಂತಾದ ಪ್ರಮುಖ ರಾಜರುಗಳು ಹುಟ್ಟಿ ಅಯೋಧ್ಯೆಯನ್ನು ಆಳಿದರು. ಅವರಲ್ಲಿ ಕೆಲವರು ಅಮರಕಾಮಿನೀ ಕಚಗ್ರಹಣ ಮಾಡಿದರೆ, ಮತ್ತೆ ಕೆಲವರು ಅಮೃತಲಕ್ಷ್ಮೀಪಾಣಿಗ್ರಹಣವನ್ನು ಮಾಡಿದರು. ಹೀಗೆ ಧರಣೀಪ್ರಾಕಾರದಿಂದಲೂ, ವೀರಸಮುದ್ರಕ್ಕೆ ಸೇತುವಾಗಿಯೂ, ತನ್ನ ದಾನಗುಣಭೂಷಣದಿಂದಲೂ, ಧರ್ಮರತ್ನವನ್ನು ಹೊತ್ತ ಗಿರೀಂದ್ರದಂತೆ ಇಕ್ಷ್ವಾಕುವಂಶವು ಅಪ್ರತಿಮವೆನಿಸಿತು.

ಆ ವಂಶದಲ್ಲಿ ವಿನೀತಾಪುರವನ್ನು ಅನರಣ್ಯನೆಂಬ ಅರಸನು ಅಖಿಲರಾಜಕುಲದವರ ಮಣಿಮಕುಟಗಳ ಮಕರಿಕಾಪತ್ರದಿಂದ ಚಿತ್ರಿತವಾದ ಪಾದಪೀಠವುಳ್ಳವನಾಗಿ ಆಳುತ್ತಿದ್ದನು. ಅನರಣ್ಯ ಮಹಾರಾಜನು ತನ್ನ ಅತುಲ ಪರಾಕ್ರಮದಿಂದ ಕೃತಪುಣ್ಯ ಮನುವಂಶವರೇಣ್ಯ ಅಖಿಲಭುವನಶರಣ್ಯ ಎನ್ನಿಸಿಕೊಂಡ. ತನ್ನ ದೇಶದಲ್ಲಿ ಅರಣ್ಯಪ್ರದೇಶವೇ ಇಲ್ಲ ಎನ್ನುವಂತೆ ಸಕಲ ಜನಪದಗಳನ್ನು ಗೆದ್ದು ಅನರಣ್ಯ ಎಂಬ ಹೆಸರನ್ನು ಅನ್ವರ್ಥವಾಗಿ ಪಡೆದನೇ ಹೊರತು ಸುಮ್ಮನೆ ಅಲ್ಲ. ಈ ರೀತಿ ನ್ಯಾಯಮಾರ್ಗದಲ್ಲಿ ಗಳಿಸಿದ ಸಂಪತ್ತು ಮತ್ತು ಧರ್ಮಾಯತ್ತವಾದ ಭೂಮಂಡಲಗಳನ್ನು ತನ್ನ ಕೈವಶ ಮಾಡಿಕೊಂಡು ಅವನು ಉದಾತ್ತಚರಿತನಾಗಿ ಧರೆಯನ್ನು ಪಾಲಿಸುತ್ತಿದ್ದ. ರೂಪವತಿಯೂ ಕಲಾವತಿಯೂ ಆದ ಪೃಥ್ವೀವಧು ಎನ್ನುವವಳು ಅವನ ಮನೋವಲ್ಲಭೆ; ಧೈರ್ಯದಲ್ಲಿಯೂ ಅವಳು ಪೃಥ್ವಿಗೆ ಸಮಾನಳಾಗಿದ್ದ ಯುವತಿ. ಅವಳು ಪಿರಿಯರಸಿಯಾಗಿ ಮಾನ್ಯತೆವಡೆದು ಅರಸನಿಂದ ಅನಂತರಥ ಮತ್ತು ದಶರಥ ಎಂಬ ಇಬ್ಬರು ಮಕ್ಕಳನ್ನು ಪಡೆದಳು. ಅವಳೊಡನೆ

ಅನರಣ್ಯನು ಧರ್ಮಾವಿರುದ್ಧವಾದ ಬಗೆಯಲ್ಲಿ ವಿಷಯಸುಖಗಳನ್ನು ಅನುಭವಿಸುತ್ತಿದ್ದ.

ಒಂದು ದಿನ, ಸೂರ್ಯನು ಸ್ವರ್ಭಾನುವಿನಿಂದ ಪರಾಭವವನ್ನು ಪಡೆಯುವ ಹಾಗೆ ಮಾಹಿಷ್ಮತೀವಲ್ಲಭನಾದ ಸಹಸ್ರಕಿರಣನು ದಶಾನನೊಡನೆ ಯುದ್ಧಮಾಡಿ ಸೋತು ಜಿನದೀಕ್ಷೆಗೊಂಡ ವಿಚಾರವು ಅನರಣ್ಯನ ಕಿವಿಗೆ ಬಿತ್ತು. ಅದು ಅವನಲ್ಲಿಯೂ ನಿರ್ವೇಗವನ್ನು ಪ್ರಖರಗೊಳಿಸಿತು; ತನ್ನ ಗೆಳೆಯನಂತೆ ತಾನೂ ದೀಕ್ಷೆ ಪಡೆಯಲು ನಿರ್ಧರಿಸಿ ಹಿರಿಯ ಮಗನಾದ ಅನಂತರಥನನ್ನು ಕರೆಸಿ ಅವನಿಗೆ ಹೀಗೆಂದ: "ಪುತ್ರನೇ, ಇಡೀ ಭೂಮಂಡಲವನ್ನು ರಕ್ಷಿಸಲೆಂದೇ ನಿನ್ನಂತಹ ಶೂರನನ್ನು ನಾನು ಮಗನಾಗಿ ಪಡೆದೆ. ನೀನು ಈಗ ಬೆಳ್ಗೊಡೆಯನ್ನು ಕೈಗೊಂಡು ಧರಾಭಾರದಿಂದ ನನ್ನನ್ನು ಬಿಡುಗಡೆಗೊಳಿಸು" ಎಂದು ಕೇಳಿಕೊಂಡ. ಆಗ ಅನಂತರಥನು ತನ್ನ ಸುಲಿಪಲ್ಲುಗಳು ಮಿಂಚನ್ನು ಹೊಳೆಯಿಸಲು ಕೈಮುಗಿದು, "ದೇವ, ನಾನೂ ನಿಮ್ಮೊಡನೆ ನಿರ್ವಾಣಮಾರ್ಗವನ್ನೇ ಹಿಡಿಯುತ್ತೇನೆ; ನೀವು ನಿರಾಕರಿಸಿದ ನೆಲವನ್ನು ನಾನು ಕೈಗೊಳ್ಳುವವನಲ್ಲ" ಎಂದು ತಂದೆಯೊಡನೆಯೇ ತಪಸ್ಸನ್ನು ಕೈಗೊಳ್ಳಲು ನಿರ್ಧರಿಸಿ ಬಿನ್ನವಿಸಿದ. ಆಗ ಕೇವಲ ಒಂದು ತಿಂಗಳ ಕೂಸಾಗಿದ್ದ ದಶರಥನಿಗೆ ಪಟ್ಟವನ್ನು ಕಟ್ಟಿದ ಅನರಣ್ಯನು ಹಿರಿಯ ಮಗ ಅನಂತರಥನೊಡನೆ ನಡೆದು ಅಭಯಘೋಷ ಭಟ್ಟಾರಕರ ಸನ್ನಿಧಿಯಲ್ಲಿ ದೀಕ್ಷೆ ಕೈಗೊಂಡ. ತಪಸ್ಸನ್ನು ಮಾಡಿದ ಅನರಣ್ಯನು ಮುಕ್ತಿಶ್ರೀವನಿತೆಯನ್ನು ವರಿಸಿದ; ಅನಂತರಥನು ಚಿತ್ತನಿರೋಧದಿಂದ ತನ್ನ ಕರ್ಮವನ್ನು ಸುಟ್ಟು ಅನಂತವೀರ್ಯ ಕೇವಲಿಯಾದ.

* * * * *

# ೩. ರಾಮಚಂದ್ರಜನನ

ಇತ್ತ, ಎದೆಯ ಮೇಲೆ ಮುಕ್ತಾವಳಿಯಂತೆ ಶ್ರೀವನಿತೆಯನ್ನು ಧರಿಸಿ, ಭುಜದಲ್ಲಿ ಭೂವಲಯವನ್ನು ಹೊತ್ತು ಕಿರುಗೂಸಾದ ದಶರಥನು ತೊಟ್ಟಿಲಿನಲ್ಲಿಯೇ ತನ್ನ ಪೆಂಪನ್ನು ಪ್ರದರ್ಶಿಸುತ್ತಿದ್ದ. ಬಾಲಸೂರ್ಯನಂತೆ ಜಗತ್ತನ್ನು ಬೆಳಗುತ್ತ, ಬೆಳುದಿಂಗಳಂತೆ ಇಡೀ ಭೂಮಂಡಲವನ್ನು ಎರಗಿಸಿ ಎಳವೆಯಲ್ಲಿಯೇ ತನ್ನ ಮಹಿಮೆಯನ್ನು ತೋರಿ ಭಗೀರಥಚರಿತನೆನಿಸಿದ. ತನ್ನ ಹಿರಿಯರ ಗುಣಗಳನ್ನು ಅಳವಡಿಸಿಕೊಂಡು, ತನ್ನ ವಿಶಾಲವಾದ ಯಶಸ್ಸು ಎಂಬ ಮುಕ್ತಾವಳಿಯನ್ನು ಧರೆಗಿತ್ತು ದಶರಥನು ಉದಾತ್ತನೆನಿಸಿಕೊಂಡ. ಚಿರಕಾಲದ ಬಾಡಿದ ಹೂವಾದ ವಿರಿಂಚಿಯ ಮುಖಕಮಲವನ್ನು ತೊರೆದ ವಾಗ್ವಧುವು ಆದರದಿಂದ ಬಂದು ದಶರಥ ಮಹಾರಾಜನ ಮುಖಸರಸಿರುಹವನ್ನು ಆಶ್ರಯಿಸಿದಳು. ಜಡಧಿಯ ರತ್ನಗಳು ಒಡವೆಗಳನ್ನು ಆಶ್ರಯಿಸಿ ಶೋಭಿಸುವಂತೆ ಜಡಜಜನಾದ ಬ್ರಹ್ಮನ ವಿದ್ಯೆಗಳೆಲ್ಲ ದಶರಥನನ್ನಾಶ್ರಯಿಸಿ ನೂರ್ಮಡಿಗೊಂಡವು; ಈ ಆಶ್ರಯವಿಶೇಷವೇನು ಸಾಮಾನ್ಯವೇ! ಅರವತ್ತು ನಾಲ್ಕು ವಿದ್ಯೆಗಳನ್ನು ಬಲ್ಲವನಾಗಿಯೂ ದಶರಥನು ತನ್ನ ಚಿತ್ತವನ್ನು ಧರ್ಮಶಾಸ್ತ್ರಗಳಲ್ಲಿ ನೆಲೆಗೊಳಿಸಿದ. ತಿಳಿವುಳ್ಳವನು ಎಂದೂ ತನ್ನ ಮನಸ್ಸನ್ನು ವಿಕಥೆಯಲ್ಲಿ ತೊಡಗಿಸಲಾರ. ಗಿಳಿಯಂತೆ ಧರ್ಮಶಾಸ್ತ್ರಗಳನ್ನು ಓದಿ ಬಾಯಲ್ಲಿಯಷ್ಟೇ ನುಡಿಯುವ ಗಿಳಿಯಂತಿರದೆ ದಶರಥನಂತೆ ಓದಿ ತಿಳಿದು ಅನುಷ್ಠಾನಗೊಳಿಸುವವನನ್ನು ಧರೆಯು ಧರ್ಮಪರನೆಂದು ಕೊಂಡಾಡುತ್ತದೆ. ಏರಿಯು ನೀರನ್ನು ನಿಲ್ಲಿಸುವ ರೀತಿಯಲ್ಲಿ ನೃಪನ ಆಜ್ಞಾದೇವತೆಯು ಪ್ರಜೆಗಳು ವರ್ಣಾಶ್ರಮಗಳನ್ನು ಮೀರದಂತೆ ನಿಯಮಿಸಿದಳು. ವೈರಿಗಳ ಮನಸ್ಸು ಅಸ್ಥಿರಗೊಳ್ಳುವಂತೆ, ಪಂಡಿತರು ತಮ್ಮ ಮನಸ್ಸನ್ನು ನೀಡುವಂತೆ, ಮಾನಿನೀಜನವು ಅಭಿಮಾನವನ್ನು ತಳೆಯುವಂತೆ ಆತನ ಬಲಗೈಯಲ್ಲಿನ ಜಯಲಕ್ಷ್ಮಿಗೂ ಆತನ ಮಾತಿನಲ್ಲಿದ್ದ ವಾಗ್ವನಿತೆಗೂ ಮತ್ತು ಆತನಿಗೂ ಪರಿಪೂರ್ಣಯೌವನವು ಉದಯಿಸಿತು.

ಹೀಗೆ ನವಯೌವನಲಕ್ಷ್ಮಿಯನ್ನು ಹೊಂದಿದ ದಶರಥ ಮಹಾರಾಜನಿಗೆ ಲಾವಣ್ಯಲಕ್ಷ್ಮೀವಿರಾಜಿತೆಯಾದ ಅಪರಾಜಿತೆ, ಮದನಮೋಹನ ವಿದ್ಯಾಧಿದೇವತೆಯ ಮಿತ್ರೆಯೆನಿಸಿದ ಸುಮಿತ್ರೆ, ಕಂತುಸಂತಾಪ ದೀಪ ಕಳಿಕಾಪ್ರಭೆಯೆನಿಸಿದ ಸುಪ್ರಭೆಯರು ಮಹಾರಾಣಿಯರಾದರು. ಒಮ್ಮೊಮ್ಮೆ ತನ್ನ ಪೇರುರದಲ್ಲಿ ನೆಲಸಿರುವ ಸಿರಿಯನ್ನು ಗಾಢಾಲಿಂಗನದ ನೆವದಿಂದ ನೆಲೆಮೊಲೆಯಲ್ಲಿಟ್ಟು ಒತ್ತುವ ಹಾಗೆ ಎದೆಯಲ್ಲಿಟ್ಟುಕೊಂಡು,

ಕಲಭಾಷಿತಸುಧಾಜಲದಿಂದ ಸರಸ್ವತಿಯ ಕಲಾವಲೇಪವನ್ನು ತೊಳೆದು ಕಳೆಯುವಂತೆ ಮುಖವನ್ನು ಹೊಂದಿ, ಪ್ರಣಯಕಲಹಕೇಲಿಯಿಂದ ವಿಜಯಶ್ರೀಯು ಜನಿಸುವಂತೆ ಭುಜಾಲಿಂಗನವನ್ನು ಮಾಡಿ ಅವರು ಅವನ ಮನೋನಯನವಲ್ಲಭೆಯರೆನಿಸಿದರು. ಕುಲಸತಿಯರಿಂದ ರಾಜನೂ, ದಾನಲೇಖೆಯಿಂದ ದಿಗ್ಗಜವೂ, ಅಮೃತಕಳೆಯಿಂದ ಚಂದ್ರನೂ, ಮೇಖಲೆಯಿಂದ ಮಂದರಪರ್ವತವೂ ವಿಲಾಸವನ್ನು ತಳೆಯುವಂತೆ ರಾಜನು ಬೆಡಗನ್ನು ಪಡೆದ.

ಸೂರ್ಯನು ಹೇಗೆ ಸಂಜೆಯಲ್ಲಿ ಅನುರಾಗಿಯೆನಿಸುವನೋ ಹಾಗೆ ಆ ನೃಪನು ಆ ರಾಜಕನ್ನಿಕೆಯರಲ್ಲಿ ಅನುರಾಗದಿಂದಿದ್ದು ಅನವರತವೂ ಸತ್ಪಥವನ್ನು ತೊಳಗಿ ಬೆಳಗಿದ. ನೀರಿನಲ್ಲಿದ್ದೂ ಕಮಲವು ನೀರಿಗೆ ಅಂಟಿಕೊಳ್ಳುವುದಿಲ್ಲ ಎಂಬ ರೀತಿಯಲ್ಲಿ ಶೃಂಗಾರರಸದಲ್ಲಿ ಮಗ್ನನಾಗಿಯೂ ದಶರಥನು ಯಾರ ಅಳವಿಗೂ ದಕ್ಕದ ಇಂದ್ರಿಯಜಯವನ್ನು ಸಾಧಿಸಿದ. ಕುಲಗಿರಿಯ ಕೋಡುಗಲ್ಲಿನಲ್ಲಿ ಹರಡಿದ ಮಾಣಿಕ್ಯದ ಎಳಬಿಸಿಲಿನಂತೆಯೂ, ದಿಕ್ಕರಿಯ ಕುಂಭಸ್ಥಳದಲ್ಲಿರುವ ಸಿಂದೂರದಂತೆಯೂ, ಗಂಗೆಯಲ್ಲಿ ಹರಡಿರುವ ಕೆಂದಾವರೆಯ ಪತ್ರಗಳಂತೆಯೂ, ಸಮುದ್ರದಲ್ಲಿನ ಹವಳದ ರಾಶಿಯಂತೆಯೂ ದಶರಥ ವಸುಧಾಧೀಶನ ತೇಜಃಪ್ರಕಾಶವು ಜಗತ್ತನ್ನೆಲ್ಲ ವ್ಯಾಪಿಸಿತು. ತನ್ನ ಬಾಹುಗಳೆಂಬ ಕತ್ತಿಯಿಂದ ವೈರಿವಂಶ(ಬಿದಿರು)ಗಳನ್ನೂ ಉದ್ಧತ ಶಾಖೆಗಳನ್ನೂ ಕತ್ತರಿಸಿ, ಮುಳ್ಳುಗಳನ್ನೆಲ್ಲ ಸವರಿ, ಬೆಳ್ಗೊಡೆಯಿಂದ ಚಂಡಕರಪ್ರತಾಪವನ್ನು ತಂಪುಗೊಳಿಸಿ ದಶರಥನು ತನ್ನ ಸನ್ಮನೋರಥವನ್ನು ಸಫಲೀಕರಿಸಿಕೊಂಡ. ದೇವಗಾಯಕರು ಈ ಮಹಾರಾಜನ ಗುಣಗಳನ್ನು ತನ್ಮಯತೆಯಿಂದ ಹಾಡಿದಾಗ ಪುಳಕಗೊಂಡು ಕೇಳುವ ಮಹೇಂದ್ರನು ತನಗೆ ಚಾಮರವಿಕ್ಕುವ ದೇವಕಾಮಿನಿಯರ ಮಣಿಕಂಕಣಗಳ ಧ್ವನಿಗೆ ಒಲಿದು ಅವರತ್ತ ಕುಡಿನೋಟ ಬೀರುತ್ತಾನೆ. ಕಿನ್ನರರು ದಶರಥ ಕ್ಷಿತಿನಾಥನ ಪರಾಕ್ರಮವಿಶೇಷವನ್ನು ಕಿರ್ತಿಸಲು, ಮತ್ತೆ ಮತ್ತೆ ಕೇಳುವ ಸಂದರ್ಭದಲ್ಲಿ ನಮೇರು ಹೂಗೊಂಚಲಿನಿಂದ ಆಕರ್ಷಿತವಾದ ತುಂಬಿಗಳು ಕಿವಿಯ ಬಳಿ ಕವಿದು ಬರಲು ಇಂದ್ರನು ಅವುಗಳಿರುವ ತನ್ನ ಕರ್ಣಪೂರವನ್ನೇ ಕಿತ್ತಿ ಈಡಾಡುತ್ತಾನೆ. ಅವನ ಜೀವನತೇಜಸ್ಸು ಸೂರ್ಯಕಾಂತಿಯನ್ನು ಮಸುಳಿಸುವಂತೆ ದಶರಥನು ವನಧಿಪರ್ಯಂತವಾದ ಭೂಮಂಡಲವನ್ನು ತನ್ನ ಆಜ್ಞಾಧೀನವನ್ನಾಗಿ ಮಾಡಿಕೊಂಡು ಒಳಿತನ್ನು ಪಾಲಿಸುತ್ತ ಆಳುತ್ತಿದ್ದನು.

ಹೀಗಿರುತ್ತಿರಲು, ಒಂದು ದಿನ ನಿಖಿಲರಾಜಕಿರೀಟಗಳೆಂಬ ದುಂಬಿಗಳು ನೆಲೆಸಿರುವ ಕಮಲದಂತಹ ಪಾದಗಳುಳ್ಳ ದಶರಥನು ಆಪ್ತ ಪರಿಜನರೊಡನೆ ತನ್ನ ಅರಮನೆಯ ಎರಡನೆಯ ಮಾಳಿಗೆಯಲ್ಲಿ ಮಣಿಮಯ ಆಸನದಲ್ಲಿ ಕುಳಿತು ತನ್ನ ಕರ್ಣಪೂರದಲ್ಲಿದ್ದ ಪಾರಿಜಾತದ ಹೂಗಳಿಗೆ ಆಸೆಪಟ್ಟು ಹಾರಾಡುವ ದುಂಬಿಗಳ ನಾದವನ್ನು ಕೇಳುತ್ತ ಕುಳಿತಿದ್ದ. ಆ ಹೊತ್ತಿನಲ್ಲಿ, ತನ್ನ ದೇಹಕಾಂತಿಯಿಂದ ನೋಡಿದವರ ಕಣ್ಣಿಗೆ ಮುದವನ್ನುಂಟುಮಾಡುತ್ತ, ಆಕಾಶಗಂಗೆಯ ನೀರ್ಮಾನಿಸನಂತೆ [ಸನ್ಮಾರ್ಗಕ್ಕೆ ಮೈದಾರದನೂ ನಯವನ್ನು ಸಾರದನೂ ಕಾಳಗದಲ್ಲಿ ಕಣ್ಣರದವನೂ ಆದ] ನಾರದನು ಆಕಾಶಮಾರ್ಗದಿಂದ ಇಳಿತಂದು ದಶರಥ ಕ್ಷೋಣೀಶನ ಆ ಸ್ಥಾನಕ್ಕೆ ಆಗಮಿಸಿದ. ತಾವರೆಯ ದಂಟಿನ ಉಡೆದಾರ, ಹೊಸ ದುಕೂಲದ ಕೌಪೀನ, ಕಮಂಡಲು ಮತ್ತು ದಂಡಗಳಿಂದ ಕೂಡಿ ಆ ಕಿಸುರಳಿಗನೂ ಪಿಸುಣವನ್ನು ಹರಡುವವನೂ ಆದ ಮುನಿಯು ಪ್ರವೇಶಿಸಿದ.

ಅವನನ್ನು ಕಂಡೊಡನೆ ದಶರಥನು ತನ್ನ ಸಿಂಹಾಸನದಿಂದ ಎದ್ದು ಮುನಿಯನ್ನು ಕಾಂಚನಪೀಠದಲ್ಲಿ ಕುಳ್ಳಿರಿಸಿ, ಕೈ ಜೋಡಿಸಿ, ಆನಂತರ ಸದರ್ಭನಾಗಿ ಅಕ್ಷತೆಯಿತ್ತು ಅರ್ಘ್ಯಪಾದ್ಯಗಳನ್ನು ಅರ್ಪಿಸಿದ. ಅವರ ಬರವಿನಿಂದ ತಾನು ಚರಿತಾರ್ಥನಾದೆನೆಂದು ವಿನಯದಿಂದ ನುಡಿದು ಅವರ ಬರವಿಗೆ ಕಾರಣವೇನೆಂದು ಬೆಸಗೊಂಡ. ತಾನು ಇದೇ ತಾನೇ ಜಂಬೂದ್ವೀಪದ ಪೂರ್ವವಿದೇಹದಲ್ಲಿನ ಪುಂಡರೀಕಿಣೀಪುರದಲ್ಲಿ ಸೀಮಂಧರಸ್ವಾಮಿಗಳ ಪರಿನಿಷ್ಕ್ರಮಣ ಕಲ್ಯಾಣದ ಸಂಭ್ರಮವನ್ನು ನೋಡಿಬಂದುದಾಗಿ ತಿಳಿಸಿ, ಕಣ್ಣ ಸನ್ನೆಯಿಂದ ಸುತ್ತಲಿದ್ದವರನ್ನು ಹೊರ ಕಳಿಸಿ, ದಶರಥನೊಡನೆ ಕಟ್ಟೇಕಾಂತದಲ್ಲಿ ಹೀಗೆಂದು ನುಡಿದ: "ನಾನು ಲಂಕೆಗೆ ಹೋಗಿ ಭಕ್ತಿಯಿಂದ ಶಾಂತಿಜಿನೇಶ್ವರನ ದರ್ಶನವನ್ನು ಮಾಡಿ, ವೀತಾಂಕುಶನಾದ ರಾವಣನನ್ನೂ ನೋಡಿ ಬಂದೆ. ನನಗುಂಟಾದ ಆಶಂಕೆಯಿಂದ ಅವನ ವಿಚಾರವನ್ನು ನಿನಗೆ ತಿಳಿಸಲು ಬಂದೆ" ಎಂದು ಪೀಠಿಕೆ ಹಾಕಿ ವಿವರಗಳನ್ನು ನೀಡಿದ. ರಾವಣನ ತಮ್ಮ ವಿಭೀಷಣನು ಸಾಗರಬುದ್ಧಿ ಎಂಬ ನೈಮಿತ್ತಿಕನನ್ನು ಬರಮಾಡಿಕೊಂಡು ರಾವಣನ ಮರಣಕಾರಣವೇನೆಂದು ಕೇಳಿದನಂತೆ. ಯಾವುದೇ ಸಂಶಯಕ್ಕೆ ಎಡೆಯಿಲ್ಲದಂತೆ ರಾವಣನ ಮರಣವು ಸೀತೆಯ ಕಾರಣಕ್ಕಾಗಿ ದಾಶರಥಿಯಿಂದ ಉಂಟಾಗುವುದು; ಇದು ಶಿಲಾಲಿಪಿಯಷ್ಟೇ ಸತ್ಯ ಎಂದು ನೈಮಿತ್ತಿಕನು ತಿಳಿಸಿದನಂತೆ. ಆಗ ವಿಭೀಷಣ ವಿಷಣ್ಣನಾಗಿ 'ಜಾನಕಿ–ದಾಶರಥಿಯರ ಹುಟ್ಟಿಗೆ ಕಾರಣರಾದ ಜನಕ ಹಾಗೂ ದಶರಥರನ್ನು ಮುಗಿಸಿಬಿಡುತ್ತೇನೆ; ಕಾರಣ ವಿಘಟನೆಯೇ ಕಾರ್ಯವಿಘಟನೆಯಲ್ಲವೇ!' ಎಂದು ನಿರ್ಧರಿಸಿದನಂತೆ. ಇದು ತಾನು ಮಾಡಬಾರದ ಕಾರ್ಯ; ಪಾಪಕರವಾದುದು ಎಂದು ಆಲೋಚಿಸದೆ, ಸೋದರನಿಗೊದಗಲಿರುವ ವಿಪತ್ತನ್ನು ನಿವಾರಿಸಲು ನಿನ್ನನ್ನು ಕೊಲ್ಲಲು ನಿರ್ಧರಿಸಿದ್ದಾನೆ. ಇದನ್ನು ತಡೆಯಲು ಬೇಕಾದ ಉಪಾಯವನ್ನು ಆಲೋಚಿಸುತ್ತಿರು; ಈ ವಿಷಯವನ್ನು ಅರುಹಲು ಈಗ ಜನಕನ ಬಳಿ ಹೋಗುತ್ತಿದ್ದೇನೆ" ಎಂದು ಮಾತನ್ನು ಮುಗಿಸಿ ನಾರದನು ನೀರದಪಥಕ್ಕೆ ಹಾರಿ ಮಿಥಿಳೆಯ ಕಡೆ ಹೋದ. ಜನಕನಿಗೂ ಈ ವಿಷಯವನ್ನು ತಿಳಿಸಿದ.

ಆನಂತರ ಇತ್ತ ದಶರಥನು ಸಮುದ್ರಹೃದಯನೆಂಬ ತನ್ನ ಮಂತ್ರಿಮುಖ್ಯನನ್ನು ಬರಮಾಡಿಕೊಂಡು ವಿಷಯವನ್ನು ವಿವರಿಸಿದ. ಇದಕ್ಕೆ ಕಾಲವಂಚನೆಯೇ ತಕ್ಕ ಉಪಾಯವೆಂದು ಬಗೆದು ದಶರಥನಿಂದ ಬೀಳ್ಕೊಂಡ. ಆಮೇಲೆ ಗುಟ್ಟಾಗಿ ಒಬ್ಬ ಚಿತ್ರಕನನ್ನು ಕರೆಸಿ ಲಾಕ್ಷಾರಸ ಮುಂತಾದ ಸಪ್ತಧಾತುಗಳಿಂದ ದಶರಥನನ್ನು ಹೋಲುವ ಒಂದು ಪ್ರತಿಮೆಯನ್ನು ಎರಕ ಹುಯ್ಯಲು ಏರ್ಪಾಟು ಮಾಡಿದ. ಬಣ್ಣ ಬಳಿದ ಮೇಲೆ ಅದು ಲೆಪ್ಪದ ಬೊಂಬೆ ಎಂಬ ಅನುಮಾನ ಬಾರದ ಹಾಗೆ, ಇನ್ನೇನು ಮಾತನಾಡಿಯೇ ಬಿಡುತ್ತದೇನೋ ಎಂಬಂತೆ ಕಾಣಿಸುತ್ತಿತ್ತು. ಚಿತ್ರಕನ ಪರಿಣತಿಯನ್ನು ಮೆಚ್ಚಿಕೊಂಡ ಸಮುದ್ರಹೃದಯನು ಅದನ್ನು ಕರುಮಾಡದ ಎರಡನೆಯ ನೆಲೆಯಲ್ಲಿರಿಸಿ ಅದನ್ನೇ ರಾಜನಂತೆ ಮಂತ್ರಿಗಳು ಪರಿಜನರೂ ಓಲಗಿಸುವಂತೆ ಏರ್ಪಾಟುಮಾಡಿದ. ಇದೇ ರೀತಿಯಲ್ಲಿ ಜನಕನ ಪ್ರತಿಮೆಯನ್ನೂ ಸಿದ್ಧಪಡಿಸಿ ಅದನ್ನೂ ಹೀಗೆಯೇ ಮಾಡಿದ. ಆಮೇಲೆ ದಶರಥನೂ ಜನಕನೂ ಸೂರ್ಯಚಂದ್ರರು ಮೋಡದಲ್ಲಿ ಮರೆಯಾಗುವಂತೆ ಮೈಮರೆಸಿಕೊಂಡರು.

ಅಷ್ಟರಲ್ಲಿ ವಿಭೀಷಣನು ಕಳಿಸಿದ್ದ ತೀಕ್ಷ್ಣಪುರುಷರು ಅಯೋಧ್ಯೆಯನ್ನು ಹೊಕ್ಕರು; ಆದರೆ ಕರುಮಾಡವನ್ನು ಹೊಗುವುದು ಸಾಧ್ಯವಾಗದಂತೆ ಭಟರು ಅವರನ್ನು ತಡೆಗಟ್ಟಿದರು. ಈ ವಿಷಯವನ್ನು ಕೇಳಿ ಕನಲಿದ ವಿಭೀಷಣನು ಅಟ್ಟಿ ತಿನ್ನುವ ಯಮನಂತೆ ಆಕಾಶಮಾರ್ಗದಿಂದ ಬಂದು ಅಯೋಧ್ಯೆಯನ್ನು ಸೇರಿದ. ಆ ಕರುಮಾಡವು ರಾತ್ರಿಯಲ್ಲಿ ಹೊನ್ನ ಬೆಟ್ಟದಂತೆ ಕಾಣಿಸುತ್ತಿತ್ತು. ಅದರಲ್ಲಿದ್ದ ಲೆಪ್ಪದರಸನನ್ನು ಕೊಲ್ಲಲು ವಿದ್ಯುದ್ವಿಳಸಿತನೆಂಬ ವಿಯಚ್ಚರ ಭಟನಿಗೆ ವಿಭೀಷಣನು ಆಜ್ಞೆ ಮಾಡಿದ. ಅದರಂತೆ ಅವನು ಕಾಪಿನವರ ದಿಕ್ಕು ತಪ್ಪಿಸಿ ಕರುಮಾಡವನ್ನು ಹೊಕ್ಕು ತಲೆಯನ್ನು ಕತ್ತರಿಸಿಕೊಂಡು ತಂದ. ಆಗ ಪುರಜನರು ಅಂತಃಪುರದ ಸ್ತ್ರೀಯರು ಮುಂತಾದವರ ಹಾಹಾರವವನ್ನು ಕೇಳಿ ಸಂತುಷ್ಟನಾದ. ಹೀಗೆ ದಶರಥನ ಲೆಪ್ಪದ ತಲೆಯನ್ನು ತೆಗೆದುಕೊಂಡು ವಿಭೀಷಣನು ಕಡಲಿನಲ್ಲಿ ಈಡಾಡಿದ. ಜನಕನ ತಲೆಯನ್ನೂ ತರಿದು ಹಾಗೆಯೇ ಮಾಡಿ ಲಂಕೆಗೆ ಮರಳಿದ. ಸಾಯದವರನ್ನು ಯಾರಾದರೂ ಕೊಲ್ಲಬಲ್ಲರೇ; ವಿಧಿಲಿಖಿತವೆನ್ನುವುದೇನು ಜಲಲಿಪಿಯೇ!

ಊರಿಗೆ ಮರಳಿದ ವಿಭೀಷಣನು ತಾನು ಮಾಡಿದುದನ್ನು ನೆನೆದ; ಈಗ ದಶಾನನನನ್ನು ಕೊಲ್ಲುವವನು ಯಾರೂ ಇಲ್ಲ, ಕಡಲನ್ನು ದಾಟಿ ಬರಲು ಮನುಷ್ಯಮಾತ್ರನಿಗೆ ಅಸಾಧ್ಯ ಎಂದುಕೊಂಡ. ಆದರೆ ನೈಮಿತ್ತಿಕನು ಹೇಳಿದುದಕ್ಕೆ ಪ್ರತಿಯಾಗಿ ತಾನು ಅವಿಚಾರಿಯಾಗಿ ವರ್ತಿಸಿದೆನೇ ಎಂಬ ಅಳುಕು ಅವನಿಗುಂಟಾಯಿತು. ಹಾಗಾಗಿ ಪ್ರಾಯಶ್ಚಿತ್ತನಿಮಿತ್ತವಾಗಿ ನಿರತಿಶಯವೆನಿಸಿದ ಒಂದು ಜಿನಗೃಹವನ್ನು ಕಟ್ಟಿಸಿದ. ಕಷಾಯೋದಯದಿಂದ ಜನಿಸಿದ ಹೊಲ್ಲಮೆಯನ್ನು ಒಳ್ಳೆಯವನು ಸೈರಿಸಲಾಪನೇ?

ಅಷ್ಟರಲ್ಲಿ, ಇತ್ತ ದಶರಥ ಮತ್ತು ಜನಕನ ಪರಿಜನರು ಸತ್ತಿರುವುದು ಲೆಪ್ಪದ ಅರಸನೆಂಬುದನ್ನು ತಿಳಿದು ಸಂತಸದಿಂದಿದ್ದರು. ಆ ಕಡೆ ಜನಕ ದಶರಥರು ಛದ್ಮವೇಷ ಧರಿಸಿ ಅನೇಕ ದೇಶಗಳನ್ನು ಸುತ್ತಿ ಸಂತಸಗೊಂಡರು. ಕೊನೆಗೆ ಕೌತುಕಮಂಗಳಪುರವನ್ನು ಬಂದು ಸೇರಿದರು. ಆ ನಗರವು ಸಾರ್ವರ್ತುಕ ಉದ್ಯಾನಗಳಿಂದಲೂ, ಬಾವಿ ಪುಷ್ಕರಿಣಿ ಸರೋವರಗಳಿಂದಲೂ ಕೂಡಿ ಉರ್ವರೆಯ ನೂಪುರದಂತೆ ಕೌತುಕಭರಿತವಾಗಿತ್ತು. ನಗರದ ಹೊಳೆಯುವ ಹೊನ್ನ ಕೋಟೆಯು ಮುಗಿಲು ಮುಟ್ಟುವಂತಿದ್ದರೆ, ಕಂದಕದ ನೀರಿನಲ್ಲಿ ಕಮಲಗಳು ಅರಳಿ ಸಿರಿ ಕಣ್ದೆರೆದ ಹಾಗೆ ಕಾಣಿಸುತ್ತಿತ್ತು. ಊರ ಹೊರಗಿನ ಆರವೆಗಳು ಮನ್ಮಥನ ಹೊಚ್ಚ ಹೊಸ ಯೌವನದಂತೆ ಕಂಗೊಳಿಸುತ್ತಿತ್ತು. ಹೀಗೆ ಆ ರಾಜಧಾನಿಯು ಕೌತುಕಮಂಗಳಗಳಿಂದ ಕೂಡಿತ್ತು.

ಆ ಊರಿನ ಹೊರವಲಯದಲ್ಲಿ ಬರುತ್ತಿರುವಾಗ, ಲಲನಾ ರತ್ನ ಮತ್ತು ಜಯಲಲನಾರತ್ನಗಳೊಂದಿಗೆ ಸಮಾಗಮವಾಗುವುದನ್ನು ಸೂಚಿಸುವಂತೆ ದಶರಥನ ಬಲಗಣ್ಣು ಮತ್ತು ಬಲಗೈಗಳು ಅದುರಿದವು. ಮುಂದೆ ಬಂದಾಗ ಬಹಿರುದ್ಯಾನದಲ್ಲಿ ಕಮನೀಯವಾದ ಕನಕ ಪ್ರಾಕಾರದಿಂದಲೂ, ಅಂಬರವನ್ನು ಚುಂಬಿಸುವ ಧ್ವಜಗಳಿಂದಲೂ ಕೂಡಿ ಹೊಳೆಯುತ್ತಿದ್ದ ಜನಮೋಹನ ಸ್ವಯಂವರ ಮಂಟಪವು ಕಾಣಿಸಿತು. ಅದರ ಸ್ಫಟಿಕದ ನೆಲಗಟ್ಟಿನ ಪಡಸಾಲೆಯಲ್ಲಿಯೂ ಹೊನ್ನಿನ ಜಗಲಿಗಳ ಮೇಲೂ ನಾನಾ ದೇಶಗಳ ರಾಜರುಗಳು ಕಂಗೊಳಿಸಿದರು.

ನಯನಾಕರ್ಷಣವಿದ್ಯೆಯು ಗಂಡು ರೂಪವನ್ನು ಪಡೆಯಿತೋ, ಗಂಡಗಾಡಿಯನ್ನು ಈತನಿಗೆ ಮನ್ಮಥನೇ ಒಪ್ಪಿಸಿದನೋ ಎನ್ನುವಂತೆ ಅಪರೂಪವಾದ ಚೆಲುವನ್ನು ಹೊತ್ತು, ಮಿಕ್ಕ ರಾಜಕುಮಾರರು ಹೆಣ್ಣಿನ ಆಸೆಯನ್ನು ತೊರೆಯುವಂತೆ ದಶರಥನು ಅಲ್ಲಿನ ಸಭಾಭವನವನ್ನು ಹೊಕ್ಕ. ಸುಂದರವಾದ ಆಭರಣಗಳನ್ನು ಧರಿಸಿದಾಕ್ಷಣ ಚೆಲುವು ಬಂದುಬಿಡುವುದೇ? ರೂಪನ್ನು ಮರೆಮಾಚಿಕೊಂಡಿದ್ದರೂ ಚೆಲುವೆಂಬುದು ಕಣ್ಣಿಗೆ ಕಾಣುವ ಆಭರಣ, ಮನಸ್ಸಿಗೆ ಹಾಕಿದ ಮೋಡಿ, ತಂಪಾದ ಸೊಡರಿನಂತಹ ವಶ್ಯ ಎನ್ನುವ ಹಾಗೆ ಅವನನ್ನು ನೋಡುವವರ ಕಣ್ಣ ಹಾಹೆಯಲ್ಲಿಯೇ ಅವನ ಚೆಲುವು ಸೇರಿಕೊಂಡಿತು.

ಹೀಗೆ ದಶರಥನು ಸ್ವಯಂವರ ಸಭಾಭವನವನ್ನು ಹೊಕ್ಕು, ಜನಕನೊಡನೆ ಒಂದು ಹೊನ್ನಿನ ಮಂಚದ ಬಳಿ ನಿಂತು ಸುತ್ತ ನೋಡುತ್ತಿದ್ದ. ಮಣಿಮಯ ಪಲ್ಲಕ್ಕಿಯನ್ನೇರಿ ಕುಡುವಿಲ್ಲನೊಡನೆ ಮನ್ಮಥನು ಬರಲು ಕನ್ಯೆಯು ಮುಗಿಲ ಮರೆಯ ಚಂದ್ರಕಳೆಯನ್ನು ಮೀರಿದ ಚೆಲುವನ್ನು ಹೊತ್ತು ಬಂದಳು. ಆ ಯುವತೀರತ್ನದ ಪಕ್ಕದಲ್ಲಿ ಕುಂಚ, ಅಡಪ, ಕನ್ನಡಿಗಳನ್ನು ಹಿಡಿದ ಕನ್ನೆಯರು ತಿಂಗಳ ಬೆಳಕನ್ನು ಹೀರಿಕೊಂಡ ಕಣ್ಣ ಕಾಂತಿಯಿಂದ ಬರುತ್ತಿದ್ದರು. ಬಾಲ ಚಂದ್ರನಂತೆ, ಹೊನ್ನ ಪುತ್ಥಳಿಯಂತೆ, ರತ್ನದ ದೀವಿಗೆಯಂತೆ ತನ್ನ ನೀಲಲೋಚನಗಳಿಂದ ಉತ್ಪಲದಳಗಳ ಸರವನ್ನು ಕೆದರುತ್ತ, ಅನಂಗಪಾಶದಂತೆ ಕೈಯಲ್ಲಿ ನವರತ್ನಮಾಲೆಯನ್ನು ಹಿಡಿದು ಕೈಕೆಯು ಮನೋಜನು ಇದುವರೆಗೂ ಬಚ್ಚಿಟ್ಟಿದ್ದ ನಿಧಿಯಂತೆ ನಡೆದು ಬಂದಳು. ಅವಳ ಜೊತೆಗೆ ಬಂದ ಕಂಚುಕಿಯು ಎಲ್ಲ ರಾಜಕುಮಾರರ ಗುಣಗಳನ್ನೂ ಅವರ ವಂಶದ ಕೀರ್ತಿಯನ್ನೂ ಬಣ್ಣಿಸುತ್ತ ಪರಿಚಯ ಮಾಡಿಸುತ್ತಿದ್ದ. ಆದರೆ ಅವರಾರಲ್ಲಿಯೂ ಚಂಚಲವಾದ ಮಿಂಚಿನಂತಹ ಅವಳ ನೋಟ ನಿಲ್ಲಲಿಲ್ಲ. ಅಲ್ಲಿ ಸೇರಿದ್ದ ರಾಜಸುತರನ್ನೆಲ್ಲ ತಿರಸ್ಕರಿಸಿ ಬಳಲಿಕೆಯಿಂದ ವಿಶ್ರಾಂತಿಸ್ಥಾನಕ್ಕೆ ಬರುವಾಗ, ಅಲ್ಲಿ ನಿಂತಿದ್ದ ದಶರಥನ ಮೈಸಿರಿಯು ತನ್ನ ಕಣ್ನೋಟವೆಂಬ ಉತ್ಪಲಮಾಲೆಯನ್ನು ಸೆಳೆಯಲು ಆ ಸರೋಜಾನನೆಯು ಅವನಿಗೆ ಮಾಲೆಯನ್ನು ಹಾಕಿದಳು. ವೇಷ ಮರೆಸಿಕೊಂಡಿದ್ದರೂ ನಿಜಪುಣ್ಯ ಪ್ರೇರಣೆಯಿಂದ ಆ ಕನ್ಯಾರತ್ನವು ರಘುವೀರನಿಗೆ ಕೈಸಾರಿದಳು. ಪುಣ್ಯದಲ್ಲಿ ಹುರುಡೆಲ್ಲಿಯದು?

ಬಾಲಿಕೆಯು ಮಾಲೆಯನ್ನು ಸೂಡಿದ ಕ್ಷಣವೇ ದಶರಥನ ಮೇಲೆ ಅನೇಕ ಬೆಳುಗೊಡೆಗಳು ಬಿಚ್ಚಿಕೊಂಡವು; ಹೇಮಚಾಮರಗಳು ಗಾಳಿಯಿಕ್ಕತೊಡಗಿದವು; ಅಂಗನೆಯರು ಮುತ್ತಿನ ಸೇಸೆಯನ್ನು ತಳಿದರು; ಉತ್ಸವ ಭೇರಿಗಳ ರವವು ಗಗನಾಂತರಾಳವನ್ನು ಆವರಿಸಿತು; ದ್ವಿಜರ ಮಂಗಳಮಂತ್ರರವವು ಹೊಮ್ಮಿತು. ಬಾಲಿಕೆಯು ಹೀಗೆ ಮಿಕ್ಕೆಲ್ಲ ರಾಜಕುಮಾರರನ್ನು ತಿರಸ್ಕರಿಸಿದಾಗ, ಅವಳು ವರಿಸಿದ ದೇಸಿಗನನ್ನು ಹಿಂದಕ್ಕೆ ಅಟ್ಟಲೆಂದು ಅಲ್ಲಿದ್ದ ಸಮಸ್ತ ಭೂಪಾಲಕಬಾಲಕರು ಮಾತ್ಸರ್ಯದಿಂದ ಅವನ ಮೇಲೆ ಕದನಕ್ಕೆ ಮುಂದಾದರು. ಅವರಾರಿಗೂ ಇವನು ಅನರಣ್ಯನ ಪ್ರಿಯಕುಮಾರ, ಸಾಕೇತನಾಥನಾದ ದಶರಥ, ಇವನು ಶರಾಸನವಿದ್ಯಾಗುರು ವೀರ ಎಂಬುದು ಗೊತ್ತಾಗದೆ, ಅವನನ್ನು ಸಾಮಾನ್ಯನಾದ ಏಕಾಂಗಿಯೆಂದು ಬಗೆದರು. ಸೋಕಿದರೆ ಕತ್ತರಿಸುವ ಕತ್ತರಿವಾಣಿಯನ್ನು ಸಾಧಾರಣ ನೀರೆಂದು ಭಾವಿಸಿ ಗುದ್ದುವ ರೀತಿಯಲ್ಲಿ ಆ ರಾಜಸಮಾಜವು ದಶರಥನ ಮೇಲೆ ಆಜಿಗೆಂದು ಮುಂದಾಯಿತು.

ರಣಪಟಹ ನಿನಾದವು ಹೀಗೆ ವಿಲಯಜಲಧಿಯಂತೆ ಭೋರ್ಗರೆದಾಗ ಕೈಕೆಯ ತಂದೆಯಾದ ಶುಭಮತಿಯು ಭಯಗೊಂಡ. ಈ ಸನ್ನಿವೇಶದಲ್ಲಿ ರಥವನ್ನು ಹೂಡಿ ತಂದು ಇವರನ್ನು ತಡೆಯುವುದು ಸರಿಯಲ್ಲ; ಹಾಗಾಗಿ ತಾನು ಸಾಮೋಪಾಯದಿಂದ ಇವರನ್ನು ನಿವಾರಿಸಿಕೊಳ್ಳುತ್ತೇನೆ; ಕೈಕೆಯೊಡನೆ ಈ ರಥವನ್ನೇರಿ ಈ ಸಭೆಯಿಂದ ಹೊರಟು ಹೋಗಿ ಎಂದು ಸೂಚಿಸಿದಾಗ, ಮುಗುಳ್ನಕ್ಕು, "ಆನೆ ಕೊಳವನ್ನು ಕಲಕುವಂತೆ ನಾನೇ ಈ ರಾಜಕವನ್ನು ಕಲಕುತ್ತೇನೆ; ಸ್ವಲ್ಪ ಹೊತ್ತು ಕಾಯಿರಿ" ಎಂದು ತಿಳಿಸಿ ದಶರಥನು ರಥವನ್ನೇರಿ, ಎದುರಿಗಿರುವವರನ್ನು ಭಯಗೊಳಿಸುವಂತೆ ತನ್ನ ಬಿಲ್ಲ ನಾರಿಯಿಂದ ಜೇವೊಡೆದ. ಮುಖಚಂದ್ರವು ಗಡುಸಾಗಲು, ಮೇಖಲಾರವವು ಡಿಂಡಿಮನಿಸ್ವನದಂತೆ ಕೇಳಿಸಲು, ಅವಳ ಮೇಲುದುವು ಜಯಕೇತುವಿನಂತೆ ಕಾಣಲು, ಕೈಕೆಯು ಮನೋರಥಸಾರಥಿಯಂತೆ ರಘುವೀರನ ವೀರಲಕ್ಷ್ಮಿಯಂತೆ ಪತಿಯೊಡನೆ ರಥವನ್ನೇರಿದಳು.

ಆಗ ಅಕಾಲದ ಮೋಡಗಳಂತೆ ನಿಖಿಲ ನೃಪಸುತರು ಅವರನ್ನು ಆವರಿಸಿ ಬಂದು ಶರವರ್ಷವನ್ನು ಕರೆದರು. ಒಂದು ಬಾಣವು ಹಾವಿನ ಹಲ್ಲಿನಂತೆ ತಾಕಲು ಸಾರಥಿಯು ಮೂರ್ಛೆವೋದ; ಆಗ ಕೈಕೆಯೇ ಸಾರಥಿತನವನ್ನು ವಹಿಸಿಕೊಂಡು, ರಾಗರಸವು ಮೇರೆವರಿಯುವ ಹಾಗೆ ರಥವನ್ನು ಚೋದಿಸಿದಳು. ಆಕೆಗೂ ಕುದುರೆಗಳಿಗೂ ಅಭೇದವೆನ್ನುವಂತೆ ಕೈಕೆಯು ಜವನ ರಥದಂತೆ ದಶರಥನ ರಥವನ್ನು ನಡೆಸಿದಳು. ಮುಂದೆ ದಾರಿ ಕಾಣದಂತೆ ರಾಜತನೂಭವರು ಬಿಟ್ಟ ಬಾಣಗಳು ಕವಿದಿರಲು, ತನ್ನ ಹೊಸ ಮಸೆದ ಅಂಬುಗಳಿಂದ ಕತ್ತಲೆಯನ್ನು ಬೆದರಿಸಿ ಅಟ್ಟುವ ಇನಮಂಡಳದಂತೆ ಅವನ್ನೆಲ್ಲ ದಶರಥನು ಕತ್ತರಿಸಿದನು. ಕೆಲವರ ರಥ, ಮತ್ತೆ ಕೆಲವರ ಉಗ್ರಬಾಣ, ಮತ್ತೂ ಕೆಲವರ ಕಿರೀಟ – ಇವುಗಳನ್ನು ಇರ್ಕಡಿಮಾಡಿದ ರಘುವೀರನು ರಾಜಕುಮಾರರನ್ನು ಕೊಲ್ಲಲು ಇಷ್ಟಪಡಲಿಲ್ಲ. ಇವನ ಬಾಣದ ಗರಿಗಳು ಹಿಂಬಾಲಿಸಿದಾಗ ರಾಜಸುತಸಂದೋಹವು ಗರಿ ಮೂಡಿದ ಬೆಳ್ಳೆರೆಳೆಗಳ ಹಾಗೆ ಓಡಿಹೋಯಿತು.

ಆನೆಗಳ ಹಿಂಡು ಸಿಂಹಕ್ಕೆ ಹೆದರಿ ಓಡುವಾಗಲೂ, ಮುಖಂಡ ಆನೆಯು ಮತ್ತೆ ಸಿಂಹದ ಮೇಲೆ ಬೀಳುವ ರೀತಿಯಲ್ಲಿ ಹೇಮಪ್ರಭನೆನ್ನುವವನು ಕೆಲವು ರಾಜಸೂನುಗಳೊಡನೆ ಮರಳಿ ಬಂದು ದಶರಥನ ಮೇಲೆ ಬಿದ್ದ. ಇದು ಒಂದಲ್ಲ, ಕೋಟ್ಯನುಕೋಟಿ ರಥಗಳು ಎಂಬ ಭ್ರಮೆಯನ್ನುಂಟುಮಾಡಿ ಬೆದರುವಂತೆ ದಶರಥನ ರಥವು ಹರಿದು ರಾಜನ್ಯಕವನ್ನು ಪಲಾಯನಶೀಲವನ್ನಾಗಿಸಿತು. ಅವರ ಮೇಲೆ ದಶರಥನು ಬಾಣಗಳ ಮಳೆ ಸುರಿಸಿದ. ಧ್ವಜಗಳು ಹರಿಯಲು, ರಥಗಳು ಮುಗ್ಗುರಿಸಲು, ವಜ್ರದಂತಹ ಕೋದಂಡಗಳೂ ಮುರಿಯಲು ಹೇಮಪ್ರಭನು ಹತಪ್ರಭನಾದ. ಅವನಿಗೆ ಅಭಯವನ್ನು ಘೋಷಿಸಿ, ತನ್ನ ಜಯಪತಾಕೆ ನಭವನ್ನು ತಿವಿಯುತ್ತಿರಲು, ವೀರಸೇಸೆಯೊಡನೆ ಸ್ವಯಂವರಸೇಸೆಯನ್ನು ಪಡೆದ ದಶರಥನು ಪೌರಜನದ ಮನದೊಡನೆ ಪುರವನ್ನು ಪ್ರವೇಶಿಸಿದ. ಇವನು ಇದಿರಾದ ವಿರೋಧಿಗಳನ್ನು ಓಡಿಸಿದವನು, ಅಸಮಾಯುಧನನ್ನೇ ರೋಡಿಸಿದವನು, ರಾಜಕನ್ಯೆಯು ಒಲಿದು ತನಗೆ ಮಾಲೆಯನ್ನು ಸೂಡುವಂತೆ ಮಾಡಿದವನು, ಎಂದು ಪುರಜನರು ದಶರಥನನ್ನು ಪ್ರೀತಿಯಿಂದ ಊರಿಗೆ ಬರಮಾಡಿಕೊಂಡರು.

ಹೀಗೆ ಅರಮನೆಗೆ ಹಿಂದಿರುಗಿದಾಗ ಬಂದವನು ದಶರಥನೆಂಬುದನ್ನು ತಿಳಿದ

ಶುಭಮತಿ ಮಹಾರಾಜನು ಸಂತಸಪಟ್ಟ. ಅವನಿಗೆ ಅನುರೂಪೆಯಾದ ತನ್ನ ಮಗಳನ್ನಿತ್ತು, ವೈಭವದಿಂದಲೂ ಕೊಡುಗೈದಾನದಿಂದಲೂ ಮದುವೆ ಮಾಡಿದ. ಆನಂತರ ದಶರಥನು ಕೈಕೆಯೊಡನೆ ಅಯೋಧ್ಯೆಗೂ, ಜನಕನು ಮಿಥಿಳೆಗೂ ಮರಳಿ ಮುನ್ನಿನಂತೆ ಸುಖದಿಂದ ಅರಸುಗೈಯುತ್ತಿದ್ದರು.

ಒಂದು ದಿನ ದಶರಥನು ಪರಿಮಿತ ಪರಿಜನ ಪರಿವೃತನಾಗಿ ಕುಳಿತಿರುವಾಗ ತನಗೆ ತೇರನ್ನು ನಡೆಸಿ ಗೆಲವು ತಂದಿತ್ತಾಕೆಯನ್ನು ಕರೆದು ತರಲು ವೃದ್ಧಕಂಚುಕಿಗೆ ಬೆಸಸಿದನು. ತರಳ ಕಟಾಕ್ಷವು ಮೋಹನಶರವೆನ್ನಿಸಲು, ಮೇಖಲೆ–ಕಡಗಮಣಿ–ನೂಪುರಗಳ ಸ್ವನವು ಮುಪ್ಪುರಿಗೊಂಡು ಮದನಪಾಶದಂತೆ ಕೈಕೆಯು ನಡೆತಂದಳು. ಬಂದು ತನಿಸೋಂಕಿನಿಂದ ತನ್ನ ಪಕ್ಕದಲ್ಲಿ ಸಿಂಹಾಸನದಲ್ಲಿ ಕುಳಿತುಕೊಳ್ಳಲು ದಶರಥನಲ್ಲಿ ಪುಳಕಗಳೆದ್ದುವು. ಆಗ ಅರಸನು ಹಣ್ಣುಬಿಟ್ಟ ಕಲ್ಪತರುವಿನಂತೆ ಕಂಗೊಳಿಸಿದ. ಆನಂತರ ಅವಳ ಮುಖಾರವಿಂದವನ್ನು ಆನಂದದಿಂದ ಅರಳಿದ ಕಣ್ಣುಗಳಿಂದ ನೋಡಿ, "ಈಕೆ ರಥವನ್ನು ನಡೆಸಿದ್ದರಿಂದಾಗಿ ನಾನು ವೈರಿಗಳನ್ನು ಗೆಲ್ಲಲು ಸಾಧ್ಯವಾಯಿತು. ಆದ್ದರಿಂದ ಈಕೆ ಕೇಳಿದುದನ್ನು ನೀಡದಿದ್ದರೆ ನನ್ನ ಮೆಚ್ಚಿಕೆಯು ಬರೀ ಪೊಳ್ಳು ಎನ್ನಿಸಿಕೊಳ್ಳುವುದಿಲ್ಲವೇ?" ಎಂದು ಪರಿಜನದ ಮುಖವನ್ನು ನೋಡಿ ಕೈಕೆಯನ್ನು ಕುರಿತು, "ನಿನಗೆ ಬೇಕಾದುದನ್ನು ಬೇಡು" ಎಂದನು. ಅದಕ್ಕೆ ಕೈಕೆಯು ತನಗೆ ಬೇಕಾದಾಗ ಬಯಸಿದುದನ್ನು ಕೊಡಿ ಎಂದು ಮೆಚ್ಚನ್ನು ಅರಸನಲ್ಲಿಯೇ ನ್ಯಾಸವಾಗಿಟ್ಟಳು.

ಆನಂತರ ಗಂಡನ ಅನುಮತಿ ಪಡೆದು ಅರ್ಧಾಸನದಿಂದ ಎದ್ದಳು. ಅವಳು ಬಳಲ್ಮುಡಿಯಲ್ಲಿನ ಹೂಮಾಲೆಯಂತೆ ಅರಸನ ನಯನಕುವಲಯಮಾಲೆಯನ್ನೂ ಧರಿಸಿದಳು. ಅವಳ ಕೊರಳಿನ ಹವಳದ ಎಕ್ಕಸರದ ಕೆಂಪು ತೊಂಗಲು ಅನಂಗಜಂಗಮಲತೆಯ ಚಿಗುರಿನ ತೊಂಗಲಂತೆ ಶೋಭಿಸಲು, ಮೇಲುದದ ಸೆರಗಿನಲ್ಲಿ ಸೆರೆಯಾಗಿಯೂ ಕಾಣುವ ಪರಭಾಗದ ಶರೀರಕಾಂತಿಯು ಲಾವಣ್ಯರಸದ ತುಂತುರನ್ನು ಚಿಮುಕಿಸಲು, ಘನನಿತಂಬವನ್ನು ಆವರಿಸಿದ ನೂಲತೊಂಗಲ ಮಧುರಧ್ವನಿಯು ಮಾನವಮನ್ಮಥನ ಮನಸ್ಸನ್ನು ಮತ್ತೆ ಮತ್ತೆ ಕರೆಯುವಂತೆ ಹೊಮ್ಮುತ್ತಿರಲು, ಮನೋಜರಾಜನ ನೀರಾಜನದ ದೀಪದ ಕುಡಿಯಂತೆ ಕೈಕೆಯು ತನ್ನ ನಿವಾಸಕ್ಕೆ ಮರಳಿದಳು.

ಅಪರಾಜಿತೆಯು ಹೂವಿನ ಬಾಣವನ್ನು ನೆನೆಯಿಸಲು, ಸುಮಿತ್ರೆಯು ಮೈತ್ರಿಯನ್ನುಂಟುಮಾಡಲು, ಸುಪ್ರಭೆಯು ದೇಹಪ್ರಭೆಯನ್ನು ಬೀರಲು, ಕಂತುರಾಜನ ಜಯಲಕ್ಷ್ಮಿಯನ್ನು ಕೈಕೆ ಗೆಲ್ಲಲು – ನಾಲ್ವರು ಕುಲಾಂಗನೆಯರಿಂದ ರಾಜನ ಲೀಲೆಯು ಮನ್ಮಥರಾಜಲೀಲೆಯನ್ನೂ ಮೀರಿಸಿತು. ಅಂತೆ ದಶರಥನು ಇಷ್ಟವಿಷಯಸುಖಸಂತುಷ್ಟಿಯಿಂದ ಬಾಳುತ್ತಿದ್ದ. ಅಪರಾಜಿತೆಯು ಆ ನಾಲ್ವರಲ್ಲಿ ಅಗ್ರಮಹಿಷಿಪಟ್ಟವನ್ನು ಪಡೆದಳು. ಒಂದು ದಿವಸ, ಋತುಮತಿಯಾದ ಅಪರಾಜಿತೆಯು ರತ್ನಪೀಠದಲ್ಲಿ ಕುಳಿತು, ಮಾಧವೀಲತೆಯ ಸುಂದರವಾದ ಒಂದು ಸೆಳಕನ್ನು ಅಂಗಜಮೋಹಪಾಶದಂತೆ ಹಿಡಿದುಕೊಂಡು, ತನ್ನ ಯೌವನಪ್ರಮತ್ತವಾದ ಕಣ್ಣುಗಳ ಕಾಂತಿಯ ಹೂಗಳನ್ನೇ ಕುಸುಮೋಪಹಾರವಾಗಿ ಹಿಡಿದಂತೆ ರಾರಾಜಿಸುತ್ತಿದ್ದಳು.

ಕಮಲಾನನೆಯೂ, ಮಂದಸ್ಮಿತಳಾದ ಕುಮುದಾಕ್ಷಿಯೂ, ಬೆಟ್ಟಗಣಿಗಿಲೆಯಂತಹ ಕೋಮಲೆಯೂ, ಪುಷ್ಪವತಿಯೂ ಆದ ಅವಳು ಕಣ್ಣುಗಳೆಂಬ ದುಂಬಿಗಳನ್ನು ಆಕರ್ಷಿಸುವುದೇನು ಹಿರಿದೇ!

ಆ ಕೌಶಲ್ಯೆಯು ಚತುರ್ಥಸ್ನಾನವನ್ನು ಮಾಡಿ ಶುಭ್ರಗೊಂಡಳು. ಮಲಯಜದ ತಂಪು, ಮಲ್ಲಿಗೆಯ ಸೋಮ್ಮುಡಿ, ಹೊಚ್ಚ ಹೊಸತಾದ ಮುತ್ತುಗಳ ಆಭರಣಗಳು, ಉಟ್ಟ ಪಟ್ಟಾವಳಿ, ದಂತಕಾಂತಿಯಿಂದ ಹೊಳೆಯುವ ಹೆಣ್ಣಿಗೆ ತಕ್ಕ ವಿಲಾಸವನ್ನು ನೀಡಲು, ಪುಷ್ಪಕೋಮಲೆಯ ಅಲಂಕಾರವು ಮನ್ಮಥನ ಆಜ್ಞೆಯನ್ನು ಕೈಗೊಂಡಿತು. ಅವಳ ಕುಡಿನೋಟವು ಕಾಮಶರಗಳನ್ನೆಸೆದವು; ಸೋಮ್ಮುಡಿಯು ಭೃಂಗಗಳಂತೆ ಆಕರ್ಷಿಸಿದವು; ತುಂಗಸ್ತನಗಳು ಲಾವಣ್ಯರಸಪ್ರವಾಹವನ್ನು ಹರಿಸಿದವು; ಕೆಂಪಾದ ಅಡಿಗಳು ಕೇಸರದ ದೂಳನ್ನು ಚೆಲ್ಲಿದವು. ಬಳೆಗಳು ಕರ್ಣಾಮೃತವನ್ನು ಸುರಿಸಲು ತನ್ನ ತೋಳುಗಳನ್ನು ಬೀಸುತ್ತ ಅವಳು ನಡೆದು ಬಂದಳು. ಶರದ್ಘನಕೂಟಸದನವನ್ನು ಸೇರುವಂತೆ ಶಶಿಕಾಂತದ ಶಯ್ಯಾಗೃಹವನ್ನು ಹೊಕ್ಕಳು; ಸ್ಫಟಿಕದ ಪಾದರಕ್ಷೆಗಳನ್ನು ಕಳಚಿದವಳೇ ತಲೆದಿಂಬಿನಿಂದ ಕೂಡಿದ ಹಂಸತುಪ್ಪುಳದ ಹಾಸಿಗೆಯಿದ್ದ ರನ್ನದ ಸೆಳೆಮಂಚವನ್ನೇರಿ ಕುಳಿತಳು.

ಆಗ ಅಲ್ಲಿ ಗೃಹಾಧಿದೇವತೆಯ ಅಧರಮಣಿಯಂತೆ ಜಲಜಲಿಸುವ ಮಾಣಿಕ್ಯದ ದೀಪದ ಕುಡಿಗಳೂ, ಕಾಮನ ಬಿಲ್ಲಿನಿಂದ ಬಿಟ್ಟ ಬಾಣದ ಹುಂಕಾರದಂತೆ ಸದ್ದು ಮಾಡುವ ಉಪಹಾರ ಕುಸುಮಗಳೂ, ಪದಗುಟ್ಟುವ ಶುಕಶಾರಿಕೆಗಳೂ, ಸಂಭೋಗ ರಸಪ್ರವಾಹದ ಅಲೆಗಳ ಸದ್ದಿನಂತೆ ಮಧುರವಾಗಿ ಉಲಿಯುವ ಪಾರಿವಾಳಗಳೂ, ಮದನಮೋಹನ ಮೂರ್ಚೆಯನ್ನುಂಟುಮಾಡುವಂತೆ ದಂತದಿಂದ ಮಾಡಿದಂತಹ ಬಾಲಮರಾಳಗಳೂ, ನೀಲಮಣಿಸ್ತಂಭಗಳಿಂದ ನಿಮಿರಿದ ಕಾಮಕಾಳೋಗರರೇಖೆಯಂತಹ ಜ್ವಾಲೆಗಳನ್ನು ಕುಟುಕುವ ಸಾಕು ನವಿಲುಗಳೂ, ಪಚ್ಚೆಯ ಜಗುಲಿಯ ಚೆಲುವಿಗೆ ದರಿಯಾದಂತೆ ಹೊಳೆಯುವ ಸಾಕಿದ ಜಿಂಕೆಗಳ ಲೋಹದ ಪ್ರತಿಬಿಂಬಗಳೂ, ಬೆಳುದಿಂಗಳಿನಿಂದ ತಂಪಾದಂತೆ ಚಂದ್ರಕಾಂತದ ಬಟ್ಟಲುಗಳಲ್ಲಿ ಮಗಮಗಿಸುವ ಚಂದನದ ನೀರೂ, ಕಾಮತಾಪದ ಹೊಗೆ ಬೆಂಕಿಗಳಂತೆ ಮಣಿಭಾಜನಗಳಲ್ಲಿ ಮೇಲೆ ನೆಗೆಯುವ ಮರಿದುಂಬಿಗಳ ಹಿಂಡಿನಿಂದ ಕೂಡಿದ ಕುಂಕುಮದ ನೀರೂ, ಮನ್ಮಥನೆಂಬ ಘಟಸರ್ಪದಂತೆ ಧೂಪಘಟದಿಂದ ಮೇಲೇಳುವ ಹೊಗೆಯೂ ರಮಣೀಯವಾಗಿದ್ದವು. ಶಯ್ಯಾಗೃಹದಲ್ಲಿದ್ದ ಸ್ಫಟಿಕದ ಭರಣಿಯಲ್ಲಿ ಕಂಗೊಳಿಸುವ ಕಸ್ತೂರಿ ಬೆರೆಸಿದ ನೀರು ಚಂದ್ರಮಂಡಲದ ಕರೆಯ ಹಾಗೆ ಕಾಣಿಸುತ್ತಿತ್ತು. ಧೂಪದ ಕವಲುಕವಲಾದ ಹೊಗೆಯಲ್ಲಿ ತನಿಗಂಪಿಗಾಗಿ ನಿಧಾನವಾಗಿ ಸುಳಿಯುವ ನೆಗೆಯುವ ದುಂಬಿಗಳು ಆ ಮನೆಯ ದೇವತೆಗಳು ಇಂದ್ರನೀಲ ಮಣಿಗಳಿಂದ ತಿರಿಕಲ್ಲುಗಳನ್ನಾಡುತ್ತಿರುವರೇನೋ ಎಂಬ ಭಾವನೆಯನ್ನು ತರುತ್ತಿತ್ತು.

ಅಂತು ಸೊಗಸುವ ಸಜ್ಜೆವನೆಯೊಳಗೆ ಅಪರಾಜಿತಾದೇವಿಯು ಸರೋವರದಲ್ಲಿ ವಿಹರಿಸುವ ಜಲದೇವತೆಯಂತೆ ವಿಲಾಸತಲ್ಪದಲ್ಲಿ ಮಲಗಿದ್ದಳು. ಗರ್ಭಾದಾನ ಮಂಗಳವಿಧಾನಗಳನ್ನು ಅನುಸರಿಸಿದ ದಶರಥ ಮಹಾರಾಜನು ದರ್ಪಕನ ರೂಪವನ್ನೂ ಮೀರಿಸುವ ಚೆಲುವಿನಿಂದ ಕೂಡಿ, ತನ್ನ ಆಭರಣಗಳ ಹೊಳಪು ಚಿತ್ತಭಿತ್ತಿಗೆ ನಿರ್ವಾಣಲೇಖೆ ಎನಿಸಲು, ತನ್ನ ಚರಣಗಳ ಉಗುರಿನ ಕಾಂತಿಯು ಚೆಲ್ಲಿರುವ ಹೂಗಳನ್ನು ದ್ವಿಗುಣಗೊಳಿಸುತ್ತ

ಶಯ್ಯಾಗೃಹದ ಒಳಹೊಕ್ಕ. ಮದನನು ಜೇವೊಡೆದ ಹಾಗೆ ಕನಕಕಾಂಚಿಗಳ ನಿಸ್ವನವು ಹೊಮ್ಮಲು; ಮೇಲುದದೊಡನೆ ಕುಚಗಳು ಕದಕ್ಕದಿಸಲು; ಮುಗ್ಧ ನೋಟವು ಲಜ್ಜೆಯನ್ನು ಸೂಚಿಸಲು; ಲಾವಣ್ಯಸಮುದ್ರವು ಮೇರೆವರಿದಂತೆ, ಕಾಮನ ಚತುರಂಗಸೈನ್ಯವು ಮೇಲೆದ್ದಂತೆ ಅಪರಾಜಿತೆಯು ರಾಜನನ್ನು ಕಂಡು ಮೇಲೆದ್ದಳು. ಆಗ ಅರಸನು ಅರಸಿಯ ಮನಸ್ಸೆಂಬ ಕುಮುದಿನಿಯನ್ನು ತನ್ನ ಜಾಣ್ಮೆಯ ವಿನೋದವಾಕ್ಕುಗಳಿಂದ ಅರಳಿಸಿದ. ಅವಳ ಕೋಮಲ ಬೆರಳುಗಳಿಗೆ ಮರಕತಮಣಿಯ ಉಂಗುರಗಳನ್ನು ತೊಡಿಸುವ ನೆವದಿಂದ ರಾಜನು ಹಾಸಿಗೆಯ ಬಳಿ ಬಂದ. ಶೃಂಗಾರರಸಸಮುದ್ರದ ದಡದಲ್ಲಿನ ಲತೆಯಲ್ಲಿ ಚಿಗುರುಗಳು ಮೂಡುವಂತೆ ತನಿಸೋಂಕಿನಿಂದ ಇಬ್ಬರಲ್ಲಿಯೂ ಪುಲಕಗಳೆದ್ದುವು.

ಆ ಮಾನಿನಿಯು ಆ ರಾತ್ರಿ ತನ್ನ ಕನಸಿನಲ್ಲಿ ಶುಭಕರವೆನಿಸಿದ ಆನೆ, ಸಿಂಹ, ಸೂರ್ಯ ಮತ್ತು ಚಂದ್ರರನ್ನು ಕಂಡಳು. ಆಗ ಸುಪ್ರಭಾತಸಮಯ. ಅರಮನೆಯ ಸರೋವರದ ತಾವರೆಗಳ ಕೇಸರಗಳನ್ನು ಒಟ್ಟಿಕೊಂಡು ತಂಗಾಳಿ ಸುಳಿಯಿತು, ಮದನನೆಂಬ ಮದ್ದಾನೆಯ ಕೂಗನ್ನೂ ಮೀರಿಸುವ ರಾಜಹಂಸದ ಕೂಜನವು ಕೇಳಿಸಿತು, ದಿನಮುಖನನ್ನು ನೋಡುವ ಆತುರದಿಂದ ಬರುವ ಸಂಧ್ಯಾದೇವತೆಯ ನೂಪುರಧ್ವನಿಯಂತೆ ದುಂಬಿಗಳು ಸದ್ದುಗೈದವು, ಉದಯಗಿರಿಯನ್ನೇರುವ ಸೂರ್ಯನ ರಥದ ಚೀತ್ಕಾರದಂತೆ ಚಕ್ರವಾಕಗಳ ಕಿಲಕಿಲವು ಕೇಳಿಸಿತು, ನೆಯ್ದಿಲ್ಗೊಳದ ಕಮಲಿನಿಯ ಸೊಬಗು ಕುಂದಲು ಅಟ್ಟಹಾಸ ಮಾಡುವ ಸಾರಸಗಳ ಕಲಕಲಧ್ವನಿಯುಂಟಾಯಿತು. ಅದರ ಜೊತೆಗೆ, ಮಂಗಳಪಾಠಕರ ಮಂತ್ರಗಳೂ, ಗಾಯಕಿಯರ ಹಾಡೂ, ಪರಿಚಾರಕಸ್ತ್ರೀಯರ ನೂಪುರಧ್ವನಿಯೂ ಅರಸಿಗೆ ಸುಪ್ರಭಾತವನ್ನು ಸಾರಿದವು.

ಹಾಗೆ ಎದ್ದ ಅಪರಾಜಿತ ಮಹಾದೇವಿ ಮುಂಜಾನೆಯ ಕರ್ತವ್ಯಗಳನ್ನೆಲ್ಲ ತೀರಿಸಿ, ಮಂಗಳಕರವಾದ ಜಿನಪೂಜೆಯನ್ನು ಮಾಡಿ, ಸುಂದರವಾದ ಚಿತ್ರಶಾಲೆಗೆ ಬಂದಳು. ಮರಕತಮಣಿಯ ಜಗುಲಿಯ ಮೇಲಿದ್ದ ಚಿನ್ನದ ಮಣೆಯ ಮೇಲೆ, ರೋಹಣಪರ್ವತದಲ್ಲಿರಿಸಿದ ರತ್ನಶಲಾಕೆಯಂತೆ ತನ್ನ ಶರೀರಕಾಂತಿ ಪಸರಿಸಲು, ಕುಳಿತಳು. ಆಗ ಎರಡೂ ಬದಿಯಲ್ಲಿ ಕಾಚಿಯ ಹುಲ್ಲಿನ ಕುಂಚವಿಡಿದ ಚಾಮರಗ್ರಾಹಿಣಿಯರೂ, ಡವಕೆ ಕನ್ನಡಿಗಳ ಪರಿಚಾರಿಕೆಯರೂ, ಮನ್ಮಥ ವಶೀಕರಣ ಮಂತ್ರಾಧಿದೇವತೆಗಳಂತೆ ನೆರೆದರು. ಒಬ್ಬಳು ಮಣಿಯ ಬಳೆಗಳನ್ನೂ ನೂಪುರಗಳನ್ನೂ ನೃಪವಧುಗೆ ತೊಡಿಸಿದಳು. ಅರಳಿದ ಕನ್ನೈದಿಲೆಗಳ ಚೆಲುವನ್ನು ಮೀರಿಸಿದ ಕೆನ್ನೆಯ ಚೆನ್ನೆಯ ಕಣ್ಣುಗಳಲ್ಲಿ ಮತ್ತೊಬ್ಬಳು ಕಾಡಿಗೆಯನ್ನೆಚ್ಚಿದಳು. ಮತ್ತೂ ಒಬ್ಬಳು ಈ ಮನೋಜ ಗಜಗಮನೆಯ ಮುಖತಾವರೆಯಲ್ಲಿ ಕಸ್ತೂರಿಯ ತಿಲಕವನ್ನಿಟ್ಟಳು. ತಮ್ಮ ಹೊಳೆಯುವ ಆಭರಣಗಳ ಕಾಂತಿಯ ಜೊತೆ ನಗೆಗಣ್ಣುಗಳ ಹೊಳಪು ಸೇರಿ ಪರಿಚಾರಕಕನ್ನೆಯರು ಹೊಸ ಬೆಳ್ದಿಂಗಳು ಸುತ್ತುವರಿದ ಚಕೋರಗಳಂತೆ ಕಂಡರು.

ಎರಡು ಎಳೆಯ ಹೊಂಗೆಯ ಮರಗಳ ನಡುವೆ ಮಂದ ಮಾರುತದಿಂದ ಹೊಳೆಯುವ ಅಶೋಕದ ಮರವೊಂದಿರುವಂತೆ ನಳಿತೋಳುಗಳ ನಡುವೆ ದೇಹವಿದ್ದ ಮಹಾರಾಣಿಯ ಕಾಮಪಾಶದಂತಿದ್ದ ಕೇಶಪಾಶದಲ್ಲಿ ಒಬ್ಬ ಪರಿಚಾರಿಕೆಯು ಮುಡಿಗತ್ತುರಿಯನ್ನು ತಿಕ್ಕಿ ಮಣಿದರ್ಪಣದಲ್ಲಿ ಅವಳ ಮುಖವನ್ನು ತೋರಿಸಿದಳು.

ಆ ಹೊತ್ತಿಗೆ, ಮಣಿಕುಂಡಲಗಳ ಕಾಂತಿಯು ಗಂಡಭಿತ್ತಿಯ ಮೇಲೆ ಚಿತ್ತಾರಗಳನ್ನು ಬರೆಯಲು, ಹಾರಗಳ ಕಿರಣಮಂಜರಿಯು ಎದೆಯ ಮೇಲೆ ಅಂಗಹಾರವನ್ನು ರಚಿಸಲು, ರೂಪು ಅಂಗನಾತತಿಯ ಕಣ್ಣುಗಳನ್ನು ಅರಳಿಸಲು ದಶರಥ ಮಹಾರಾಜನು ಪರಿಮಿತ ಪರಿಜನ ಪರಿವೃತನಾಗಿ ಉಚ್ಚೈಸ್ರವಸ್ಸಿನಿಂದ ಇಳಿಯುವ ಇಂದ್ರನಂತೆ ತನ್ನ ಎತ್ತರವಾದ ಕುದುರೆಯಿಂದಿಳಿದು ಅಪರಾಜಿತೆಯ ಭವನವನ್ನು ಪ್ರವೇಶಿಸಿದ.

ಮನಸಿಜನ ಕೀರ್ತಿಯಂತೆ ಅವಳ ಹಲ್ಲುಗಳ ಕಾಂತಿ ಪಸರಿಸಲು, ಅಮೃತದ ಸೋನೆ ಸುರಿಯುವಂತೆ ಮಹಾರಾಣಿಯು ರಾಜನಿಗೆ ತಾನು ಹಿಂದಿನ ದಿನ ಕಂಡ ಕನಸನ್ನು ವಿವರಿಸಿದಳು. ಆ ಶುಭಸ್ವಪ್ನಗಳ ಸುದ್ದಿಯು ಅವನಲ್ಲಿ ಹರ್ಷವನ್ನುಂಟುಮಾಡಿತು. "ಅತುಲ ದಾನಿಯೂ, ಕೇಸರಿಯಂತೆ ಪರಾಕ್ರಮಿಯೂ, ಸೂರ್ಯನಂತೆ ಪ್ರತಾಪನಿಲಯನೂ, ಚಂದ್ರನಂತೆ ನೇತ್ರಾನಂದಕರನೂ ಆದ ಮಗನು ನಿನಗೆ ಹುಟ್ಟುತ್ತಾನೆಂಬುದು ಈ ಕನಸುಗಳಿಂದ ಸೂಚಿತವಾಗಿದೆ; ನಿನ್ನಂತೆ ಈ ಕನಸುಗಳನ್ನು ಸಾಧಾರಣಸ್ತ್ರೀಯರು ಕಾಣಬಲ್ಲರೇ!" ಎಂದು ರಾಜನು ಕನಸುಗಳ ಫಲನಿರೂಪಣವನ್ನು ಮಾಡಿದ. ಅದನ್ನು ಆಲಿಸಿದ ರಾಣಿಯು ಗುಡುಗಿನ ಧ್ವನಿಯನ್ನು ಕೇಳಿ ಸಂತಸಗೊಳ್ಳುವ ಸೋಗೆನವಿಲಂತೆ ಸುತಲಾಭದ ವಾರ್ತೆಯಿಂದ ಹರುಷಗೊಂಡಳು. ಆನಂತರ ಅವಳನ್ನು ನೋಡಿಕೊಳ್ಳಲು ಚತುರೆಯರಾದ ಪರಿಚಾರಕಿಯರನ್ನು ನೇಮಿಸಿ ರಾಜನು ನಲ್ಲೆಯಿಂದ ಬೀಳ್ಕೊಂಡ.

ಹೀಗೆ ಆನಂದದಿಂದ ಅನೇಕ ದಿವಸಗಳು ಕಳೆದವು. ಎಳೆವಸಿರನ್ನು ಹೊತ್ತ ಅವಳ ಮುಖವು ಬಿಳುಪೇರಿ ಚಂದ್ರಮುಖಿ ಎಂಬ ಹೆಸರು ಅವಳಿಗೆ ಅನ್ವರ್ಥಕವಾಯಿತು. ಆ ಕಮಲಮುಖಿಯ ಸುತ್ತ ಸುಳಿಯುವ ದುಂಬಿಗಳಂತೆ ಅವಳ ಕಪ್ಪು ತಲೆಗೂದಲು ಕೆನ್ನೆಗಳ ಮೇಲೆ ಸುಳಿದಾಡಿದವು. ಮೊಲೆಗಳು ತೋರಗೊಂಡು ಕಾಂಚನ ಭೃಂಗಾರಿಗಳಂತಾದವು. ಬಸಿರಲ್ಲಿರುವ ಬಾಲಕನು ಕಲಾನಿಧಿಯಾಗುತ್ತಾನೆ ಎಂಬುದನ್ನು ಸೂಚಿಸುವಂತೆ, ಒಂದೇ ನಾಳದಿಂದ ಎರಡು ಹೇಮಕಮಲಗಳು ಹುಟ್ಟಿದಂತೆಯೂ, ಅವುಗಳಲ್ಲಿ ಮದಾಳಿಗಳು ನೆಲೆಸಿರುವಂತೆಯೂ ಲೋಲನೇತ್ರೆಯ ನೀಳವಾದ ಕೇಶರಾಶಿಯೂ ಮೊಲೆತೊಟ್ಟುಗಳೂ ಕಂಗೊಳಿಸಿದವು. ಗರ್ಭಸ್ಥ ಶಿಶುವು ಉದಾರಿಯಾಗುವನೆಂಬುದನ್ನು ಸೂಚಿಸುವಂತೆ ಅಪರಾಜಿತೆಗೆ ದಿನವೂ ದಾನದ ಬಯಕೆಯುಂಟಾಗುತ್ತಿತ್ತು; ಶಿಶುವು ಸಾರ್ವಭೌಮನಾಗುವುದನ್ನು ಸೂಚಿಸುವಂತೆ ಅವಳಿಗೆ ಸಿಂಹಾಸನದಲ್ಲಿ ಕೂಡುವ ಬಯಕೆಯುಂಟಾಯಿತು; ಪರನೃಪಾಲರ ಕೇಳೀವನಗಳನ್ನು ಕಿತ್ತು ಊರುಗಳನ್ನು ಸುಡುವುದನ್ನು ಕಾಣುವ ಬಯಕೆ ಅವಳಿಗುಂಟಾಯಿತು; ಕುಲಪರ್ವತವನ್ನೇರಿ ದಿಶಾವಲೋಕನ ಮಾಡುವ ಆಸೆಯಾಯಿತು; ಬಸಿರಲ್ಲಿನ ಮಗನಿಗೆ ವಸುಧೆಯೆಲ್ಲವೂ ಏಕಭೋಜ್ಯವೆಂಬುದನ್ನು ತೋರಿಸುವಂತೆ ಭೂಮಿಯ ನಾಲ್ಕೂ ಕಡೆಯ ಮಣ್ಣನ್ನು ಸೇವಿಸುವ ಬಯಕೆಯುಂಟಾಯಿತು.

ಮಹಾರಾಜನು ಪುಂಸವನವೇ ಮುಂತಾದ ಮಂಗಳಕರ ಉತ್ಸವಗಳನ್ನು ಮಾಡಿ ತೃಪ್ತಿಯಾಗುವಂತೆ ಅನ್ನವಸ್ತ್ರಗಳ ದಾನ ಮಾಡಿದ. ಈ ರೀತಿಯಲ್ಲಿ ಅವಳ ಗರ್ಭವೂ ಬಂಧುಜನ ಹರ್ಷಗರ್ಭವೂ ಪರಿಪೂರ್ಣಗೊಂಡವು. ಇವಳ ಗರ್ಭದಲ್ಲಿರುವ ಮಗುವು ಮುಂದೆ ನನಗೆ ವಲ್ಲಭನಾಗುವನೆಂದು ನೆಲವು ಹರ್ಷಗೊಂಡಂತೆ, ತುಂಬಿದ ಗರ್ಭವನ್ನು

ಹೊತ್ತು ಮಹಾರಾಣಿಯು ಮರಕತದ ನೆಲದಲ್ಲಿ ಓಡಾಡುವಾಗ ಅವಳ ಕೋಮಲವಾದ ಹೆಜ್ಜೆಗಳು ಮೂಡಿದವು. ಅವಳು ಆಗಾಗ ಗಾಯಕಿಯರ ರಸಗೇಯವನ್ನಾಲಿಸುವಳು; ಮೇಳದವರನ್ನು ಪರಿಹಾಸ ವಚೋವಿಲಾಸದಿಂದ ಸಂತಸಗೊಳಿಸುವಳು.

ಒಂದು ದಿನ ಅಪರಾಜಿತೆಯು ಭೂಮಿ ಮಣಿಪರ್ವತವನ್ನು, ಆಗಸ ಪರಿಪೂರ್ಣ ಚಂದ್ರನನ್ನು ಪಡೆದಂತೆ ಸರ್ವಲಕ್ಷಣಸಮನ್ವಿತವಾದ ಒಂದು ಗಂಡುಮಗುವನ್ನು ಹೆತ್ತಳು. ಇವನ ಚರಿತೆಯು ರಜ(ದೋಷ)ವಿಹೀನವೆಂಬಂತೆ ಅವನು ಹುಟ್ಟಿದಾಗ ಮೇದಿನಿಯು ನೀರಜವಾಯಿತು; ಇವನು ಸ್ವಚ್ಛಹೃದಯದವನೆಂಬುದನ್ನು ತೋರಿಸುವಂತೆ ನೀರಚ್ಛವಾಯಿತು. ಹುಟ್ಟಿದ ಮಗುವಿನ ತೇಜಸಿನಲ್ಲಿ ಯಾವ ಕಳಂಕವೂ ಇಲ್ಲವೆಂಬುದನ್ನರಿಪುವಂತೆ ಬೆಂಕಿಯು ಬಲಮುರಿಯಾಗಿ ಹೊಗೆಯಿಲ್ಲದೆ ಹೊಮ್ಮಿತು; ಇವನು ಜಗತ್ತಿನ ಸಂತಸಕಾರಣ, ಜಗತ್ತಾಪಶಮನ ಎಂಬುದನ್ನು ತಿಳಿಸುವಂತೆ ತಂಗಾಳಿಯು ಬಿಸಿತು, ಅವನ ಜಸದಂತೆ ಆಗಸ ನಿರಭ್ರವಾಯಿತು. ಮಗು ಹುಟ್ಟಿದ ಸಂಭ್ರಮದಲ್ಲಿ ಕಟ್ಟಿದ ರತ್ನತೋರಣಮಾಲೆಯು ರಾಗದ ಬಳ್ಳಿ ಹಬ್ಬಿದಂತೆ ಕಂಗೊಳಿಸಿತು; ಮಂಗಳತೂರ್ಯನಾದವು ಮೇಘರುತಿಯಂತೆ ಮಂಗಳಕರವಾಗಿ ಕೇಳಿಸಿತು; ದಿಕ್ಕರಿಗಳ ಕರ್ಣಪೂರದಂತೆ ಕ್ಷಿತಿಜವು ವರ್ಣರಂಜಿತವಾಯಿತು; ಪುಣ್ಯಪಾಠಕರವವು ಸಮುದ್ರದ ನಿರ್ಘೋಷದಂತೆ ಅರಮನೆಯನ್ನು ಆವರಿಸಿತು. ಈ ಸಂತಸದ ಕಾರಣ ಅರಮನೆಯಲ್ಲಿ ನೃತ್ಯನಾಟಕಗಾಯನಗೋಷ್ಠಿಗಳು ನಡೆದವು.

ಮಗನು ಹುಟ್ಟಿದ ವಾರ್ತೆಯನ್ನು ಕೇಳಿದ ದಶರಥ ಮಹಾರಾಜನು ಪುಲಕದಿಂದ ಪಾರಿಜಾತದಂತೆ ಅರಳಿ, ಇಂದ್ರನಿಗೂ ಅಸಾಧ್ಯವೆಂಬಂತಹ ರೀತಿಯಲ್ಲಿ ಜಿನಪೂಜೆಯನ್ನು ಮಾಡಿ, ಕಲ್ಪವೃಕ್ಷವನ್ನು ಕೀಳುಮಾಡುವಂತೆ ಬೇಡಿದವರಿಗೆ ಬೇಕಾದ್ದನ್ನು ಕೊಟ್ಟು, ಸಜ್ಜನರಿಗೆ ಸುಂದರ ವಸನಭೂಷಣಲೇಪನಗಳನ್ನಿತ್ತು ಸನ್ಮಾನಿಸಿ, ಮಗನನ್ನು ನೋಡುವ ಸಡಗರದಿಂದ ಧಾವಿಸಿದ. ತನ್ನ ದೇಶದ ಉದ್ಯಾನಗಳಲ್ಲಿನ ಮರಗಳೆಲ್ಲ ಕಲ್ಪವೃಕ್ಷಗಳಾದ ಹಾಗೆ, ಕೆರೆಗಳಲ್ಲೆಲ್ಲ ಸಿದ್ಧರಸವೇ ತುಂಬಿದ ಹಾಗೆ, ಕಾಮಧೇನುಗಳೆಲ್ಲ ಒಂದೆಡೆ ನೆರೆಯಿತೆಂಬಂತೆ ಬೇಡಿ ಬಂದ ಎಲ್ಲರಿಗೂ ದಾನಮಾಡಿ ರಾಜನು ಮಗನ ಜಾತಕರ್ಮಗಳನ್ನು ನೆರವೇರಿಸಿದ. ಹತ್ತನೆಯ ದಿನದಂದು ದಶರಥನು ಪದ್ಮಾಲಂಕೃತವಿಶಾಲವಕ್ಷಸ್ಥಲನಾದದ್ದರಿಂದ ಪದ್ಮನೆಂದೂ, ಶುಭಲಕ್ಷಣಾಭಿರಾಮನಾದ್ದರಿಂದ ರಾಮಚಂದ್ರನೆಂದೂ ಮಗನಿಗೆ ಅನ್ವರ್ಥವಾದ ಹೆಸರುಗಳಿಂದ ನಾಮಕರಣ ಮಾಡಿದ.

ಕಾಲ ಕಳೆಯಿತು. ಉತ್ತಾನಶಯ್ಯೆಯಲ್ಲಿ ಮಲಗಿದ ಮಗುವಿನ ನೆವವಿಲ್ಲದ ನಗೆಯು ರವಿಕಿರಣವು ಸೋಕದೆಯೇ ವಿಲಾಸವನ್ನು ಪಡೆದ ಕಮಲವನ್ನು ನೆನಪಿಸುತ್ತಿತ್ತು. ನಿರಪೇಕ್ಷಕವಾಗಿ ಅತ್ತಿತ್ತ ಸುಳಿಯುವ ಮಗುವಿನ ಕಣ್ಣ ಹೊಳಪಿನಿಂದಾಗಿ ಅರಸಿಯ ಮೋಹರಸದ ಅಮೃತಜಲರಾಶಿಯ ತೆರೆಗಳು ಹೊಮ್ಮುತ್ತಿದ್ದವು. ಬಾಲಕನ ಹಣೆಯಲ್ಲಿನ ಹರಿನೀಲರತ್ನದ ಮರಳೆಲೆಯು ಚಂದಿರನೊಳಗಿನ ಕಪ್ಪು ಕಲೆಯನ್ನು ಹೋಲುತ್ತಿತ್ತು. ಕರ್ಣಭೂಷಣದ ಕಾಂತಿ ಆವರಿಸಿದ ರಾಮಚಂದ್ರನ ಶರೀರವು ಎಳೆವಿಸಿಲು ಆವರಿಸಿದ ಕಮನೀಯ ಪುಂಡರೀಕವನ್ನು ಹೋಲುತ್ತಿತ್ತು. ಕಾಡಿಗೆ ಹಚ್ಚಿದ ಮಗುವಿನ ಕಣ್ಣುಗಳ ದೀಪ್ತಿಯು ಅರಸಿಯ ಮನದಲ್ಲಿ ರಾಗೋತ್ಸವವನ್ನು ಉಂಟುಮಾಡುತ್ತಿತ್ತು. ಈ

ಧಾತ್ರಿಯಲ್ಲಿ ಅನ್ಯರ ತೇಜಸ್ಸನ್ನು ಸಹಿಸೆನೆಂಬ ರೀತಿಯಲ್ಲಿ ಮಗುವು ಎತ್ತಿಕೊಂಡಿದ್ದ ದಾದಿಯ ಕೈಯಿಂದ ಚಿಮ್ಮಿ ಮಣಿದೀಪಾಂಕುರವನ್ನು ಮುಟ್ಟಲು ಯತ್ನಿಸುವುದು. ಮಗುವಿನ ತಳಿರಿನಂತಹ ಅಡಿಗಳಿಂದ ಹೆಜ್ಜೆಯಿಡಲು ಹೊಮ್ಮುವ ಕನಕ ಕಿಂಕಿಣಿಯ ಝಣತ್ಕಾರವು ವೀಣಾರವಕ್ಕಿಂತಲೂ ಇನಿದಾಗಿರುತ್ತಿತ್ತು. ರಾಮಚಂದ್ರನ ತೊದಲು ನುಡಿಗಳು ವಶ್ಯಮಂತ್ರಗಳಂತೆ ಎಲ್ಲರನ್ನೂ ಮುಗ್ಧಗೊಳಿಸುತ್ತಿದ್ದವು. ಸ್ಫಟಿಕದ ನೆಲಗಟ್ಟಿನ ಮೇಲೆ ಧವಳಾಂಗನಾದ ಅರಸುಗುವರನು ನಡೆಯುತ್ತಿದ್ದರೆ ತಿಳಿಗೊಳದಲ್ಲಿ ವಿಹರಿಸುವ ಕಳಹಂಸನಂತೆ ಕಂಗೊಳಿಸುತ್ತಿದ್ದ. ಬಾಲಕನು ನಡೆಯುವುದನ್ನು ಕಲಿಯುವಾಗ ಇಡುತ್ತಿದ್ದ ಹೆಜ್ಜೆಗಳು ಭೂಮಿಯನ್ನು ಏರುಪೇರು ಮಾಡುತ್ತಿದ್ದುದರಿಂದ ಅವನು ನಡೆಯುವಲ್ಲೆಲ್ಲ ತನ್ನ ಹೆಡೆಯನ್ನು ಚಾಚಿ ವಾಸುಕಿಯು ಸಹಸ್ರಫಣ ಎಂಬ ಹೆಸರನ್ನು ಪಡೆದ. ಈ ಕುಮಾರನು ತನ್ನ ಜೊಲ್ಲು ಮತ್ತು ನಾಲ್ಕು ಹಲ್ಲುಗಳಿಂದ ಕೂಡಿದ ಶರೀರದ ಹೊಳಪಿನಿಂದ ಕೂಡಿ ಐರಾವತವನ್ನು ಮೀರಿಸಿದ ಚೆಲುವಿನಿಂದ ಕಂಗೊಳಿಸುತ್ತಿದ್ದ. ಚಂದ್ರನು ಬೆಳೆದ ಹಾಗೆಲ್ಲ ಉಕ್ಕೇರುವ ಸಮುದ್ರದಂತೆ, ಬೆಳೆಯುವ ರಾಮಚಂದ್ರನಲ್ಲಿ ಮುಗ್ಧಭಾವ ಹೆಚ್ಚುತ್ತಿತ್ತು.

ರಾಮಚಂದ್ರನು ಆದಿತ್ಯನಂತೆ ನಿತ್ಯೋದಯಗೊಳ್ಳುತ್ತಿದ್ದ. ಬಾಲಲೀಲೆ ಮತ್ತು ಉದಾತ್ತಗುಣವುಳ್ಳ ಮಗುವಿನ ಮುಖಚಂದ್ರವನ್ನು ನೋಡಿ ದಶರಥನು ಆನಂದವಾರ್ಧಿಯಲ್ಲಿ ತೇಂಕಾಡುತ್ತಿದ್ದ. ಈ ಬಗೆಯಲ್ಲಿ ಸಂತೋಷದ ಪರಮಪದವನ್ನು ಸೇರಿರುವಾಗ, ಮಹಾರಾಜನ ಮೋಹದ ಬಳ್ಳಿಗಳಂತಿದ್ದ ಇತರ ರಾಣಿಯರು ಪುಷ್ಪವತಿಯರಾಗಿ ನಾಲ್ಕು ನೀರನ್ನು ಹಾಕಿಕೊಂಡು ಹೊಸ ದೇಸೆಯ ವಿಲಾಸದಿಂದ ಅಲಂಕೃತರಾಗಿ ಶುಭಸ್ವಪ್ನಗಳನ್ನು ಕಂಡರು. ಕಾಲಕ್ರಮದಲ್ಲಿ ಅವರೆಲ್ಲರ ದೇಹಗಳಲ್ಲಿ ಗರ್ಭಚಿಹ್ನಗಳು ಕಾಣಿಸಿದವು; ಇದರಿಂದ ಅವನಿಪನಲ್ಲಿ ರಾಗೋದ್ರೇಕವುಂಟಾಯಿತು. ಅವರ ಕೇಶರಾಶಿಯು ಲಾವಣ್ಯನದಿಯಲ್ಲಿನ ಹಸುರು ಲತೆಗಳ ಸೊಬಗನ್ನು ಅಲ್ಲಗಳೆದವು; ಕಪ್ಪಾದ ಚೂಚುಕದಿಂದ ಕೂಡಿದ ಪೆರ್ಮೊಲೆಗಳು ಕನ್ನೈದಿಲೆಯ ಎಸಳನ್ನು ಕಚ್ಚುವ ಜಕ್ಕವಕ್ಕಿಗಳ ವಿಲಾಸವನ್ನು ಮೀರಿಸಿದವು; ಅವರ ಮುಖಸರೋವರದಲ್ಲಿ ಮೂಡಿದ ಕಪೋಲಗಳು ತಿಳಿಗೊಳದ ಬಿಳಿಯ ತಾವರೆಗಳಂತೆ ರಂಜಿಸಿದವು; ಪೆರೆನೊಸಲಿನಲ್ಲಿ ಆಡುವ ಕೂದಲ ತೊಂಗಲು ಬಾಲಚಂದ್ರನನ್ನು ಕತ್ತಲೆ ಆವರಿಸಿದ ಬಗೆಯನ್ನು ನೆನಪಿಸುತ್ತಿತ್ತು. ಅವರೆಲ್ಲರಿಗೂ ಪುಂಸವನ ಸೀಮಂತೋನ್ನಯನ ಮುಂತಾದ ಸಕಲ ಮಂಗಳಗಳನ್ನು ದಶರಥ ಮಹಾರಾಜನು ನೆರವೇರಿಸಿದ. ಕಾಲಾನುಕ್ರಮದಲ್ಲಿ, ಕ್ರಮವಾಗಿ ಶುಭಮುಹೂರ್ತದಲ್ಲಿ ಸುಮಿತ್ರೆಯು ಲಕ್ಷ್ಮಣನನ್ನೂ, ಕೈಕೆಯು ಭರತನನ್ನೂ, ಸುಪ್ರಭೆಯು ಶತ್ರುಘ್ನನನ್ನೂ ಹಡೆದರು.

ಎರಚಿದ ಹೂಗಳು ಎಲ್ಲೆಲ್ಲೂ ಹರಡಿಕೊಳ್ಳಲು, ಮಂಗಳವಾದ್ಯಗಳ ಸದ್ದು ಎಲ್ಲೆಡೆಯೂ ಹಬ್ಬಲು, ಗುಡಿಗಳು ಬಾನಲ್ಲಿ ಹಾರಾಡಲು, ತರುಣಿಯರು ದಿಕ್ಕುದಿಕ್ಕುಗಳಲ್ಲಿ ನರ್ತಿಸಲು ಅರಮನೆಯಲ್ಲಿ ಒಸಗೆಯ ಮೇಲೆ ಒಸಗೆಯುಂಟಾಯಿತು. ಆ ಸಮಯದಲ್ಲಿ ಪರಿಮಿತ ಪರಿಜನರಿಂದ ಕೂಡಿದ ದಶರಥ ಮಹಾರಾಜನು ಮಗುವನ್ನು ನೋಡುವ ಔತ್ಸುಕ್ಯದಿಂದ ಮೊದಲು ಸುಮಿತ್ರೆಯಿದ್ದ ಬಾಣಂತಿಯ ಮನೆಗೆ ಬಂದ. ಮಗುವನ್ನು ಹಡೆಯುವ ಮುಂಚೆ ಸುಮಿತ್ರೆಯು ಸಿಂಹದ ಅಭಿಷೇಕ, ಸಮುದ್ರಾವೃತ ಭೂಮಿ, ಹೊನ್ನ

ಬೆಟ್ಟವೇರಿದ್ದು – ಇವನ್ನೆಲ್ಲ ಕನಸಿನಲ್ಲಿ ಕಂಡದ್ದನ್ನು ತಿಳಿದು ಅವನು ಸೌಮಿತ್ರಿಯು ಬೆಳ್ಳಿಬೆಟ್ಟದವರೆಗಿನ ಭರತಕ್ಷೇತ್ರವನ್ನು ಆಳುವನೆಂದು ಸಂತಸಗೊಂಡ. ಮಗುವಿನ ದೇಹಕಾಂತಿ ಎಳೆಬಿಸಿಲನ್ನು ಹೋಲುತ್ತಿದ್ದುದನ್ನು ಕಂಡ ಅರಸನ ಮುಖವು ಅರಳಿತು. ಮುಂದೆ ರಾಜನು ಭರತಶತ್ರುಘ್ನರನ್ನೂ ಕಂಡು ಸಂಭ್ರಮಪಟ್ಟ. ಸಕಾಲದಲ್ಲಿ ಆ ಮೂವರಿಗೆ ಜಾತಕರ್ಮಗಳನ್ನು ಮಾಡಿದ ರಾಜನು ಕಲ್ಪತರುವು ಹಣ್ಣು ಬಿಟ್ಟಂತೆ, ಹೊನ್ನಿನ ಮಳೆ ಕರೆದಂತೆ, ಸಗ್ಗದ ಹಸು ಕರೆದಂತೆ ಕಂಡವರಿಗೆಲ್ಲ ಪ್ರೀತಿಯಿಂದಲೂ ಸಂತಸದಿಂದಲೂ ಉತ್ಸಾಹದಿಂದಲೂ ದಾನ ಮಾಡಿದ; ಗೆಳೆಯರೂ ಪರಿಜನರೂ ವಿದ್ವಜ್ಜನರೂ ಬಾಯಿ ತುಂಬ ಹಾಡಿ ಹರಸಿದರು.

ಈ ರೀತಿ ದಶರಥ ಮಹಾರಾಜನು ಸಂತಾನಸಮೃದ್ಧಿಯಿಂದಲೂ ಪ್ರವರ್ಧಮಾನನಾಗಿಯೂ ಸುಖದಲ್ಲಿ ಓಲಾಡಿದ. ಮಕ್ಕಳು ಬೆಳೆಯುವ ಚಂದ್ರಮನ ಹಾಗೆ ಮನಕ್ಕೆ ಮುದವೀಯುತ್ತಿದ್ದರು; ಕಲ್ಪತರುವಿನ ಮೊಳಕೆಗಳ ಹಾಗೆ ದಿನದಿನಕ್ಕೆ ಬೆಳೆಯುತ್ತಿದ್ದರು. ನಸುನಗುವ ಮಕ್ಕಳ ಮುಖಕಮಲದ ಸುತ್ತ ತಾಯಂದಿರ ಕಣ್ಣಗಳೆಂಬ ದುಂಬಿಗಳು ಹಾರಾಡುತ್ತಿದ್ದವು; ಸುತರ ಜೊಲ್ಲಿನಿಂದ ಅವರ ಮೋಹವೆಂಬ ಬಳ್ಳಿಗಳು ಕುಡಿವರೆದವು. ದಟ್ಟಡಿಯಿಡುವ ಮಕ್ಕಳನ್ನು ಗಮನಿಸುವ ತಾಯಂದಿರ ದಿಟ್ಟಿಗಳು ಮಣಿಮಯ ನೆಲಗಟ್ಟನ್ನು ಆವರಿಸಿದಾಗ, ಹೊಸತಾಗಿ ಅರಳಿದ ನೆಯ್ದಿಲೆಗಳಿಂದ ತುಂಬಿದ ಕೊಳದಲ್ಲಿ ವಿಹರಿಸುವ ರಾಜಹಂಸಗಳನ್ನು ಹೋಲುತ್ತಿದ್ದವು. ಅರಳೆಲೆ, ಮತ್ತಿಗಾಯಿ, ಹುಲಿಯುಗುರು, ನವರತ್ನದ ಬಳೆಗಳು, ಹೊನ್ನ ಉಡಿದಾರದ ಮಣಿಕಿಂಕಿಣಿಗಳು, ರತ್ನದ ಗಂಟೆಗೆಜ್ಜೆಗಳು ಮುಂತಾದ ಬಾಲದೊಡುಗೆಗಳನ್ನು ಧರಿಸಿದ ಮಕ್ಕಳು ತಂದೆತಾಯಿಯರಿಗೆ ನಯನೋತ್ಸವವುಂಟುಮಾಡಿದವು.

ಈ ಬಗೆಯಲ್ಲಿ ದಶರಥ ಮಹೀನಾಥನ ಸಾಮ್ರಾಜ್ಯಲಕ್ಷ್ಮಿಯ ಮಣಿಖಚಿತ ಆಭರಣಗಳಂತೆ ಸೊಗಸುವ ಮಕ್ಕಳ ಬಾಲಕೇಳಿಯನ್ನು ನೋಡಿ ಸುಮಿತ್ರೆಯ ಕಣ್ಣಿನ ಬೊಂಬೆಗಳು ನರ್ತಿಸಿದವು, ಕೈಕೆಯ ಶರೀರಲತೆಯು ಪುಲಕದ ಮೊಗ್ಗುಗಳನ್ನು ತಳೆಯಿತು, ಸುಪ್ರಭೆಯ ಸಂತಸವು ಅಧಿಕವಾಯಿತು. ರಾಮಲಕ್ಷ್ಮಣ ಭರತಶತ್ರುಘ್ನರು ಹೀಗೆ ಶೈಶವವನ್ನು ಕಳೆದರು. ವಸುಮತಿಯೆಂಬ ಹೆಸರು ಭೂಮಿಗೆ ಅನ್ವರ್ಥವೆನ್ನುವಂತೆ ದಾನವ್ಯಸನಿಯಾದ ದಶರಥನು ರತ್ನದ ಮಳೆಗರೆದು ಮಕ್ಕಳ ಚೌಲೋಪನಯನಗಳನ್ನು ನೆರವೇರಿಸಿದ. ತಮ್ಮ ತಮ್ಮಲ್ಲಿನ ಪ್ರೀತಿಯು ಜನ್ಮಾಂತರದಿಂದ ಬೆಸೆದುಕೊಂಡದ್ದು ಎಂಬ ಹಾಗೆ ರಾಮಲಕ್ಷ್ಮಣಭರತಶತ್ರುಘ್ನರು ಆಪ್ತರಾದರು. ಅವಳಿಮಕ್ಕಳ ರೀತಿಯಲ್ಲಿಯೂ ದೇಹಧರಿಸಿದ ಪುರುಷಾರ್ಥಗಳಂತೆಯೂ ಇವರು ತಾಯ್ತಂದೆಯರ ಮೇಲೆ ಅಮೃತದ ಮಳೆಗರೆದರು. ಕಾಮಧೇನುವಿನ ಕೆಚ್ಚಲುಗಳಂತೆ, ಮೂರ್ತಿಗೊಂಡ ಪುರುಷಾರ್ಥಗಳಂತೆ ನಾಲ್ವರು ಮಕ್ಕಳು ಒಗ್ಗಟ್ಟಿನಿಂದಿರಲು, ನಾಲ್ಕು ಸಮುದ್ರಗಳವರೆಗೂ ಬೆಳುಗೊಡೆಯನ್ನು ಹರಡಿ ನಾಲ್ಕು ದೆಸೆಗಳಲ್ಲಿ ಜಯಸ್ತಂಭವನ್ನು ನಿಲ್ಲಿಸಲು ಇವರು ಸಮರ್ಥರಾಗುತ್ತಾರೆ ಎಂದು ದಶರಥನು ಸಡಗರಪಟ್ಟ. ತನ್ನ ಮಕ್ಕಳ ಮನ್ಮಥಸಮಾನ ರೂಪವನ್ನೂ, ಎಳ್ಳುತೊಗರಿಗಳಂತಹ ಶುಭವ್ಯಂಜನರಂಜಿತ ಪ್ರಶಸ್ತ ಅವಯವಗಳನ್ನೂ, ಹಲಕುಲಿಶಶಂಖಚಕ್ರಗಳ ಲಾಂಛನವುಳ್ಳ ಕೈಕಾಲುಗಳನ್ನೂ ನೋಡಿ ಸಕಲ ಸಾಮ್ರಾಜ್ಯವೂ

ತನ್ನ ಕೈವಶವಾದಂತೆ ಅವನು ಸಂತಸಗೊಂಡ. ಅವರು ವಿದ್ಯಾಯುವತಿಯ ಮುಖಕಮಲದ ಬಂಡುಣಲು ಇದು ತಕ್ಕ ಸಮಯವೆಂದು ತಿಳಿದು, ವಿವಿಧ ವಿದ್ಯೆಗಳನ್ನು ಕಲಿಸಲು ರಾಜನು ನಾನಾ ಕಲಾಚಾರ್ಯರನ್ನೊಳಗೊಂಡ ಗುರುನಿಯೋಗವನ್ನು ನೇಮಿಸಿದ.

ಶುಭದಿನ ಮುಹೂರ್ತದಲ್ಲಿ ವಿದ್ಯೆಯ ಕಲಿಕೆಯಲ್ಲಿ ತೊಡಗಿದ ಬಾಲಕರು ತಮ್ಮ ಹಿಂದಿನ ಜನ್ಮಗಳಿಂದಲೇ ವಿದ್ಯೆಗಳನ್ನು ಹೊತ್ತು ತಂದರೋ ಎಂಬಂತೆ ಬಹು ಬೇಗ ಸಕಲಶಾಸ್ತ್ರಪರಿಣತರಾದರು. ಇವರ ಕೌಶಲವು ಅರವತ್ತನಾಲ್ಕು ವಿದ್ಯೆಗಳನ್ನು ಬಲ್ಲವರಲ್ಲಿಯೂ ಮತ್ಸರವನ್ನುಂಟುಮಾಡುತ್ತಿತ್ತು. ಸೊಡರಿನಿಂದ ಮತ್ತೊಂದು ದೀಪವನ್ನು ಹೊತ್ತಿಸಿಕೊಂಡಾಗ ಅದರ ತೇಜವು ಹೆಚ್ಚಿದಂತೆ ಈ ಕೋವಿದ ಹುಡುಗರ ವಿಶದಪ್ರಜ್ಞಾಗುಣದಿಂದಾಗಿ ವಿದ್ಯೆಗಳು ಉತ್ಕರ್ಷಗೊಂಡವು. ಧೈರ್ಯಶೌರ್ಯಗಳನ್ನುಳ್ಳವನ ಕೈಯಲ್ಲಿನದೇ ನಿಜವಾದ ಆಯುಧ, ದುರ್ಬಲನ ಕೈಯಲ್ಲಿನದು ಏತರ ಆಯುಧ ಎಂಬಂತೆ, ಕಲಿಸಿದ ಗುರುಗಳ ಹೆಗಲುನೆತ್ತಿಗಳನ್ನು ಮುಟ್ಟುವ ಹಾಗೆ ರಾಮಲಕ್ಷ್ಮಣರು ಬಿಲ್ವಿದ್ಯೆಯಲ್ಲಿ ಪಾರಂಗತರಾದರು. ಮಿಕ್ಕೆಲ್ಲರ ಬಲ್ಮೆಯ ಒಟ್ಟಂದಕ್ಕೆ ಸಮಾನವಾಯಿತು ಎಂಬಂತೆ ರಾಮನು ಬಿಲ್ಲ ಬಿಜ್ಜೆಯನ್ನು ಕಲಿತರೆ, ಲಕ್ಷ್ಮಣನು ಅವನಿಗೆ ಸಮದೊರೆಯಾಗಿ ಬೆಳೆದ. ಹೀಗೆ ಆ ಮಕ್ಕಳೆಲ್ಲ ಸಕಲಶಸ್ತ್ರಶಾಸ್ತ್ರವಿದ್ಯಾವಿಶಾರದರಾದರು.

ಚಂದ್ರಬಿಂಬದಿಂದ ಕಡೆದ ಹಾಗೆ, ಸ್ಫಟಿಕದಿಂದ ತಯಾರಿಸಿದಂತೆ, ಹೂಗಳಿಂದ ನಿರ್ಮಿತವಾದ ರೀತಿಯಲ್ಲಿ, ಚಂದ್ರಕಾಂತಮಣಿಯಿಂದ ಸಮೆದಂತೆ, ಮುತ್ತುಗಳಿಂದ ಸಮನಿಸಿದಂತೆ, ಕೋಮಲವಾದ ಕಮಲದ ದಂಟಿನಿಂದ ರಚಿಸಿದ ಹಾಗೆ ರಘುರಾಮನ ಪಾಂಡುರ ದೇಹಮಂಡಲವು ಕಂಗೊಳಿಸಿತು. ವಿಶಾಲವಾದ ಹಣೆಯು ಅಷ್ಟಮಿಯ ಚಂದ್ರನನ್ನೂ, ನಗೆಗಣ್ಣುಗಳು ಕಮಲಗಳನ್ನೂ ಮೀರಿಸಿದವು ಎಂದ ಮೇಲೆ ಆತನ ಅಭಿರಾಮತೆಯನ್ನು ಹೊಗಳುವುದೆಂತು? ತೆರೆಗಳಿಂದ ಕೂಡಿದ ಕಡಲ ಗಾಡಿಯನ್ನೂ ಕೀಳ್ಮಾಡುವ ತೋರಮುತ್ತಿನ ಏಕಾವಳಿಯ ಕಾಂತಿಯಿಂದ ರಾಮನ ವಿಶಾಲ ವಕ್ಷಸ್ಥಳವು ಸಿರಿಯ ತವರು ಎನ್ನಿಸಿತು, ವನಿತಾಜನರ ವಶ್ಯವಿಧಾನ ಎನ್ನಿಸಿತು, ಧೈರ್ಯದ ರೋಹಣಗಿರಿಯಂತೆ ಶೋಭಿಸಿತು.

ಇನ್ನು, ಲಕ್ಷ್ಮಣನ ವಿಶಾಲವಾದ ಕಣ್ಣುಗಳು ನಗುವಿನಿಂದಲೂ ದೇಹಕಾಂತಿಯಿಂದಲೂ ಕೂಡಿ ಕಾಳಿಂದಿಯಲ್ಲಿ ಅರಳಿದ ಕಮಲಗಳಂತೆ ಕಂಡವು. ನೀಲರತ್ನದಿಂದ ಕಡೆದು ಜೀವವನ್ನು ಹೊಯ್ದಂತೆ ಕಾಣುವ ಗಂಡಗಾಡಿಯಿಂದಾಗಿ ಲೋಕವು ಅವನನ್ನು ಪುರುಷೋತ್ತಮನೆಂದು ಕೊಂಡಾಡಿತು. ಅವನ ಉಚ್ಚ ಲಲಾಟವು ನೋಡಿದವರ ಮನಸ್ಸನ್ನು ಅರಳಿಸುತ್ತಿತ್ತು; ಕೃಷ್ಣನ ಕೇಶ, ವಿಷ್ಣುವಿನ ವಕ್ಷ, ವಾರಿಜಾಕ್ಷನ ಕಾಂತಿಯ ಕಣ್ಣುಗಳು, ಪುರುಷಸಿಂಹನ ಸಿಂಹಕಟಿ, ಜನಾರ್ದನನ ಭೀಮಭುಜ, ಅಂಬುಜನಾಭನ ನಾಭಿಮಂಡಲ ಅವನದು. ನಿರ್ಮಲವಾದ ಕೀರ್ತಿಯೆಂಬ ಹಾಲನ್ನು ಕುಡಿಯುವಂತೆ ದಶಶಿರನ ಬಲ್ಲುಸಿರನ್ನು ಈಂಟಲು ಐದು ಹೆಡೆಯ ಹಾವುಗಳು ಬೆಳೆದಿವೆಯೋ ಎಂಬಂತೆ ಉಗುರಿನ ಕಾಂತಿಯಿಂದ ಕೂಡಿದ ಬೆರಳುಗಳುಳ್ಳ ಅವನ ಬಾಹುಗಳು ಬಗೆಗೊಂಡವು. ಅವನ ದೇಹಕಾಂತಿಯು ಧರಿಸಿದ್ದ ಹಾರ ಮತ್ತು ಮರಕತದ ಹೊಳಪನ್ನು ಮೀರಿಸಿತು; ಅವನ ಗಂಡಗಾಡಿಯು ಹಿಮಕಾಂತಿಯನ್ನೂ ಮನ್ಮಥನ ಚೆಲುವನ್ನೂ ಗೆದ್ದಿತು; ಅವನ

ಗಂಭೀರಧ್ವನಿಯು ಸಿಂಹನಾದವನ್ನೂ ಮೋಡದ ಮೊಳಗನ್ನೂ ಹಿಂಜರಿಸಿತು. ಹೀಗೆ ಬಲ ಅಚ್ಯುತರಾದ ರಾಮಲಕ್ಷ್ಮಣರು ಕಂಗೊಳಿಸಿದರು. ರಣದಲ್ಲಿ ರಾವಣನನ್ನು ಯಮನಿಗೆ ಅರ್ಪಿಸಲು, ಬೆಳ್ಳಿಬೆಟ್ಟದ ತೆಂಕಣದ ಭೂಮಂಡಲವನ್ನು ಕಂಕಣದ ಹಾಗೆ ಧರಿಸಲು ಹುಟ್ಟಿದ ಇವರೇನು ಸಾಮಾನ್ಯರಲ್ಲ, ಅವರು ಅಪ್ರಾಕೃತವಿಕ್ರಮರು, ಮೂಲೋಕಗಳಲ್ಲಿ ಕೀರ್ತಿವೆತ್ತ ಪ್ರಖ್ಯಾತರು. ಹೀಗೆ ರಾಮಲಕ್ಷ್ಮಣಭರತಶತ್ರುಘ್ನರೆಂಬ ದಶರಥನ ನಾಲ್ವರು ಮಕ್ಕಳು ನಾಲ್ಕು ಕಲ್ಲುಕಂಬಗಳಂತೆ ರಘುಕುಲ ಸಮುದ್ಧರಣ ಸಮರ್ಥರಾಗಿ ಬೆಳೆದು ತಂದೆಯ ಮನಸ್ಸನ್ನು ತೃಪ್ತಿಗೊಳಿಸಿದರು.

* * * * *

# ೪. ಜನಕನನ್ನು ಹೊತ್ತು ತಂದ ಮಾಯಾಕುದುರೆ

ಈ ಮಧ್ಯೆ, ಮಿಥಿಲೆಯ ಮಹಾರಾಜ ಜನಕನ ಮನೋರಥ ವಲ್ಲಭೆಯು ಗರ್ಭ ಧರಿಸಿದಳು. ಅವಳ ಕದಪುಗಳು ಚಂದ್ರಕಾಂತದ ಕನ್ನಡಿಯಂತೆ ಬೆಳ್ಳಗಾದವು, ಹರಿನೀಲ ಶಲಾಕೆಯಂತೆ ಅವಳ ರೋಮರಾಜಿಯು ಕಪ್ಪಾದವು, ಮಧ್ಯವು ಎಳೆವೆರೆಯಂತೆ ನಯನಾ ನಂದವನ್ನುಂಟುಮಾಟುತ್ತಿತ್ತು. ವಿದೇಹಿಯು ಗರ್ಭಧರಿಸುವುದನ್ನೇ ಕಾಯುತ್ತ ಒಬ್ಬ ರಕ್ಕಸನು ಕಾಯುತ್ತಿದ್ದ. ಅದಕ್ಕೆ ಹಿನ್ನೆಲೆ ಇದು: ಚಂದ್ರಪುರವನ್ನಾಳುವವನು ಚಂದ್ರಧ್ವಜನೆಂಬ ರಾಜ, ಅವಳ ಅರಸಿ ಮನಸ್ವಿನಿ. ಅವರಿಬ್ಬರ ಮಗಳಾದ ಚಿತ್ತೋತ್ಸವೆಯೆಂಬ ಬಾಲಕಿ ಮತ್ತು ರಾಜಪುರೋಹಿತನ ಮಗ ಕಪಿಲನೆಂಬ ಹುಡುಗ ಜೊತೆಯಲ್ಲಿಯೇ ಆಡಿ ಓದಿ ಬೆಳೆದು ದೇಹವೆರಡಾದರೂ ಪ್ರಾಣ ಒಂದೇ ಎಂಬ ಹಾಗೆ ಜೋಡಿಹಕ್ಕಿಗಳಂತೆ ನಲಿಯುತ್ತಿದ್ದರು. ಅವರು ಪರಸ್ಪರರನ್ನು ಮೆಚ್ಚಿ, ಪ್ರೀತಿಯಿಂದ ಚುಂಬಿಸಲಾಗದೆ, ಬಯಸಿದಾಗ ಮನ್ಮಥಕ್ರೀಡೆಯಲ್ಲಿ ತೊಡಗಲಾರದೆ, ಅಂಜಿಕೆಯಿಂದ ಮನಸ್ಸು ಉದ್ವೇಗಗೊಳ್ಳಲು, ತಾಯ್ತಂದೆಯರ ಅಗಲಿಕೆಯನ್ನು ಲೆಕ್ಕಿಸದೆ ಮದನ ರಾಗೋನ್ಮಾದದಿಂದ ಆ ಮುಗ್ಧರು ತಮ್ಮೂರನ್ನು ಬಿಟ್ಟು ವಿದಗ್ಧಪುರವನ್ನು ಹೊಕ್ಕಿದ್ದರು. ಅಲ್ಲಿ ಸ್ಪರ್ಶ ಮತ್ತು ಇಂದ್ರಿಯಸುಖಗಳಲ್ಲಿ ಮೈಮರೆತು ಬ್ರಾಹ್ಮಣ ಬಾಲಕ ಹಾಗೂ ರಾಜಕುಮಾರನೂ ಮನೋಜಸುಖರಸವಿಲೀನಮಾನಸರಾಗಿದ್ದರು.

ಹೀಗಿರಲು ಒಂದು ದಿನ, ಆ ಊರಿನ ಅಧಿಪತಿಯಾದ ಪ್ರತಾಪಸಿಂಹನ ಮಗ ಕುಂಡಲಮಂಡಿತನು ರಾಜಮಾರ್ಗದಲ್ಲಿ ಬರುತ್ತಿದ್ದ: ಕಿರೀಟದ ಕಾಂತಿಯು ತಲೆಯ ಸುತ್ತ ಹರಡಿ ಕೊಡೆ ಹಿಡಿದಂತೆ ಕಾಣುತ್ತಿತ್ತು, ಹಿರಿದ ಕತ್ತಿಯ ಮೈಗಾವಲ ಭಟನು ಹಿಂಬಾಲಿಸುತ್ತಿರಲು, ನಿಧಾನಗತಿಯಲ್ಲಿ ಸಾಗುತ್ತಿದ್ದ ಕುದುರೆಯ ಮೇಲೆ ಕುಳಿತು ಮಣಿಕುಂಡಲಗಳನ್ನು ಧರಿಸಿ ವೈಭವದಿಂದ ಬರುತ್ತಿದ್ದ. ಒಂದೆಡೆ, ನಗುಮುಖವು ಶರತ್ಕಾಲದ ಚಂದ್ರನನ್ನೂ, ಕಟಾಕ್ಷವು ಬೆಳುದಿಂಗಳನ್ನೂ ಸೋಲಿಸುವಂತಿದ್ದ ಲತಾಸುಂದರಿಯಾದ ಚಿತ್ತೋತ್ಸವೆಯನ್ನು ನೋಡಿದಾಗ ಅವನ ಮೇಲೆ ಕಂತುವು ಹೂಗಣೆಗಳನ್ನು ಸುರಿಸಿದ. ಅವಳನ್ನು ಬಯಸಿ ದೂತಿಯನ್ನು ಕಳಿಸಿದ. ತಾನು ಮುಂಚೆ ಕಪಿಲನನ್ನು ಒಲಿದುದನ್ನೂ ಲೆಕ್ಕಿಸದೆ, ಅವನ ಜೊತೆ ಪ್ರೀತಿಗಾಗಿಯೇ ಓಡಿಬಂದುದನ್ನೂ ಬಗೆಯದೆ, ಕ್ರಮ ಗುಣಹಾನಿಗಳನ್ನೂ ಗಮನಿಸದೆ, ಬರಬಹುದಾದ ಅಪಕೀರ್ತಿಯನ್ನೂ ಗಮನಿಸದೆ, ಚಿತ್ತೋತ್ಸವೆಯು ದೂದವಿಯು ಹೇಳಿದ ರಾಜಕುಮಾರನ ಪ್ರೇಮಸಂದೇಶವನ್ನು ಒಪ್ಪಿ ಕೂಟದಾಸೆಯನ್ನು ಹೊಂದಿದಳು. ಹೆಣ್ಣಿಗೆ ವಂಚನೆಯೇ ನೆಚ್ಚಿನ ಕೈದುವೇ!

ಆ ಕುಮಾರನು ಅವಳನ್ನು ಕರೆಸಿ ತನ್ನ ಅರಸಿಯನ್ನಾಗಿಸಿಕೊಂಡ; ಕಪಿಲನನ್ನು ವಿರಹದಿಂದ ಹುಚ್ಚನನ್ನಾಗಿಸಿದ. ಇದರಿಂದ ಕಪಿಲನಿಗೆ ನಿರ್ವೇದವುಂಟಾಯಿತು; ಆರ್ಯಗುಪ್ತರೆಂಬ ಆಚಾರ್ಯರ ಸಮಕ್ಷದಲ್ಲಿ ದೀಕ್ಷೆ ಪಡೆದ. ಹೊರಗೆ ಮುನಿಯ ವೇಷವನ್ನು ಧರಿಸಿದ್ದರೂ ಕಪಿಲನ ಮನಸ್ಸಿನಲ್ಲಿ ಚಿತ್ತೋತ್ಸವೆಯೇ ತುಂಬಿದ್ದಳು. ಕಾಲ ಕಳೆದಂತೆ ತಪಸ್ಸಿನ ಕಾಠಿಣ್ಯವು ದೇಹವನ್ನು ಕೃಶಗೊಳಿಸಲು ಕಪಿಲಮುನಿಯು ಚಿನ್ನದ ಲೇಪವನ್ನು ಪಡೆದ ಕಬ್ಬಿಣದ ಬೊಂಬೆಯಂತಾದ. ಮನಸ್ಸನ್ನು ಹೆಣ್ಣಿಗೆ ಒಪ್ಪಿಸಿ, ಶರೀರವನ್ನು ತಪಸ್ಸಿಗೆ ವಹಿಸಿದ ಅವನು ಕಾಮಬಾಧೆಯಿಂದ ಬಳಲಿ, ಹೊರಗೊಂದು ಒಳಗೊಂದು ರೀತಿಯಿರುವ ಕುಪ್ಪುಸದಂತೆ ಇದ್ದ. ತಪಗೈದು ಜೀವನವನ್ನು ಸವೆಸಿದ ಬಳಿಕ ಅವನಿಗೆ ದೇವಗತಿ ಸಮನಿಸಿತು. ಆಗ ಅವನಿಗೆ ತನ್ನ ಹಳೆಯ ಹಗೆಯಾದ ಕುಂಡಲಮಂಡಿತನ ನೆನಪಾಯಿತು, ಅವನ ಮೇಲೆ ಅತೀವ ಮುಳಿಸುಂಟಾಯಿತು. ಆ ಕುಂಡಲಮಂಡಿತನು ಈ ಜನ್ಮದಲ್ಲಿ ಮತ್ತೊಂದು ಹೆಣ್ಣುಕೂಸಿನೊಡನೆ ವಿದೇಹಿಯ ಗರ್ಭದಲ್ಲಿ ಬೆಳೆಯುತ್ತಿದ್ದುದು ಕಪಿಲಮುನಿಗೆ ಅವಧಿಜ್ಞಾನದಿಂದ ಗೋಚರವಾಯಿತು.

ಹೆಣ್ಣುಕೂಸಿಗೂ ಗರ್ಭಿಣಿಗೂ ಬಾಧೆಯಾಗದಂತೆ ಗರ್ಭದಲ್ಲಿದ್ದ ಗಂಡುಮಗುವನ್ನು ಅಪಹರಿಸುವ ಆಲೋಚನೆಯಿಂದ ಕಪಿಲನು ವಿದೇಹಿಗಾಗಿ ಕಾಯಿತ್ತಿದ್ದ. ಪೂರ್ವದಿಕ್ಕಿನಲ್ಲಿ ಚಂದ್ರಸೂರ್ಯರು ಹುಟ್ಟುವಂತೆ, ವಿದೇಹಿಗೆ ಒಂದು ಗಂಡು ಒಂದು ಹೆಣ್ಣು ಮಗುವಿರುವ ಅವಳಿಮಕ್ಕಳು ಹುಟ್ಟಿದರು. ಹಿಂದಿನ ಹುಟ್ಟಿನ ಹಗೆಯಿಂದಾಗಿ ಕಪಿಲನು ಗಂಡುಮಗುವನ್ನು ಸ್ವರ್ಭಾನುವು ಬಾಲಸೂರ್ಯನನ್ನು ಕದ್ದೊಯ್ಯುವಂತೆ ಅಪಹರಿಸಿದ. ಗಗನಮಾರ್ಗದಲ್ಲಿ ಹೋಗುತ್ತಿರಲು, ಮಗುವನ್ನು ಬಂಡೆಯ ಮೇಲೆ ಎತ್ತಿ ಒಗೆಯುವೆನೋ, ಕಡಲಲ್ಲಿ ಮುಳುಗಿಸುವೆನೋ, ಕರುಳನ್ನೇನಾದರೂ ಕಿತ್ತಿಬಿಡುವೆನೋ, ಕತ್ತನ್ನು ಕತ್ತಿಯನ್ನು ಕುಯ್ದುಬಿಡುವೆನೋ, ಕಾಡುಗಿಚ್ಚಿನಲ್ಲಿ ಬಿಸುಡುವೆನೋ, ಚರ್ಮವನ್ನು ಸುಲಿದುಬಿಡಿವೆನೋ, ಹೇಗೆ ಮಾಡಿದರೆ ತನ್ನ ಅಳಲು ತೀರುವುದು ಎಂದು ಅವನು ಆಲೋಚಿಸಿ ಮಗುವಿನ ಕಡೆ ನುಂಗುವಂತೆ ನೋಡಿದ. ಹಿಂದಿನ ಜನ್ಮದ ಅಣುವ್ರತ ಸಾಮರ್ಥ್ಯ ಮತ್ತು ಮಹಾವ್ರತ ಸಂಸ್ಕಾರಗಳ ಕಾರಣದಿಂದ ಮಗುವನ್ನು ನೋಡಿದಾಕ್ಷಣವೇ, ಹಾವು ಗರುಡಮಚ್ಚೆಯ ಪಚ್ಚೆಯ ಮಣಿಯನ್ನು ನೋಡಿದಾಗ ಮಣಿಯುವ ತೆರದಲ್ಲಿ ಅವನ ಮನಸ್ಸಿನ ದಾರುಣಭಾವವು ಉಪಶಮನಗೊಂಡಿತು. ದೇಹದಲ್ಲಿ ಸಿಕ್ಕಿಕೊಂಡ ಬಾಣವು ಹೇಗೆ ಅಯಸ್ಕಾಂತದ ಸನ್ನಿಧಿಯಲ್ಲಿ ಹೊರಬರುವುದೋ ಹಾಗೆ ಮಗುವನ್ನು ನೋಡಿದಾಗ ನಕ್ತಂಚರನ ಮುನಿಸು ಇಳಿದುಹೋಯಿತು; ತಕ್ಷಣವೇ ಪಾಪಪ್ರಜ್ಞೆ ಮೂಡಿತು. ತನ್ನ ಕರ್ಣಕುಂಡಲಗಳನ್ನು ಬಾಲಕನ ಕಿವಿಗಳಿಗೆ ತೊಡಿಸಿ ಪರ್ಣಲಘುವಿದ್ಯೆಯಿಂದ ಮಗುವನ್ನು ಈಡಾಡಿದ.

ಮಗುವಿನ ದೇಹಕಾಂತಿ ಹಾಗೂ ಕರ್ಣಕುಂಡಲಗಳ ದೀಪ್ತಿಯು ಗಗನವನ್ನೆಲ್ಲ ಪಕ್ಕನೆ ಬೆಳಗುವಂತೆ, ಪರ್ಣಲಘುವಿದ್ಯೆಯು ಕಾರಣದಿಂದ ಹಗುರಾಗಿ ಬಂದು ಸುರಕುಮಾರನು ಅಲ್ಲಿಯೇ ಹುಟ್ಟಿದವನ ಹಾಗೆ ಖೇಚರೇಂದ್ರನ ಮೃದು ತಲ್ಪದಲ್ಲಿ ಬಿದ್ದು ನಿರ್ಭರ ಹರ್ಷಭಾರವನ್ನು ಹೊಂದಿದ. ಆ ಖೇಚರೇಂದ್ರನ ಹೆಸರು ಇಂದುಗತಿ, ರಥನೂಪುರಚಕ್ರವಾಳಪುರದ ಅಧಿಪತಿ. ಅವನ ಹೆಂಡತಿ ಪುಷ್ಪವತಿ. ಅವಳು

ಫಲವತಿಯಾದಂತೆ ಇಂದುಗತಿಯು ತಲ್ಪದಲ್ಲಿದ್ದ ಮಗುವನ್ನು ಅವಳಿಗೆ ಕೊಟ್ಟ. ಕರ್ಣಕುಂಡಲದ ಕಾಂತಿಯಿಂದ ಕೂಡಿದ್ದರಿಂದ ಮಗುವಿಗೆ ಪ್ರಭಾಮಂಡಲ ಎಂದು ಹೆಸರಿಟ್ಟರು.

ಇತ್ತ, ಆಗ ತಾನೇ ಹುಟ್ಟಿದ ತನ್ನ ಶಿಶುವನ್ನು ಕರುಣೆಯಿಲ್ಲದೆ ಯಮದೂತನಂತಹ ಅದಾವನೋ ಒಬ್ಬನು ಎತ್ತಿಕೊಂಡು ಹೋಗಿಬಿಟ್ಟನಲ್ಲ, ಏನು ಮಾಡಲಿ ಎಂದು ವಿದೇಹಿಯು ನವೋತ್ಪಲವು ಕದುಷ್ಣದ ನೀರನ್ನು ಸುರಿಸುವಂತೆ ಕಣ್ಣೀರು ಕರೆದಳು. ಬಡವನಿಗೆ ಚಿಂತಾಮಣಿ ಸಿಕ್ಕಿದಂತೆ ತನಗೆ ಹುಟ್ಟಿದ ಗಂಡುಕೂಸನ್ನೇ ರಕ್ಕಸನು ಕರೆದೊಯ್ದನಲ್ಲ ಎಂದು ಆಕೆ ಶೋಕಗೈದಳು. ತನ್ನನ್ನು ರಕ್ಷಿಸಿಕೊಳ್ಳಲಾರದ, ಯಾರೂ ರಕ್ಷಕರಿಲ್ಲದ ಮಗುವನ್ನು ರಾಕ್ಷಸನು ಕದ್ದನಲ್ಲ ಎಂದು ಅವಳು ಆತಂಕಪಟ್ಟಳು. ಅಂತಃಪುರದ ಸ್ತ್ರೀಯರೆಲ್ಲ ಕಡುದುಃಖಗೊಂಡರು, ಜನಕನೂ ಅತಿ ವಿಹ್ವಲತೆಗೆ ಒಳಗಾದ.

ಆಗ ಜೋಯಿಸರು, ಶುಭಮುಹೂರ್ತದಲ್ಲಿ ಹುಟ್ಟಿದ ಮಗುವಿಗೆ ಯಾವ ಅಪಾಯವೂ ಆಗದು, ತಾಯಿಯು ಅಗಣ್ಯ ಪುಣ್ಯವತಿಯೆಂದು ಸಮಾಧಾನಗೊಳಿಸಿದಾಗ ವಿದೇಹಿಗೆ ಸಂತಸವಾಯಿತು. ಅವಳ ಗಮನ ಈಗ ಹೆಣ್ಣು ಮಗುವಿನ ಕಡೆ ಹೊರಳಿತು; ನೀಲೋತ್ಪಲದಲ್ಲಿ ಮಧುಬಿಂದುಗಳು ಹುಟ್ಟುವಂತೆ ಆಗ ಅವಳ ಕಂಗಳಲ್ಲಿ ಆನಂದಬಾಷ್ಪಗಳು ಉಕ್ಕಿದವು. ಆನಂತರ ರಾಜಭವನವನ್ನು ಮಣಿತೋರಣ ಉತ್ಸವಧ್ವಜಗಳು ಮಂದಸಮೀರದಿಂದ ಮೆರೆದಾಡಿದವು. ವಾತಾವರಣ ಪರಿಮಳದ್ರವ್ಯಗಳಿಂದ ಘಮ್ಮೆಂದಿತು. ಬದ್ದವಣಗಳ ಬಾಜಣೆ, ಗಣಿಕೆಯರ ಕುಣಿತ, ಹೂಗಳಲ್ಲಿ ಹೊರಳಾಡುವ ದುಂಬಿಗಳು – ಇವುಗಳಿಂದ ಆ ಊರಿನಲ್ಲಿ ಹರ್ಷರಸದ ಹೊಳೆ ಹರಿಯಿತು. ಗಾಯಕಿಯರ ಮಧುರ ಮಂಗಳ ಗೇಯ, ಗಣಿಕಾ ನೂಪುರ ಕಿಂಕಿಣಿರವ, ಬಂಡುಂಡ ದುಂಬಿಗಳ ಝೇಂಕಾರ ಇವುಗಳು ಪೌರಜನರ ಮೇಲೆ ಕರ್ಣರಸಾಯನವನ್ನು ಸಿಂಚನ ಮಾಡಿದವು.

ರಾಜದಂಪತಿಗಳು ಜಾತಕರ್ಮಗಳನ್ನು ಮಾಡಿ, ಹತ್ತನೆಯ ದಿನದಂದು ಆ ಸರ್ವಲಕ್ಷಣಗಳಿಂದ ಕೂಡಿದ ಮಗುವಿಗೆ ಸೀತೆಯೆಂದು ಹೆಸರನ್ನಿಟ್ಟರು. ಆ ಮಗುವು ಜನಾಕರ್ಷಣೆಯ ಸೊಡರಿನಂತೆಯೂ, ಕಾಮಕಲ್ಪಲತೆಯಂತೆಯೂ ಬೆಳೆದು ನೃತ್ಯ ಮುಂತಾದ ಎಲ್ಲ ಕಲೆಗಳಲ್ಲಿ ಪರಿಣತಿಯನ್ನು ಪಡೆದಳು. ಶಶಿಲೇಖೆಯಂತೆ, ಕರ್ಪೂರಶಲಾಕೆಯಂತೆ ನೋಡಿದವರ ಕಣ್ಣುಗಳಿಗೆ ಹಬ್ಬವನ್ನು ಮಾಡುತ್ತ ದುಂಬಿಯಂತಹ ಕೇಶದ ಸೀತೆಯು ಮದನಬಾಣದಂತೆ ಕಣ್ಗೆಸೆದಳು. ಮದನನ ಆಜ್ಞಾರೂಪದಂತೆ, ಕಬ್ಬಿನ ಬಿಲ್ಲಿನವನು ಒಲ್ಲದೆ ಬಿಡುವ ಸಮ್ಮೋಹನಾಸ್ತ್ರದಂತೆ ಅವಳ ಬೆಡಗು ಜಯಡಿಂಡಿಮವನ್ನು ಬಾರಿಸಿತು. ಕಾಮಕಲ್ಪಲತೆಯಂತಹ ತನ್ನ ಪರಿಪೂರ್ಣ ಕಲಾವಿಲಾಸದಿಂದ ಚಂದ್ರಕಲೆಯನ್ನೂ ಮೀರಿಸಿ, ಹಂಸನಡಿಗೆಯ ಜಾನಕಿಯು ಕಣ್ಣುಗಳಿಗೆ ಆನಂದವನ್ನುಂಟುಮಾಡುವ ಚೆಲುವಿನಿಂದ ಕೂಡಿ ತಾಯಿಯಲ್ಲಿ ಮೋಹರಸವನ್ನು ಉಕ್ಕಿಸಿದಳು. ಅವಳು ಬೆಳೆದಂತೆ, ತಂದೆಯು ಅವಳ ಸೊಬಗನ್ನು ನೋಡಿ ಇವಳಿಗೆ ತಕ್ಕ ವರನು ಯಾರೋ ಎಂದು ಆತಂಕಗೊಂಡ. ಶೈಶವವನ್ನು ಮೀರಿ ನವಯೌವನವಿಭವವು ಸೀತೆಯನ್ನು ಆವರಿಸಿತು. ಅವಳ ತುಟಿಗಳು ಚಿಗುರಿನಂತಹ ಮುಗುಳ್ನಗೆಯನ್ನೂ, ಕಡೆಗಣ್ಣು ಹೂಬಾಣಗಳನ್ನೂ, ಕುಡುಹುಬ್ಬು ಮನ್ಮಥನ ಬಿಲ್ಲನ್ನೂ ಹೋಲುತ್ತಿದ್ದವು.

ಹೀಗೆ ಜಾನಕಿಯು ತಾಯ್ತಂದೆಯರನ್ನು ಸಂತಸಪಡಿಸುತ್ತಿರಲು ಒಂದು ದಿನ, ಜನಕನು ರಾಜಸಭೆಯಲ್ಲಿ ಕುಳಿತಿದ್ದ. ಒಬ್ಬ ಚರನು ಭೀತನಾಗಿ ಆತುರದಿಂದ ಸಭೆಗೆ ಬಂದು ರಾಜನಿಗೆ ಮೈಯಿಕ್ಕಿ, ತನ್ನ ಬಟ್ಟೆಯ ಸೆರಗನ್ನು ಬಾಯಿಗೆ ಅಡ್ಡ ಹಿಡಿದು, "ಹರಿವಂಶೋತ್ತಂಸ ಲೋಕಾದ್ಭುತವೂ ಅಸಮಯ ಉತ್ಪಾತವೂ ಆಗುವಂತೆ ಅಸಂಖ್ಯಾತ ಕಳ್ಳಕಿರಾತರು ಭೂಮಂಡಲವನ್ನೆಲ್ಲ ಸೂರೆ ಮಾಡಿಬಿಟ್ಟರು. ಅವರನ್ನು ಅಡಗಿಸಲು ನಮ್ಮ ನಾಡ ಪಡೆಗೆ ಸಾಧ್ಯವಿಲ್ಲವಾಗಿದೆ. ನನಗೆ ತಿಳಿದ ಮಟ್ಟಿಗೆ ಅದಕ್ಕೆ ಕಾರಣವನ್ನು ಹೇಳುತ್ತೇನೆ: ಮೇರುಗಿರಿಯ ಉತ್ತರಕ್ಕೂ, ವಿಜಯಾರ್ಧಪರ್ವತದ ದಕ್ಷಿಣಕ್ಕೂ ಅರ್ಧಪರವೆಂಬ ಹೆಸರಿನ ಒಂದು ಮ್ಲೇಚ್ಛದೇಶವಿದೆ. ಅಲ್ಲಿ ಮಯೂರಮಾಲೆ ಎಂಬ ಶಬರಶಿಬಿರವನ್ನಾಳುವ ತರಂಗತಮ ಎನ್ನುವ ಶಬರನಾಯಕನಿದ್ದಾನೆ. ಅವನು ತನ್ನ ಹಿಡಿತದಲ್ಲಿನ ಬೇಡಪಡೆಯನ್ನೆಲ್ಲ ಒಗ್ಗೂಡಿಸಿಕೊಂಡು ಕಪೋತ, ಕಾಂಭೋಜ, ಕಣ ಮುಂತಾದ ದೇಶಗಳನ್ನೆಲ್ಲ ನಾಶ ಮಾಡಿ, ಮಾರಿಯ ಮೂರಿಯ ಹಾಗೆ ಮಕ್ಕಳು ಮುದುಕರು ಹೆಂಗಸರು ಎನ್ನದೆ ಎಲ್ಲರನ್ನೂ ಕೊಲ್ಲುತ್ತ, ಅವರ ಆಸ್ತಿಯನ್ನು ಕಿತ್ತುಕೊಂಡು, ಜಾತಿಯನ್ನು ಕೆಡಿಸಿ ಗರ್ವದಿಂದ ಸೊಕ್ಕಿದ್ದಾನೆ" ಎಂದು ಬಿನ್ನವಿಸಿದ.

ಚರವಚನವನ್ನು ಕೇಳಿ ತುಂಬುರಕೊಳ್ಳಿಯಂತೆ ಅಂಬರಕ್ಕೆ ಸಿಡಿದು ಹರಿವಂಶೋತ್ತಂಸನು ಕೃತಾಂತನಂತೆ ಹೀಗೆ ನಿರ್ಧಾರದಿಂದ ನುಡಿದ: "ಒಂದೆ ಕೊಡಲಿಯಿಂದ ಅಡವಿಯನ್ನು ಕಡಿದುಹಾಕುವಂತೆ ನನ್ನ ಒಂದೆ ಭುಜಾಸಿಯಿಂದ ಶಬರಸಂಕುಲವನ್ನು ಸಂಹರಿಸಿ ಪಿಶಾಚಕೋಟಿಗೆ ಆನಂದವನ್ನುಂಟುಮಾಡುತ್ತೇನೆ. ಇಲ್ಲದಿದ್ದರೆ ದುರ್ಯಶೋದುಂದುಭಿನಾದವು ಜಗತ್ತನ್ನೆಲ್ಲ ಆವರಿಸದಿರುವುದೇ? ಯುದ್ಧಗೈಯದೆ, ಬೇಡಿದ್ದನ್ನು ನೀಡದೆ, ಕುಲೀನತೆಗೆ ಅಂಟಿಕೊಂಡು ಭೂಮಿಗೆ ಹೊರೆಯಾಗಿರುವವನು ಪಾರ್ಥಿವ ಶಬ್ದಕ್ಕೆ ಎರವಾಗುವುದಿಲ್ಲವೇ?" ಆಗ ಅವನ ಮಂತ್ರಿಸದಸ್ಸು, ಅವನ ಸಹಾಯಕನಾದ ದಶರಥ ಜನನಾಥನೊಡನೆ ಲುಬ್ಧಕವಾಹಿನಿಯನ್ನು ಮರ್ದಿಸಲು ಸಲಹೆಯಿತ್ತಿತು. ಅದರಂತೆ ಜನಕನು ದಶರಥ ಮಹಾರಾಜನಿಗೆ ಲೇಖವಾಹಕರನ್ನು ಅಟ್ಟಿ, ಸಮರಸನ್ನದ್ಧನಾದ.

ಸಂದೇಶವನ್ನು ಓದಿ ದಶರಥನು ಯುದ್ಧಭೇರಿಯನ್ನು ಹೊಯ್ಸಿದ; ಅದು ಭೈರವರವದಂತೆ ಗಗನತಳವನ್ನೆಲ್ಲ ಆವರಿಸಿತು. ವಿಷಯವನ್ನು ತಿಳಿದ ಕದನ ಮದೋದ್ಧತರಾದ ಬಲಾಚ್ಯುತರು ತರುಣ ಕೇಸರಿಗಳಂತೆ ತಂದೆಯ ಸಭಾಭವನವನ್ನು ಹೊಕ್ಕರು. ಅವರ ಆಭರಣಗಳ ಕಾಂತಿಯು ಆಗಸವನ್ನು ವ್ಯಾಪಿಸಿತು; ಅವರ ದೇಹದೀಪ್ತಿ ಕಾರಿರುಳ ಬೆಳುದಿಂಗಳಿನಂತೆ ಕಂಗೊಳಿಸಿತು. ಬಂದವರೇ ತಂದೆಯ ಪಾದಾರವಿಂದಗಳಿಗೆರಗಿದರು; ಅವನ ಎಡಬಲಗಳ ಆಸನಗಳಲ್ಲಿ ಕುಳಿತರು. ಆನಂತರ, ಅರ್ಧಚಂದ್ರನಂತೆ ವಿಲಾಸಭರಿತವಾದ ಹಣೆಯಲ್ಲಿ ಕರಸರಸಿಜಕುಟ್ಮಲವು ಶೋಭಿಸಲು, ದಂತಕಾಂತಿಯು ಮಾರ್ಪೊಳೆಯಲು ರಾಮಚಂದ್ರನು ವಿನಯದಿಂದ ಹೀಗೆಂದ: "ತಾವು ಅಟವಿಕರ ಜೊತೆಯಲ್ಲಿ ಯುದ್ಧಗೈವುದೆಂದರೆ ಆನೆ ಇರುವೆಯೊಡನೆ ಹೋರಾಡಿದಂತೆ; ದಯವಿಟ್ಟು ಹೀಗೆ ಮಾಡದಿರಿ; ಆ ಕರ್ತವ್ಯವನ್ನು ನಮಗೆ ವಹಿಸಿಕೊಡಿರಿ; ನಮ್ಮನ್ನು ಕಿರಿಯರೆಂದು ಕಡೆಗಣಿಸದಿರಿ. ಕಿರಿದಾದರೂ ಕಿಡಿಯು ಕಾಡನ್ನೇ ಸುಡುವುದಿಲ್ಲವೇ?

ಬಾಲಸೂರ್ಯನಾದರೂ ದಟ್ಟ ಕತ್ತಲೆಯನ್ನೂ ನಾಶಗೊಳಿಸುವುದಿಲ್ಲವೇ? ಹರಿ ಬಾಲಕನಾದರೂ ಗಂಧಸಿಂಧುಘಟಾವಳಿಯನ್ನು ಮರ್ದಿಸನೇ? ಕಿರಿಯನಾದರೂ ವಿಕ್ರಮಶಾಲಿ ಲಕ್ಷ್ಮಣನು ಶತ್ರುಗಳನ್ನು ಯಮನೆಡೆಗೆ ಅಟ್ಟಲಾರನೇ? ಅಶೋಕವೃಕ್ಷವು ಹೂಬಿಟ್ಟ ಹಾಗೆ ಕಿರಾತಸೇನೆಯು ಗಾಸಿಗೊಳ್ಳುವಂತೆ ಅವನು ತನ್ನ ಶರಾಘಾತದ ಸವಿ ತೋರಿಸಬಲ್ಲ. ಎಂಟನೆಯ ವಾಸುದೇವನಾದ ಅವನಿಗೆ ಇದಿರಾರು? ಬೇಡರನ್ನು ತತ್ತರದರಿದು ಅವರಿನ್ನೆಂದೂ ನಾಡಿನೊಳಕ್ಕೆ ಹೊಗದಂತೆ ನಾನು ನಿಯಮಿಸಿ ಬರುತ್ತೇನೆ. ನಮಗೆ ಅಪ್ಪಣೆ ಕೊಡಿರಿ."

ಅಂತೆಯೇ ತಂದೆಯಿಂದ ಅಪ್ಪಣೆ ಪಡೆದು ಅಪರಿಮಿತವಾದ ಚತುರಂಗಸೇನೆಯು ತಮಗೆ ನೆರವಾಗದೆಂದು ಬಲಾಚ್ಯುತರು ಕೋದಂಡಪಾಣಿಗಳಾಗಿ ಹೊರಟರು. ಮೂಲೋಕಗಳಲ್ಲಿಯೂ ಇವರ ಬಾಹುಬಲವನ್ನು ಎದುರಿಸುವವರಾರೂ ಇಲ್ಲ ಎಂಬಂತೆ ಪಯಣಿಸಿ ವಿದೇಹಕ್ಕೆ ಬಂದರು. ಅವರಿಗೆ ಉಚಿತ ಗೌರವವನ್ನು ಸಲ್ಲಿಸಿದ ಜನಕನು, ನೆಲವು ಬೆಸಲೆಯಾಯಿತೋ ಎಂಬಂತೆ ತುಂಬಿಕೊಂಡಿದ್ದ ಬೇಡಪಡೆಯನ್ನು ಎದುರಿಸಲು ನಾನೀಗ ವಿಕಟದಂತಸಮೂಹವನ್ನು ಪಡೆದ ಉಗ್ರವಾದ ಆನೆಯಂತೆ ಸಮರ್ಥನಾದೆ ಎಂಬ ಆತ್ಮವಿಶ್ವಾಸವನ್ನು ಪಡೆದ. ಆನಂತರ ರಾಘವನು ಅಮೋಘ ಶಸ್ತ್ರಾಸ್ತ್ರಸಮೇತನಾಗಿ ರಥವನ್ನೇರಿದರೆ, ಲಕ್ಷ್ಮಣನು ಕಾಲ್ನಾಗಿಪಿನಲ್ಲಿ ನಡೆದು ಬಂದ; ಜನಕ ಮತ್ತವನ ತಮ್ಮ ಕನಕ ಇಬ್ಬರೂ ಆನೆಗಳನ್ನೇರಿ ಮುಂಚೂಣಿಯಲಿ ಸಾಗಿದರು.

ಆ ಸೈನ್ಯದ ಭರಕ್ಕೆ ಭೂಮಿಯನ್ನು ಹೊತ್ತ ಆದಿಶೇಷ ಏದುಸಿರುಬಿಟ್ಟ, ಅದರ ರಭಸದಿಂದ ಧರಾವಲಯವು ಕಿತ್ತುಕೊಂಡು ಆಗಸಕ್ಕೆ ಹಾರಿಹೋಗುವುದೇನೋ ಎಂಬಂತೆ ಸೇನೆಯ ನಡಿಗೆಯಿಂದ ಎದ್ದ ಧೂಳಿಯು ಪ್ರಲಯಕಾಲದ ಬೆಂಕಿಯಿಂದೆದ್ದ ಹೊಗೆಯಂತೆ ರವಿಮಂಡಲವನ್ನೇ ಆವರಿಸಿತು. ನೆಲದಿಂದಲೇ ಉದ್ಭವವಾದಂತೆ ಬರುವ ಬೇಡರ ಪಡೆಯು ವ್ಯೋಮದಿಂದಿಳಿವ ಧೂಮಕೇತುಗಳಂತೆಯೂ, ನಡೆದಾಡುವ ನಂಜಿನ ಅಡವಿಯಂತೆಯೂ, ಕರ್ಬುಲಿಯ ಹಿಂಡಿನಂತೆಯೂ, ಸಿಂಹದ ಜಂಗುಳಿಯಂತೆಯೂ, ಯಮನ ಕೋಣಗಳ ಪಡೆಯಂತೆಯೂ, ಬರಸಿಡಿಲ ಬಳಗದಂತೆಯೂ, ಕಾಲಾಯಸ ಕಾಳಪುರುಷ ಪರಿಷಜ್ಜನದಂತೆಯೂ, ಕಾಳರಕ್ಕಸನ ಸಂತಾನದಂತೆಯೂ, ಕುಲಪರ್ವತಗಳ ಕುಲದಂತೆಯೂ, ಅರ್ಧಪ್ರಹಾರವರ್ಧನದಂತೆಯೂ, ಯಮಘಂಟಾಸಂಘಾತದಂತೆಯೂ, ಮಾರಿಯ ಮೂರಿಯಂತೆಯೂ, ಕ್ರೂರಗ್ರಹ ಪರಿವೃತದಂತೆಯೂ ಅದ್ಭುತವಾಗಿ ಕಾಣಿಸಿತು. ಆನೆಗಳು ರೆಕ್ಕೆಯುಳ್ಳ ಬೆಟ್ಟಗಳಂತೆ ನಡೆದವು, ಕುದುರೆಗಳ ಪಡೆಯು ತೆರೆಪರಂಪರೆಯಂತೆ ಮೇಲೇರಿ ಬಂದವು, ಬೇಡಪಡೆಯೆಂಬ ಸಮುದ್ರದಲ್ಲಿ ಮೊಸಳೆಗಳಂತೆ ರಥಕೋಟಿಗಳು ಭಯಂಕರವಾಗಿ ಬಂದವು; ಜೊತೆಗೆ ತೋಳ ನರಿ ಕಾಗೆಗಳ ಲಾಂಛನಗಳುಳ್ಳ ಧ್ವಜಸಮೂಹ ಗಗನಮಂಡಲವನ್ನು ಆವರಿಸಿತು. ಭೇರಿಗಳ ನಿನಾದ ದಿಕ್ಪಾಲಕರನ್ನೇ ಅಂಜಿಸಿತು, ಕಹಳೆಯ ದನಿ ದಿಗಿಭಗಳನ್ನು ಬೆದರಿಸಿತು, ಆಗಸದೆಲ್ಲೆಡೆ ಬಿಲ್ಲಿನ ಠೇಂಕಾರವು ತುಂಬಿಬಿಟ್ಟಿತು. ಇನ್ನು ಕೆಲವು ದಿನಗಳಾದರೂ ಕದನ ಮುಂದುವರೆಯುವುದೆಂದು ಯಮದೂತರಂತಿದ್ದ ಕೆಲವು ಮಂದಿ ಕಿರಾತರು ಬಿಲ್ಲಿಗೆ ಹೆದೆ ಬಿಗಿಯುತ್ತಿದ್ದರು; ಆನೆಗಳ ಕೊರಳಿನ ಗಂಟೆಗಳ ಸದ್ದು, ಕುದುರೆಗಳ ಗೊರಸಿನ ಧ್ವನಿ, ರಥಗಳು ಓಡುವ ಚೀತ್ಕಾರ, ಕಿಂಕರರ ಬಿಲ್ಲಿನ ಠೇಂಕಾರ ಇವುಗಳಿಂದ ಕೂಡಿ ವನಚರಸೇನೆಯು ದುಮುಗುಡುತ್ತಿತ್ತು.

ಇತ್ತ ರಾಮಚಂದ್ರನ ಚತುರಂಗಸೇನೆಯು ಬೇಡಪಡೆಯ ಚತುರಂಗಸೇನೆಯೊಡನೆ ಹೋರಾಡಲು ತೊಡಗಿತು. ಹಸಿತಲೆಗಳು ಹಾರುತ್ತಿರಲು, ಬಿಸಿನೆತ್ತರ ಸುಳಿಯು ಚಿಮ್ಮಲು, ಬಾಣಜಾಲದಿಂದ ಆಕಾಶದಲ್ಲಿ ಚಪ್ಪರಗಟ್ಟಲು, ಆನೆಗಳ ದಂತಗಳ ಚೂರುಗಳು ಎಂಟು ದಿಕ್ಕುಗಳಿಗೂ ಹಾರಲು, ಕತ್ತಿಗಳು ತಾಕಿ ಕಿಡಿಗಳು ಹೊಮ್ಮುತ್ತಿರಲು ಎರಡೂ ಸೇನೆಗಳ ಮಧ್ಯೆ ಘೋರ ಕದನವೇರ್ಪಟ್ಟಿತು. ಯಮನ ಅಂತರಂಗ ಸುಭಟನಂತಿದ್ದ ತಂರಂಗತಮನು ಸಿಡಿಲಿನ ತಾಪ ಮತ್ತು ವಿಷಗಾಳಿಯ ವೇಗಗಳಿಗೆ ಮೇರೆಯಿಲ್ಲ ಎಂಬಂತೆ ಕಾದಿ ಕನಕನನ್ನು ಸೆರೆಹಿಡಿದ, ಜನಕನ ಸೇನೆಯನ್ನು ಸುತ್ತುವರಿದ, ಲಕ್ಷ್ಮಣನ ತೇರಿನ ಅಚ್ಚು ಮುರಿದ. ಅಷ್ಟೇ ಅಲ್ಲದೆ, ಅವನು ಬಿಟ್ಟ ಬಾಣಗಳನ್ನು ಮುರಿದು, ಅವನ ಕುದುರೆ ಮತ್ತು ಸಾರಥಿಯನ್ನು ಬೀಳಿಸಿ ಲಕ್ಷ್ಮಣನಲ್ಲಿ ಕಾದುವ ಅವನನ್ನು ನೋಡಿ ರಘುಜನು ಕೃತಾಂತನಂತೆ ತನ್ನ ಧನುರ್ದಂಡವನ್ನು ಕೈಗೆತ್ತಿಕೊಂಡ. ಅದರ ಠೇಂಕಾರ ಭಯಂಕರವಾಯಿತು, ರಾಮನ ರಥದ ಭಾರದಿಂದ ನೆಲ ಅದುರಿತು, ಮನಸ್ಸು ಗಾಳಿಗಳ ವೇಗದಿಂದ ಮುನ್ನುಗ್ಗಿ ಅಂಬುಗಳ ಮಳೆಯನ್ನೇ ಸುರಿಸಿದ. ಇದರಿಂದ ಕಿರಾತಪಡೆಯು ಬೇಗನೆ ಗತಜೀವಿತವಾಯಿತು. ಜನಕಸೇನೆಯು ಜಯಘೋಷ ಮಾಡಲು, ಕಿರಾತಸೇನೆ ಸಡಿಲಗೊಳ್ಳಲು, ದಶರಥರಾಮನು ಮಾರ್ಪಡೆಯ ಮೇಲೆ ಬಾಣಪ್ರಯೋಗ ಮಾಡಲು ಶಬರನಾಯಕರು ಪಲಾಯನಗೈದರು. ಲಕ್ಷ್ಮಣನೂ ಲಯಸಮಯದ ಗ್ರಹದಂತೆ ವೀರಾವೇಶದಿಂದ ಕಾದಿದ.

ಆಯುಧಗಳು, ಸೈನ್ಯ ಅಥವಾ ಇತರ ಸೇನೆಯ ಸಹಾಯವನ್ನು ನಿರೀಕ್ಷಿಸದೆ ತನ್ನ ತೋಳ್ಬಲದಿಂದಲೇ ಎದುರು ಸೇನೆಯನ್ನು ಸೋಲಿಸಿದ ವಾಸುದೇವನಾದ ಲಕ್ಷ್ಮಣನಿಗೆ ಎದುರುಂಟೆ? ರಾಮಲಕ್ಷ್ಮಣರ ಕಡಂಗಿ ಕಾದುವ ರೀತಿಗೆ ಹೆದರಿ ಪಲಾಯನ ಮಾಡುವ ಬೇಡಪಡೆಯನ್ನು ಹಿಂಬಾಲಿಸಿ, ಸೂರ್ಯನಿಗೆ ಹೆದರಿ ಓಡಿಹೋಗುವ ತಮದಂತೆ ತರಂಗತಮನು ಓಡಲು, ಆನೆಗಳಿಗೆ ಕೂಟಪಾಕಳ ರೋಗ ಬಂದಂತೆ, ಕುದುರೆಗೆ ಕರ್ಣದೂಷಿಕೆ ಎಂಬ ರೋಗವುಂಟಾಗುವಂತೆ, ರಥಗಳಿಗೆ ಸಿಡಿಲು ಬಡಿದಂತೆ, ಭಟಮಂಡಲಕ್ಕೆ ಕೆಂಡದ ಮಳೆ ಸುರಿದಂತೆ ಹಲಾಯುಧನು ಬಿರುಸಾಗಿ ಬಾಣದ ಮಳೆ ಕರೆದ. ಮೊಗ್ಗಿನ ಮೇಲೆ ಮಂಜನ್ನು ಸುರಿದಂತೆ, ನಂಜನ್ನು ಸವಿದಂತೆ, ಬೆಂಕಿ ಹರಡಿದಂತೆ, ಗಾಳಿಗೆದುರಾದ ಮೋಡಗಳಂತೆ ರಾಮಬಾಣಗಳಿಗೆ ಎದುರಾದ ವಿರೋಧಿ ಸಾಧನಗಳು ನಿಷ್ಫಲಗೊಂಡವು. ಓಡಲೆಳಸಿದ ತರಂಗತಮನ ಜಂಘಾಬಲವೇ ಉಡುಗಿತು, ಓಡಲು ಬಯಸಿದರೆ ತನ್ನ ತೊಡೆಗಳು ತನ್ನ ಮೇಲೆ ಸೇಡು ತೀರಿಸಿಕೊಳ್ಳುವುದೆಂದು ಅವನು ಮನಸ್ಸನ್ನೂ ಆಯುಧವನ್ನೂ ಬಿಸುಟು ಭಯದಿಂದ ನಿಶ್ಚಲನಾಗಿ ನಿಂತುಬಿಟ್ಟ. ತನ್ನ ಕಲಿತನ ತೀರಿತೆಂದು ಸೂತಕಸ್ನಾನ ಮಾಡುವಂತೆ ಕಣ್ಣೀರುಗರೆಯುತ್ತ, ತನ್ನ ಕೀರ್ತಿಯು ಕೆಳಗಿಳಿಯುವಂತೆಯೂ ನೆಲವು ಹಳಿಯುವಂತೆಯೂ ತೇರಿನಿಂದಿಳಿದ. ಚಂದ್ರಮಂಡಲದ ಮುಂದೆ ತಮವು ಸೋತಿತು ಎಂಬಂತೆ ಭಯಪಟ್ಟು, ಕುವಲಯವು ನಗುವಂತೆ ತನ್ನ ಕರಕಮಲಗಳನ್ನು ಮುಗಿದು, ರಾಮಚಂದ್ರನ ಮುಂದೆ ತರಂಗತಮನು ದೆಸೆಗೆಟ್ಟು ಶರಣೆಂದು ಬಿದ್ದ; ಆಗ ಆಗಸದ ಮೋಡಗಳು ಭೋರ್ಗರೆದವು; ವಿಜಯಪತಾಕೆಯು ಅಂಬರವನ್ನು ಮುಟ್ಟಿ ಹಾರಾಡಿ ದಿಗಂಗನೆಯರ ಮುಖಾಂಬುಜಗಳನ್ನು ಮುಟ್ಟಿತು; ಅಮರಸಂದೋಹ ಹೂಮಳೆ ಕರೆಯಿತು.

ಆಗ ತರಂಗತಮನಿಗೆ ರಾಮಚಂದ್ರನು "ಅಂಜದಿರು" ಎಂದು ಅಭಯವನ್ನಿತ್ತ. ಆನಂತರ ಅವನಿಗೆ ಮುತ್ತು ಹೊನ್ನುಗಳ ಬೆಲೆಬಾಳುವ ಉಡುಗೆತೊಡುಗೆಗಳನ್ನಿತ್ತು, ಅರಣ್ಯದಲ್ಲಿದ್ದುಗೊಂಡು ನಾಡಗಡಿಯನ್ನು ಮರೆತೂ ದಾಟದ ಆಜ್ಞೆಯೆಂಬ ಮಣಿಯನ್ನು ತಲೆಯಲ್ಲಿ ತೊಡಿಸಿ, ತನ್ನ ಕೀರ್ತಿಚಂದನವನ್ನು ದಿಕ್ಕುಗಳ ಗೋಡೆಗಳಿಗೆ ಬಳಿದ. ಪ್ರಬಲನಾಗಿದ್ದ ಶಬರನು ಅಬಲನಾಗಿ "ಬದುಕಿದೆಯ ಬಡಜೀವವೆ!" ಎಂದು ರಾಮನಿಂದ ಬೀಳ್ಕೊಂಡ. ಅಂದ ಮೇಲೆ ರಾಮಬಾಣವನ್ನು ಕದನದಲ್ಲಿ ಮೀರಬಲ್ಲವರಾರು? ಆಮೇಲೆ ಅನೇಕ ಬಗೆಯ ಮಂಗಳರವಗಳೊಡನೆ, ಜನಕನು ರಾಮಚಂದ್ರನನ್ನು ಗೌರವಿಸಿದ, "ನಿನ್ನ ಚಾಪಟಂಕಾರನಿನಾದವು ಶತ್ರುಗಳಿಗೆ ಮಾರಣಮಂತ್ರದಂತೆಯೂ, ಭೂಮಿಗೆ ಶಾಂತಿಮಂತ್ರದಂತೆಯೂ, ನಮಗೆ ಮೃತ್ಯುವಂಚನೋಚ್ಚಾರಣಮಂತ್ರನಾದದಂತೆಯೂ ಕೇಳಿಸಿತು!" ಎಂದು ಉದ್ಗಾರವೆತ್ತಿದ. "ಇದಕ್ಕೆ ನಾನೇನು ಪ್ರತ್ಯುಪಕಾರ ಮಾಡಲಿ? ಹಿಂದಿನಿಂದ ಬಂದ ನಮ್ಮ ಸಂಬಂಧವು ಅಧಿಕವಾಗುವಂತೆ ಮೇನಕೆಗಿಂತ ಮಿಗಿಲಾಗಿ ಮದನವಶ್ಯಮಣಿದೀಪಿಕೆಯಂತಿರುವ ನನ್ನ ಮಗಳನ್ನೇ ನಿನಗೆ ಧಾರೆಯೆರೆದುಕೊಡುತ್ತೇನೆ" ಎಂದು ಹಾಗೇ ಮಾಡಿದ. ರಾಮನ ಜೊತೆಗೆ ಲಕ್ಷ್ಮಣನನ್ನೂ ಶ್ರೇಷ್ಠ ವಸ್ತ್ರಭೂಷಣಗಳಿಂದ ಗೌರವಿಸಿ ಅವರನ್ನು ಬೀಳ್ಕೊಟ್ಟ.

ಕೆಲವು ದಿನಗಳ ಪ್ರಯಾಣದ ಬಳಿಕ ಅವರು ಅಯೋಧ್ಯೆಯನ್ನು ಸೇರಿ ಸುಖವಾಗಿದ್ದರು. ಜನಕನು ತನ್ನ ಮಗಳನ್ನು ರಾಮನಿಗಿತ್ತು ಮದುವೆಮಾಡುವನೆಂಬ ವಾರ್ತೆಯನ್ನು ಕೇಳಿದ ನಾರದಮುನಿಗೆ ಸೀತೆಯನ್ನು ಕಾಣುವ ಕೌತುಕವುಂಟಾಯಿತು. ಹೆಣ್ಣಿನ ಚೆಲುವನ್ನು ನೋಡುವುದು ಯತಿಗೆ ಸಮಂಜಸವೇ? ಮೌಂಜಿ ಕೌಪೀನ ಕಮಂಡಲು ಬೋಳುಮಂಡೆ ಮಣಿಸರ ಜಪದಂಡ ಇವುಗಳನ್ನು ನೋಡಲೇನು ಸುಖಕರವೇ? ನೋಡಿದರೆ ಹೆಣ್ಣುಗಳು ಅವರಿಗೆ ಹೇಸಿಕೊಳ್ಳುವುದಿಲ್ಲವೇ? ಆದರೂ ನಾರದನು ಮರುಳುಗೊಂಡು ಆಗಸಕ್ಕೆ ನೆಗೆದ; ಗಗನವೀಧಿಯಿಂದ ಮಿಥಿಲೆಗೆ ಬಂದ. ಕನ್ನೆವಾಡದ ಬಾಗಿಲ ಬಳಿ ನಿಂತು ಸೀತೆಯನ್ನು ಕಂಡ: ವೈಡೂರ್ಯಮಯ ರತ್ನವೇದಿಕೆಯಲ್ಲಿ ಬಿರಿಮುಗುಳನ್ನು ಮುಡಿದ ತಾವರೆಗೊಳದ ಹಂಸಿನಿಯಂತೆ ಸೀತೆ ಕಂಗೊಳಿಸಿದಳು. ಆಕಸ್ಮಿಕವಾಗಿ ಈ ಮುನಿಯ ವಿಕೃತಾಕಾರವನ್ನು ಕಂಡು ಅವಳು ಬೆಚ್ಚಿದ ಹರಿಣಿಯಂತೆ ಓಡಿದಳು. ಹಿತಾಹಿತವಿವೇಕರಹಿತನಾದ ಮುನಿಯು ಭ್ರಾಮಕದತ್ತ ಆಕರ್ಷಣೆಗೊಳ್ಳುವ ಪಚ್ಚೆಗರ್ಬುನದಂತೆ ಅವಳನ್ನೇ ಹಿಂಬಾಲಿಸಿ ಓಡಿದ. ಸೂರ್ಯನನ್ನು ನೋಡುವ ಮಿಡಿತೆಯಂತೆ ಮುನಿಯು ನೇತ್ರೇಂದ್ರಿಯಲೋಭದಿಂದ ಪಾಪಪೂರಿತನಾದ.

ಆಗ ಆ ಕಲಕಲರವವನ್ನು ಕೇಳಿ ಭಟರು ಅಟ್ಟಾಡಿಕೊಂಡು ಬರಲು ನಡುಗುತ್ತ ಮುನಿಯು ಕುಡುಮಿಂಚಿನ ಗೊಂಚಲಂತೆ ಆಗಸಕ್ಕೆ ನೆಗೆದ. ತನ್ನನ್ನು ಇನ್ನೂ ಅಟ್ಟಿಕೊಂಡು ಬರುತ್ತಿರುವರೇನೋ ಎಂಬ ಅಂಜಿಕೆಯಿಂದ ನಾರದನು ಹಿಂದೆಹಿಂದೆ ನೋಡುತ್ತ ಗಾಳಿಗೆ ರೆಕ್ಕೆ ಮೂಡಿದಂತೆ ವೇಗವಾಗಿ ಸಾಗಿ, ಆಗಸದಷ್ಟು ನೀಳವಾದದೂ ಚಂದ್ರಕಾಂತಿಯಿಂದ ಕಂಗೊಳಿಸುವುದೂ ವಿದ್ಯಾಧರಿಯರ ಕಣ್ಣೋಟದಿಂದ ವಿಲಾಸಪೂರಿತವಾದುದೂ ಆದ ಕೈಲಾಸವನ್ನು ಸೇರಿದ. ಅಲ್ಲಿನ ಒಂದು ಬಳ್ಳಿವನೆಯ ಚಂದ್ರಕಾಂತಶಿಲೆಯ ಮೇಲೆ ಕುಳಿತು ವಿಶ್ರಮಿಸಿಕೊಂಡ. ಅವನ ಮನಸ್ಸಿನಲ್ಲಿ ವಿಷಾದಖೇದಗಳು ತುಂಬಿಕೊಂಡವು.

ತನಗೆ ಇಂತಹ ನೋವನ್ನುಂಟುಮಾಡಿದ ಆ ಕನ್ಯೆಗೆ ಅಪಾರ ನೋವನ್ನುಂಟುಮಾಡಲು ನಾರದನು ಪರಪೀಡಾ ದುಶ್ಚರಿತಕ್ಕೆ ಮನದಂದ. ತಕ್ಷಣವೇ, ವಿಚಿತ್ರ ಚಿತ್ರ ಕಲಾವಿಶಾರದನಾದ ಅವನು ಸೀತೆಯ ಚೆಲು ರೂಪವನ್ನೂ ಬೆಡಗನ್ನೂ ಬಟ್ಟೆಯ ಮೇಲೆ ಚಿತ್ರವಾಗಿಸಿದ. ಅದರೊಡನೆ ಹೊರಟು ವಿದ್ಯಾಧರ ರಾಜಧಾನಿಯಾದ ರಥನೂಪುರಚಕ್ರವಾಳಪುರದ ಹೊರವಲಯದ ವಿನೋದವನದಲ್ಲಿನ ಮಣಿಭವನವನ್ನು ನೇರವಾಗಿ ಹೊಕ್ಕ.

ಇತ್ತ, ಕೆಲಮಂದಿ ಖೇಚರರಾಜರಿಂದ ಪರಿವೃತನಾಗಿ, ಚಲನನ್ಯಾಸವಿಲಾಸವನ್ನು ಮೆರೆಯುತ್ತ, ತನ್ನ ದೇಹಚ್ಛವಿ ಮತ್ತು ಆಭರಣಗಳ ಕಾಂತಿ ಒಗ್ಗೂಡಲು ತನ್ನ ಚೆಲುವಿನಿಂದ ಮನ್ಮಥನಿಗೇ ಅಲಗಿಕ್ಕುವವನ ಹಾಗೆ ಮಂದಗತಿಯಿಂದ ಪ್ರಭಾಮಂಡಲನು ನಡೆದು ಬಂದ. ಬರುವಾಗ ಮನೆಯಲ್ಲಿದ್ದ ಚಿತ್ರಪಟವನ್ನು ನೋಡಿದ. ಚಿತ್ರದ ವರ್ಣಕ್ರಮದಿಂದಲೂ, ಅಲ್ಲಿನ ಮುಖದ ಚೆಲುವಿನ ಶೋಭೆಯಿಂದಲೂ ಅವನ ಕಣ್ಣಿಗೆ ಅದು ಅಮೃತವೆನಿಸಿತು; ಚಿತ್ರದ ಹೆಣ್ಣನ್ನು ಅವನ ಮನಸ್ಸು ಬಯಕೆಯಿಂದ ಎವೆಯಿಕ್ಕದೆ ನೋಡುವಂತೆ ಮಾಡಿತು. ಕಂಡದ್ದರಿಂದ ಉಂಟಾದ ಅನುರಾಗವನ್ನು ಜನ್ಮಾಂತರದ ಅಳ್ಕರು ಹೊಸತುಗೊಳಿಸಿತೆಂಬಂತೆ ಅದನ್ನು ನೋಡುತ್ತಿರಲು, ನಿರ್ದಯಿಯಾದ ಕಾಮನ ಹೂಬಾಣವನ್ನು ಹೊಡೆಯಲು ಪ್ರಭಾಮಂಡಲನು ಕಣ್ಣುಗಳನ್ನು ಮುಚ್ಚಿಕೊಂಡು ಮೂರ್ಛೆಗೆ ಸಂದ. ಮಂತ್ರಶಕ್ತಿಯಿಂದ ಉರಗಲೇಖೆಯು ಮೂರ್ಛೆಯನ್ನುಂಟುಮಾಡುವಂತೆ ಜನ್ಮಾಂತರದ ಪರಿಚಯದಿಂದಾಗಿ ಚಿತ್ರದ ಹೆಣ್ಣು ಅವನಲ್ಲಿ ಮೋಹಮೂರ್ಛೆಯನ್ನುಂಟುಮಾಡಿದಳು.

ಈ ವಿಷಯವನ್ನು ತಿಳಿದ ಅವನ ತಂದೆ ಇಂದುಗತಿಯು ಆತುರದಿಂದ ಬಂದು ಶೈತ್ಯೋಪಚಾರಗಳನ್ನು ಮಾಡಿದಾಗ ಮಗನ ನಯನಕುವಲಯಗಳು ತೆರೆದವು; ಆನಂತರ ಮನ್ಮಥನ ಬಾಣಗಳು ನಾಟಿದ್ದ ಅವನ ಹೃದಯವು ಮೂರ್ಛೆಯಿಂದ ಎಚ್ಚೆತ್ತಿತು. ಆ ಚಿತ್ರಪಟವನ್ನು ಇಲ್ಲಿಗೆ ತಂದವರಾರೆಂಬ ಚಿಂತೆ ವಿಯಚ್ಚರರಾಜನನ್ನು ಆವರಿಸಿತು. ಆಗ ನಾರದನು ಅಲ್ಲಿಗೆ ಬಂದು ಖಚರಪತಿಗೆ ಹೀಗೆಂದ: "ಮಿಥಿಲೆಯ ರಾಜ ಜನಕ ಮತ್ತು ಅವನ ವನಿತೆ ವಿದೇಹಿ ಇವರ ಮಗಳೇ ಚಂದ್ರಕಳೆಯಂತಹ ಕನ್ಯಾರತ್ನವಾದ ಸೀತೆ. ಅವಳನ್ನು ಚೆಲುವಿನಲ್ಲಿ ಹೋಲುವ ಕನ್ನಿಕೆಯರು ಸುರ ವಿದ್ಯಾಧರರಲ್ಲಿಯೂ ಇಲ್ಲ. ಈ ರಾಜನೇ ಅವಳಿಗೆ ತಕ್ಕ ವರನೆಂದು ಬಗೆದು ನಾನು ಅದನ್ನು ತಿಳಿಸಲು ಆ ಕನ್ಯೆಯ ರೂಪನ್ನು ಬರೆದು ತಂದೆ; ನಿಮಗೆ ಭದ್ರ ಶುಭ ಮಂಗಳಗಳುಂಟಾಗಲಿ" ಎಂದು ಹರಸಿ ಹೋದ.

ಯಾರೊಂದಿಗೂ ಮಾತನ್ನಾಡದೆ, ಉಮ್ಮಳದಿಂದ ಆ ಹೆಣ್ಣಿನ ಚಿತ್ರವನ್ನೇ ತಾನೂ ಚಿತ್ರವತ್ತಾದವನಂತೆ ನೋಡುತ್ತ, ಆ ಚಿತ್ರವು ಅಚ್ಚೊತ್ತಿದಂತೆ ಪ್ರಭಾಮಂಡಲನ ಮನಸ್ಸನ್ನೆಲ್ಲ ಮೋಹಾಂಧಕಾರವು ಆವರಿಸಿತು. ಮೈಯ್ಯಲ್ಲೆಲ್ಲ ಬೆವರು ಹೊಮ್ಮಿತು; ಲಜ್ಜೆಯಿಂದ ಆ ಖೇಚರಾಗ್ರಣಿಯು ತಲೆತಗ್ಗಿಸಿ ಮೌನವಹಿಸಿದ. ಹೀಗೆ ದಿಙ್ಮೂಢನಾದ ಮಗನ ಮುಖವನ್ನು ನೋಡಿದ ಇಂದುಗತಿಯು, "ಮಗನೇ, ಯಾವಳೋ ಒಬ್ಬ ಮಾನವ ಕನ್ಯೆಯನ್ನು ಬಯಸಿ ಚಿಂತಿಸುತ್ತ ಈ ಪರಿ ಮಂಕಾಗುತ್ತಾರೆಯೇ? ನಿಮ್ಮ ಮಗಳನ್ನು ನಿನ್ನಂತಹ ಮಗನಿಗೆ ತಂದುಕೊಳ್ಳುವೆನೆಂದು ನಾನು ಹೇಳಿ ಕಳಿಸಿದರೆ ಜನಕನು ವಿವಾಹವಿಧಿಯಿಂದ ಜಾನಕಿಯನ್ನು ನಿನಗೆ ನೀಡಲಾರನೇ?" ಎಂದು ಸಮಾಧಾನದ ಮಾತುಗಳನ್ನಾಡಿದ.

ಹೇಗೆ ಮುಂದುವರೆಯಬೇಕೆಂದು ಇಂದುಗತಿಯು ಆಲೋಚಿಸುತ್ತಿರುವಾಗ ಒಬ್ಬ ವೀರನು ಹೀಗೆಂದು ಹೇಳಿದ: "ಇದು ಮಂತ್ರಾಲೋಚನೆ ಮಾಡಬೇಕಾದಂತಹ ದೊಡ್ಡ ವಿಷಯವಲ್ಲ; ಮಿಥಿಲೆ ಮತ್ತು ಜನಕರನ್ನು ಬೆದರಿಸಿ ಜಾನಕಿಯನ್ನು ಕರೆತಂದು ರಾಜಕುಮಾರರ ವಿವಾಹವನ್ನು ನೆರವೇರಿಸಿರಿ." ಹೆಣ್ಣನ್ನು ಕೊಡಲೊಪ್ಪಿದರೆ ಮದುವೆಯಲ್ಲಿ ಕರೆತರುವುದು ಸರಿ, ಬಲವಂತವಾಗಿ ಒಯ್ದು ತಂದರೆ ಅದು ಕಳ್ಳತನವಾಗುತ್ತದೆ; ಖೇಚರವಂಶವು ಅಂತಹ ಅಶ್ರೇಯಸ್ಕರವಾದುದನ್ನು ಆಚರಿಸಬಾರದು; ಸಮಾನರಲ್ಲಿ ಕೊಳುಕೊಡೆಯು ಸಹಜ, ಆದರೆ ಮಾನವರು ಖೇಚರಸಮಾನರಲ್ಲ, ಹೀಗಾಗಿ ಸುತಮೋಹದ ಕಾರಣ ಅಶ್ರೇಯವಾದರೂ ಹಾಗೆ ಮಾಡುವುದು ಸರಿ ಎಂದು ಇಂದುಗತಿ ಅಭಿಪ್ರಾಯಪಟ್ಟ. ಆಗ ಕುಲಮಹತ್ತರನಾದ ಚಂದ್ರವರ್ಧನನು, "ಭೂಚರರು ನೀಚರು, ನೀವು ಬೇಡಿ ಕಳಿಸಿದರೆ ಕನ್ಯೆಯನ್ನು ನೀಡುವುದಿಲ್ಲ; ಆದ್ದರಿಂದ ಭಯಗೊಳಿಸಿದರೆ ಜನಕನು ಮಗಳನ್ನು ಕೊಡುತ್ತಾನೆ" ಎಂದು ಸಲಹೆಯಿತ್ತ. ಆ ಕೆಲಸವನ್ನು ತಾನು ನಿರ್ವಹಿಸುವೆನೆಂದು ಚಪಲವೇಗನೆಂಬ ವಿದ್ಯಾಧರನು ಒಪ್ಪಿಕೊಂಡು ಹೊರಟ.

ಖೇಚರ ದೀಪ್ತಿಯು ಶತ್ರುವಿನ ಯಶೋವಿತಾನವನ್ನು ಸುಡಲು ಹೊರಟಂತೆ ಚಪಲವೇಗನು ಗಗನತಳಕ್ಕೆ ನೆಗೆದ. ಉತ್ತರ ದಿಕ್ಕಿನಿಂದ ದಕ್ಷಿಣ ದಿಕ್ಕಿನೆಡೆಗೆ ಸಾಗಿ ಬಂದ ಅವನು ಮಿಥಿಲೆಯ ಬಳಿ ಅಂಬರತಳದಿಂದ ಕೆಳಕ್ಕಿಳಿದ. ಊರ ಹೊರವಲಯದ ಉದ್ಯಾನದ ಸರಸ್ಸಿನ ಬಳಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡ. ಜನಕನಿಗೆ ಕುದುರೆಗಳೆಂದರೆ ಇಷ್ಟವೆಂಬ ವಿಷಯ ಅವನಿಗೆ ಅಲ್ಲಿ ತಿಳಿಯಿತು. ಇಂತಹವನು ಕಾಡುಕುದುರೆಯನ್ನು ಕಂಡರೆ ಸವಾರಿ ಮಾಡದೆ ಬಿಡ; ಅವನು ಕುಳಿತರೆ ಸಾಕು, ತಾನು ಅವನನ್ನು ತನ್ನ ಊರಿಗೆ ಕರೆದೊಯ್ಯುತ್ತೇನೆ ಎಂದುಕೊಂಡು ರೂಪಪರಾವರ್ತನ ವಿದ್ಯೆಯಿಂದ ಒಂದು ಕುದುರೆಯ ಆಕೃತಿಯನ್ನು ತಳೆದ. ಆ ಕೃತಕಾಶ್ವವು ಎಲ್ಲ ಕಡೆ ಓಡಾಡಿ ಉಪವನವನ್ನೆಲ್ಲ ಹಾಳುಗೆಡವಿ ಜನರೆಲ್ಲ ಹಾಹಾಕಾರ ಮಾಡುವಂತೆ ಗೈದಿತು. ತಿರ್ರನೆ ತಿರುಗಿ, ಹಿಂದೆ ಮುಂದೆ ನೆಗೆದು, ಬಿಸಿಲುಗುದುರೆಯ ಹಾಗೆ ಬಿರುಸಾಗಿ ಕೋಪಗೊಂಡ ಯಮನಂತೆ ಆ ಕುದುರೆಯು ಹರಿದಾಡಿತು. ಕಿವಿಗಳನ್ನು ಮುದುರಿಕೊಂಡು, ಕತ್ತನ್ನು ನಸುಬಾಗಿಸಿ ಮೈಯ್ಯನ್ನೆಲ್ಲ ಒದರುತ್ತ, ಮೂಗಿಂದ ಘುರುಘುರು ಎಂಬ ಸದ್ದನ್ನು ಮಾಡುತ್ತ ಆ ಕುದುರೆಯ ಮಾರಿಯಂತೆ ತಿರುಗಾಡಿತು. ತನ್ನ ಗೊರಸುಗಳಿಂದ ಪ್ರಾಣಿಗಳನ್ನು ತುಳಿದು, ಹಲ್ಲಿನಿಂದ ಮನುಷ್ಯರನ್ನು ಕಚ್ಚಿ ಕ್ಷಣಾರ್ಧದಲ್ಲಿ ಯಮಪುರಿಗಟ್ಟಿತು. ಹೊಡೆದರೆ ಕಲ್ಲುಗಳು ಅದಕ್ಕೆ ತಾಕುತ್ತಿರಲಿಲ್ಲ, ಬಡಿದರೆ ತಗುಲುತ್ತಿರಲಿಲ್ಲ, ತಿವಿದರೆ ಚುಚ್ಚಿಕೊಳ್ಳುತ್ತಿರಲಿಲ್ಲ. ಹೀಗೆ ಆ ಅದ್ಭುತತುರಗವು ಸಿಂಹದಂತೆ ಮಿಥಿಲೆಯಲ್ಲಿ ದಾಳಿ ನಡೆಸಿತು.

ಆ ಕೃತಕ ಕುದುರೆಯ ಆಟೋಪದಿಂದಾಗಿ ಕರೆ, ಓ, ಅತ್ತ ಇತ್ತ, ತೊಲಗು, ಹೋಗು, ಬಾ, ಬಿದ್ದ, ಓಓಓ, ಉಗಿದೆ, ಉಡಿದೆ, ಏನು ಮಾಡಲಿ ಎಂದು ಉಚ್ಚ ನೀಚ, ಪುರುಷ ಸ್ತ್ರೀ, ಬಾಲಕ ವೃದ್ಧ, ಮುದುಕ ಯುವಕ ಎನ್ನದೆ ಜನರಲ್ಲಿ ಆತಂಕ ಶಂಕೆ ಮುಂತಾದವು ಅತಿಶಯವಾಗಿ ಉಂಟಾದವು. ಕೆಲವರು ಬಾಲಕರನ್ನು ಮತ್ತೆ ಕೆಲವರು ಮುದುಕರನ್ನು, ಕುರುಡರನ್ನು ಕೆಲವರು, ಬಾಲಕಿಯರನ್ನು ಕೆಲವರು ಹಿಡಿದುಕೊಂಡು ಎಚ್ಚರಿಕೆಯಿಂದ ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡಿರಲು, ಆ ಕಪಟ ಕುದುರೆಯಿಂದಾಗಿ ಊರೆಲ್ಲ

ಅಲ್ಲೋಲಕಲ್ಲೋಲಗೊಂಡು ಅಕಾಲಮೃತ್ಯುಭಯದಿಂದ ತಲ್ಲಣಿಸಿಹೋಯಿತು. ಆ ಸಮಯದಲ್ಲಿ, ಈ ಕಳಕಳನಾದವನ್ನು ಕೇಳಿ ಜನಕನು ವಿಷಯವೇನೆಂದು ತಿಳಿದ; ಕುದುರೆಸವಾರರಂತೆ ಕಡಿವಾಣಗಳನ್ನು ಹಿಡಿದು ಆತುರದಿಂದ ಅವನ ಹಿಂದೆಯೇ ರಾಜಮಂಡಲಿ ನೆರೆಯಿತು. ಅವರೆಲ್ಲರ ನೋಟವು ಕುದುರೆಯಲ್ಲಿ ಸೇರಿಹೋಯಿತು. ಇದು ತುಡುಗು ಕುದುರೆಯಲ್ಲ, ಸಕಲ ಗುಣಸಹಿತವಾದದ್ದು ಎಂದು ಜನಕನಿಗೆ ಅದನ್ನು ನೋಡಿದಾಗ ಅನ್ನಿಸಿತು. ಸವಾರರು ಆ ಕುಟಿಲಾಶ್ವಕ್ಕೆ ಕಡಿವಾಣವನ್ನು ಹಾಕಿದರು. ಹಲ್ಲಣವನ್ನು ಬಿಗಿಸಿಕೊಂಡು ಕಡಿವಾಣವನ್ನು ಬಾಯಲ್ಲಿ ಸಿಕ್ಕಿಸಿಕೊಂಡು ಆ ಖೇಚರನು ಒಟ್ಟಜೆಗೆಟ್ಟು ಚಾಟಿಯ ಏಟಿನಿಂದ ನೋವನ್ನನುಭವಿಸಿದ. ಮೋಸಮಾಡಲು ಬಯಸಿದ ಖಳನಿಗೆ ಬಂಧನ ವೇದನಗಳಾಗದಿರುವುದೇ! ಹೀಗೆ ಹಿಡಿದ ಕುದುರೆಯನ್ನು ಲಾಯದಲ್ಲಿ ಕಟ್ಟಿಹಾಕಿದರು.

ಅದೇ ಸಮಯದಲ್ಲಿ, ಕಸ್ತೂರಿ ಆನೆದಂತ ಹೆಬ್ಬಿದಿರು ತೋರ ಮುತ್ತುಗಳು ನವಿಲಗರಿಗಳನ್ನು ಹಿಡಿದ ಬೇಡನೊಬ್ಬನು ರಾಜಭವನಕ್ಕೆ ಬಂದ. ತಾನು ತಂದಿದ್ದ ಉಡುಗೊರೆಗಳನ್ನು ರಾಜನಿಗೆ ಸಮರ್ಪಿಸಿ ನಮಸ್ಕರಿಸಿ, "ದೇವ, ನಮ್ಮ ಬನದಲ್ಲಿ ಒಂದು ಒಂಟಿ ಸಲಗವಿದೆ" ಎಂದು ಬಿನ್ನವಿಸಿದ. ಜನಕನಿಗೆ ಆ ಆನೆಯನ್ನು ನೋಡುವ ಕುತೂಹಲವುಂಟಾಯಿತು. ರಾಜನು ಗಜಪ್ರಿಯನಾಗಿರುವುದೇನು ಆಶ್ಚರ್ಯಕರವಲ್ಲವಲ್ಲ! ಆನಂತರ ಅಲ್ಪ ಪರಿಜನ ಆಪ್ತಜನ ಹರಿಕಾರರೊಡನೆ ಆ ಕಾಡಾನೆಯನ್ನು ಹಿಡಿಯಲು ಜನಕನು ಅರಣ್ಯಕ್ಕೆ ಬಂದ. ಅಲ್ಲಿ ಬೇಲದ ಗಿಡಗಳ ನಡುವೆ ಮೋಡಗಳನ್ನು ತಾಕುವಂತಹ ದೇಹ, ತೀಕ್ಷ್ಣವಾದ ದಿಟ್ಟಿ, ಕಾಳಿಂಗನಾಗದಂತಹ ಸೊಂಡಿಲು, ಮದಜಲದ ತುಂತುರನ್ನು ಚಿಮುಕಿಸುವ ಮದವಟ್ಟೆ, ಚಂದ್ರನಿಗಿಂತ ಬೆಳ್ಳಗಿದ್ದ ದಂತಗಳಿಂದ ಕೂಡಿದ್ದ ಆ ಮದ್ದಾನೆಯನ್ನು ಕಂಡು ಜನಕನಿಗೆ ಹರ್ಷವುಂಟಾಯಿತು. ಅದರ ಬಳಿಗೆ ಹೋಗಲೆಂದು ಹಲ್ಲಣ ಹಾಕಿದ್ದ ಕೃತಕ ಕುದುರೆಯನ್ನು ತರಿಸಿ, ಉಂಗುಟವನ್ನು ಅಂಕವಣಿ(ರಿಕಾಪಿ)ಗೂ ಕೈಬೆರಳುಗಳನ್ನು ಹೆಗಲ ಸಂದಿಗೂ ಸೇರಿಸಿ ಅದರ ಮೇಲೇರಿದ. ಕಡಿವಾಣವನ್ನು ಹಿಡಿದು, ಅದರ ಹೊಟ್ಟೆಗೆ ತಿವಿದು ಓಡಿಸಿದ: ಆಗ ಆ ಕುದುರೆಯು ಬಿಸಿಲಗುದುರೆಯಂತೆಯೂ ಉಚ್ಚೈಶ್ರವಸ್ಸಿನಂತೆಯೂ ಆಗಸಕ್ಕೆ ನೆಗೆದು ಸೂರ್ಯನ ಕುದುರೆಯಂತೆ ಹಾರಿ ಹೋಯಿತು. ಹೀಗೆ ಕುದುರೆಯ ರೂಪಿನಿಂದ ಜನಕನನ್ನು ಜನ್ಮಾಂತರದ ಹಗೆಯನ್ನು ಹೊತ್ತೊಯ್ಯುವಂತೆ ಹಾರಿದಾಗ ಪುರಜನರಿಗೆ ಭಯವಾಯಿತು. ನೈಮಿತ್ತಿಕರನ್ನು ಅರಸನ ಕ್ಷೇಮದ ಬಗ್ಗೆ ವಿಚಾರಿಸಿ ತಿಳಿದುಕೊಂಡು ಸಮಾಧಾನಗೊಂಡರು.

ಬೆಟ್ಟ ಅಡವಿ ನಾಡು ಕಾಡು ಊರುಗಳನ್ನು ದಾಟಿಕೊಂಡು ಹಾರುವ ಕುದುರೆಯು ರಾಜನಿಗೆ ವಿಸ್ಮಯವನ್ನುಂಟುಮಾಡಿತು. ಹಾಗೆ ಅದು ರಥನೂಪುರಚಕ್ರವಾಳಪುರಕ್ಕೆ ಬಂದು ಉಪವನದ ಬೀದಿಯಲ್ಲಿ ಸಾಗಿತು. ಕುದುರೆಯ ವೇಗ ಕಡಿಮೆಯಾದಾಗ ಜನಕನು ಅದರ ಮೇಲಿನಿಂದ ನೆಲಕ್ಕೆ ದುಮುಕಿದ. ಅವನ ಕೈಯ ಕತ್ತಿಯು ಕಮಲದ ಕೋಶದಲ್ಲಿಯೂ ಮೊರೆಯದ ದುಂಬಿಗಳ ಮಾಲೆಯಂತೆ ಕಾಣಿಸಿತು. ವನದಲ್ಲಿರುವ ವಸಂತನಂತೆ ಜನಕನು ಕಾಯಿಬಿಟ್ಟ ಒಂದು ಮಾವಿನ ಮರದಡಿಯಲ್ಲಿ ಪಥಶ್ರಮವನ್ನು ಹೋಗಲಾಡಿಸಿಕೊಳ್ಳಲು ಕುಳಿತ. ಅವನ ಮನಸ್ಸಿಗೆ ಸಂಸಾರದ ವಿಷಮ ಸ್ಥಿತಿಯ ಬಗ್ಗೆ ವಿಸ್ಮಯವೆನಿಸಿತು: ವಿಧಿ

ವಕ್ರವಾದರೆ ಅಮೃತವು ವಿಷವಾಗುತ್ತದೆ, ವಿಷವು ಅಮೃತವಾಗುತ್ತದೆ ಎಂಬಂತೆ ತನ್ನನ್ನು ಈ ಹಯವು ಇಲ್ಲಿಗೆ ಕರೆತಂದುದರ ಬಗ್ಗೆ ಅವನಿಗೆ ಅಚ್ಚರಿಯುಂಟಾಯಿತು. ಕುದುರೆಯು ತನ್ನನ್ನು ಇಲ್ಲಿಗೆ ಹಾರಿಸಿಕೊಂಡು ಬಂದಾಗ ತನ್ನ ಆನೆಕುದುರೆಸೇನೆಗಳಾವುವೂ ನೆರವಿಗೆ ಬರಲು ಸಾಧ್ಯವಾಗದುದರ ಬಗ್ಗೆ ಅವನಲ್ಲಿ ವಿಷಾದವೆನಿಸಿತು. ತನಗೆ ಉಂಟಾಗುವ ಅನಿಷ್ಟ, ಅನಿಷ್ಟವಿಯೋಗಗಳನ್ನು ತಾನೇ ಎದುರಿಸಬೇಕಲ್ಲದೆ, ಮಿಕ್ಕವರು ತನಗೆ ನೆರವಾಗಲಾರರು ಎಂಬ ಅರಿವು ಅವನಿಗುಂಟಾಯಿತು. ಶುಭ ಅಶುಭಗಳ ಫಲಗಳನ್ನು ಸಮಚಿತ್ತದಿಂದ ಸ್ವೀಕರಿಸಬೇಕೇ ವಿನಾ ತಕ್ಕನಾದವನು ಹರ್ಷವಿಷಾದಗಳಿಗೆ ಒಳಗಾಗಬಾರದು ಎಂದು ಬಗೆದ.

ಅಲ್ಲಿಂದ ಹೊರಟ ರಾಜನು ವನವಿಲಾಸವನ್ನು ನೋಡಿ ಮೆಚ್ಚುತ್ತ ಸಾಗಿದ. ಮುಂದೆ ಮಾವಿನ ತೋಪು, ಅಶೋಕಮರಗಳ ಮತ್ತು ನಾಗಚಂಪಕಗಳ ವನಗಳ ಸುತ್ತಿನಲ್ಲಿ ಅತಿ ರಮಣೀಯವಾಗಿದ್ದ ಒಂದು ಬೆಟ್ಟವು ಕಣ್ಣಿಗೆ ಚೆಲುವನ್ನೂ ಮನಸ್ಸಿಗೆ ಸಂತಸವನ್ನೂ ನೀಡಿತು. ಎರಡನೆಯ ಮೇರುವೆಂಬಂತಿದ್ದ ಆ ಬೆಟ್ಟವು ನಾನಾ ರತ್ನಕಾಂತಿಯ ಕೂಟಜಾಲದಿಂದ ದಿಕ್ಕನ್ನಿಕೆಗೆ ಚಿತ್ರಪಟವನ್ನು ನೀಡಿ, ಅಲ್ಲಿನ ಚೈತ್ಯಾಲಯವು ಸೂರ್ಯನ ಏಳು ಕುದುರೆಗಳಿಗೆ ಬಂಧನವನ್ನುಂಟುಮಾಡಿದಂತೆ ಕಾಣುತ್ತಿತ್ತು. ರಾತ್ರಿಯ ಹೊತ್ತು ಚಂದ್ರನೆಂಬ ಕಣ್ಣಿನಿಂದಲೂ, ಹಗಲು ಸೂರ್ಯನೆಂಬ ಕಣ್ಣಿನಿಂದಲೂ ನೋಡುವ ಆಸೆಯಿಂದ ಮುಗುಳ್ನಗೆಯಿಂದ ಕೂಡಿದ ಹಲವು ಮುಖಗಳನ್ನು ವಸುಧೆಯೇ ನೀಡಿದಂತೆ ಆ ಜಿನಾಲಯದ ಸುತ್ತ ಸರಸ್ಸುಗಳು ಸುತ್ತುವರಿದಿದ್ದವು. ನಾನಾ ಹೂಗಳಿಂದಲೂ ಹಲವು ಬಗೆಯ ನೈವೇದ್ಯಫಲದಿಂದಲೂ ಕೂಡಿದ ಆ ಅತಿಶಯ ಜಿನಭವನವನ್ನು ಜನಕನು ಜಿನಸ್ತೋತ್ರಚಪಲಚಿತ್ತನಾಗಿ ಪ್ರವೇಶಿಸಿದ. ಹಾಗೆ ಹೊಕ್ಕ ಜನತಾಜಂಗಮಕಲ್ಪವೃಕ್ಷನು ಜಿನಗೃಹದ ಮಧ್ಯರಂಗದಲ್ಲಿ ತ್ರಿಭುವನಪ್ರಭುವಿಗೆ ಅಭಿಮುಖನಾಗಿ ನಿಂತು ಕೈಗಳನ್ನು ಮುಗಿದು, "ಇಂದ್ರಿಯಸೌಖ್ಯಗಳನ್ನೇ ಸುಖಗಳೆಂದು ಬಗೆಯದೆ ನಿನ್ನಲ್ಲಿ ಅಭೇದವಾಗಿ ಕೊಂಡಾಡುವ ಅನಂತಸೌಖ್ಯವನ್ನೂ ದರ್ಶನವಿಶುದ್ಧಿಯನ್ನೂ ದಯಪಾಲಿಸು" ಎಂದು ಮನವಾರೆ ಪ್ರಾರ್ಥಿಸಿದ. ಜಿನದರ್ಶನದಿಂದಾಗಿ ಜನಕನಿಗೆ ಮೊದಲಿನ ಖೇದಭಾವ ಹೋಯಿತು; ಅಮೃತಸಮುದ್ರದಲ್ಲಿ ಮುಳುಗಿದ ಹಾಗೆ ಹರ್ಷವು ಮನಸ್ಸನ್ನು ತುಂಬಿಕೊಂಡಿತು.

* * * * *

# ೫. ಸೀತೆಯ ಸ್ವಯಂವರ

ಅಷ್ಟರಲ್ಲಿ ಈ ಕಡೆ, ಅರಿಂದಮನು ತುರಗಾಕೃತಿಯನ್ನು ಬಿಟ್ಟು ಸ್ವಸ್ವರೂಪವನ್ನು ತಳೆದು ಖೇಚರೇಂದ್ರನಾದ ಇಂದುಗತಿಯ ಬಳಿ ಬಂದು ತನ್ನ ಕಿರೀಟದ ರತ್ನಗಳ ಕಾಂತಿಯೇ ನಾನಾ ಬಣ್ಣದ ಹೂಗಳೆಂಬಂತೆ ತಲೆವಾಗಿ ನಮಸ್ಕರಿಸಿದ; ತಾನು ಹೋಗಿ ಬಂದುದೆಲ್ಲವನ್ನೂ ಸಾದ್ಯಂತವಾಗಿ ನಿರೂಪಿಸಿ, ಮಿಥಿಳೆಯ ಅಧಿಪತಿಯಾದ ಜನಕನನ್ನು ಕರೆತಂದು ರಮ್ಯಕವನದ ಜಿನಮಂದಿರದ ಬಳಿಗೆ ಬಿಟ್ಟಿರುವುದಾಗಿ ಅರುಹಿದ. ಹರುಷಗೊಂಡ ಇಂದುಗತಿಯು ಅವನಿಗೆ ತಕ್ಕ ಪುರಸ್ಕಾರವಿತ್ತು ಗೌರವಿಸಿದ. ಆಗಸದಲ್ಲಿ ಹೂಗಳಿಂದ ತುಂಬಿದ ಕೊಳವೇ ಸೃಷ್ಟಿತವಾದಂತೆ ನಾನಾ ಬಗೆಯ ಛತ್ರಗಳು ತೆರೆದುಕೊಳ್ಳಲು, ತೊಟ್ಟ ಆಭರಣಗಳ ಕಾಂತಿಯು ಹಗಲಿನ ಬೆಳಗನ್ನು ದ್ವಿಗುಣಗೊಳಿಸಲು, ನಾನಾ ಬಗೆಯ ಧ್ವಜಗಳು ಮುಗಿಲು ಮುಟ್ಟಲು ಸಮಸ್ತ ಪೂಜಾಪರಿಕರ ಸಮೇತನಾದ ಇಂದುಗತಿಯು ಮಂಗಳವಾದ್ಯಗಳ ನಡುವೆ ಜಿನಭವನದೆಡೆಗೆ ಹೊರಟ.

ಇತ್ತ ಜನಕನು ಸುತ್ತಮುತ್ತಲೂ ನೋಡುತ್ತ, ಇದು ಖೇಚರಲೋಕವಿರಬೇಕು ಎಂದು ಊಹಿಸುವಷ್ಟರಲ್ಲಿ ಇಂದುಗತಿಯು ಗಗನತದಿಂದ ಭೂತಳಕ್ಕೆ ಇಳಿದು ಜಿನಗೃಹವನ್ನು ಪ್ರದಕ್ಷಿಣೆ ಮಾಡಿ ಒಳಹೊಕ್ಕು ನಾನಾ ವಿಧದಿಂದ ಜಿನನನ್ನು ಅರ್ಚಿಸಿದ. ಆನಂತರ ಜನಕನನ್ನು ಆಭ್ಯಾಗತನೆಂಬಂತೆ ಮನ್ನಿಸಿ, ಗಂಭೀರಧ್ವನಿಯಿಂದ ಆತ್ಮೀಯವಾಗಿ ಸ್ವಾಗತಗೈದ. "ನಿನ್ನ ಮಗಳಾದ ರೂಪವತಿ ಸೀತೆ ನನ್ನ ಮಗನಿಗೆ ತಕ್ಕ ವಧು; ಅವಳನ್ನಿತ್ತು ಮದುವೆ ಮಾಡು" ಎಂದು ಬಿನ್ನವಿಸಿದ. "ನಿನ್ನ ಮಗನಿಗೆ ಸೀತೆಯನ್ನಿತ್ತು ಮದುವೆ ಮಾಡಬಹುದಿತ್ತು; ಆದರೆ ಈಗಾಗಲೇ ಅವಳು ರಾಮನ ಕೈಹಿಡಿದಿದ್ದಾಳಲ್ಲ" ಎಂದು ಜನಕನು ಮಾರುತ್ತರವಿತ್ತ. ಆಗ ಸನ್ಮತಿ ಎಂಬ ವಿದ್ಯಾಧರನೊಬ್ಬ, "ಸಿಕ್ಕಿದ ನಿಧಿಯನ್ನು ಒಲ್ಲದೆ, ಜರಗನ್ನು ತೊಳೆಯುತ್ತಾರೆಯೇ? ವಿಯಚ್ಚರ ರಾಜನನ್ನು ಬಿಟ್ಟು ಮಾನವನಿಗೆ ಕೂಸನ್ನು ಕೊಡುವುದೇ? ಕನ್ಯಾರತ್ನವನ್ನು ಯಾರಾದರೂ ಬೇಡುತ್ತಾರೆ; ಆದರೆ ನಿನ್ನ ಮಗಳನ್ನು ಧಾರೆಯೆರೆದುಕೊಡುವಂತಹುದನ್ನು ಆ ರಾಮನಲ್ಲಿ ಏನನ್ನು ಕಂಡೆ?" ಎಂದು ಆಕ್ಷೇಪಿಸಿದ.

ಈ ಮಾತನ್ನು ಕೇಳಿಯೂ ಜನಕನು ಕೋಪಗೊಳ್ಳದೆ, ತುರಂಗತಮನೆಂಬ ಶಬರನಾಯಕನನ್ನು ಮರ್ದಿಸಿ ಅವನ ಮ್ಲೇಚ್ಛದೇಶವನ್ನೆಲ್ಲ ಗೆದ್ದು ತಮ್ಮ ಸ್ವಾಭಿಮಾನವನ್ನು ಮೆರೆದ ರಾಮನ ಭುಜಪ್ರತಾಪವನ್ನು ನಿರೂಪಿಸಿ, ಅದರಿಂದಾಗಿಯೇ ಅವನಿಗೆ ತನ್ನ

ಮಗಳನ್ನಿತ್ತೆ ಎಂದು ಸಮರ್ಥಿಸಿಕೊಂಡ. "ಜಿಂಕೆ ಬೇಡ ಇವರನ್ನು ಗೆದ್ದನೆಂದು ಹೊಗಳುವೆಯಲ್ಲ! ಏನನ್ನು ಬೇಕಾದರೂ ಸಾಧಿಸಬಲ್ಲ ಗಗನಚರರಿಗೆ ಭೂಚರರು ಎಂದಾದರೂ ಸಾಟಿಯಾಗಬಲ್ಲರೇ?" ಎಂದು ವಿದ್ಯಾಧರನು ಜರೆದ. ಈ ಮಾತು ಕೇಳಿ ಜನಕನಿಗೆ ಕೋಪ ಉಕ್ಕಿತು. ಪುರು ಮುಂತಾದ ಎಲ್ಲ ತೀರ್ಥಂಕರರೂ, ಭರತ ಮೊದಲಾದ ಸಕಲಾರ್ಧಚಕ್ರಿಗಳೂ ಮಾನವರೇ ಹೊರತು ಖೇಚರರಲ್ಲ. ಆಕಾಶದಲ್ಲಿ ಹಾರಿದರೆ ಏನು ಬಂದ ಹಾಗೆ; ಹಕ್ಕಿಗಳು ಹಾರುವುದಿಲ್ಲವೇ? ಪರನಿಂದೆ ಆತ್ಮಪ್ರಶಂಸೆಗಳು ಸರಿಯಲ್ಲವೆಂದು ನುಡಿದ. ರಾಮಲಕ್ಷ್ಮಣರು ವಂಶವೀರ್ಯದಿಂದಲೂ, ಕಲಾಕುಶಲತೆಯಿಂದಲೂ, ಪ್ರಚಂಡ ಪರಾಕ್ರಮದಿಂದಲೂ ತ್ರಿಖಂಡ ಭರತವರ್ಷವನ್ನು ಆವರಿಸುವ ಗಂಡಗರ್ವರು ಎಂದು ಆವೇಶದಿಂದ ವಾದಿಸಿದ.

ಇದನ್ನು ಕೇಳಿ ಇಂದುಗತಿ ಕನಲಿದ. ರಾಮನನ್ನು ಅಷ್ಟೊಂದು ಹೊಗಳುವೆಯಲ್ಲ, ವಜ್ರಾವರ್ತ ಚಾಪದ ಹೆದೆಯೇರಿಸಬಲ್ಲನಾದರೆ ಅವನಿಗೆ ಸೀತೆಯನ್ನಿತ್ತು ಮದುವೆಮಾಡು; ಇಲ್ಲದಿದ್ದರೆ ಪ್ರಭಾಮಂಡಲನಿಗೆ ಧಾರೆಯೆರೆದುಕೊಡು ಎಂದು ಷರತ್ತು ಹಾಕಿದ. ರಾಮನ ಬಗ್ಗೆ ವಿಶ್ವಾಸವಿದ್ದ ಜನಕನು ಈ ಮಾತಿಗೆ ಒಪ್ಪಿಗೆಯಿತ್ತ. ಆನಂತರ ಇಂದುಗತಿಯು ಜನಕನಿಗೆ ನಾನಾ ವಸ್ತ್ರವಿಭೂಷಣಗಳನ್ನಿತ್ತು ಸತ್ಕರಿಸಿ, ವಿದ್ಯಾಧರ ಕುಲಕ್ಕೆ ಮೊದಲಿಗರಾದ ನಮಿವಿನಮಿಗಳಿಗೆ ನಾಗರಾಜನು ಕಾಣಿಕೆಯಾಗಿತ್ತಿದ್ದ ನಾಗವಿದ್ಯಾಧಿಷ್ಠಿತಗಳಾದ ವಜ್ರಾವರ್ತ ಸಾಗರಾವರ್ತಗಳೆಂಬ ಬಿಲ್ಲುಗಳನ್ನು ಹಲಾಯುಧ ಗಜಾಯುಧಗಳೊಡನೆ ತರಿಸಿ, ಅವುಗಳಿಗೆ ಚಂದ್ರವರ್ಧನನೆಂಬ ಮಹತ್ತರನನ್ನು ಕಾವಲಾಗಿರಿಸಿ ಮಿಥಿಲೆಗೆ ಕಳುಹಿಸಿಕೊಟ್ಟ, ತಾನೂ ವಿಮಾನವೇರಿ ವಿಯಚ್ಚರಬಲದಿಂದೊಡಗೂಡಿ ಮನೋವೇಗದಿಂದ ಜೊತೆಗೂಡಿ ಬಂದ.

ಮಿಥಿಲೆಯ ಪುರಜನರು ಆಗಸದಲ್ಲಿ ಬರುತ್ತಿರುವುದೇನು, ಒಡ್ಡುಗಟ್ಟಿದ ಬೆಳಕೇನು ಎಂದು ವಿಸ್ಮಯಗೊಂಡರು; ಇರಲಾರದು ರೋಹಣಾದ್ರಿಗಳೆ ಹಾರಿ ಬರುತ್ತಿರಬೇಕೆನ್ನಿಸಿತು; ಉಹೂಂ ಇವು ನವಗ್ರಹಗಳಿರಬೇಕು ಎನ್ನಿಸಿತು; ಕಲ್ಪವಾಸಿಗರ ವಿಮಾನಗಳಿರಬೇಕು ಎಂದು ಮರುಕ್ಷಣ ಅನ್ನಿತು. ಕೊನೆಗೆ ಜನಕನು ಬಂದುದನ್ನು ಕಂಡು ಅವರೆಲ್ಲ ಹರ್ಷಗೊಂಡರು. ತಮ್ಮನ್ನು ಅನಾಥರನ್ನಾಗಿ ಮಾಡಿ ಜನಕನು ಎಲ್ಲಿಗೆ ಹೊರಟು ಹೋದ ಎಂದು ವಿಷಾದಪೂರಿತರಾಗಿದ್ದ ಪುರಜನರಿಗೆ ಅವನನ್ನು ಕಂಡು ತಲ್ಲಣವು ನೀಗಿತು. ಜನಕನು ಅರಮನೆಗೆ ಬಂದು ಚಂದ್ರವರ್ಧನ ಮುಂತಾದವರಿಗೆ ಉಚಿತ ಗೌರವವನ್ನು ಸಲ್ಲಿಸಿ, ರಮ್ಯಪ್ರದೇಶದಲ್ಲಿನ ಬೀಡುಗಳಲ್ಲಿ ಇಳಿಸಿದ. ಚಂದ್ರವರ್ಧನನು ತನ್ನ ವಿದ್ಯೆಯಿಂದ ಅಲ್ಲಿ ಅನೇಕ ನೆಲೆಮಾಡಗಳನ್ನು ಸೃಷ್ಟಿಸಿ, ಹಲಾಯುಧಗದಾಯುಧಗಳಿಂದ ಕೂಡಿದ ಬಿಲ್ಲುಗಳನ್ನು ಬೈತಿರಿಸಿ ಕಾಯ್ದುಕೊಂಡಿದ್ದ.

ಜನಕನು ತನ್ನ ಪ್ರಜೆಗಳಿಗೆ ಸಮಾಧಾನದ ಮಾತುಗಳನ್ನು ಹೇಳಿ, ಮಜ್ಜನ ಭೋಜನ ಮುಂತಾದ ದಿವಸವ್ಯಾಪಾರಗಳನ್ನು ತೀರಿಸಿಕೊಂಡು, ಹಂಸತೂಲತಲ್ಪದಲ್ಲಿ ವಿಶ್ರಮಿಸಿದ. ತನ್ನ ಮನೋವಲ್ಲಭೆಗೆ ತಾನು ಹೋದ ವಿಷಯವನ್ನು ಸಾಂಗವಾಗಿ ವಿವರಿಸಿದ. ಅದನ್ನು ಕೇಳಿ ರಾಣಿಯು ಗುಡುಗಿನ ದನಿಯನ್ನು ಕೇಳಿದ ಹಂಸದ ಹಾಗೆ ಬೆಚ್ಚಿದಳು. ಹುಟ್ಟಿದಾಗಲೇ ಶಿಶುವನ್ನು ಖೂಳನು ಕದ್ದೊಯ್ಯಲು ನಾನು ಉಳಿದ ಈ ಮಗುವನ್ನೇ

ನೋಡಿಕೊಂಡು ಮಗನ ವಿಷಯವನ್ನು ಮರೆತಿದ್ದ. ಬಿಲ್ಲುಗಳ ನೆವದಿಂದ ಇವಳನ್ನು ವಿಯಚ್ಚರರು ಒಯ್ಯುವರೋ ಏನೋ ಎಂದು ವಿದೇಹಿಯು ಕಣ್ಣೀರು ಸುರಿಸಿದಳು. ಬಲಭದ್ರನಾದ ರಾಮನು ಬಿಲ್ಲಿನ ಹೆದೆಯೇರಿಸುವನೆಂದೂ, ಉಳಿದವರು ಇದರಿಂದ ಸೀತೆಯ ಮೇಲಿನ ಆಸೆಯನ್ನು ಬಿಡುವರೆಂದೂ ಜನಕನು ಕಾಂತೆಯನ್ನು ಸಂತೈಸಿದ. ಈ ಬಿಲ್ಲುಗಳಿಗೂ ವಿದ್ಯಾಧರರಿಗೂ ಋಣಾನುಬಂಧವಿಲ್ಲ; ರಾಮಲಕ್ಷ್ಮಣರು ಕಾರಣಪುರುಷರು, ಇವುಗಳು ಅವರಿಗೆ ಸೇರಬೇಕಾದವುಗಳು; ಇವುಗಳಿಂದ ಇಡೀ ಜಗತ್ತನ್ನು ತಮ್ಮ ಅಧೀನಗೊಳಿಸಿಕೊಳ್ಳಲೆಂದೇ ಅವರು ಹುಟ್ಟಿದ್ದಾರೆ ಎಂದು ವಿವರಿಸಿದ.

ಆನಂತರ ಗೃಹಮಹತ್ತರನನ್ನು ಕರೆದು ಊರಿನ ಹೊರಗಿನ ಉದ್ಯಾನವನದಲ್ಲಿ ಸ್ವಯಂವರ ಮಂಟಪವನ್ನು ನಿರ್ಮಿಸಲು ಆಜ್ಞಾಪಿಸಿದ. ಚಿನ್ನದ ಪೌಳಿಗೋಡೆ, ದಕ್ಷಿಣೋತ್ತರಮುಖಿಗಳ ಬೆಳ್ಳಿಯ ನೆಲಮಾಡಗಳು, ಅವುಗಳ ಮುಂದೆ ಚಂದ್ರಕಾಂತಶಿಲೆಯಿಂದ ನಿರ್ಮಾಣಗೊಂಡ ಬಯಲ ಮಂಟಪ, ಅದರ ಎರಡೂ ಕಡೆಗಳಲ್ಲಿ ಬೆಳ್ಳಿಯ ಹಜಾರಗಳು, ಅವುಗಳ ಸುತ್ತ ಮುತ್ತುಮಾಣಿಕ್ಯಗಳ ಜಗಲಿಗಳು, ಹೊರಗೆ ಮಣಿಮಯವಾದ ಬಾಗಿಲುವಾಡಗಳು, ಅವಕ್ಕೆ ಕಟ್ಟಿದ ರಮಣೀಯವಾದ ಮಕರ ತೋರಣಗಳು – ಇವುಗಳಿಂದ ಆ ಮಂಟಪವು ಬಹುಬೇಗ ಸಿದ್ಧಗೊಂಡಿತು. ಪುರು ಹರಿ ನಾಥ ಮುಂತಾದ ರಾಜವಂಶದ ಕುಮಾರರು ಸ್ವಯಂವರಕ್ಕೆಂದು ಬಂದು ಸೇರಿದರು. ಊರಲ್ಲೆಲ್ಲ ನಾನಾ ಬಗೆಯ ರಥಗಳು, ವಿವಿಧ ಭೇರಿನಿನಾದ, ಬಗೆಬಗೆಯ ಲಾಂಛನವುಳ್ಳ ಧ್ವಜಗಳು ತುಂಬಿಹೋದವು. ರಾಮಲಕ್ಷ್ಮಣಭರತಶತ್ರುಘ್ನರೂ ಬಂದು ಒಂದು ಸ್ಫಟಿಕದ ಹಜಾರದಲ್ಲಿ ಆಸೀನರಾದರು. ಹೀಗೆ ರತ್ನರಾಶಿಗಳಿಂದ ಸಮುದ್ರವೂ, ರೋಹಣಪರ್ವತಗಳಿಂದ ಭೂಮಿಯೂ, ಕಲ್ಪವೃಕ್ಷಗಳಿಂದ ಸುರಗಿರಿಯ ತಪ್ಪಲೂ, ನಕ್ಷತ್ರಗಳಿಂದ ಆಗಸವೂ, ಹಂಸಗಳಿಂದ ಸರೋವರವೂ ಶೋಭಿಸುವಂತೆ ಆ ಸ್ವಯಂವರ ಮಂಟಪವು ರಾಜಕುಮಾರಸಮೂಹದಿಂದ ರಾಜಿಸಿತು.

ಆಗ ಈ ಕಡೆ, ಮಂಗಳ ವಾದ್ಯಗಾಯನಗಳ ನಡುವೆ ಸೇವಕಿಯರು ವಿಲಾಸವತಿ ಸೀತೆಗೆ ಸುಗಂಧಯುಕ್ತ ಜಲಧಾರೆಯಿಂದ ಮಂಗಳಸ್ನಾನ ಮಾಡಿಸಿದರು; ಸುರಿಯುವ ನೀರಿನ ನಡುವೆ ಸೀತೆಯು ಬೆಳುದಿಂಗಳು ಮುಸುಕಿದ ಕುಮುದಿನಿಯಂತೆ ಮನೋಹರಿಯಾದಳು. ಅವಳ ನೆನೆದ ದೇಹವನ್ನು ದುಕೂಲದಿಂದ ಒರೆಸಿದರು. ಅಲ್ಲಿಂದ ಕರೆತಂದ ಸೇವಕಿಯರು ಸೀತೆಯನ್ನು ಮುತ್ತಿನ ಪೀಠದಲ್ಲಿ ಕುಳ್ಳಿರಿಸಿ ಅಲಂಕಾರ ಮಾಡಿದರು. ನಿರಿವಿಡಿದುಡಿಸಿದ ಚೀನಾಂಬರ, ಕಾಲಿನ ನೂಪುರ, ಸೊಂಟದ ಮಣಿಯ ಒಡ್ಯಾಣ. ಪಂಚರತ್ನದ ಕೊರಳಸರ, ರತ್ನಕಾಂತಿಯ ಅಂಗದ, ತೋಳಿನ ಪಚ್ಚೆಯ ಕಂಕಣ, ಅಂಗುಲಿಯ ರತ್ನಮುದ್ರಿಕೆ, ಕಪೋಲದಲ್ಲಿ ಬರೆದ ಮಕರಿಕಾಪತ್ರ, ನಗೆಗಣ್ಣುಗಳ ಕಾಡಿಗೆ. ಕಿವಿಯ ಅವತಂಸೋತ್ಪಲಗಳನ್ನು ಅಳವಡಿಸಿದರು. ತಮ್ಮ ಉಗುರುಗಳಿಂದ ಕೂದಲನ್ನು ಬಾಚಿ. ರಾಹುವು ನುಂಗಿ ಆಗತಾನೇ ಉಗುಳಿದ ಚಂದ್ರನಂತೆ ಕಾಣುವ ಹೂ ಮುಡಿಸಿ. ಹಣೆಯಲ್ಲಿ ಕಸ್ತೂರಿ ತಿಲಕವನ್ನಿಟ್ಟರು. ಅವಳ ಅಲಂಕಾರವು ಮನ್ಮಥನ ಬೀರವಸದನವೆನಿಸಿತು. ಬಾಲೆಯು ಕಡೆಗಣ್ಣೋಟವೇ ಸಾಕು, ಹೂಬಾಣಗಳೇಕೆ; ಉರಿಯುವ ಶೂಲಿಯ ನೊಸಲಗಣ್ಣು ಅದರ ಮುಂದೆ ನವಿಲ ಕಣ್ಣಿನ ಹಾಗೆ ಆಗಿಬಿಡುತ್ತದೆ ಎಂದು ಮನ್ಮಥನು

ಜೀಗಿದ. ಮನ್ಮಥ, ರತಿ, ಕಬ್ಬಿನ ಬಿಲ್ಲು, ಕುಸುಮ ಬಾಣ, ಕೋಗಿಲೆಯ ನಿಸ್ವನ, ದುಂಬಿಯ ಝೇಂಕಾರ ಎಂಬಿವುಗಳೆಲ್ಲ ಸೀತೆಯ ಅಲಂಕಾರಕ್ಕಿರುವ ಪರ್ಯಾಯಶಬ್ದಗಳು ಮಾತ್ರ!

ಹರಿವಂಶದ ರೂಢಿಯಂತೆ ಪುರೋಹಿತನು ಶುಭಮುಹೂರ್ತದಲ್ಲಿ ಕನ್ಯೆಯನ್ನು ಕರೆತರಲು ಹೇಳಿದ. ಮಂಗಳಾನೀಕವುಂಟಾಗಲು ಸೀತೆಯು ವೃದ್ಧ ಕಂಚುಕಿಯು ತಂದ ರಥದಲ್ಲಿ ಕುಳಿತು ವಿವಾಹ ಮಂಟಪದೆಡೆಗೆ ಬಂದಳು. ರಮಣಿಯರು ಇಕ್ಕೆಲದಲ್ಲಿ ಚಾಮರವಿಕ್ಕುತ್ತಿರಲು, ರಥದ ಸುತ್ತ ಕುಂಚ, ಅಡಪ, ಡವಕೆ, ಕನ್ನಡಿ ಮುಂತಾದ ಮಂಗಳದ್ರವ್ಯಗಳನ್ನು ಹಿಡಿದ ಅಖಿಲಕಲಾಸಂಪನ್ನೆಯರಾದ ಐನೂರು ಮಂದಿ ಕನ್ನಿಕೆಯರಾದ ಪರಿಚಾರಕಿಯರು ಅರಳಿದ ತಾವರೆಗಳಂತೆ ನಡೆದು ಬಂದರು. ಮದನ ಪತಾಕೆಯು ಗಗನವನ್ನು ಚುಂಬಿಸುವಂತಿರಲು, ಮನ್ಮಥನ ಬಿಲ್ಲ ಠೇಂಕಾರವು ದಿಗಂತವನ್ನು ಮುಟ್ಟಲು, ನೆರೆದ ರಾಜಕುಮಾರರ ಎದೆಗಳಿಗೆ ಕುಸುಮಸಾಯಕವು ಹೋಗಿ ಚುಚ್ಚಲು ಮನ್ಮಥನ ವಿಜಯಾಂಗನೆಯಂತಿದ್ದ ಸೀತೆಯು ಮಂಟಪವನ್ನು ಪ್ರವೇಶಿಸಿದಳು. ವನರಾಜಿಯನ್ನು ಶೋಭೆಗೊಳಿಸುವ ಮಧು ಪ್ರಥಮ ಪ್ರವೇಶದಂತೆ ಬಂದ ಅವಳನ್ನು ಕಂಡು ಅಲ್ಲಿ ನೆರೆದಿದ್ದ ನರೇಂದ್ರನಂದನರಿಗೆ ಮನೋವಿಕಾರದೊಡನೆ ಅಂಗವಿಕಾರವೂ ಉಂಟಾಯಿತು. ಚಂದ್ರನ ಉದಯದಿಂದ ಸಮುದ್ರವು ಉಕ್ಕೇರುವಂತೆ, ದಿನಲಕ್ಷ್ಮಿಯ ಆಗಮನದಿಂದ ಕೆಂದಾವರೆಗಳು ಅರಳುವಂತೆ ನೃಪಕುಮಾರಕದಂಬವು ಮದನವಿಕಾರಚೇಷ್ಟೆಯಿಂದ ಸಂಭ್ರಮಗೊಂಡಿತು. ಅವಳನ್ನು ಕಂಡು ಒಬ್ಬ ರಾಜಕುಮಾರನು ತನ್ನ ಹೂಮಾಲೆ ತಾರಾವಳಿ ತುರುಬುಗಳನ್ನು ಸರಿಪಡಿಸಿಕೊಂಡ; ಮತ್ತೊಬ್ಬ ಅರಸುಗುವರ ತನ್ನ ತಲೆಯ ಮೇಲೆ ಮಣಿರಾಗಪೂರಿತ ಕಿರೀಟವನ್ನು ಸರಿಯಾಗಿ ಕೂರಿಸಿಕೊಂಡ; ಮಗುದೊಬ್ಬ ತಾರಾವಳಿಯನ್ನು ಓಸರಿಸುವವನಂತೆ ತನ್ನ ಪೇರುರದ ಕಡೆ ಗಮನ ಸೆಳೆದ; ಮಗುದೂ ಒಬ್ಬ ದೊರೆಗುವರ ಭುಜಕೀರ್ತಿಯನ್ನು ಸರಿಪಡಿಸಿಕೊಳ್ಳುವ ನೆವದಿಂದ ತನ್ನ ಭುಜಶಿಖರವನ್ನು ಪ್ರದರ್ಶಿಸಿದ. ಒಬ್ಬ ರಾಜಕುಮಾರನು ತನ್ನ ವಿಶಾಲ ವಕ್ಷಸ್ಥಳದಲ್ಲಿನ ಎಕ್ಕಾವಳಿಯನ್ನು ನೇರ್ಪಡಿಸಿಕೊಳ್ಳುವಾಗ ಹೊಳೆಯುವ ತೋರಮುತ್ತುಗಳ ಬಿಳಿಗೆಂಪು ಕಾಂತಿಯು ಕಮಲಾಕರದಲ್ಲಿನ ಕೆಂದಾವರೆಗಳಂತೆ ಹೊಳೆಯಿತು.

ಆಗ ಮಿಂಚುಗಳಿಂದ ಸುತ್ತುವರಿದ ಶರಲಕ್ಷ್ಮಿಯಂತೆ, ತಾರಾವಳಿಯು ಬಳಸಿದ ಚಂದ್ರನಂತೆ, ಹವಳದ ಬಳ್ಳಿಯಿಂದ ಆವೃತವಾದ ಸಮುದ್ರದ ಅಲೆಯಂತೆ, ಕನ್ನಿಕೆಯರ ನಡುವೆ ನೋಡುವವರ ಮನಃಪೀಠಗಳಲ್ಲಿ ಮನ್ಮಥನನ್ನು ಪ್ರತಿಷ್ಠಾಪಿಸುವ ರತಿಯಂತೆ ಸೀತೆಯು ವಿವಾಹ ಮಂಟಪದ ಮಧ್ಯಕ್ಕೆ ನಡೆತಂದಳು. ಅವಳ ಲಾವಣ್ಯದ ಕಡಲಲ್ಲಿ ತನ್ನ ಕಣ್ಣುಮನಸ್ಸುಗಳು ತೇಕಾಡಲು ಮರಗಟ್ಟಿದ ಮನುಷ್ಯನಂತೆ ಒಬ್ಬ ಅರಗುವರನು ಸ್ಮರಸಮ್ಮೋಹನಶರಕ್ಕೆ ಒಳಗಾದ. ಒಬ್ಬನು ಸೀತೆಯ ಮಕರಿಕಾಪತ್ರ ವಿಲಸಿತವಾದ ಕಪೋಲವನ್ನು ನೋಡಿ ಮರುಳುಗೊಂಡರೆ, ಮತ್ತೊಬ್ಬ ಅವಳ ನೊಸಲ ಕಸ್ತೂರಿ ತಿಲಕದ ಚೆಲುವಿನಿಂದ ಆಕರ್ಷಿತನಾದ, ಮನ್ಮಥನ ಕಾಳೋರಗದಂತಿದ್ದ ಅವಳ ಸೋರ್ಮುಡಿಯನ್ನು ಕಂಡು ಇನ್ನೊಬ್ಬ ಹಾವು ಕಂಡವನಂತೆ ಬೆರಗಾದ. ಅಲ್ಲಿದ್ದವರಲ್ಲಿ ಕೆಲವರು ನೇರನೋಟದಿಂದಲೂ, ಮತ್ತೆ ಕೆಲವರು ಓರೆಯಾಗಿಯೂ, ವಿವಿಧ ಭಂಗಿಗಳಿಂದಲೂ ಸೀತೆಯ ಚೆಲುವನ್ನು ಕಂಡು ಅವಳ ಮೇಲೆಯೇ ಮನಸ್ಸನ್ನು ನಟ್ಟು

ಚಿತ್ರದಂತೆ ನಿಸ್ಪಂದರಾದರು. ಇಂದ್ರಿಯಗಳೆಲ್ಲ ಕಣ್ಣಿನಲ್ಲಿಯೇ ಕೇಂದ್ರೀಕೃತವಾದಂತೆ ನೃಪತನಯರೆಲ್ಲ ಜಾನಕಿಯ ಮೇಲೆ ತಮ್ಮ ಕಣ್ಣುಗಳನ್ನು ನಟ್ಟರು. ಇಂದ್ರಿಯವೆಂದರೆ ಕಣ್ಣು ಮಾತ್ರ; ವಿಷಯವೆಂದರೆ ಈ ತರುಣಿ ಮಾತ್ರ ಎನ್ನುವಂತೆ ಅವಳನ್ನು ನೋಡಿದರು.

ಹೀಗೆ ನಡೆದು ಬಂದ ಜಾನಕಿಗೆ ಪಕ್ಕದಲ್ಲಿದ್ದ ವೃದ್ಧ ಕಂಚುಕಿಯೊಬ್ಬಳು ಎದುರಾದ ನೃಪತನುಜರ ವಂಶ ವೀರ್ಯ ವಿದ್ಯೆಗಳನ್ನು ವಿವರಿಸುತ್ತ ಸಾಗಿದಳು. ಆ ಕುಮಾರರ ಕಡೆ ಕುಡಿ ನೋಟ ಬೀರುತ್ತಿದ್ದ ಸೀತೆಯ ಕಣ್ಣುಗಳು ಮುಖವೆಂಬ ಕೊಳದಲ್ಲಿನ ಎಳೆವಾಳೆಗಳಂತೆ ಹೊಳೆದುವು. ಅವಳ ಕಣ್ಣ ಕಾಂತಿಯು ಹೂಬಾಣಗಳಂತೆಯೂ, ಹುಣ್ಣಿಮೆಯ ಬೆಳುದಿಂಗಳಿನಂತೆಯೂ, ಕಂತುರಾಜನ ಕತ್ತಿಯ ಹೊಳಪಿನಂತೆಯೂ, ಉತ್ಪಲಮಾಲೆಯಂತೆಯೂ, ಹೂಮಳೆಯಂತೆಯೂ, ದುಂಬಿಗಳ ಹೊಳಪಿನ ಮೈಗಳಂತೆಯೂ ಸಭಾಂತರಾಳವನ್ನೆಲ್ಲ ವ್ಯಾಪಿಸಿತು. ಅರಳಿದ ಸಂಪಿಗೆಗೆ ಎರಗದೆ ಸುರಗಿಯ ಹೂವಿಗೆ ಎರಗುವ ದುಂಬಿಯಂತೆ ಸೀತೆಯ ನೋಟವು ಮತ್ತಾವ ರಾಜಕುಮಾರನ ಮೇಲೂ ಬೀಳದೆ ರಾಘವನ ಮೇಲೆ ನೆಲೆ ನಿಂತಿತು. ಅದನ್ನು ಗಮನಿಸಿದ ಕಂಚುಕಿಯು ಆತನ ಗುಣೈಕ ವಿಶೇಷಗಳನ್ನು ವಿವರಿಸಲು ತೊಡಗಿದಳು: "ದಶರಥನ ಅಗ್ರತನುಜನಾದ ಈತನು ಪ್ರಾಕೃತನಲ್ಲ, ಭುವನೈಕವಾಕ್ಯ; ಈತನ ಯಶವು ದಿಕ್ಕುಗಳಲ್ಲೆಲ್ಲ ವ್ಯಾಪಿಸಿದೆ; ಈತನು ಚರಮಾಂಗ, ಅನಂತವೀರ್ಯ, ಇಕ್ಷ್ವಾಕು ವಂಶಸಮುದ್ರಕ್ಕೆ ಚಂದ್ರನಂತಿರುವವನು; ಯುದ್ಧವೆಂಬ ಬೇಸಗೆಯ ತಾಪವನ್ನು ಕಳೆಯುವ ಮಳೆ ಸುರಿಸುವ ಮೋಡದಂತಹ ಉದಾತ್ತ ರಾಘವನೀತ. ಕಾಮನು ಕಪ್ಪು ಬಣ್ಣದವನು, ಇವನಾದರೋ ಪಾಂಡುವರ್ಣದವನು; ಈ ವ್ಯತ್ಯಾಸ ಹೊರತಾಗಿ ರೂಪದಲ್ಲಿ ಇಬ್ಬರೂ ಒಂದೇ. ಈ ರಘುವೀರನು ನಿನಗೆ ತಕ್ಕನಾದ ವರ" ಎಂದು ವಿವರಿಸಿದಳು.

ಆ ಸಮಯದಲ್ಲಿ ವಿದ್ಯಾಧರ ಮಹತ್ತರನು ಅಲ್ಲಿರಿಸಿದ್ದ ವಿಷಮ ಚಾಪಕ್ಕೆ ವಿಧಿಪೂರ್ವಕವಾಗಿ ಪೂಜೆಗೈದ. ಆಗ ಆ ಬಿಲ್ಲಿನಿಂದ ನೂರು ನಾಲಗೆಗಳಲ್ಲಿ ಜ್ವಾಲೆ ಚಿಮ್ಮಿತು; ಘೂತ್ಕಾರವು ಹೊಮ್ಮಿ ದಿಕ್ಕುಗಳವರೆಗೆ ವಹ್ನಿಜ್ವಾಲೆಯು ಚಾಚಿಕೊಂಡಿತು; ಅದರ ಸಾವಿರ ತೆರೆದ ಬಾಯಿಗಳಿಂದ ಕಿಡಿಗಳು ಸಿಡಿದು ಎಂಟು ದಿಕ್ಕುಗಳಲ್ಲೂ ಹರಡಿದವು; ತನ್ನ ಸಾವಿರಾರು ಹೆಡೆಗಳನ್ನು ಬಿಚ್ಚಿ ಬೆಂಕಿಯುಗುಳುತ್ತ ಆ ವಜ್ರಾವರ್ತ ಚಾಪವು ಕಾಳನಾಗರದ ರೂಪವನ್ನು ಪಡೆಯಿತು. ಸಿಡಿಲಿನಂತೆ ಗರ್ಜಿಸಿ, ನೆಲದ ಮೇಲೆ ಹೊಡೆಯುತ್ತ, ಹತ್ತು ದಿಕ್ಕುಗಳಿಗೆ ಅಪ್ಪಳಿಸುತ್ತ ವಜ್ರಾವರ್ತ ಸಾಗರಾವರ್ತಗಳು ಯಮನಿಗೂ ಹೆದರಿಕೆಯುಂಟಾಗುವಂತೆ ಆರ್ಭಟಿಸಿದವು. ಅದನ್ನು ನೋಡಿ ಖಚರ ಮಂಡಲವೆಲ್ಲ ಭಯದಿಂದ ಹಿಂದೆ ಸಾರಿ, ಇನ್ನೇನು ಪ್ರಭಾಮಂಡಳನಿಗೆ ಕನ್ಯೆಯು ವಶವಾದಳು ಎಂದು ಭಾವಿಸಿತು. ಆಗ, "ಈ ವಜ್ರಾವರ್ತ ಕೋದಂಡವನ್ನು ಯಾರು ಹೆದೆಯೇರಿಸಬಲ್ಲರೋ ಅಂತಹ ದೋರ್ದಂಡಪ್ರಚಂಡನು ಜನಕಜೆಗೆ ವರನಾಗುತ್ತಾನೆ" ಎಂಬ ಘೋಷಣೆಯಾಯಿತು. ಆಗ ರಾಜಕುಮಾರರೆಲ್ಲ ತಮ್ಮ ತಮ್ಮ ಆಸನಗಳಿಂದ ಮೇಲೆದ್ದರು. ತಮ್ಮ ಪ್ರತಾಪವನ್ನು ತೋರಿಸುವ ಇಚ್ಛೆಯಿಂದ ಬಂದಾಗ, ಅನೇಕ ಮಂದಿ ಮನ್ಮಥರೂ ಚಂದ್ರರೂ ಸೂರ್ಯರೂ ಒಟ್ಟಿಗೆ ಏಕೆ ನೆರೆದರು ಎಂಬ ಭಾವನೆಯುಂಟಾಯಿತು.

ಆದರೆ ಹಾಗೆ ಬಂದವರು ಬಿಲ್ಲುಗಳ ಭೀಕರತೆಯನ್ನು ಕಂಡು ಹೆದರಿದರು. ಉರಿ ಕೆಂಡಗಳನ್ನು ಕಾರುವ ಬಿಲ್ಲನ್ನು ತಾವು ಇದುವರೆಗೂ ನೋಡಿದ್ದಿಲ್ಲ; ಖೇಚರರಾಜ ತಾನೇ ತರುಣಿರತ್ನವನ್ನು ಕಸಿದುಕೊಳ್ಳುವ ಹುನ್ನಾರದಿಂದ ಈ ಬಿಲ್ಲುಗಳನ್ನು ಕಳಿಸಿದ್ದಾನೆ; ಈ ಮೋಸವರಿಯದ ಮುಗ್ಧನಾದ ಜನಕ ಅದನ್ನು ಸ್ವೀಕರಿಸಿದ್ದಾನೆ; ಈ ಪಣವನ್ನು ಒಪ್ಪಿ ಹಾವಿನ ಹಲ್ಲುಗಳಿಗೆ ಕೈಯಿಡುವವರು ಯಾರಿದ್ದಾರು ಎಂದು ಅವರೆಲ್ಲ ವಿಸ್ಮಯಪಟ್ಟರು. ಹಾವಿನ ದರ್ಶನ ವಿವಾಹಕ್ಕೆ ಶುಭಕರವಲ್ಲ, ವಿಷಮಯವಾದದ್ದು; ಹಾವನ್ನು ಹಿಡಿದ ಮೇಲೆ ಹೆಣ್ಣಿನ ಕೈಹಿಡಿಯುವುದಕ್ಕಿಂತ ಅಪಾಯಕಾರಿಯಾದದ್ದು ಇದೆಯೇ? ಮಧುಪರ್ಕವನ್ನು ಸ್ವೀಕರಿಸುವಂತಹ ಮಂಗಳವಿಧಿಯಲ್ಲದ ಇದು ಅವಘಟಿತ. ಹಾವನ್ನು ಹಿಡಿದವರಿಗೆ ಹೆಣ್ಣನ್ನು ಕೊಡುವೆನೆಂದು ಮೊದಲೇ ತಿಳಿಸಿದ್ದರೆ, ಗಾರುಡವನ್ನು ಕಲಿತು ಬರಬಹುದಿತ್ತು ಎಂದು ಅವರೆಂದುಕೊಂಡರು. ದೂರದಿಂದಲಾದರೂ ಹೆದರಿಕೆಯಿಲ್ಲದೆ ಇದನ್ನು ನೋಡಬಲ್ಲ ಧೀರರಾರೂ ಅಲ್ಲಿರಲಿಲ್ಲ; ಅಂದ ಮೇಲೆ ಹತ್ತಿರ ಬರುವಂತಹ ಮೈಗಲಿ ಯಾರಿದ್ದಾನು; ಬಾಹುಬಲದಿಂದ ಇದನ್ನು ಎತ್ತಬಲ್ಲವನು ಎಲ್ಲಿದ್ದಾನು; ಇದಕ್ಕೆ ಬಿಲ್ಲು ಎಂದು ಹೆಸರಿಟ್ಟವನು ಬುವಿಗೆ ನಂಜನ್ನಿಟ್ಟವನೇ ಸರಿ ಎಂದು ನೆರೆದ ಅರಸುಮಕ್ಕಳು ಗರ ಹೊಡೆದವರಂತೆ ಹಿಂದೆ ಸರಿದರು.

ಮಿಕ್ಕವರೆಲ್ಲ ಹೀಗೆ ಸೆಡೆದುಕೊಂಡಾಗ ಸಾಕೇತ ಸಿಂಹಾಸನಾಧೀಶನಾದ ದಶರಥನು ದರಸ್ಮಿತನಾಗಿ ತನ್ನ ಕುಡಿಗಣ್ಣಿನಿಂದ ನೋಡಲು ತುಂಗವಂಶನೂ ದುರ್ವಾರ ಬಾಹಾಬಲನೂ ಆದ ರಾಮನು ಮೇಲೆದ್ದ. ಜನರ ಕಣ್ಣುಗಳೆಂಬ ಮೀನುಗಳು ತನ್ನ ತನುಕಾಂತಿಯೆಂಬ ನೆಯ್ದಿಲ ಕೊಳದಲ್ಲಿ ಬಿದ್ದಾಗ ಅವುಗಳನ್ನು ನೆನಯಿಸದೆ, ರಾಘವನು ಸಹಸ್ರೇಕ್ಷಣನನ್ನು ನೆನಪಿಗೆ ತಂದ. ಹುಬ್ಬೇರಿಸಿದವರನ್ನು, ಮೂರ್ಚೆಗೆ ಸಂದ, ಭಯದಿಂದ ಹಿಂಜರಿದ, ಬೆಕ್ಕಸಗೊಂಡ, ಶಂಕೆ ಹೊತ್ತ ಜನರನ್ನೆಲ್ಲ ಸ್ಮಿತವದನನಾಗಿ ನೋಡುತ್ತ ಬೆಳ್ಳಿಯ ಬೆಟ್ಟದಂತೆ ಮುಂದೆ ಸಾಗಿದ. ತನ್ನ ಕಾಲುಗುರ ಕಾಂತಿಯೇ ಕವಚವಾಗಿರಲು, ರೋಹಣಗಿರಿಯ ವಿಷಾಪಹಾರರತ್ನದ ಕಾಂತಿಯಿಂದ ವಿಷಸರ್ಪವು ನಿರ್ವಿಷವಾದಂತೆ ರಾಮನ ಸನ್ನಿಧಿಯಲ್ಲಿ ಬಿಲ್ಲು ತನ್ನ ಭೀಕರತೆಯನ್ನು ಕಳೆದುಕೊಂಡಿತು. ಆಗ ರಾಮನು ಅದನ್ನು ಏರಂಡಕಾಂಡದಂತೆ ಭಾವಿಸಿ, ಕೊಪ್ಪನ್ನು ಕಾಲಿನ ಹೆಬ್ಬರಳಿನಡಿ ಇರುಕಿಸಿಕೊಂಡು ಎಡಗೈಯಿಂದ ಕಾಲದಂಡದಂತಿದ್ದ ಕೋದಂಡದ ಹೆದೆಯೇರಿಸಿದ; ಇದರಿಂದ ಭೂಮಿಯನ್ನು ಹೊತ್ತ ಆದಿಶೇಷನ ಕಂಠದ ಎಲುಬುಗಳು ಸ್ಥಿರವಾಗಿದ್ದವೇ, ಆಮೆಯ ಮೈಯ ಚಿಪ್ಪು ಮುರಿದು ಹೋಗದೇ ಇತ್ತೇ ಎಂದು ಎಲ್ಲ ಅಚ್ಚರಿಗೊಂಡರು. ಒಂದೇ ಬಾರಿಗೆ ಕಾರ್ಮುಕವನ್ನು ಗೆದ್ದವನ ಬಾಹುಬಲ ಮನುಜಸಾಧಾರಣವಲ್ಲ ಎನ್ನಿಸಿತು.

ರಾಘವನು ವಜ್ರಾವರ್ತದ ಹೆದೆಯೇರಿಸಿ ಅದರ ಹಗ್ಗವನ್ನು ನೀವಿ ಠೇಂಕಾರ ಮಾಡಿದಾಗ ಜಾನಕಿಯ ದೇಹವನ್ನು ಪುಲಕ ಆವರಿಸಿತು, ಜನಕನಿಗೆ ಉತ್ಸಾಹವುಂಟಾಯಿತು, ಖೇಚರಸಂದೋಹ ಉಮ್ಮಳಗೊಂಡಿತು, ರಾಜಕುಮಾರ ಸಮೂಹವು ಉದ್ವೇಗಗೊಂಡಿತು, ಲಲನಾಶ್ರೇಣಿಯು ರಾಮನ ಸಮ್ಮೋಹಿನಿಗೊಳಗಾಯಿತು, ಪುರಜನರಿಗೆ ವಿಸ್ಮಯವುಂಟಾಯಿತು, ನೋಡಿದ ಕಣ್ಣುಗಳಿಗೆ ಆಕರ್ಷಣೆಯೆನಿಸಿತು. ಇದನ್ನು ಕಂಡ ಖೇಚರ ಬಲವೆಲ್ಲ ಪಲಾಯನ ಮಾಡಿತು; ಬಿಲ್ಲ ಕೊಪ್ಪು ಬಾಗಿದಾಗ

ಅಲ್ಲಿದ್ದ ರಾಜರ ಮುಖಗಳೂ ತಗ್ಗಿದವು. ಶ್ರಮವಿಲ್ಲದೆ ರಾಮನು ಬಿಲ್ಲನ್ನು ಬಾಗಿಸಲು ಮನ್ಮಥನೂ ಪುರಸ್ತ್ರೀಯರ ಮೇಲೆ ಹುರುಪಿನಿಂದ ಬಾಣಪ್ರಯೋಗ ಮಾಡಿದ. ಅಮರರು ಹೊಗಳಿದರು, ಜನರೆಲ್ಲ ಜಯಘೋಷ ಮಾಡಿದರು, ಭೇರಿಯ ಧ್ವನಿ ಕಿವಿಗೆ ಅಪ್ಪಳಿಸಿತು. ಮಂಗಳಧ್ವಜಗಳೂ ಬೆಳುಗೊಡೆಗಳು ಆಗಸವನ್ನು ತುಂಬಿದವು, ಆಶೀರ್ವಾದನಿನಾದವೂ ಮಾನಿನಿಯರ ಮುತ್ತಿನ ಸೇಸೆಗಳೂ ರಾಮನ್ನಾವರಿಸಿದವು. ಆಗ, ತನ್ನ ಮನೋರಥ ಸಫಲವಾಯಿತೆನ್ನಿಸಿ ಸೀತೆಯು, ಸ್ಮರನ ಬಿಲ್ಲ ಠೇಂಕಾರದಂತಿದ್ದ ನೂಪುರ ಧ್ವನಿ ಹೊಮ್ಮಲು, ಕೆಂಪಾದ ಪಾದಗಳು ಕೆಂದಾವರೆಯಂತಿರಲು, ಕೇಶದ ಪರಿಮಳಕ್ಕೆ ದುಂಬಿಗಳು ನವಿಲುಗರಿ ಹಿಡಿದಂತೆ ಸುತ್ತಿ ಬರಲು ನಿಧಾನವಾಗಿ ನಡೆದು ಬಂದಳು. ಮನ್ಮಥನಿಗೆ ಹೂಬಾಣಗಳನ್ನು ನೀಡಲು ಬರುವ ರತಿಯಂತೆ ಮಾಲೆ ಹಿಡಿದು ರಾಮನೆಡೆ ನಡೆದು, ಮಾಲೆಯ ಮೇಲೆ ದುಂಬಿಗಳು ಹಾರಾಡುತ್ತಿರಲು, ಕುಡಿನೋಟವು ಹೂಮಾಲೆಯನ್ನೂ ಮೀರಿಸಲು, ನೀಳವಾದ ಬಾಹುಲತೆ ಶಿರೀಷಮಾಲೆಯನ್ನೂ ಸೋಲಿಸಲು, ಮದನಾನುರಾಗವನ್ನು ಹೊತ್ತು ಸೀತೆಯು ರಾಘವನಿಗೆ ಮಾಲೆಯನ್ನು ಹಾಕಿದಳು. ತನ್ನ ಮೈಸೋಂಕಿನಿಂದ ರಾಮನಿಗೆ ರೋಮಾಂಚನವುಂಟುಮಾಡಿ, ಪ್ರೀತಿಯಿಂದ ತಾವರೆಯ ಪರಿಮಳದ ನೀರನ್ನು ಅವನ ಕೈಗಳಿಗೆ ಸುರಿದು, ಬಾಹುಮೂಲ ಸ್ತನಮೂಲ ನಾಭಿಮೂಲಗಳು ತ್ರಿಗುಣಿಸಲು ಶ್ರೀರಾಮನ ಪಕ್ಕದಲ್ಲಿ ನಿಂತ ಸೀತೆಯು ಕಂದರ್ಪನ ಪಕ್ಕದಲ್ಲಿನ ರತಿಯಂತೆ ಕಂಡಳು.

ಇವನದು ಆಕಾರವಲ್ಲ, ವಜ್ರಪ್ರಾಕಾರ ಎನ್ನಿಸಿದ ಲಕ್ಷ್ಮಣನು ಬಲದೇವನಾದ ರಾಮನ ಹಿಂದೆ ಬಂದ. ತಕ್ಷಣವೇ ಬಿಲ್ಲು ತನ್ನ ವಿಕಾರವಾದ ಹಾವಿನ ಆಕಾರವನ್ನು ತೊರೆದು ಮುನ್ನಿನ ರೂಪ ಧರಿಸಿತು. ಗಾರುಡ ಮಣಿಯ ದೀಪ್ತಿಯಂತಿದ್ದ ಗರುಡಧ್ವಜನಾದ ಅವನ ಮುಂದೆ ಧನುಸ್ಸು ತನ್ನ ಉರಗಾಕಾರವನ್ನು ಬಿಟ್ಟುದರಲ್ಲಿ ಆಶ್ಚರ್ಯವೇನಿದೆ! ಹಾಗೆ ಬಂದ ರಿಪುಮರ್ದನನಾದ ಜನಾರ್ದನನು ಹುಬ್ಬನ್ನೇರಿಸುವ ರೀತಿಯಿಂದ ಶ್ರಮವಿಲ್ಲದೆಯೇ ಸಾಗರಾವರ್ತ ಬಿಲ್ಲಿನ ಹೆದೆಯೇರಿಸಿದ. ಲಕ್ಷ್ಮಣನು ಆ ದಿವ್ಯಶರಕ್ಕೆ ಬಾಣವನ್ನು ಹೂಡಲು ಸಮುದ್ರವು ಅಲ್ಲೋಲಕಲ್ಲೋಲಗೊಂಡಿತು, ದೆಸೆಗಳು ತಲ್ಲಣಗೊಂಡವು, ಅಮರಾದ್ರಿಯು ಗಾಳಿಗೊಡ್ಡಿದ ಸೊಡರಿನಂತೆ ಕಂಪಿಸಿತು, ನೆಲವು ನಡುಗಿತು, ದಿಗ್ಗಜಗಳ ಮದವುಡುಗಿತು, ಖೇಚರಸೇನೆಯು ಭಯಗೊಂಡು ಓಡಿತು. "ಶರಣ್ಯ, ಲಕ್ಷ್ಮಣದೇವ" ಎಂದು ದೇವತತಿಯು ಕರಕಮಲಗಳನ್ನು ಮುಗಿದು ಪ್ರಾರ್ಥನೆ ಮಾಡಿತು, ಮೇಲಿನಿಂದ ಹೂಮಳೆ ಸುರಿಯಿತು, ದೇವದುಂದುಭಿಗಳು ಮೊಳಗಿದವು; ಅದನ್ನು ನೋಡಿ ಹೆದರಿದ ಖೇಚರರಾಜನ ಮಹತ್ತರನು ಎಂಟನೆಯ ಕೇಶವನನ್ನು ಎವೆಯಿಕ್ಕದೆ ಬೆರಗಿನಿಂದ ನೋಡಿದ. ಹೀಗೆ ಬಲದೇವನು ಹಲಾಯುಧದೊಡನೆ ವಜ್ರಾವರ್ತಕ್ಕೆ ಒಡೆಯನಾದರೆ, ಗದೆಯ ಸಮೇತವಾದ ಸಾಗರಾವರ್ತಕ್ಕೆ ಉಪೇಂದ್ರನು ಅಧಿಪತಿಯಾದ. ಆಗ ಚಂದ್ರಧ್ವಜನು ಅಳುಕಿ ತನ್ನ ಹದಿನೆಂಟು ಮಂದಿ ಹೆಣ್ಣುಮಕ್ಕಳನ್ನು ಕಪ್ಪವನ್ನೀಯುವಂತೆ ಲಕ್ಷ್ಮಣನಿಗೆ ಕಾಣಿಕೆಯಾಗಿತ್ತ.

ಜನಕನು ಮುಂದೆ ಎರಡೂ ಬಿಲ್ಲುಗಳನ್ನು ಪೂಜಿಸಿದ. ಆನಂತರ ಅನರಣ್ಯಕುಮಾರನಾದ ದಶರಥ ಮಹಾರಾಜನು ರಾಮಸೀತೆಯರನ್ನು ಮುಂದಿಟ್ಟುಕೊಂಡು ಸೇನಾಸಮೇತನಾಗಿ ಸ್ವಯಂವರಶಾಲೆಯಿಂದ ಮಿಥಿಲಾನಗರಕ್ಕೆ ಅಭಿಮುಖನಾಗಿ ಹೊರಟ. ಆಗ ಅಟ್ಟಲೆಯಿಂದ ಹರಡಿ, ಪುರದ ಗೋಪುರಗಳನ್ನು ಜತ್ತಿ, ಕೋಟೆಯನ್ನು

ತುಳಿದು, ಮನೆಗಳ ಮೇಲೆಲ್ಲ ಹಾರಿ, ಹರ್ಮ್ಯವನ್ನು ಹಾಯ್ದು, ದೇಗುಲದ ಮೇಲಿನಿಂದ ಗಗನತಳಕ್ಕೇರಿ ದುಂದುಭಿಸ್ವನವನ್ನು ಮೀರಿಸಿದ ಶಂಖಧ್ವನಿಯು ಹೊಮ್ಮಿತು. ಅದನ್ನು ಕೇಳಿದ ಪುರಜನರೆಲ್ಲ ಕಟ್ಟಡಗಳ ಮೇಲೆ ಹತ್ತಿ ಮೆರವಣಿಗೆಯನ್ನು ನೋಡಿದರು. ಲಲನೆಯರು ಚಾಮರವಿಕ್ಕುತ್ತಿರಲು ಪರಿಪೂರ್ಣಜಗನ್ಮನೋಹರನಾದ ದಶರಥನು ಕುಲಾಚಲದಂತಿದ್ದ ಪಟ್ಟದಾನೆಯ ಮೇಲಿನ ಪುಷ್ಪಕವನ್ನೇರಿ ಬರುತ್ತಿದ್ದ. ಕುದುರೆಯ ದಳವು ಸಮುದ್ರದಂತೆ ಅಲೆಅಲೆಯಾಗಿ ಬರಲು, ಎದೆಯ ಮೇಲಿನ ತಿಸರದ ಕಾಂತಿಯು ಲಕ್ಷ್ಮಿಯ ಕುಡಿನೋಟದಂತೆ ಹೊಳೆಯಲು, ಮಣಿಕುಂಡಲಕಿರಣಗಳ ಮಿಂಚಿನಂತಹ ಹೊಳಪು ಕೆನ್ನೆಯ ಮೇಲೆ ತೊನೆದಾಡಲು ಲಕ್ಷ್ಮಣನು ಮದನನಂತೆ ಕಂಗೊಳಿಸಿದ. ಸೋಂಕಿನಿಂದ ತನಗೆ ಹರ್ಷವನ್ನುಂಟುಮಾಡುತ್ತ ಲಜ್ಜಾಭರದಿಂದ ಕುಳಿತ ವೈದೇಹಿಯ ಜೊತೆ ಹೊನ್ನ ರಥದಲ್ಲಿ ಕುಳಿತು ಮದನನ್ನು ಮೀರಿಸಿದ ತನ್ನ ಚೆಲುವಿನಿಂದ ನೋಡಿದವರಿಗೆ ನೇತ್ರಾನಂದವನ್ನುಂಟುಮಾಡುತ್ತ ಬರುತ್ತಿದ್ದವನೇ ರಾಘವ. ನಡೆಯುವ ನೀಲಾಚಲಯುಗಳದಂತೆ ಆನೆಯ ಮೇಲೆ ಕಾಲುಮಡಿಸಿ ಕುಳಿತು, ಮೌಕ್ತಿಕಾವಲಿಯೆಂಬ ವಕ್ಷಸರಸ್ಸಿನ ಮೃಣಾಳಿಕೆಯು ಬೆಡಗನ್ನು ಬೀರಲು ಭರತಶತ್ರುಘ್ನರು ಚಂದ್ರಸೂರ್ಯರನ್ನು ಗೆಲ್ಲಲು ಹೊರಟವರಂತೆ ಮುಂಭಾಗದಲ್ಲಿ ಬರುತ್ತಿದ್ದರು.

ಹೀಗೆ ಬಂದು ಊರನ್ನು ಸೇರಿ ವಿವಾಹಮಂಟಪದ ಮುಂದೆ ವಾಹನಗಳಿಂದ ಇಳಿದು ಬಂದಾಗ ಪುಣ್ಯಾಂಗನೆಯರು ಅಕ್ಷತೆಗಳನ್ನು ತಳಿದರು. ಆ ಮಂಟಪದ ನೀಲ ಕಂಬಗಳನ್ನು ಆನಿಸಿ ಪಚ್ಚೆಯ ಪಡಲಿಗೆಗಳೂ ಹೊನ್ನ ಹೂಜಿಗಳೂ ಇದ್ದವು, ಹೊಳೆಯುವ ಗೋಡೆಗಳನ್ನು ಸುಂದರವಾದ ಚಿತ್ರಗಳು ಅಲಂಕಾರಗೊಳಿಸಿದ್ದವು, ಅಂಗಳದಲ್ಲಿ ಮುತ್ತಿನ ರಂಗೋಲಿಗಳು ಶೋಭಿಸಿದವು, ಬೆಳ್ಳಿಯ ಬಾಗಿಲುಗಳಲ್ಲಿ ಹೊಳೆಯುವ ರತ್ನಮಯ ತೋರಣಗಳು ಮಿನುಗಿದವು. ಮಂಟಪದ ಗೋಡೆಗಳ ಮೇಲಿನ ಚಿತ್ರಗಳಲ್ಲಿ ಕೆಲವೆಡೆ ಸುರ ವಿದ್ಯಾಧರ ಮಾನವ ಕಿನ್ನರ ದಂಪತಿಗಳಿದ್ದರೆ; ಮತ್ತೆ ಕೆಲವೆಡೆ ಪುರುಜಿನ ಚರಿತೆಯೂ, ಭರತೇಶ ಸಗರ ಚಕ್ರವರ್ತಿಗಳ ಚರಿತೆಗಳೂ, ಹರಿವಂಶದ ವೀರಪುರುಷರ ಚರಿತೆಗಳೂ ರಂಜಿಸಿದವು. ಕಿಟಕಿಗಳ ಬಳಿ ನೇತು ಹಾಕಿದ್ದ ಸರಗಳ ಮುತ್ತುಗಳನ್ನು ಮಲ್ಲಿಗೆ ಮೊಗ್ಗುಗಳೆಂದು ಭಾವಿಸಿ ದುಂಬಿಯ ಮರಿಗಳು ಅವುಗಳ ಸುತ್ತ ಹಾರುತ್ತಿದ್ದವು. ರಾಜಾಂಗಣದಲ್ಲಿ ಗಾಯಕಿಯರ ಮಂಗಳಗಾಯನದೊಡನೆ ಸೇರಿ ಬಂಡುಣ್ಣುತ್ತಿದ್ದ ಎಳೆದುಂಬಿಗಳ ಝೇಂಕಾರದ ಇಂಪು ಇಮ್ಮಡಿಸಿತ್ತು. ಸ್ಫಟಿಕದ ಕಂಬಗಳಲ್ಲಿನ ಮಾಣಿಕ್ಯದ ದೀಪಗಳು ಮುಕ್ಕಣ್ಣನ ಹಣೆಗಣ್ಣಿನಂತೆ ಆಕರ್ಷಕವಾಗಿದ್ದವು. ಅಲ್ಲಿನ ನವರತ್ನದ ಮೇಲ್ಕಟ್ಟುಗಳು ಕಾಮನ ಬಿಲ್ಲನ್ನು ಉಗುಳುತ್ತಿದ್ದವು; ಅಗುರಿನ ಧೂಪವು ದುಂಬಿಯ ನೀಲ ಮೈಗಳ ಬಣ್ಣವನ್ನು ಹಾಸ್ಯ ಮಾಡುತ್ತಿದ್ದವು; ಮಾಣಿಕದ ದೀವಿಗೆಗಳು ಹಗಲನ್ನು ಇರುಳಿಗೆ ಕೈಸೆರೆಗೊಟ್ಟಿದ್ದವು; ಎತ್ತರದಲ್ಲಿ ಹಾರಾಡುವ ಧ್ವಜಗಳು ಗಾಳಿಯ ವೇಗವನ್ನು ಕುಂಠಿತಗೊಳಿಸುತ್ತಿದ್ದವು.

ಆ ಮಂಟಪದ ಮಧ್ಯದಲ್ಲಿನ ಮರಕತ ವೇದಿಕೆಯು ಭೂದೇವಿಯ ಕೇಶಬಂಧದಂತಿದ್ದರೆ, ಮುತ್ತಿನ ರಂಗವಲ್ಲಿಗಳು ಅವಳ ತಲೆಯುಡುಗೆಗಳಂತೆ ಮನೋಹರವಾಗಿದ್ದವು. ಹಸುರಿನ ಜಗುಲಿಯಲ್ಲಿನ ಚಿನ್ನದ ಸಿಂಹಾಸನವು ಹಸುರೆಲೆಗಳಿಂದ

ತುಂಬಿದ ಕೊಳದ ನಡುವೆ ಅರಳಿದ ಹೊಂದಾವರೆಯಂತೆ ರಂಜಿಸಿತು. ವೇದಿಕೆಯ ನಡುವೆ ಎಳೆಯ ಅಡಕೆಯ ಗೊನೆಗಳೂ, ಮಾದಳ ತೆಂಗು ದ್ರಾಕ್ಷಿ ಬಾಳೆ ಮುಂತಾದ ಹಣ್ಣುಗಳೂ ರಂಜಿಸಿದವು. ಪಂಚರತ್ನಗಳನ್ನೂ ಸಮಸ್ತ ಔಷಧಿಗಳನ್ನೂ ಸರ್ವಧಾನ್ಯಗಳನ್ನೂ ಹೊತ್ತ ಪೂರ್ಣಕುಂಭವು ತುಂಬಿದ ವೇದಿಕೆಯ ಮಧ್ಯೆ ಶೋಭಿಸುತ್ತಿತ್ತು. ಸ್ಫಟಿಕದ ಭರಣಿಯಲ್ಲಿ ಮೊಸರು, ಹೊನ್ನ ಬಟ್ಟಲಲ್ಲಿ ಚಂದನ, ಪಚ್ಚೆಯ ಗಿಂಡಿಯಲ್ಲಿ ಹಸುರು ಗರಿಕೆ, ಬೆಳ್ಳಿಯ ದೊನ್ನೆಯಲ್ಲಿ ಪಚ್ಚಕರ್ಪೂರ, ನೀಲ ಶುಕ್ತಿಕೆಯಲ್ಲಿ ಕಸ್ತೂರಿ, ಮಾಣಿಕ್ಯದ ಭಾಜನದಲ್ಲಿ ಕುಂಕುಮ – ಈ ಮಂಗಳದ್ರವ್ಯಗಳು ಮೆರೆದವು. ಇಂತಹ ಮಣಿವೇದಿಕೆಯ ಮಧ್ಯೆ ವಿಶಾಲ ಪೀಠದ ಪೂರ್ವಭಾಗದಲ್ಲಿ ಉಪೇಂದ್ರ ಭರತ ಶತ್ರುಘ್ನರಲ್ಲದೆ ಅನೇಕ ರಾಜರುಗಳೊಡನೆ ದಶರಥನು ಇಂದ್ರನಂತೆ ಕುಳಿತಿದ್ದ; ಅವರೆದುರು ಸಾಲಿನಲ್ಲಿ ಸುಮಿತ್ರೆ ಸುಪ್ರಭೆ ಕೈಕೆಯರಲ್ಲದೆ ಅನಂತ ಸಾಮಂತಸೀಮಂತಿನಿಯರೊಡನೆ ಅಪರಾಜಿತೆ ಮಹಾದೇವಿಯು ಇಂದ್ರಾಣಿಯಂತೆ ಶೋಭಿಸಿದಳು.

ವಿದೇಹಿಯು ಕಲ್ಪಲತೆಯೋ ಸುರಧೇನುವೋ ಎನ್ನುವಂತೆ ವಿವಾಹಮಂಟಪದಲ್ಲಿದ್ದ ಸುಮಂಗಲಿಯರಿಗೆ ರತ್ನದ ಬಾಗಿನಗಳನ್ನೂ ನಾನಾ ಬಗೆಯ ಸೀರೆಗಳನ್ನೂ ಇತ್ತು ಮನ್ನಿಸಿದಳು. ಚಿನ್ನದ ನೂಪುರ ಉಂಗುರ ಬಳೆ ಕಂಕಣ ಮುಂತಾದವುಗಳ ಕಲಕಲ ಸದ್ದು, ಕಡೆಗಣ್ಣ ಕಾಂತಿ ಇವುಗಳಿಂದ ಕೂಡಿ, ನಾನಾ ಬಗೆಯ ಉಡುಗೊರೆಗಳಿಂದ ತುಂಬಿದ ರತ್ನದ ಬುಟ್ಟಿಗಳನ್ನು ಹಿಡಿದ ಅಂತಃಪುರದ ವಿಲಾಸಿನಿಯರ ನಡುವೆ ಎಳೆಲತೆಗಳಿಂದ ಸುತ್ತುವರಿದ ಅನಂಗಜಂಗಮಲತೆಯಂತೆ ಬಂದ ವಿದೇಹಿಯು ಅಪರಾಜಿತೆಗೂ ಸುಮಿತ್ರೆಗೂ ಬಾಗಿನಗಳನ್ನಿತ್ತಳು. ಆ ಸಮಯದಲ್ಲಿ, ಬಂಧುಜನಗಳೊಡನೆ, ಪುರೋಹಿತರ ಪುಣ್ಯಾಹರವ ಪುಣ್ಯಾಂಗನೆಯರ ಆಶೀರ್ವಚನನಿನದ ಮಂಗಳಗೀತಗಳ ಮಧುರಧ್ವನಿ ಮಂಗಳಪಾಠಕರ ಮಂತ್ರಗಳ ನಡುವೆ, ರಘುಕುಲ ರಾಜಭವನವನ್ನು ಪವಿತ್ರಗೊಳಿಸುವ ಶುದ್ಧ ಸಲಿಲಪೂರ್ಣವಾದ ಕಳಶವನ್ನೆತ್ತಿ ಜನಕನು, ತನ್ನ ಸಂತಾನವೃದ್ಧಿಗೆ ಹೊಯ್‌ನೀರೆರೆಯುವಂತೆ ಹರ್ಷಾಶ್ರುಸಮೇತನಾಗಿ ಕೈನೀರನ್ನೆರೆದ; ಆಗ ಮಂಗಳವಾದ್ಯಗಳು ಭೋರ್ಗರೆದವು. ಬಲಗೈಯನ್ನು ರಾಮನ ಬೆರಳುಗಳು ತಾಕಲು, ತೆಂಕಣಗಾಳಿಯ ಸೋಂಕಿನಿಂದ ಚಿಗುರುವ ಲತೆಯಂತೆ ಸೀತೆಯ ದೇಹಲತೆಯಲ್ಲಿ ಪುಳಕಾಂಕುರವಾಯಿತು. ಚಪಲಾಕ್ಷಿಯ ಕೋಮಲ ಪಾಣಿಪಲ್ಲವಸ್ಪರ್ಶದಿಂದ ಹರ್ಷಗೊಂಡ ರಾಮನು ಎಳೆಬಿಸಿಲು ಬಿದ್ದ ತಾವರೆಗೊಳದ ಸೊಬಗನ್ನೂ ಮೀರಿಸಿದ. ಈ ಲಲಿತಾಕೃತಿಯ ದಂಪತಿಯನ್ನು ಕಂಡು ಪುರಜನರು ಇಂದ್ರ–ಶಚಿ, ರತಿ–ಮದನ, ಚಂದ್ರ–ರೋಹಿಣಿಯರನ್ನು ಕಂಡಂತೆ ಹರುಷಗೊಂಡರು.

ರಾಮನ ಕಿರೀಟದ ಮಣಿಗಳು ದೆಸೆದೆಸೆಗೆ ಕಾಮನ ಬಿಲ್ಲಿನ ಹೊಳಪನ್ನು ಬೀರುತ್ತಿತ್ತು; ಮರಕತಮಣಿಕುಂಡಲರಶ್ಮಿಯಿಂದ ಅವನ ವಕ್ಷಸ್ಥಳವು ಪಾಚಿಯಿಂದ ಸುತ್ತುವರಿದ ನೈದಿಲೆಯಂತೆ ಕಂಗೊಳಿಸಿತು; ಅವನ ಬಾಹುಯುಗಳವು ಜಯಲಕ್ಷ್ಮಿಯ ಮಣಿಪೀಠದಂತೆಯೂ, ಭಯಗೊಂಡ ಮತ್ತು ಶರಣಾದವರ ವಜ್ರಪಂಜರದಂತೆಯೂ ಶೋಭಿಸಿದವು. ಹಲಧರನ ವಿಶಾಲವಾದ ಎದೆಯ ಮೇಲಣ ಹಾರದ ಮುತ್ತುಗಳ ಕಾಂತಿಯು ಕ್ಷೀರಸಾಗರದ ನೊರೆತೆರೆಗಳಂತೆ ರಂಜಿಸಿತು. ಅಂಗಜನ ಕಡುಗಾಡಿಯ ಗರ್ವ

ಇನ್ನು ಸೋರಿಹೋಯಿತು ಎನ್ನುವಂತಿದ್ದ ರಾಮ, ಜಿತಮನೋಭವಕಾಂತೆಯಂತಿದ್ದ ಸೀತೆ ಇವರನ್ನು ಪುರಜನರು ಕಂಡು ಸಂತಸಗೊಂಡರು. ಈ ವಧುವಿನ ಆಭರಣಗಳು ಅವಳಿಂದಾಗಿ ಶೋಭೆಯನ್ನು ಪಡೆದವು, ಹಾಗಾಗಿ ಅವು ಕೇವಲ ಮಂಗಳಕಾರಣ ಎಂದು ಜನರು ಆಡಿಕೊಂಡರು. ಮಹೋತ್ಸಾಹಚಿತ್ತನಾದ ಜನಕನು ನೆರೆದ ಜನಕ್ಕೆ ಉದಾರವಾಗಿ ದಾನಮಾಡಿ ತನ್ನ ಕೊಡುಗೈ ಮತ್ತು ತ್ಯಾಗಬುದ್ಧಿಯನ್ನು ಮೆರೆದ. ರಾಮಚಂದ್ರನು ಚಂದ್ರೋದಯದ ಸಮುದ್ರದಂತೆ ಹಿಗ್ಗುವಡೆದ. ಹೀಗೆ ರಾಮನು ಪರಹಿತವನ್ನು ಪಾಲಿಸಲು ಶಾಶ್ವತಲಕ್ಷ್ಮಿಯನ್ನು ಪಡೆದ; ಭೂಚಕ್ರವನ್ನು ರಕ್ಷಿಸಲು ಪನ್ನಗರಾಜಧನುವನ್ನು ಪಡೆದ; ರೂಪದರ್ಪವನ್ನು ಅಡಗಿಸಲು ಕೀರ್ತಿಯನ್ನು ಪಡೆದ.

* * * * *

# ೬. ಕಾಡಿಗೆ ಹೋದುದು

ರಾಮಲಕ್ಷ್ಮಣರು ಉದಿತೋದಿತಪುಣ್ಯಪ್ರಭಾವವನ್ನು ಗಳಿಸಿದರು. ಸಿರಿ ಮಹಿಮೆಗಳು ತನ್ನ ಅಣ್ಣಂದಿರನ್ನು ಒಲಿದವೇ ಹೊರತು ತನಗೆ ಆ ಭಾಗ್ಯವಿಲ್ಲವಲ್ಲ ಎಂದು ಲೋಭಾರತನಾದ ಭರತನು ವಿಷಾದಭರಿತವಾದ ವೈರಾಗ್ಯದಿಂದ ಕೂಡಿ ತಪಸ್ಸಿಗೆ ಹೊರಡಲು ನಿಶ್ಚೈಸಿದ. ಅದನ್ನು ತಿಳಿದ ತಾಯಿ ಕೈಕೆಯು ಏಕಾಂತದಲ್ಲಿ ಈ ವಿಷಯವನ್ನು ಗಂಡನೊಡನೆ ಪ್ರಸ್ತಾಪಿಸಿದಳು. ಕನಕ-ಸುಪ್ರಭೆಯರ ಮಗಳಾದ ಕನಕಪ್ರಭೆಯೊಡನೆ ಅವನಿಗೆ ಮದುವೆಮಾಡಿ ಭರತನನ್ನು ಮೋಹಪಾಶದ ತೊಡರಲ್ಲಿ ಸಿಲುಕಿಸಲು ಸಲಹೆಯಿತ್ತಳು. ಇದಕ್ಕೆ ಒಪ್ಪಿದ ದಶರಥನು ಜನಕಕನಕರನ್ನು ಬರಮಾಡಿಕೊಂಡು ಮದುವೆಯ ಪ್ರಸ್ತಾಪವೆತ್ತಿದನು. "ನನ್ನ ಮನಸ್ಸಿನಲ್ಲಿಯೂ ಈ ಆಲೋಚನೆಯಿತ್ತು; ನೀವು ಹೇಳಿದುದರಿಂದ ನನ್ನ ಮನಸ್ಸಿನ ಬಯಕೆಯೂ ಕೈಗೂಡುವಂತಾಯಿತು" ಎಂದು ಕನಕನು ಸಂತಸಪಟ್ಟ. ಒಂದು ಶುಭದಿನ ಶುಭಮುಹೂರ್ತದಲ್ಲಿ ಕನಕಪ್ರಭೆ-ಭರತರ ಮದುವೆಯು ಅದ್ಧೂರಿಯಿಂದ ನೆರವೇರಿತು.

ಮದುವೆಯ ವೈಭವ ಮತ್ತು ಬಲವನ್ನು ಕಂಡು ವಿದ್ಯಾಧರ ಮಹತ್ತರನು ಬೆಕ್ಕಸಗೊಂಡ. ಮಿಥಿಲೆಯಿಂದ ಹೊರಟು ರಥನೂಪುರಚಕ್ರವಾಳಪುರಕ್ಕೆ ಬಂದು ತನ್ನ ಒಡೆಯನಾದ ಇಂದುಗತಿಗೆ ರಾಮಲಕ್ಷ್ಮಣರ ವಿಶೇಷವನ್ನು ಬಣ್ಣಿಸಿದ. ಅದನ್ನು ಕೇಳಿದ ಇಂದುಗತಿಗೆ ಅವರು ಸಾಧಾರಣಲ್ಲ, ಕಾರಣಪುರುಷರು; ಅವರು ತ್ರಿಖಂಡ ಭರತಭೂಮಿಗೆ ಒಡೆಯರಾಗದಿರರು ಅನ್ನಿಸಿತು. ಜೊತೆಗೆ ಭಯ ಹುಟ್ಟಿ ಉಷಃಸಮಯದ ನಕ್ಷತ್ರದಂತೆ ಅವನು ನಿಸ್ತೇಜಗೊಂಡ. ಅವನ ಮಗ ಪ್ರಭಾಮಂಡಲನ ಮನಃಕರಂಡಕದಲ್ಲಿ ಸೀತೆಯೇ ತುಂಬಿಕೊಂಡಳು. ಐದು ಹೂಬಾಣಗಳನ್ನೂ ಮದನನು ಹೊಡೆಯಲು ವಿಯೋಗಿಯಾದ ಯೋಗಿಯಂತೆ ಪ್ರಭಾಮಂಡಲನು ಐದೂ ಇಂದ್ರಿಯಸುಖಕ್ಕೆ ಹೆದರಿ ಅವಳದೇ ಚಿಂತೆಯಲ್ಲಿದ್ದ. ಹೀಗೆ ಪ್ರಭಾಮಂಡಲನು ಹತಪ್ರಭನಾಗಿ ಸೀತಾವಿರಹವನ್ನು ಗೆಳೆಯನಾದ ವಸಂತಧ್ವಜನಲ್ಲಿ ನಿವೇದಿಸಿಕೊಂಡ; ಅವಳನ್ನು ತನ್ನ ಕೈವಶಮಾಡಬೇಕೆಂದು ಕೇಳಿಕೊಂಡ. ಆಗ ಪಕ್ಕದಲ್ಲಿದ್ದ ಬೃಹತ್ಕೇತುವೆಂಬ ವಿದ್ಯಾಧರನು, "ಅವಳ ಕಾರಣದಿಂದ ನಮ್ಮ ಬಿಲ್ಲಗಳೆರಡೂ ನಮ್ಮ ಕೈಬಿಟ್ಟು ಹೋದವು; ಅಗ್ನಿಸಾಕ್ಷಿಯಾಗಿ ಸೀತೆಯು ರಾಮನ ಕೈಹಿಡಿದಿದ್ದಾಳೆ; ಬಿಲ್ಲುಗಳೊಡನೆ ಹೋಗಿದ್ದ ನಮ್ಮ ಮಹತ್ತರನು ಪುಣ್ಯವಶಾತ್ ಬದುಕಿ ಹಿಂದಿರುಗಿದ್ದಾನೆ; ಇನ್ನು ಸೀತೆಯ ಹಂಬಲದಿಂದ ಏನು ಪ್ರಯೋಜನ?" ಎಂದ.

ಆಗ ಹುಬ್ಬು ಗಂಟಿಕ್ಕಿಕೊಂಡು, ಕಣ್ಣಲ್ಲಿ ಕೋಪದ ಕೆಂಡಗಳನ್ನು ತುಂಬಿಕೊಂಡು, ಕೆನ್ನೆಗಳ ಮೇಲೆ ಬೆವರಹನಿಗಳು ಸಾಲುಗಟ್ಟಲು ಕುಮಾರನು ಹೀಗೆಂದ: "ಯುದ್ಧದಲ್ಲಿ ಮಾನವರು ನಮ್ಮ ಸಮ ಎಂಬ ನಿನ್ನ ಮಾತನ್ನು ವಾಪಸು ತೆಗೆದುಕೋ. ಕಷ್ಟವಿಲ್ಲದೆಯೇ ರಾಮಲಕ್ಷ್ಮಣರನ್ನು ಹೆದರಿಸಿ ಸೀತೆಯನ್ನೂ ಧನುಯುಗಳವನ್ನೂ ತರುತ್ತೇನೆ" ಎಂದು ಸಿಂಹದಂತೆ ಗರ್ಜಿಸಿದ. ಅದೇ ರಭಸದಲ್ಲಿ ವಿಮಾನವನ್ನೇರಿ ಹೊರಟ. ಕುಲ, ರೂಪ, ವಯಸ್ಸು, ಬಾಹುಬಲ, ಜಾತಿ, ಕಲೆ, ದೇವತಾಬಲ, ರಾಜ್ಯ – ಈ ಮದಗಳ ಜೊತೆಗೆ ಕಾಮವೂ ಸೇರಿ ಅವನ ದೃಷ್ಟಿ ಮಸುಳಿಸಿತು; ವಿಷಯಾತುರರು ಮುಂದುಗಾಣಬಲ್ಲರೇ! ಹಾಗಾಗಿ ಆ ಮದಾವಿಲನು ಬಲಭದ್ರನನ್ನು ಅಬಲನೆಂದು ಬಗೆದು, ಕೆಲವು ಮಂದಿ ಪರಿವಾರದೊಡನೆ ಆಕಾಶಮಾರ್ಗದಲ್ಲಿ ಸಾಗುತ್ತ ಅತ್ತಿತ್ತ ನೋಡುವಾಗ, ಹಿಂದಿನ ಜನ್ಮದಲ್ಲಿ ತಾನು ಕುಂಡಲಮಂಡಿತನಾಗಿ ಬಾಳಿದ ವಿದಗ್ಧ ನಗರವು ಕಣ್ಣಿಗೆ ಬಿತ್ತು. ತಕ್ಷಣವೇ ಜಾತಿಸ್ಮರಣೆಯುಂಟಾಗಿ ಅವನು ಮೂರ್ಚೆಗೊಂಡ. ಆಗ ಜೊತೆಯಲ್ಲಿದ್ದ ವಿಯಚ್ಚರರು ಅವನನ್ನು ರಥನೂಪುರಚಕ್ರವಾಳಪುರಕ್ಕೆ ವಾಪಸು ಕರೆತಂದರು.

ಇಂದುಗತಿಯ ಸಮ್ಮುಖದಲ್ಲಿ ಅವನಿಗೆ ಶೈತ್ಯೋಪಚಾರಗಳು ನಡೆದವು. ಅವನು ಮೂರ್ಚೆಯಿಂದ ಎಚ್ಚರಗೊಂಡ. ಇಂದುಗತಿಯು ಮಗನ ಮುಖವನ್ನು ನೋಡಿ, "ಜಾನಕಿಗಿಂತ ನೂರ್ಮಡಿ ಚೆಲುವೆಯಾದ ಖೇಚರ ಕನ್ಯೆಯೊಡನೆ ನಿನ್ನ ಮದುವೆ ಮಾಡುತ್ತೇನೆ: ಅವಳ ಚಿಂತೆಯನ್ನು ಬಿಡು" ಎಂದು ಸಾಂತ್ವನ ಮಾಡಿದ. ಆಗ ಪ್ರಭಾಮಂಡಲನು ಸ್ವಲ್ಪ ಕತ್ತೆತ್ತಿ ತಂದೆಯ ಮುಖವನ್ನು ನಿರುಕಿಸುತ್ತ, ಕೈಮುಗಿದು, "ನಾನು ಮೂರ್ಚೆ ಹೋದುದಕ್ಕೆ ಸೀತೆಯ ನೆನಪು ಕಾರಣವಲ್ಲ. ಹಿಂದಿನ ಜನ್ಮದಲ್ಲಿ ನಾನು ಪ್ರತಾಪಸಿಂಹನೆಂಬ ರಾಜನಿಗೆ ಕುಂಡಲಮಂಡಿತನೆಂಬ ಮಗನಾಗಿದ್ದೆ. ತಂದೆಯ ಮತನ್ನು ಕೇಳದೆ ಅವಿಧೇಯನಾಗಿ ಪಾಪದ ಕೆಲಸಗಳನ್ನು ಮಾಡುತ್ತ ವಿದಗ್ಧನಗರದಲ್ಲಿದ್ದೆ. ಆ ನಗರದಲ್ಲಿದ್ದ ಕಪಿಲನೆಂಬ ಬ್ರಾಹ್ಮಣನ ಹೆಂಡತಿಯನ್ನು ದರ್ಪಾಂಧನಾಗಿದ್ದ ನಾನು ಅರಸಿಯಾಗಿ ಮಾಡಿಕೊಂಡೆ. ಅನರಣ್ಯನ ಸೇನಾಪತಿಯು ಮುನಿಸಿನಿಂದ ನನ್ನನ್ನು ಊರಿಂದ ಓಡಿಸಿದಾಗ ಬೇರೊಂದು ಮಂಡಲಕ್ಕೆ ಹೋಗಿ ಅಲ್ಲಿನ ಜಿನಮುನಿಯ ಬಳಿ ಅಣುವ್ರತಗಳನ್ನು ಸ್ವೀಕರಿಸಿದೆ. ಮುಂದೆ ಜೀವನಪೂರ್ತಿ ಆ ಮಾರ್ಗದಲ್ಲಿ ನಡೆದು ನಾನೂ ನನ್ನ ಅರಸಿಯೂ ದೇವಗತಿಯನ್ನು ಪಡೆದೆವು. ಅಲ್ಲಿನ ಅವಧಿ ಮುಗಿದ ಮೇಲೆ ನಾನು ಜನಕನ ಮಹಾದೇವಿ ವಿದೇಹಿಯ ಗರ್ಭದಲ್ಲಿ ಅವಳಿಜವಳಿಯಲ್ಲಿ ಒಬ್ಬನಾಗಿ ಹುಟ್ಟಿದೆ. ಆಗ ಹಿಂದಿನ ಜನ್ಮದ ನನ್ನ ಹಗೆಯಾದ ಕಪಿಲನು ನನ್ನನ್ನು ಅಪಹರಿಸಿದ. ನನ್ನ ವಧೆ ಮಾಡಲೆಂದು ಬಯಸಿದರೂ ಹಾಗೆ ಮಾಡಲಾರದೆ ಕರುಣೆಯಿಂದ ತನ್ನ ಮಣಿಕುಂಡಲವನ್ನು ನನ್ನ ಕಿವಿಗೆ ತೊಡಿಸಿ ಪರ್ಣಲಘುವಿದ್ಯೆಯಿಂದ ತಂದು ನಿಮ್ಮ ಹಾಸಿಗೆಯ ಮೇಲೆ ಮಲಗಿಸಿ ಹೋದ. ನೀವೂ ಮಹಾರಾಣಿಯೂ ನನ್ನನ್ನು ಪ್ರೀತಿಯಿಂದ ಸಲಹಿ ಯುವರಾಜಪದವಿಯನ್ನು ದಯಪಾಲಿಸಿದಿರಿ. ನಾನಾದರೋ ಸೀತೆ ನನ್ನ ತಂಗಿಯೇ ಎಂಬುದನ್ನರಿಯದೆ ಅವಳಿಗೆ ಆಸೆಪಟ್ಟೆ" ಎಂದು ನಿರೂಪಿಸಿದ.

ಕತೆಯನ್ನು ಕೇಳಿ ಖಚರಪತಿಗೆ ವಿಸ್ಮಯವುಂಟಾಯಿತು. ಅವನು ತಲೆದೂಗಲು ಅಜ್ಞಾನತಿಮಿರವಿಘಟನ ದೀಪ ಪ್ರಚುರದಂತೆ ಕಿರೀಟದ ರತ್ನಕಾಂತಿಯು ಬೆಳಗಿತು. ಅಲ್ಲದೆ, ವಿಸ್ಮಯವು ಅವನಲ್ಲಿ ವೈರಾಗ್ಯವನ್ನು ತುಂಬಿತು. ಸದ್ಯ, ಮಗನಿಗೆ ಸೀತೆಯ ಸಂಬಂಧವು

ನೆರವೇರದೆ ಒಳ್ಳೆಯದಾಯಿತು; ಅದೇನಾದರೂ ಆಗಿದ್ದರೆ ತನ್ನ ವಂಶವು ದುರಂತ ದುಷ್ಕೀರ್ತಿಯೆಂಬ ಬೆಂಕಿಗೆ ಆಹುತಿಯಾಗುತ್ತಿತ್ತು; ಇಂದ್ರಿಯ ಚಾಪಲ್ಯವು ಉಪಕಾರಿಗೆ ಅಪಕಾರವನ್ನೂ, ಅಪಕಾರಿಗೆ ಉಪಕಾರವನ್ನೂ ಮಾಡುತ್ತದೆಯಲ್ಲ ಎಂದು ಅವನಿಗನ್ನಿಸಿತು. ತನ್ನ ಕುಲಾಗತವಾದ ಧನುರ್ಯುಗವು ಹೋಯಿತು; ತನ್ನ ಔನ್ನತ್ಯ ಮಸುಳಿಸಿತು, ರಾಮಲಕ್ಷ್ಮಣರ ತೇಜಸ್ಸು ವರ್ಧಿಸಿತು ಎಂಬ ಆಲೋಚನೆ ಬಂದು ಇಂದುಗತಿಗೆ ತನ್ನ ಸಂಪತ್ತೆಲ್ಲ ತೃಣಸಮಾನವೆನಿಸಿತು. ವಿಯಚ್ಚರಾಧಿರಾಜತ್ವವನ್ನು ಪ್ರಭಾಮಂಡಲನಿಗೆ ಇತ್ತು, ಮಹೇಂದ್ರೋದ್ಯಾನದಲ್ಲಿದ್ದ ಸರ್ವಭೂತಹಿತ ಭಟ್ಟಾರಕರ ಸನ್ನಿಧಿಯಲ್ಲಿ ದೀಕ್ಷೆಯನ್ನು ಕೈಗೊಂಡ. ಅವನ ಮಂದರಧೈರ್ಯವನ್ನು ಕಂಡು ಅಮರಸಮಿತಿಯು ಬೆರಗುಗೊಂಡಿತು.

ಇತ್ತ ಜನಕ ಮಹಾರಾಜನು ವಸ್ತುವಾಹನಾದಿಗಳನ್ನು ಉಡುಗೊರೆಯಾಗಿತ್ತು ಸೀತೆಯನ್ನು ಅಯೋಧ್ಯೆಗೆ ಕಳಿಸಿಕೊಟ್ಟ. ಕೆಲವು ದಿನಗಳ ಪ್ರಯಾಣದ ನಂತರ ದಶರಥನು ವಿನೀತಾನಗರವನ್ನು ಸೇರಿದ. ಒಂದು ದಿವಸ, ಋಷಿನಿವೇದಕನೊಬ್ಬನು ಬಂದು ಮಹೇಂದ್ರೋದ್ಯಾನದಲ್ಲಿ ಮನಃಪರ್ಯಯಜ್ಞಾನಿಗಳಾದ ಸರ್ವಭೂತಹಿತ ಭಟ್ಟಾರಕರು ತಮ್ಮ ಋಷಿಸಮುದಾಯದೊಡನೆ ಯೋಗ ನಿಯೋಗದಿಂದ ಇರುವರೆಂದು ಅಕಲುಷಚಿತ್ತನಾದ ಮಹಾರಾಜನಿಗೆ ಬಿನ್ನವಿಸಿದ. ತಕ್ಷಣವೇ ರಾಜನು ಸಿಂಹಾಸನದಿಂದೆದ್ದು ಹಣೆಯಲ್ಲಿ ಮುಗಿದ ಕೈಗಳನ್ನಿಟ್ಟುಕೊಂಡು ಮುನಿಗಳಿದ್ದ ದಿಕ್ಕಿಗೆ ನಮಸ್ಕರಿಸಿದ. ಆನಂತರ ಪರಿಮಿತ ಪರಿವಾರದೊಡನೆ ಉದ್ಯಾನಕ್ಕೆ ಬಂದು ನಕ್ಷತ್ರಗಳಿಂದ ಸುತ್ತುವರಿದ ಚಂದ್ರನಂತೆ ದೀಪ ಹೊತ್ತ ಬಾಲಿಕೆಯರಿಂದ ಆವೃತನಾಗಿ ಭಕ್ತಿಯಿಂದ ಮುನಿಗಳಿಗೆ ಬಲವಂದ, ಅಷ್ಟವಿಧಾರ್ಚನೆಗಳಿಂದ ಅರ್ಚಿಸಿದ. ಮನಸ್ಸೆಂಬ ಹಾವಿನ ವಿಷವನ್ನು ಕಳೆಯುವ ಮತ್ತು ಜರಾಮರಣವೆಂಬ ಬಂಡೆಯನ್ನು ಒಡೆಯುವ ತನ್ನ ಗಂಭೀರ ಧ್ವನಿಯಿಂದ ಮುನಿಯು ಎಲ್ಲರನ್ನೂ ಹರಸಿದ. ದಶರಥನು ರಾಮಲಕ್ಷ್ಮಣಭರತಶತ್ರುಘ್ನರೊಡನೆ ಸಮುಚಿತಾಸನದಲ್ಲಿ ಕುಳಿತುಕೊಂಡ.

ಆನಂತರ ದಶರಥನು ಮೇಲೆದ್ದು, ಮುಕುಳಿತಾಂಜಲಿಯಾಗಿ ದೀಕ್ಷೆಗೊಂಡ ಇಂದುಗತಿ ಮತ್ತು ಜೊತೆಯಲ್ಲಿದ್ದ ಪ್ರಭಾಮಂಡಲನನ್ನು ಕುರಿತು, ಎಳೆಯ ದಂಟನ್ನು ಕೀಳುವಂತೆ ಕಾಮವೆಂಬ ಮದ್ದಾನೆಯ ದಂತಗಳನ್ನು ಸುಲಭವಾಗಿ ಕಿತ್ತು ಖೇಚರಚಕ್ರಿಯು ಜಿನರೂಪವನ್ನು ಧರಿಸಲು ಕಾರಣವಾವುದೆಂಬುದನ್ನು ತಿಳಿಸಲು ಬೇಡಿಕೊಂಡ. ಪ್ರಭಾಮಂಡಲನ ಹಿಂದಿನ ಜನ್ಮವೃತ್ತಾಂತ ಮತ್ತು ಈ ಜನ್ಮದಲ್ಲಿನ ಅವನ ಸೀತಾವ್ಯಾಮೋಹಗಳ ಬಗ್ಗೆ ಕೇಳಿದುದೇ ತನಗೆ ವೈರಾಗ್ಯಕಾರಣವಾಯಿತೆಂದು ಮುನಿ ವಿವರಿಸಿದ. ಆಗ ಪ್ರಭಾಮಂಡಲನು ತಲೆಬಾಗಿ ತನ್ನನ್ನು ತುಂಬ ಪ್ರೀತಿಯಿಂದ ಸಲಹಲು ಕಾರಣವೇನೆಂದು ಕೇಳಿದ. ಅದಕ್ಕೆ ಮುನಿಗಳು ಹೀಗೆಂದರು: "ಧಾಮ ಎಂಬ ಹಳ್ಳಿಯಲ್ಲಿ ವಿಮುಂಚಿ ಎಂಬ ಬ್ರಾಹ್ಮಣನಿದ್ದ. ಅವನ ಹೆಂಡತಿ ಅನುಮತಿ ಎಂಬುವವಳು. ಅವರಿಬ್ಬರಿಗೆ ಅತಿಭೂತಿ ಎಂಬ ಮಗ ಹುಟ್ಟಿದ. ಅವನ ಹೆಂಡತಿಯಾದವಳು ಸರಸೆ ಎಂಬ ಪಾತಕಿ ಹೆಣ್ಣು. ಅವಳು ಜಾತಿನೀತಿಗಳಿಗೆ ಮಸಿ ಬಳಿದು ಕಯನೆಂಬುವವನ ಜೊತೆ ಸಂಬಂಧವಿರಿಸಿಕೊಂಡಳು; ಅವನು ಪರಿಣಾಮದ ಬಗ್ಗೆ ಆಲೋಚಿಸದೆ ಒಡವೆಯೊಂದಿಗೆ ಸರಸೆಯನ್ನು ಕದ್ದೊಯ್ದ. ಇದರಿಂದ ಮತಿವಿಕಲನಾದ ಅತಿಭೂತಿ ವಿಚಾರಶೂನ್ಯನಾಗಿ ಅವರನ್ನು ಬೆನ್ನಟ್ಟಿ ಹೋದ. ಕಡುಮೋಹಿತರಾದವರಿಗೆ ಉಚಿತವೆಂಬುದು ಎಲ್ಲಿ

ಹೊಳೆಯಬೇಕು! ದಾನಾರ್ಥಿಯಾಗಿ ದೂರ ಹೋಗಿದ್ದ ವಿಮುಂಚಿಯು ಊರಿಗೆ ಮರಳಿದಾಗ ಈ ವಿಚಾರ ತಿಳಿಯಿತು. ಅವನೂ ತನ್ನ ಹೆಂಡತಿ ಮತ್ತು ಸರಸೆಯ ತಾಯಿ ಉರಿ ಎಂಬುವವಳೊಡನೆ ಅವರನ್ನರಸುತ್ತ ಹೋದ. ದಾರಿಯಲ್ಲಿ ಅಂಬರಪುರ ಎಂಬ ಊರು. ಅಲ್ಲಿ ನೆಲಸಿದ್ದ ಸರ್ವಮುನಿಗಳೆಂಬ ದಿವ್ಯಜ್ಞಾನಿಗಳ ಸನ್ನಿಧಿಯಲ್ಲಿ ಕನಕಶ್ರೀಕಂತಿಯರ ಬಳಿಯಲ್ಲಿ ಅನುಮತಿ ಉರಿ ಇಬ್ಬರೂ ದೀಕ್ಷೆಗೊಂಡರು. ಅವರೆಲ್ಲರಿಗೆ ದೇವಗತಿ ಪ್ರಾಪ್ತವಾಯಿತು.

"ಇತ್ತ ಸರಸೆಯು ದುರಾಚಾರದಿಂದ ಕಾಲ ಕಳೆದು ನಾನಾ ತಿರ್ಯಕ್ ಜನ್ಮಗಳನ್ನು ತಾಳಿ ಕೊನೆಗೆ ಬಲಾಹಕವೆಂಬ ಬೆಟ್ಟದಲ್ಲಿ ಹುಲಿಯಾಗಿ ಹುಟ್ಟಿ, ಕಾಡುಗಿಚ್ಚಿಗೆ ಸಿಲುಕಿ ಸತ್ತು ಚಂದ್ರಧ್ವಜನೆಂಬ ರಾಜನ ಮಡದಿಗೆ ಚಿತ್ತೋತ್ಸವೆಯೆಂಬ ಮಗಳಾಗಿ ಹುಟ್ಟಿದಳು. ಆ ಕಡೆ, ಕಾಮವೆಂಬ ಮದ್ದಾನೆಯ ದಂತದಂಡಕ್ಕೆ ಪಕ್ಕಾಗಿ ಪರಸ್ತ್ರೀವ್ಯಾಮೋಹಿಯಾದ ಕಯನು ಒಂಟೆಯಾಗಿ ಹುಟ್ಟಿ ಕೊನೆಗೆ ಕಪಿಲನೆಂಬುವವನ ಮಗನಾಗಿ ಹುಟ್ಟಿದ. ಮತ್ತೊಂದೆಡೆ, ಅತಿಭೂತಿಯು ಭವಾಟವಿಯಲ್ಲಿ ತೊಳಲುತ್ತ ತಾರಾಕ್ಷವೆಂಬ ಕೊಳದಲ್ಲಿ ಒಂದು ಕಲಹಂಸವಾಗಿ ಹುಟ್ಟಿ, ಜಿನಸ್ತವನವನ್ನು ಕೇಳಿದ್ದರಿಂದ ಕಿನ್ನರಗತಿಯನ್ನು ಪಡೆದ. ಆನಂತರ ಕುಂಡಲಮಂಡಿತನಾಗಿ ಹುಟ್ಟಿ ವಿದಗ್ಧಪುರದ ರಾಜನಾದ. ಕಪಿಲನು ಚಿತ್ತೋತ್ಸವೆಯನ್ನು ಮದುವೆಯಾಗಿ ಅದೇ ಊರಿನಲ್ಲಿ ನೆಲಸಿದ. ಅವಳು ನಿನಗೆ ಹಿಂದಿನ ಜನ್ಮದ ಹೆಂಡತಿಯಾದ್ದರಿಂದ ಅವಳನ್ನು ನೀನು ಕಪಿಲನ ಕೈಯಿಂದ ಕಸಿದುಕೊಂಡೆ. ವಿಮುಂಚಿಯು ಸುರಲೋಕದಿಂದ ಬಂದು ಇಂದುಗತಿಯಾಗಿ ಹುಟ್ಟಿದ. ಅವನ ಹೆಂಡತಿಯಾದ ಅನುಮತಿ ಪುಷ್ಪವತಿಯಾದಳು. ಆ ಕಾರಣದಿಂದ ನಿನಗೆ ಅವರು ಬೇಕಾದವರಾದರು. ಹಿಂದಿನ ಕಯನು ಕಪಿಲದೇವನಾಗಿ ಹುಟ್ಟಿದ ತಕ್ಷಣವೇ ನಿನ್ನನ್ನು ಅಪಹರಿಸಿದ. ನೀನು ಅನುಭೂತಿಯಾಗಿದ್ದಾಗಿನ ನಿನ್ನ ಅತ್ತೆ ಉರಿಯು ದೇವಗತಿಯಿಂದ ಬಂದು ಜನಕನ ಮಹಾದೇವಿ ವಿದೇಹಿಯಾಗಿ ನಿನ್ನ ತಾಯಿಯಾದಳು" ಎಂದು ನಿರೂಪಿಸಿದರು. ತನ್ನ ಆಪ್ತರ ಭವಾಂತರದ ವಿಷಯವನ್ನು ಕೇಳಿ ಪ್ರಭಾಮಂಡಲನು ಬೆರಗುಗೊಂಡ; ರಾಮದಶರಥರು ಪುಣ್ಯ ಕಣ್ದೆರೆದಂತೆ ಉತ್ಸಾಹಗೊಂಡರು; ಸೀತೆ ಹರ್ಷಾಶ್ರುವನ್ನು ಸುರಿಸಿದಳು; ಸುತ್ತಲಿದ್ದ ರಾಜನ್ಯಕವು ತಲೆದೂಗಿತು. ಅಮೃತದ ಕಡಲಿನಲ್ಲಿ ಮುಳುಗಿದಂತೆ, ಬೆಳುದಿಂಗಳು ಮಯೂಖಲೇಖೆಯನ್ನು ಸೇರಿದಂತೆ, ಅಮೃತವನ್ನು ಮುಕ್ಕುಳಿಸಿದಂತೆ ರಾಜಸಭೆಗೆ ಹರ್ಷವುಂಟಾಯಿತು.

ಪ್ರಭಾಮಂಡಲನು ದಶರಥನ ಪಾದಪಯೋಜಗಳನ್ನು ತನ್ನ ಮಣಿಕುಂಡಲದ ಕಿರಣಗಳಿಂದ ಬೆಳಗಿಸಿದ; ರಾಮಲಕ್ಷ್ಮಣಭರತಶತ್ರುಘ್ನರ ಬಳಿ ವಿನಯವೃತ್ತಿಯನ್ನು ಪ್ರಕಟಿಸಿದ. ಸೀತೆ ಅಣ್ಣನ ಪಾದತಾವರೆಗೆ ತನ್ನ ಆನಂದಬಾಷ್ಪ ಮಧುಬಿಂದುವನ್ನು ಸುರಿಸಿದಳು. ಅವಳನ್ನು "ಅಖಂಡಪುಣ್ಯಭಾಗಿನಿಯಾಗೆ"ಂದು ಹರಸಿ ಪ್ರಭಾಮಂಡಲನು ಆನಂದತುಂದಿಲನಾದ. ಜನ್ಮಾಂತರ ವಿವರಗಳನ್ನು ತಿಳಿಸಿದ ಮುನಿಯ ಪಾದಾಂಭೋಜಗಳನ್ನು ಭಕ್ತಿಯಿಂದ ಪೂಜಿಸಿ ದಶರಥನು ಸಾಕೇತಪುರಕ್ಕೆ ಮರಳಿದ. ರಾಮಲಕ್ಷ್ಮಣಭರತಶತ್ರುಘ್ನರ ಜೊತೆ ಕುಳಿತು ಪ್ರಭಾಮಂಡಲನು ರತ್ನವಿಮಾನವನ್ನೇರಿ ಅರಮನೆಯನ್ನು ಸೇರಿದ. ಅಲ್ಲಿ ಅವನಿಗೆ ಸಕಲಗೌರವಪೂರ್ವಕವಾದ ಸ್ವಾಗತ ದೊರೆಯಿತು.

ಈ ವಿಷಯವನ್ನು ಜನಕನಿಗೆ ತಿಳಿಸಲು ವಿದ್ಯಾಧರಮಹತ್ತರನಾದ ಪವನವೇಗನನ್ನು ಕಳಿಸಿದರು. ಅವನು ಮಿಥಿಲೆಗೆ ಗಾಳಿಯಂತೆ ವೇಗವಾಗಿ ಬಂದು ವಿಚಾರಗಳನ್ನೆಲ್ಲ ಬಿನ್ನವಿಸಿದ. ಇದರಿಂದ ಸಂಭ್ರಮಗೊಂಡ ಜನಕನು ಮತ್ತೆ ಮತ್ತೆ ವಿಚಾರಿಸಿ ವಿವರಗಳನ್ನು ಕೇಳಿ ತಿಳಿದುಕೊಂಡ. ತನ್ನ ವಂಶೋದ್ಧಾರಕನಾದ ಮಗನನ್ನು ಕೊಲ್ಲುವ ಉದ್ದೇಶದಿಂದ ನಿಶಾಚರನು ಒಯ್ದು ಖಚರರಾಜನಿಗೆ ಕೊಟ್ಟನಲ್ಲ; ಅವನು ಬಂದು ಈಗ ಸಾಕೇತದಲ್ಲಿ ನೆಲೆಸಿರುವನಲ್ಲ! ಈಗ ನನ್ನ ಪುಣ್ಯವು ಕಣ್ತೆರೆಯಿತು ಎಂದು ಜನಕನು ರೋಮಾಂಚನಗೊಂಡು ಬಾಷ್ಪಾಂಬುವನ್ನು ಸುರಿಸಿದ. ಮಗನು ಮರಳಿದ ವಿಷಯವನ್ನು ತಿಳಿಸಿದ ಖೇಚರನಿಗೆ ತನ್ನ ರಾಜ್ಯವನ್ನೇ ಉಡುಗೊರೆಯಾಗಿ ಕೊಟ್ಟುಬಿಡುವ ಸಡಗರ ಅವನಲ್ಲುಂಟಾಯಿತು; ಅವನಿಗೆ ತಕ್ಕ ಬಹುಮಾನವನ್ನಿತ್ತು ಸನ್ಮಾನಿಸಿದ. ಅರೆಕ್ಷಣದಲ್ಲಿ ಇಡೀ ಮಿಥಿಲಾನಗರವು ಹಬ್ಬದ ವಾತಾವರಣವನ್ನು ತಳೆಯಿತು. ಮಂಗಳವಾದ್ಯಗಳ ರವ, ಧ್ವಜಗಳ ಹಾರುವಿಕೆ, ಹೂಗಳ ಎರಚುವಿಕೆ ಇವುಗಳ ನಡುವೆ ಬಾಂಧವರೊಡನೆ ಸರಸ ಸಂಭಾಷಣೆ ಮಾಡುತ್ತ ಜನಕನು ವಿದೇಹಿಯೊಡನೆ ಮಗನ ಮುಖವನ್ನು ನೋಡುವ ಔತ್ಸುಕ್ಯದಿಂದ ಮಣಿವಿತಾನ ವಿಮಾನವನ್ನೇರಿ ಅಯೋಧ್ಯೆಗೆ ಹಾರಿ ಬಂದ.

ರಾಜದಂಪತಿಗಳು ಅಲ್ಲಿ ಅರಮನೆಯನ್ನು ಹೊಕ್ಕು ದಶರಥ–ಅಪರಾಜಿತೆಯರಿಗೆ ನಮಸ್ಕರಿಸಿರು; ರಾಮಾದಿಗಳು ಅವರಿಗೆ ವಂದಿಸಿದರು; ಜಾನಕಿಯು ತಾಯ್ತಂದೆಯರನ್ನು ಗಾಢವಾಗಿ ಆಲಂಗಿಸಿಕೊಂಡಳು. ಪ್ರಭಾಮಂಡಲನು ತಂದೆಯ ಪಾದಾರವಿಂದಗಳನ್ನು ಅರ್ಚಿಸಿದಾಗ, ಅವನು ಮಗನನ್ನು ತಕ್ಕೈಸಿಕೊಂಡು ಮೋಹರಸವನ್ನು ಅನುಭವಿಸಿದ. ತಾಯಿಯ ಪಾದಗಳಿಗೆರಗಿದಾಗ ಅವಳು ಮಗನನ್ನು ತಬ್ಬಿ ಸುಖವನ್ನನುಭವಿಸಿದಳು. ವಿದೇಹಿಗೆ ಸುತವ್ಯಾಮೋಹ ಕುತೂಹಲ ಅಚ್ಚರಿಯನ್ನುಂಟುಮಾಡಿತು. ಮಗನು ಹುಟ್ಟಿದ ಸಡಗರವನ್ನು ಅನುಭವಿಸದ ದುಃಖ, ಬಾಲಲೀಲೆಯನ್ನು ನೋಡಲಾಗದ ಸಂಕಟಗಳ ಜೊತೆ ಅವನ ಸೋಂಕನ್ನು ಪಡೆದು ಮುಖವನ್ನು ನೋಡಿದಾಕ್ಷಣ ಅವಳಲ್ಲಿ ನಾನಾ ಭಾವಗಳುಂಟಾದವು. ಜನಕ–ಅಪರಾಜಿತೆಯರು ಮಗನನ್ನು ಆಗ ತಾನೇ ಪಡೆದಂತೆ ಸಂಭ್ರಮಗೊಂಡು ರಘುವಂಶ ನಮೇರುಗೆ ವಸ್ತ್ರವಿಭೂಷಣಗಳನ್ನು ಒಸೆಗೆಯಾಗಿತ್ತರು; ಚಂದನರಸದಲ್ಲಿ ಮುಳುಗಿದವರನ್ನು ಬೆಳುದಿಂಗಳು ಆವರಿಸಿದಂತೆ ಅವರ ಹರ್ಷವು ಅತಿಶಯಗೊಂಡಿತು. ದಶರಥನ ಆತಿಥ್ಯ, ಪ್ರಭಾಮಂಡಲನು ರಾಮಾದಿಗಳೊಡನೆ ನಡೆಸುವ ವಿನೋದ ಇವುಗಳಿಂದ ದಿವಸಗಳು ಕ್ಷಣಗಳಂತೆ ಕಳೆದವು. ಹೀಗೆ ಒಂದು ತಿಂಗಳು ಅಯೋಧ್ಯೆಯಲ್ಲಿದ್ದು, ಜನಕನು ಮಿಥಿಲೆಗೆ ಮರಳಿದ. ರಾಜ್ಯವನ್ನು ಕಿರಿಯ ಮಗ ಕನಕನಿಗೆ ಕೊಟ್ಟು, ವಿದೇಹಿಯೊಡನೆ ರಥನೂಪುರಚಕ್ರವಾಳಪುರಕ್ಕೆ ತೆರಳಿ ವಿದ್ಯಾಧರನಂತೆ ಸುಖದಿಂದಿದ್ದ.

ಹೀಗಿರಲು ಒಂದು ದಿನ, ದಶರಥನು ಸರ್ವಭೂತಹಿತ ಭಟ್ಟಾರಕರನ್ನು ದರ್ಶನ ಮಾಡಿ ವಂದಿಸಿ, ತನ್ನ ಭವಾವಳಿಯನ್ನು ಬೆಸಸಬೇಕೆಂದು ಬಿನ್ನವಿಸಿಕೊಂಡ. "ನೀನು ಚತುರ್ಗತಿಯಲ್ಲಿ ತಿರುಗಾಡುತ್ತ ಶುಭಾಶುಭ ಕರ್ಮಫಲಗಳನ್ನು ಸುಖದುಃಖದಿಂದ ಅಳುತ್ತ ನಗುತ್ತ ಅನುಭವಿಸಿಕೊಂಡು ಬಂದೆ" ಎಂದು ಅವರು ನಿರೂಪಣೆಗೆ ಮೊದಲಿಟ್ಟರು. ಹೀಗೆ ಅನಂತಭವಗಳಲ್ಲಿ ಬಂದು ದಶರಥನು, ಇಂದಿಗೆ ಎಂಟನೆಯ ಜನ್ಮದ ಹಿಂದೆ ಸೇನಾಪುರವೆಂಬ ಊರಿನಲ್ಲಿ ಹುಟ್ಟಿ, ಮುನಿಚರ್ಯಾದೋಷ ಮತ್ತು

ಜಿನಧರ್ಮದ್ವೇಷಗಳಿಂದಾಗಿ ದುರ್ಗತಿಯಲ್ಲಿ ಜನಿಸಿದ ಅವನು ದುಃಖವನನ್ನುಭವಿಸಿದ. ಆನಂತರ ಉಪಶಮಭಾವವನ್ನು ಪಡೆದು ಅದರ ಫಲವಾಗಿ ಚಂದ್ರಪುರದ ಅರಸು ಚಂದ್ರ ಮತ್ತವನ ಮನೋಹಾರಿಣಿಯಾದ ಧಾರಿಣಿಯರಿಗೆ ಧಾರಣನೆಂಬ ಹೆಸರಿನ ಮಗನಾಗಿ ಜನಿಸಿದ. ಅವನಿಗೆ ಸುಧರ್ಮೆ ಪತ್ನಿಯಾದಳು. ಜಿನಧರ್ಮವನ್ನು ಕಟ್ಟುನಿಟ್ಟಾಗಿ ಅನುಸರಿಸಿ, ಚತುರ್ದಾನಶೂರನಾಗಿ ಬಾಳಿ ಶರೀರಭಾರವನ್ನು ಇಳಿಸಿಕೊಂಡ. ಆಮೇಲೆ ಮಂದರದ ಉತ್ತರ ಭಾಗದ ಕುರುವಿನಲ್ಲಿ ಹುಟ್ಟಿ ಮೂರು ಪಳಿತದಷ್ಟು ಕಾಲ ಸುಖವನನ್ನುಭವಿಸಿ ದೇವಗತಿಯನ್ನು ಪಡೆದ. ಕುಂದದ ದೇಹಸೌರಭ, ಮೈಸಿರಿ, ಹೂಮಾಲೆಗಳಿಂದಲೂ; ಉಟ್ಟರೂ ಮಾಸದ ಉಡುಗೆ, ಧಾತುಮಲವಿಲ್ಲದ ಒಡಲು, ಪರಿಪೂರ್ಣ ಯೌವನ, ಸುಂದರ ರೂಪಗಳಿಂದಲೂ ಕೂಡಿ ಅನಾಯಾಸವಾಗಿ ಮೊದಲ ಸಗ್ಗದಲ್ಲಿ ಎರಡು ಜನ್ಮಗಳನ್ನು ಕಳೆದ. ತದನಂತರ ಪುಷ್ಕಲಾವತೀ ರಾಜ್ಯದ ಪುಂಡರೀಕಿಣಿ ಪುರದರಸು ನಂದಿಘೋಷ ಮತ್ತವನ ಸತಿ ವಸುಮತಿಯರಿಗೆ ನಂದಿವರ್ಧನನೆಂಬ ಮಗನಾಗಿ ಹುಟ್ಟಿದ. ತಂದೆ ನಂದಿಘೋಷ ಒಂದು ದಿನ ಮಗನೊಡನೆ ಕ್ರೀಡಾವನಕ್ಕೆ ಹೋಗಿ ದಿವ್ಯಯೋಗಿಗಳನ್ನು ಕಂಡು ಧರ್ಮವನ್ನು ಕೇಳಿದ. ಆಗ ಅವನಲ್ಲಿ ವೈರಾಗ್ಯವುದಯಿಸಿತು. ರಾಜ್ಯವನ್ನು ಮಗನಿಗಿತ್ತು ಯಶೋಧರ ಭಟ್ಟಾರಕರ ಅಡಿಯಲ್ಲಿ ದೀಕ್ಷೆ ಪಡೆದು ಸಮಾಧಿವಿಧಿಯಿಂದ ಮುಡುಪಿದ. ಮಗನಾದ ನಂದಿವರ್ಧನನು ಒಂದು ಪುಬ್ಬದಷ್ಟು ಕಾಲ ರಾಜ್ಯಭಾರ ಮಾಡಿ, ಜಿನಧರ್ಮಕ್ಕನುಗುಣವಾಗಿ ಬಾಳಿ ಐದನೆಯ ಕಲ್ಪದ ಉಪಪಾತತಲ್ಪದಲ್ಲಿ ದೇವನಾಗಿ ಜನಿಸಿದ.

ಅಲ್ಲಿಯ ಸುಖಗಳನ್ನು ಅನುಭವಿಸಿ ಮಂದರದ ಬಡಗಣಕ್ಕಿದ್ದ ವಿದೇಹದ ವಿಜಯಾರ್ಧದ ಶಶಿಪುರದ ರಾಜ ರತ್ನಮಾಲಿಗೂ ಅವನ ಹೆಂಡತಿ ವಿದ್ಯುಲ್ಲತೆಗೂ ಸೂರ್ಯಂಜಯನೆಂಬ ಮಗನಾಗಿ ಹುಟ್ಟಿದ. ಒಮ್ಮೆ, ತಂದೆ ರತ್ನಮಾಲಿಯು ಸಿಂಹಪುರದ ಅರಸು ವಜ್ರಲೋಚನನೊಡನೆ ಕಾದಲೆಂದು ಚತುರ್ಬಲಸಹಿತನಾಗಿ ಹೋಗುತ್ತಿದ್ದ. ಆಗ ಮನದ ಕತ್ತಲೆಯನ್ನು ಹೋಗಲಾಡಿಸುವ ಮಾಣಿಕ್ಯದ ದೀಪ್ತಿಯಂತೆ ಒಬ್ಬ ದಿವ್ಯಪುರುಷನು ಮೇಲಿನಿಂದ ಇಳಿದು ಬಂದು, "ನಿನಗೆ ಯುದ್ಧದಲ್ಲಿ ಏಕಿಷ್ಟು ವ್ಯಾಮೋಹ? ಒಂದು ಕತೆ ಹೇಳುತ್ತೇನೆ, ಏಕಾಗ್ರತೆಯಿಂದ ಕೇಳು: ಭರತಖಂಡದ ವಿಜಯಾರ್ಧಪರ್ವತದ ತಪ್ಪಲಿನ ಶಶಿಪುರದೊಡೆಯ ಶ್ರೀಭೂತಿ ರಾಜನಿಗೆ ಸುಭೂತಿ ಎಂಬುವವನು ಮಗ. ಅವನ ಪುರೋಹಿತ ಉಪಮನ್ಯು ಎನ್ನುವವನು. ಸುಖಸಂಕಥಾವಿನೋದದಿಂದ ಬಾಳುತ್ತಿರುವಾಗ ಒಮ್ಮೆ, ಕಮಲಗರ್ಭ ಭಟ್ಟಾರಕರ ಸಾನ್ನಿಧ್ಯದಲ್ಲಿ ಶ್ರೀಭೂತಿ ಮಧುಮಾಂಸಗಳನ್ನು ತೊರೆದ; ಆದರೆ ದುಷ್ಟಮತಿಯಾದ ಉಪಮನ್ಯುವು ಅವನು ವ್ರತಭ್ರಷ್ಟನಾಗುವಂತೆ ಮಾಡಿದ. ಉಪಮನ್ಯು ಮುಂದಿನ ಜನ್ಮದಲ್ಲಿ ಆನೆಯಾಗಿ ಹುಟ್ಟಿ, ಸತ್ತು, ಹಿಂದಿನ ತನ್ನ ಯಜಮಾನನಾದ ಶ್ರೀಭೂತಿಯ ಮೇಲಣ ಮೋಹದಿಂದ, ಅವನ ಮಗನಾದ ಸುಭೂತಿ–ಯೋಜನಗಂಧಿಯರಿಗೆ ಅರಂದನೆಂಬ ಹೆಸರಿನ ಮಗನಾಗಿ ಜನಿಸಿದ. ಒಂದು ದಿನ, ಕಮಲಗರ್ಭ ಮಹಾಋಷಿಯ ದರ್ಶನ ಮಾಡಿದಾಗ ಅವನಿಗೆ ಜಾತಿಸ್ಮರಣೆಯಾಯಿತು. ಅವರ ಬಳಿ ದೀಕ್ಷೆ ಪಡೆದು ತಪೋನಿಷ್ಠೆಯಿಂದ ದೇವನಾಗಿ ಶತಾರಕಲ್ಪದಲ್ಲಿ ಮಹಾ ಸುಖವನ್ನನುಭವಿಸುತ್ತಿದ್ದ. ಈ ಕಡೆ, ತನ್ನ ದುರಾಚಾರ ಕಾರಣದಿಂದ ಶ್ರೀಭೂತಿಯು ಮಾರನೆಯ ಜನ್ಮದಲ್ಲಿ ಮಂದಾರವೆಂಬ ಅರಣ್ಯದಲ್ಲಿ ಜಿಂಕೆಯಾಗಿ ಹುಟ್ಟಿ, ಕಾಡುಗಿಚ್ಚಿಗೆ

ಸಿಕ್ಕಿ ಸತ್ತ. ಅವನ ಮುಂದಿನ ಜನ್ಮವು ಕಾಂಭೋಜದಲ್ಲಿ ಕಿರಾತನಾಗಿ; ಪಾತಕಕ್ಕೆ ಕೈಕಾಲು ಮೂಡಿದಂತೆ ಅವನು ಕೊಂದು ತಿಂದು ಮಾಡಿ ಸತ್ತನಂತರ ಶರ್ಕರಾಪ್ರಭೆಯೆಂಬ ನರಕಕ್ಕಿಳಿದ. ಈ ವಿಚಾರವನ್ನು ಉಪಮನ್ಯುವಿನ ಚರನು ಅವಧಿಜ್ಞಾನದಿಂದ ತಿಳಿದು ಅವನಿಗೆ ಧರ್ಮೋಪದೇಶವನ್ನು ಮಾಡಿದ: ಆ ಕಿರಾತನೇ ನೀನು. ಧರ್ಮೋಪದೇಶವನ್ನು ಕೈಗೊಂಡದ್ದರಿಂದ ನೀನು ಈ ಜನ್ಮದಲ್ಲಿ ರತ್ನಮಾಲಿಯಾಗಿದ್ದೀಯೆ. ಆಗ ಧರ್ಮೋಪದೇಶವನ್ನು ಮಾಡಿದವನು ನಾನೇ" ಎಂದು ಕತೆಯನ್ನು ಮುಗಿಸಿದ.

ಅದನ್ನು ಕೇಳಿ ರತ್ನಮಾಲಿಗೆ ವೈರಾಗ್ಯವುಂಟಾಯಿತು. ತನ್ನ ಮಗನಾದ ಸೂರ್ಯಂಜಯನಿಗೆ ರಾಜ್ಯವನ್ನು ಕೊಟ್ಟು ತಪಸ್ಸನ್ನು ಕೈಗೊಳ್ಳಲು ಮುಂದಾದ. ಆದರೆ ಮಗನು ತನಗೆ ತಪೋರಾಜ್ಯದ ಹೊರತು ಬೇರೇನೂ ಬೇಡವೆಂದು ರಾಜ್ಯವನ್ನು ನಿರಾಕರಿಸಿದ. ಆಗ ಅವನ ಮಗ ಕಲ್ಪಾನಂದನಿಗೆ ರಾಜ್ಯವನ್ನಿತ್ತು ರತ್ನಮಾಲಿ-ಸೂರ್ಯಂಜಯರು ತಿಲಕಸುಂದರಮುನಿಗಳ ಸಮಕ್ಷಮದಲ್ಲಿ ದೀಕ್ಷೆಯನ್ನು ಪಡೆದರು. ದೀರ್ಘ ಕಾಲ ತಪಸ್ಸು ಮಾಡಿ ಮಹಾಶುಕ್ರಕಲ್ಪದಲ್ಲಿ ಹುಟ್ಟಿ, ಹದಿನಾರು ಸಾವಿರ ಸಾಗರ ಕಾಲ ಸುಖವನ್ನು ಅನುಭವಿಸಿದರು. "ಅಂದಿನ ಸೂರ್ಯಂಜಯನಾಗಿದ್ದ ನೀನು ಈ ಜನ್ಮದಲ್ಲಿ ದಶರಥನಾಗಿ ಹುಟ್ಟಿದ್ದೀಯೆ. ನೀನು ನಂದಿವರ್ಧನನಾಗಿದ್ದ ಜನ್ಮದಲ್ಲಿ ನಿನ್ನ ತಂದೆಯಾಗಿದ್ದ ನಂದಿಘೋಷನು ನಾನೇ; ಆಗ ಸತ್ತು ನವಗ್ರೈವೇಯಕದಲ್ಲಿ ನೆಲಸಿ ಈಗ ಸರ್ವಭೂತಹಿತ ಭಟ್ಟಾರಕನಾಗಿ ಹುಟ್ಟಿದ್ದೇನೆ. ಶ್ರೀಭೂತಿ ಮತ್ತು ಉಪಮನ್ಯುಗಳೇ ನಿನ್ನ ಈ ಜನ್ಮದ ಮೈದುನರಾದ ಜನಕ ಕನಕರು" ಎಂದು ಸರ್ವಭೂತಹಿತಮುನಿಗಳು ಕತೆಯನ್ನು ಮುಗಿಸಿದರು. ಇದನ್ನೆಲ್ಲ ಕೇಳೀ ದಶರಥನಿಗೆ ವಿಸ್ಮಯವುಂಟಾಯಿತು. ಅನಾದಿಕಾಲದಿಂದ ಭವಾಂತರಗಳಲ್ಲಿ ಹುಟ್ಟಿ ಪುಣ್ಯಪಾಪ, ಸುಖದುಃಖಗಳನ್ನುಂಡು ರಾಟೆಯ ಬಿಂದಿಗೆಯಂತೆ ತಿರುಗಿದೆನಲ್ಲ ಎಂಬ ಅರಿವುಂಟಾಗಿ ಅವನಿಗೆ ನಿರ್ವೃತಿಸುಖದಲ್ಲಿ ಮನಸ್ಸು ನಾಟಿತು. ಜಿನರೂಪವೆಂಬ ಹಡಗಿನ ರೂಪದಲ್ಲಿ ಭವಜಲರಾಶಿಯನ್ನು ದಾಟಲು ನಿರ್ಧರಿಸಿದನು.

ಹಾಗೆ ನಿರ್ಧರಿಸಿಕೊಂಡು ಅಯೋಧ್ಯೆಗೆ ಮರಳಿದ ದಶರಥನು ಒಮ್ಮೆ ರಾಜಸಭೆಯ ನಡುವಣ ಸಿಂಹಾಸನದಲ್ಲಿ ಕುಳಿತಿದ್ದ. ಸಾಮಂತರು ಮಾಂಡಳಿಕರು ದಂಡನಾಥರು ನಿಯೋಗಿಗಳು ಪುರೋಹಿತರು ಮಂತ್ರಿಗಳು ಮುಂತಾದವರ ಕಿರೀಟಗಳಲ್ಲಿನ ರತ್ನರಾಜಿಯಿಂದ ಒಡ್ಡೋಲಗವು ದೇದೀಪ್ಯಮಾನವಾಗಿತ್ತು; ಅಗಸ್ತ್ಯನು ನೀರನ್ನೆಲ್ಲ ಗುಟುಕರಿಸಿದ ಮೇಲೆ ಬರಿದಾದ ಸಮುದ್ರದಂತೆ ಕಾಣಿಸುತ್ತಿತ್ತು. ದಶರಥನು ತನ್ನ ಕುವರರಿಗೆ ಹೇಳಿಕಳಿಸಿದ. ತಾರಪರ್ವತವನ್ನು ಒಂದು ಕರ್ಮುಗಿಲು ಸುತ್ತುವರಿದಂತೆ ನೀಲಪಟವು ವಿರಾಜಿಸಲು, ಕುಂಡಲಗಳ ಕಾಂತಿಯು ಉದಯಾರ್ಕನನ್ನು ಏಳಿಸಲು, ಆದಿಶೇಷನು ಭೂಮಿಯನ್ನು ಹೊರುವುದಕ್ಕೆ ನೆರವು ನೀಡುವಂತಿರುವ ಬಾಹುದ್ವಯದಿಂದ ಕೂಡಿದ ಹಲ ಮುಸಲಾಯುಧಧಾರಿಯಾದ ಬಲದೇವನು ತಂದೆಯ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಬಂದ; ಸಂಜೆಯ ಮೋಡಗಳಿಂದ ಆವೃತವಾದ ನೀಲನಗೇಂದ್ರದಂತೆ ಪೀತವಸನಧಾರಿಯಾದ ಲಕ್ಷ್ಮಣನು ಅವನ ಹಿಂದೆ ನಡೆತಂದ. ಬಂದವನೇ ಶ್ರೀರಾಮನು ತಂದೆಯ ಪಾದಗಳಿಗೆ ನಮಿಸಿದ. ಅವನನ್ನನುಸರಿಸಿ ಲಕ್ಷ್ಮಣ ಭರತ ಶತ್ರುಘ್ನರು ತಂದೆಗೆ ವಂದಿಸಿದರು. "ಅನಂತಸುಖಭೋಗಭಾಗಿಗಳಾಗಿ" ಎಂದು ದಶರಥನು ಆಶೀರ್ವಾದ ಮಾಡಿ ಕುಳಿತುಕೊಳ್ಳಲು ಅವರಿಗೆ ಸೂಚಿಸಿದ.

ಆನಂತರ ರಾಮನ ಮುಖವನ್ನು ನೋಡಿ, "ಯೋಗ್ಯನಾದ ಹಿರಿಯ ಮಗನಿಗೆ ರಾಜ್ಯದ ಜವಾಬ್ದಾರಿಯನ್ನು ವಹಿಸಿ ಅಪವರ್ಗಪಥದಲ್ಲಿ ನಡೆಯಲು ಹೊರಡದ ರಾಜನು ಕೃತಾರ್ಥನಾಗಲಾರ. ಮಗನೇ, ನನ್ನ ಹಣೆಯಲ್ಲಿ ಕಣ್ಣು ಮೂಡಿದಂತೆ ನೀನು ಮಗನಾಗಿ ಹುಟ್ಟಿದೆ; ಈಗ ನೀನು ವಸುಧಾರಾಜ್ಯವನ್ನು ವಹಿಸಿಕೊಂಡು ನನಗೆ ತಪೋರಾಜ್ಯದಲ್ಲಿ ನೆಲೆಗೊಳ್ಳಲು ಸಹಾಯ ಮಾಡು. ನನ್ನ ತಂದೆ ಅನರಣ್ಯನು ಹಸುಗೂಸಾಗಿದ್ದ ನನಗೆ ಇದನ್ನು ಬಿಟ್ಟು ಮೋಕ್ಷಸಂಪತ್ತಿನ ಗಳಿಕೆಗಾಗಿ ಹೋದ. ನಮ್ಮ ವಂಶದ ವಿಖ್ಯಾತರಾದ ಹಿರಿಯರೆಲ್ಲರೂ ಈ ಬಗೆಯಲ್ಲಿ ರಾಜ್ಯಸುಖವನ್ನು ಅನುಭವಿಸಿ ಕೊನೆಗೆ ತತ್ತ್ವಾಭ್ಯಾಸವಿಶ್ರಾಂತ ಜೀವಿತರಾದರು. ನಿನ್ನ ಹಣೆಯಲ್ಲಿ ಸಾಮ್ರಾಜ್ಯಪಟ್ಟವು ತಿಲಕದಂತೆ ಶೋಭಿಸಲಿ; ನಿನ್ನ ಭುಜಾದಂಡವು ಧರಾಲಂಕೃತವಾಗಲಿ; ಬೆಳ್ಗೊಡೆಯು ನಿನ್ನ ಕಿರೀಟದ ಕಾಂತಿಯಿಂದ ಕಂಗೊಳಿಸಲಿ; ನಾನು ತಪಶ್ರೀಗೆ ಒಲಿದಿದ್ದೇನೆ; ಪಿತೃವಾಕ್ಯವನ್ನು ಉಲ್ಲಂಘಿಸದೆ ನನ್ನ ಮಾತನ್ನು ನಡೆಸಿಕೊಡು. ಕಿಡಿಗಳಿಂದ ಹೆದರಿದ ಕೂರ್ಮನು ಚಿಪ್ಪಿನಲ್ಲಿ ಸೇರಿದ; ಹೆಡೆಗಳು ಚದುರಿ ಆದಿಶೇಷ ಮುಖ ತಿರುಗಿಸಿದ; ದಿಕ್ಕರಿಯು ತತ್ತರಿಸಿ ತಲೆಯನ್ನು ತಗ್ಗಿಸಿದೆ; ಈ ಅತಿಭಾರದಿಂದಾದ ಆಯಾಸವನ್ನು ಪರಿಹರಿಸಿ ನಿನ್ನ ಬಾಹುದಂಡಗಳಲ್ಲಿ ಭೂಮಂಡಲವನ್ನು ಧರಿಸು" ಎಂದು ಕೇಳಿಕೊಂಡ.

ಆಗ ರಾಮನು ಮುಕುಳಿತ ಕರಸರೋಜನಾಗಿ, "ಬಲವದರಾತಿಮಂಡಳವನ್ನು ಉದ್ಧತಬಾಹುದಂಡದಿಂದ ನಿಯಂತ್ರಿಸುತ್ತಿದ್ದ ನಿಮ್ಮ ಜವಾಬ್ದಾರಿಯನ್ನು ನನ್ನಂತಹ ಬಾಲಕನು ನಿರ್ವಹಿಸಬಲ್ಲನೆ? ಬಲಿಷ್ಠವಾದ ಬಿರುಗಾಳಿಯು ವಿಶ್ವವನ್ನೆಲ್ಲ ಅನಾಯಾಸವಾಗಿ ಸುತ್ತುವ ಹಾಗೆ ಬೀಸಣಿಗೆಯ ಗಾಳಿಯು ಸುತ್ತಬಲ್ಲುದೇ?" ಎಂದು ವಿನಯದಿಂದ ನುಡಿದ. "ಮನುವಂಶ ಕ್ಷಿತಿನಾಥರು ಮಗನಿಗೆ ರಾಜ್ಯವನ್ನೊಪ್ಪಿಸಿ ತಪಸ್ಸಿಗೆ ತೆರಳುವುದು ನಿಯಮ. ಇಂದ್ರವಂದಿತ ತಪೋರಾಜ್ಯದಲ್ಲಿ ನಾನು ನಿಲ್ಲಲು ಅನುಕೂಲವಾಗುವಂತೆ ನನ್ನ ಮಾತನ್ನು ಮೀರದೆ ಧರಾಭಾರವನ್ನು ವಹಿಸಿಕೋ" ಎಂದು ದಶರಥನು ಮರುಮಾತಿಗೆ ಅವಕಾಶವಿಲ್ಲದಂತೆ ನುಡಿದು ರಾಮನನ್ನು ಒಪ್ಪಿಸಿದ. ಆಗ ಭರತನು ಕೈಜೋಡಿಸಿಕೊಂಡು, "ಒಡಲಿನ ಅಶುಚಿತ್ವವನ್ನೂ, ಗತಿಚತುಷ್ಟಯದಲ್ಲಿ ಉಂಟಾಗುವ ಅನಿಷ್ಟವನ್ನೂ, ನಶ್ವರವಾದ ಸುಖಗಳಿಂದ ತಣಿಯದ ದಣಿವನ್ನೂ ತಿಳಿದೂ, ಇದುವರೆಗೆ ಹೆದರಿಕೊಂಡು ನಿಮಗೆ ಹೇಳದೇ ಇದ್ದೆ. ನಾನೂ ನಿಮ್ಮ ಜೊತೆಗೆ ಪರಮಾರ್ಥಸೌಭಾಗ್ಯವನ್ನು ಸಾಧಿಸುತ್ತೇನೆ" ಎಂದು ನಿರ್ಧಾರದಿಂದ ಬಿನ್ನವಿಸಿಕೊಂಡ.

ಅಲ್ಲಿದ್ದ ಸೇವಕಿಯೊಬ್ಬಳು ಓಡಿ ಬಂದು ಈ ವಿಷಯವನ್ನು ಕೈಕೆಗೆ ಹೇಳಿದಳು. ರಾಜನು ರಾಮನಿಗೆ ರಾಜ್ಯವನ್ನು ವಹಿಸಿಕೊಡುವಾಗ ಸುಮ್ಮನಿದ್ದರೆ ತಾನು ಕಿಂಕರಳಾಗಬೇಕಾಗುತ್ತದೆ; ಭರತನು ತಪಸ್ಸಿಗೆ ಹೋದರೆ ತನಗೆ ಆಸರೆಯಾರು; ಸವತಿಯರು ಇಕ್ಕುವ ಕೂಳಿಗೆ ಬಾಯ್ಬಿಡುವ ವಿಷಾದಕ್ಕೆ ತಾನು ಪಕ್ಕಾಗಬೇಕು; ಎಂಬ ಚಿಂತೆಯಲ್ಲಿ ಕೈಕೆಯು ಕಣ್ಣು ಮಿಟುಕಿಸದೆ ಚಿಂತಾಮಗ್ನಳಾದಳು. ಆಗ, ಹೂತಿಟ್ಟ ನಿಧಿ ನೆನಪಿಗೆ ಬರುವಂತೆ, ದಶರಥನಿತ್ತಿದ್ದ ವರಗಳು ಅವಳಿಗೆ ನೆನಪಾದವು. ಮಗನನ್ನು ರಾಜ್ಯವ್ಯಾಮೋಹದಲ್ಲಿ ತೊಡರಿಸಬೇಕೆಂದು ನಿಶ್ಚೈಸಿದ ಕೈಕೆಯು ಗುಣಹಾನಿಗೆ ಹೆದರದೆ, ಧರ್ಮಹಾನಿಯನ್ನು ನೆನೆಯದೆ, ಮಲಿನಾಂತರಂಗೆಯಾಗಿ ಕೃತಕ ಸೊಡರಿನ ಹಾಗೆ ಸಭಾಭವನವನ್ನು ಹೊಕ್ಕಳು. ಬಂದವಳೇ, ಅನುಚಿತವನ್ನು ಆಲೋಚಿಸದೆ, "ತಾನು

ನ್ಯಾಸವಾಗಿಟ್ಟ ಮೆಚ್ಚನ್ನು ಕೊಡಿ" ಎಂದು ರಾಜನನ್ನು ಬೇಡಿದಳು. "ನಮ್ಮ ವಂಶದಲ್ಲಿ ಆಡಿದ ಮಾತಿಗೆ ತಪ್ಪುವವರಿಲ್ಲ. ಹೆದರದೆ, ತಪೋವನಗಮನಕ್ಕೆ ವಿಘ್ನಕರವಲ್ಲದಂತಹ ನೀನು ಬಯಸಿದ್ದನ್ನು ಬೇಡಿಕೋ" ಎಂದ ದಶರಥ. ಮುಖಚಂದ್ರದ ಕೊಳೆತ ಬೀಜಗಳಂತೆ, ಮುಖಕಮಲದ ಬಂಡುಂಡು ಸೊಕ್ಕಿದ ದುಂಬಿಗಳಂತೆ ಕೊಳಕು ಮಾತುಗಳು ಅವಳ ಬಾಯಿಂದ ಉದುರಿದವು: ರಾಜ್ಯವನ್ನು ಹದಿನಾಲ್ಕು ವರ್ಷಗಳ ಅವಧಿಗೆ ಕೈಕೆ ಬೇಡಿದಳು. ಅದು ಕಾಳರಾತ್ರಿಯ ದನಿಯಂತೆ ದಶರಥನಿಗೆ ಕೇಳಿಸಿತು; ಕಿಡಿಯ ಹಾಗೆ ಅವನ ಹೃದಯಕ್ಕೆ ವೇದನೆಯನ್ನುಂಟುಮಾಡಿತು. ಗುಡುಗಿನ ದನಿಗೇಳ್ದ ಹಂಸದಂತೆ ಅವನ ಮನಃಸ್ಥಿತಿಯಾಯಿತು. ಮೆಚ್ಚನ್ನಿತ್ತು ಅದನ್ನು ನೆರವೇರಿಸದಿದ್ದರೆ ಮಾತು ತಪ್ಪಿದವನಾಗುತ್ತೇನೆ; ಅವಳ ಆಸೆಯನ್ನು ಈಡೇರಿಸಿದರೆ, ಅವಳ ಮಾತಿಗೆ ಅಂಜಿ ರಾಮನಿದ್ದರೂ ಭರತನಿಗೆ ರಾಜ್ಯವಿತ್ತ ಎಂಬ ಅಪವಾದವುಂಟಾಗುತ್ತದೆ; ಏನು ಮಾಡಲಿ ಎಂದು ಡೋಲಾಯಮಾನನಾಗಿ ಮೌನಗೊಂಡ.; ಸೂರ್ಯಾಸ್ತಾನಂತರದ ಚಕ್ರವಾಕದಂತೆ ದಶರಥನು ಚಿಂತಾಕ್ರಾಂತನಾದ.

ಈ ವಿಷಯವನ್ನು ತಿಳಿದ ಭರತನಿಗೆ ಲಜ್ಜೆಯುಂಟಾಯಿತು; ತನಗೆ ಶ್ರೇಯಸ್ಕರವಲ್ಲದ ಹಾಗೂ ರಾಜನಿಗೆ ಅನಿಷ್ಟಕರವಾದ ಮಾತನ್ನು ತಾಯಿ ಆಡಿದಳೆಂದು ಅವನು ವಿಷಾದಭರಿತನಾದ. ಕೈಕೆ ಅನ್ಯಾಯಕರವಾದುದನ್ನು ಹೇಳಿದಳೆಂದು ಸಭಾಜನರೆಲ್ಲ ನೊಂದುಕೊಂಡರು; ರಾಜ್ಯವನ್ನು ಬೇಡಿ ಕೈಕೆ ಅಣ್ಣತಮ್ಮಂದಿರಲ್ಲಿ ಒಡಕನ್ನು ತಂದಳಲ್ಲ ಎಂದುಕೊಂಡರು. ರಾಮನ ವಜ್ರಾವರ್ತವಲ್ಲದೆ ಉಳಿದವರ ಬಿಲ್ಲುಗಳು ರಾಜ್ಯವನ್ನು ರಕ್ಷಿಸಬಲ್ಲವೇ ಎಂದು ಕೆಲವರೆಂದರೆ, ರಾಜನಿತ್ತರೂ ರಾಜ್ಯವು ಕೈಕೆಯ ವಶವಾಗಲು ಲಕ್ಷ್ಮಣ ಆಸ್ಪದವೀಯನೆಂದು ಮತ್ತೆ ಕೆಲವರು ಆಡಿಕೊಂಡರು. ಸುತಮೋಹದಿಂದ ಇವಳು ದುರ್ಗತಿಹೇತುವಾದುದನ್ನು ಬಯಸಿದಳಲ್ಲ ಎಂದು ಕೆಲವರಾಡಿಕೊಂಡರೆ, ಈ ಧರೆಯನ್ನು ತೃಣಸಮಾನವೆಂದು ಬಗೆದು ಔದಾರ್ಯತುಂಗನಾದ ರಾಮನು ತ್ಯಾಗಮಾಡುವವನೇ ಎಂದು ಮತ್ತೆ ಕೆಲವರು ಆಲೋಚಿಸಿದರು. ಭರತ ಲಜ್ಜಾನತ, ತಾಯಿ ವಿಕಲೆ, ತಂದೆ ವಿಹ್ವಲ, ಲಕ್ಷ್ಮಣ ಕೋಪರಸಾವಿಷ್ಟ, ಸಭಾಮಂಡಲವು ಮೂಕ, ಅಂತಃಪುರವು ಶೂನ್ಯತೆಯಿಂದ ಕೂಡಿರಲು, ರಾಮನು ಕಡಲ ನಡುವೆ ಹುಟ್ಟಿದ ಪಾರಿಜಾತದಂತೆ ಕಾರುಣ್ಯದೃಷ್ಟಿಪ್ರಭಾ ನಿರ್ಭರಪೂರನಾಗಿದ್ದ. "ತಂದೆಯ ಮಾತು ಉಳಿಯಲಿ; ತಾಯಿಯ ಆಸೆ ನೆರವೇರಲಿ; ತಮ್ಮನು ರಾಜ್ಯವನ್ನು ಆಳಲಿ; ನಾನು ಕೃತಾರ್ಥನಾಗುತ್ತೇನೆ" ಎಂಬ ಭಾವನೆಯಿಂದ ಅವನಿಗೆ ಪುಲಕವುಂಟಾಯಿತು. ಮಗನಾದವನಿಗೆ ತಾಯ್ತಂದೆಯರ ಭಕ್ತಿಯೇ ಮುಖ್ಯವೆಂದು ರಾಘವನು ರಾಜ್ಯವನ್ನು ತೃಣಲಾಘವವೆಂದು ತಿಳಿದು ಬಾಳುವವನಲ್ಲವೇ! ರಾಜನಾದವನಿಗೆ ಬಾಹುಸಾಹಸ ಮತ್ತು ದಾನಗುಣಗಳು ನೃಪಲಕ್ಷಣಗಳು; ಈ ಎರಡೂ ಉಳಿಯುವಂತೆ ತಮ್ಮನಿಗೆ ವಸುಧೆಯನ್ನು ಕೊಡುವೆನೆಂದು ರಾಮ ನಿರ್ಧರಿಸಿದ.

ಕರಕಮಲಗಳು ಮುಚ್ಚಿ ಮುಖಕಮಲವು ಅರಳಿರಲು ರಾಮನು ಕೈಕೆಯನ್ನು ಕುರಿತು, "ತಂದೆಯ ಮಾತು ಸುಳ್ಳಾಗುವಂತೆ ನಾನು ರಾಜ್ಯವನ್ನು ಕೈಗೊಂಡರೆ ನನಗೆ ಒಳ್ಳೆಯದೂ ಆಗದು, ನಿಮ್ಮ ಪ್ರಾರ್ಥನೆಯೂ ನೆರವೇರದು. ಆದ್ದರಿಂದ ರಾಜ್ಯವನ್ನು ಭರತನಿಗೆ ಒಪ್ಪಿಸುತ್ತೇನೆ; ತಾಯಿ, ನನ್ನ ಮಾತನ್ನು ನಂಬಿ. ನನ್ನನ್ನು ಕೇಳಿದ್ದರೆ ಸಾಕಿತ್ತು, ಭೂಮಿಯನ್ನು ತಮ್ಮನಿಗೆ ಒಪ್ಪಿಸುತ್ತಿದ್ದೆ, ಇಷ್ಟಕ್ಕೆಲ್ಲ ತಂದೆಯನ್ನು ಕೇಳಬೇಕಾಗಿತ್ತೆ?" ಎಂದು

ಬಿನ್ನವಿಸಿಕೊಂಡ. ತಂದೆಯು ರಾಜ್ಯವನ್ನು ಕೊಟ್ಟಾಗ ರಾಮನ ಮುಖ ಆನಂದದಿಂದ ಅರಳಲಿಲ್ಲ, ತಂದೆಯ ಮಾತನ್ನುಳಿಸಲು ಅದನ್ನು ತಮ್ಮನಿಗೆ ಕೊಡುವಾಗ ಅದು ಹರ್ಷಕ್ಕೆ ತಾಯ್ಮನೆಯಾಯಿತು. ಎಷ್ಟೇ ಆಗಲಿ ಧನ್ಯನು ದಾನಮಾಡುವಾಗ ಹೊಂದುವ ನಲಿವನ್ನು ಧನಪ್ರಾಪ್ತಿಯಲ್ಲಿ ಪಡೆಯುತ್ತಾನೆಯೇ!

ಆನಂತರ ಉದಾತ್ತ ರಾಘವನು ತಂದೆಯ ಕಡೆ ತಿರುಗಿ, "ಆಗಸದಲ್ಲಿ ಜಾಗವಿಲ್ಲದಿದ್ದರೆ, ಬುವಿಯು ಸಹನೆಯನ್ನು ಕಳೆದುಕೊಂಡರೆ, ಗಾಳಿ ಬೀಸದೆ ಸೆಡೆತುಕೊಂಡರೆ, ಮಳೆಗಾಲದಲ್ಲಿ ಮಳೆ ಸುರಿಯದಿದ್ದರೆ, ಬೆಂಕಿ ಬಿಸುಪನ್ನು ಕಳೆದುಕೊಂಡರೆ, ರಘುವಂಶಜರು ಸುಳ್ಳಾಡಿದರೆ ಮತ್ತು ಯುದ್ಧಕ್ಕೆ ಹೆದರಿದರೆ ಜಗತ್ತು ಹೇಗೆ ಮುಂದುವರಿಯಬಲ್ಲದು? ತಾವು ರಾಜ್ಯವನ್ನು ನನಗೆ ಕೊಟ್ಟರೂ ಆಳುವವರು ತಮ್ಮಂದಿರೇ ಅಲ್ಲವೇ? ಆದ್ದರಿಂದ ಯೋಚನೆ ಮಾಡದೆ ಭರತನಿಗೇ ಇದನ್ನು ಒಪ್ಪಿಸಿಕೊಡಿ. ರಾಜ್ಯದ ಭಾರವೀಯದಿದ್ದರೆ ಅವನು ತಪಸ್ಸಿಗೆ ಹೋಗುತ್ತಾನೆ; ವಿಯೋಗದುಃಖದಿಂದ ತಾಯಿ ಮರಣಿಸುತ್ತಾಳೆ. ಪ್ರಾಪ್ತಿಯನ್ನು ತಪ್ಪಿಸಲೂ ಅಪ್ರಾಪ್ತಿಯನ್ನು ಉಂಟುಮಾಡಲೂ ಸಾಧ್ಯವಿಲ್ಲ. ನಿಮ್ಮಂತಹವರು ಮೋಹಮೂರ್ಛೆಗೆ ಒಳಗಾಗಬಹುದೇ? ಶುಭಾಶುಭಗಳು ಎಷ್ಟು ಲಭ್ಯವೋ ಅಷ್ಟನ್ನು ಅನುಭವಿಸಬೇಕು. ಇದನ್ನು ಅರಿತವರಾಗಿಯೂ ತಾವು ಚಿಂತಾಜ್ವರದಿಂದ ಬಳಲುವುದೇ? ರಾಮನ ಮೇಲಿನ ಮೋಹದಿಂದ ನೀವು ಮಾತಿಗೆ ತಪ್ಪಿದರೆ ನನ್ನ ಮೇಲೂ ಅಪವಾದ ಬರುತ್ತದೆ. ನನ್ನ ಕಷ್ಟ ತಪ್ಪಿಸಲು ತಾಯಿ ಹದಿನಾಲ್ಕು ವರ್ಷ ರಾಜ್ಯವನ್ನು ಕೇಳಿ ಒಳ್ಳೆಯದನ್ನೇ ಮಾಡಿದ್ದಾಳೆ. ಸೋದರರನ್ನು ಕಳೆದುಕೊಂಡ ಬಾಳು, ಸಾಮ್ರಾಜ್ಯ, ಸಂಪತ್ತು ಇವುಗಳಿಂದೇನು ಪ್ರಯೋಜನ? ಈ ಅವಧಿಯಲ್ಲಿ ನನ್ನ ಶೌರ್ಯದಿಂದ ದಿಗ್ವಿಜಯಯಾತ್ರೆ ಕೈಗೊಳ್ಳುತ್ತೇನೆ; ಸಾಮ್ರಾಜ್ಯಪಟ್ಟವು ಭರತನ ಹಣೆಯಲ್ಲಿ ನೆಲಸಲಿ" ಎಂದು ಬಿನ್ನವಿಸಿಕೊಂಡ.

ಶ್ರೀರಾಮನ ವಾಕ್ಯಮಾಣಿಕ್ಯದ ಕಾಂತಿಯಿಂದ ದಶರಥನ ಮೋಹತಿಮಿರವು ತೊಲಗಿತು. ಪರಮಶ್ರೀವಲ್ಲಭನೂ ಚರಮತನುವೂ ಆದ ಇವನಿಗೆ ರಾಜ್ಯವು ತೃಣಸಮಾನವಾಗುವುದು ಸಹಜವೇ ಎಂದುಕೊಂಡು ಮಗನ ವಿನಯಕ್ಕೆ ನಯಗುಣಕ್ಕೆ ನಡವಳಿಕೆಗೆ ಬೆಕ್ಕಸವಟ್ಟು ದಶರಥನು ತಲೆದೂಗಿದ. ಆ ಸಮಯದಲ್ಲಿ ಭರತನು ಕರಗಳನ್ನು ಜೋಡಿಸಿ ಹೀಗೆಂದ: "ಹಿರಿಯನ ರಾಜ್ಯವನ್ನು ಕಿರಿಯನು ಅಪೇಕ್ಷಿಸುವುದು ತಕ್ಕುದಲ್ಲ. ಅರಿತರಿತೂ ಹೇಯವಾದುದನ್ನು ನನಗೆ ಕೊಡಲು ಅಪೇಕ್ಷಿಸುವಿರಲ್ಲ! ನೀವು ಒಲ್ಲದುದೂ, ನಿಮಗೆ ಹೇಯವಾದುದೂ ನನಗೆ ಹೇಗೆ ಉಪಾದೇಯವಾದೀತು? ಎಲ್ಲಿಯವರೆಗೂ ಒಬ್ಬನಲ್ಲಿ ವೈರಾಗ್ಯವುಂಟಾಗದಿರುವುದೋ ಅಲ್ಲಿಯವರೆಗೂ ಇಂಥದ್ದರಲ್ಲಿ ಒಲವಿರುತ್ತದೆ; ತನ್ನ ತಾನರಿದ ಬಳಿಕ ವಿಷಯಸುಖದಲ್ಲಿ ಮನಸ್ಸು ನಿಲ್ಲುವುದೇ?" ಈ ನಿರ್ಧಾರದ ಮಾತುಗಳನ್ನು ಕೇಳಿ ದಶರಥನಿಗೆ ಮೆಚ್ಚಿಕೆಯುಂಟಾಯಿತು. "ಪರಮ ಪುರುಷಾರ್ಥವು ಕೊನೆಯದು; ಅಲ್ಲಿಯವರೆಗೂ ಇತರ ಪುರುಷಾರ್ಥಗಳನ್ನು ಅನುಸರಿಸಬೇಕು. ನಿನಗೀಗ ಅಣ್ಣನ ವಚನವೇ ವಿಧೇಯವಾದದ್ದು" ಎಂದು ಮಗನಿಗೆ ದಶರಥನು ಬುದ್ಧಿ ಹೇಳಿದ. ರಾಘವನೂ ಭರತನನ್ನು ಕುರಿತು, "ತಂದೆಯ ಸತ್ಯಕ್ಕೆ ಅಪಚಾರವಾದರೆ ಆತನಿಗೆ ಅಯಶಸ್ಸು ಉಂಟಾಗುತ್ತದೆ; ಇದರಿಂದ ನಿನ್ನ ತಾಯಿಗೆ ವಿಯೋಗ ದುಃಖವೊದಗುತ್ತದೆ. ಹಾಗಾಗಿ ಪಿತೃವಾಕ್ಯ ಪರಿಪಾಲನೆಯೇ ನಿನ್ನ ಪರಮ ಕರ್ತವ್ಯ. ಕ್ರಮ ಪಾಲನೆಗಾಗಿ ತಂದೆಯು ನನಗೆ ರಾಜ್ಯವನ್ನಿತ್ತ; ಸತ್ಯ ಪರಿಪಾಲನೆಗಾಗಿ ನಾನು ಆ ರಾಜ್ಯವನ್ನು ನಿನಗೀಯುತ್ತಿದ್ದೇನೆ. ಇದು

ಆಕ್ರಮಣವಲ್ಲ. ಹೀಗಾಗಿ ಒಂದೇ ಮನಸ್ಸಿನಿಂದ ರಾಜ್ಯವನ್ನು ವಹಿಸಿಕೋ. ಹಿರಿಯರ ಮಾತಿನಂತೆ ನಡೆಯುವುದು ನನಗೂ ನಿನಗೂ ಕರ್ತವ್ಯವಲ್ಲವೇ?" ಎಂದು ತಿಳಿ ಹೇಳಿ ಭರತನನ್ನು ಒಡಂಬಡಿಸಿದ. ರಾಜ್ಯಕ್ಕಾಗಿ ಹೊಡೆದಾಡಿ ಸತ್ತವರಿದ್ದಾರೆ; ಆದರೆ ತಂದೆಯ ವಾಕ್ಯಪಾಲನೆಗಾಗಿ ಅದನ್ನು ಹುಲ್ಲಿಗೆ ಸಮಾನವೆಂದು ಬಗೆಯುವ ಇವರು ಎಂಥ ಮಹಾನುಭಾವರು ಎಂದು ಸಭಾಜನರು ವಿಸ್ಮಯಗೊಂಡರು. ಎಷ್ಟೋ ಮಂದಿ ರಾಜರು ಸಂಪತ್ತನ್ನು ಹೆಬ್ಬಾವಾಗಿ ಪಿಶಾಚಿಯಾಗಿ ಕಾಯುತ್ತಾರೆ; ಆದರೆ ರಾಮನಂತೆ ತಮ್ಮನಿಗೆ ಬಿಟ್ಟುಕೊಟ್ಟವರುಂಟೇ ಎಂದು ಜನ ತಮ್ಮತಮ್ಮಲ್ಲಿ ಮಾತಾಡಿಕೊಂಡರು. ನಿಧಿಯಿದ್ದೆಡೆ ಮೇಲ್ಮುಖವಾಗಿ ಉರಿಯುವ ದೀಪವೂ ಬಾಗುತ್ತದೆ; ಕವಡೆಗೆ ಕೂಡ ಮರ ಬಿಳಲು ಬಿಡುತ್ತದೆ; ಆದರೆ ತಂದೆಯ ಮಾತನ್ನುಳಿಸಲು ಸಮುದ್ರಪರ್ಯಂತವಾದ ರಾಜ್ಯವನ್ನು ಕೊಟ್ಟವರಾರಿದ್ದಾರೆ ಎಂದು ಜನ ಅಚ್ಚರಿಗೊಂಡರು.

ಜನರ ಇಂಥ ಹೊಗಳಿಕೆಯ ಮಾತನ್ನು ಕೇಳಿಯೂ, ಭರತನು ಕ್ರಮವಿರಹಿತನಾಗಿ ಸಾಮ್ರಾಜ್ಯ ಪಟ್ಟಕ್ಕೆ ಒಪ್ಪಿದುದನ್ನೂ ಕಂಡೂ ಲಕ್ಷ್ಮಣನು ಪ್ರಳಯಕಾಲದ ಧೂಮಕೇತುವಿನಂತೆ ಉಗ್ರನಾದ. ಇಂದ್ರನನ್ನು ಕಾರಾಗಾರದಲ್ಲಿ ಸೆರೆಯಿಡಲು, ಕುಲಪರ್ವತವನ್ನು ಕೀಳಲು, ತಾರಾಮಂಡಲವನ್ನು ನೆಲಕ್ಕೂ ನೆಲವನ್ನು ಆಗಸಕ್ಕೂ ಎಸೆಯಲು, ಸಮುದ್ರದ ನೀರನ್ನು ಕುಡಿಯಲು, ದಿಕ್ಕರಿಗಳ ದಂತಗಳನ್ನು ಕಿತ್ತೆಸೆಯಲು ರಕ್ತೇಕ್ಷಣನಾದ ಲಕ್ಷ್ಮಣನು ಬಗೆದ. ಅಂತ್ಯಕಾಲದ ದಟ್ಟವಾದ ಮೋಡಗಳಲ್ಲಿ ಕುಣಿಯುವ ಮಿಂಚಿನಂತೆ ಹಲ್ಲುಗಳ ಕಾಂತಿ ಕೋರೈಸಲು ಲಕ್ಷ್ಮಣನು, "ತಂದೆಯ ಮಾತನ್ನುಳಿಸಲು ರಾಮನು ಭರತನಿಗೆ ರಾಜ್ಯವನ್ನು ಕೊಡಲಿಲ್ಲ, ದಡ್ಡತನದಿಂದ ಕೊಟ್ಟ ಎಂದೂ; ಪರಾಕ್ರಮವಿರಹಿತನಾಗಿ ಕ್ರಮವನ್ನು ಅತಿಕ್ರಮಿಸಿ ಭರತನಿಗೆ ದಶರಥನು ರಾಜ್ಯವನ್ನಿತ್ತನೆ ಹೊರತು ರಾಮನಲ್ಲ ಎಂದೂ ಲೋಕ ಆಡಿಕೊಳ್ಳುತ್ತದೆ. ನಮಗೆ ನಿಸ್ಸಹಾಯಕತೆಯೂ ಅಪಾಯವೂ, ತಮಗೆ ಸುಖೋಪಾಯವೂ ಪ್ರಜೆಪರಿಜನಗಳ ಏಕಾಯತ್ತವೂ ಆಗಬೇಕೆಂಬ ಕುಟಿಲತೆಯಿಂದ ಕೈಕೆ ಹದಿನಾಲ್ಕು ವರ್ಷ ರಾಜ್ಯವನ್ನು ಬೇಡಿದಳು. ತಿಳಿಯದೆ ನೀವಿತ್ತರೂ ಸಾಗರಾವರ್ತಚಾಪವು ಸುಮ್ಮನಿರುವುದೇ?" ಎಂದು ಸಿಡಿಲಿನಂತೆ ಗರ್ಜಿಸಿದ. ತಮ್ಮ ಮನಸ್ಸಿನಲ್ಲಿದ್ದುದನ್ನು ಹೇಳಿದ ಲಕ್ಷ್ಮಣನ ಮಾತನ್ನು ಕೇಳಿ ಸಭಾಜನತೆ ರೋಮಾಂಚನಗೊಂಡಿತು. ಆದರೆ ಪರಾರ್ಥಚರಿತಪ್ರೇಮನಾದ ರಾಮನು ತಮ್ಮನ ಕಡೆ ಹುಬ್ಬಿನಿಂದ ಸನ್ನೆ ಮಾಡಿದ. ಅದರಿಂದ ಲಕ್ಷ್ಮಣನು ಸುಮ್ಮನಾದ: ಇಲ್ಲದಿದ್ದರೆ ಅವನ ಮುನಿಸೂ ಶಿವನ ಉರಿಗಣ್ಣೂ ಲೋಕವನ್ನು ಅರೆಗಳಿಗೆಯಲ್ಲಿ ಬೂದಿಮಾಡದಿರುತ್ತದೆಯೇ! ಅಣ್ಣನಿಗೆ ಇಚ್ಛಾವಿಘಾತವನ್ನು ಮಾಡಲಾರದೆ ಉಪೇಂದ್ರನು ತನ್ನ ಕೋಪವನ್ನು ಉಪಶಮನಗೊಳಿಸಿಕೊಂಡು ಗರುಡಮಣಿಯ ಪಕ್ಕದಲ್ಲಿನ ಫಣಿಯಂತೆ ಸುಮ್ಮನೆ ನಿಂತ.

ಅನಂತರ ರಾಮನು ತಂದೆಯೆಡೆ ತಿರುಗಿ, "ನಾನು ದೂರ ಹೋಗಬೇಕು; ಇಲ್ಲಿಯೇ ಇದ್ದರೆ ಪರಿವಾರ ಸುತ್ತುಗಟ್ಟಿ ನನ್ನ ಗುಣಹಾನಿಯಾಗುತ್ತದೆ; ಅದರಿಂದ ನಾನು ಕೊಟ್ಟದ್ದೂ ಭರತ ಪಡೆದದ್ದೂ ವ್ಯರ್ಥವೆನಿಸುತ್ತದೆ; ಆಗ ಅಪವಾದನಿನಾದ ದಿಕ್ಕರಿಗಳ ಕಿವಿಯಲ್ಲಿಯೂ ಪ್ರತಿಧ್ವನಿಸುತ್ತದೆ. ಹೀಗಾಗಿ ನಿಮ್ಮ ಆಣತಿಯೆಂಬ ರತ್ನದ ಮಣಿಯನ್ನು ತಲೆಯಲ್ಲಿ ಹೊತ್ತು ತಿರುಗಾಡುತ್ತ ನನ್ನ ಬಾಹುಬಲದಿಂದ ಬಲಿಷ್ಠರನ್ನೂ ಅಹಿತರನ್ನೂ ಗೆಲ್ಲುತ್ತೇನೆ"

ಎಂದು ತಂದೆಯ ಪಾದಗಳಿಗೆ ತನ್ನ ಕಿರೀಟದ ತೋರಮುತ್ತುಗಳ ಕಾಂತಿಜಲದಿಂದ ಅಭಿಷೇಕ ಮಾಡಿದ. ಆನಂತರ ಸಭೆಯಿಂದ ಹೊರನಡೆದ. ದಶರಥನ ಕಣ್ಣುಗಳು ಅವನ ಹಿಂದೆಯೇ ನಡೆದವು; ಅವುಗಳನ್ನು ಮನಸ್ಸೂ ಹಿಂಬಾಲಿಸಿತು; ಅದರ ಹಿಂದೆ ನಿಟ್ಟುಸಿರು ಹೊಮ್ಮಿ ನೃಪತಿಯು ಮೂರ್ಛೆಗೆ ಸಂದ. ಕಡೆಗಣ್ಣಿನಿಂದ ಬಾಷ್ಪಜಲವು ಕಿವಿಯವರೆಗೂ ಹರಿಯಿತು; ನಿಟ್ಟುಸಿರಿನ ಜಾಗದಲ್ಲಿ ಮಿಡುಕುದಾಣಗಳು ಸಂದೇಹವನ್ನು ಹುಟ್ಟಿಸಿದವು. ಹೀಗೆ ಮಹಾಸತ್ವನಾದ ದಶರಥನು ಧೈರ್ಯಗೆಟ್ಟು ಮೂರ್ಛೆ ಹೋದನೆಂದ ಮೇಲೆ ಮೋಹದಾವಾಗ್ನಿಯು ಯಾರನ್ನು ತಾನೇ ಸುಡದಿರದು!

ಮಗನ ಹೋಗುವಿಕೆಯಿಂದ ಪತಿಯು ಮೂರ್ಛೆಗೆ ಸಂದುದನ್ನು ನೋಡಿ ಕೈಕೆ ಲಜ್ಜಿತಳಾಗಿ ತಲೆ ತಗ್ಗಿಸಿ, ಕಾಲ್ಗೆಜ್ಜೆಯ ಸದ್ದಿನ ಜೊತೆ ಅಪವಾದನಾದವೂ ಹೊಮ್ಮಲು ಕಣ್ಣೀರನ್ನು ಸುರಿಸುತ್ತ ಅಲ್ಲಿಂದೆದ್ದು ಹೋದಳು. ಆನಂತರ ಕಣ್ಣುಗಳ ಹಿಂದೆ ಹೋಗುವ ಮನಸ್ಸಿನಂತೆ, ದೇಹದ ಹಿಂದೆ ಸಾಗುವ ನೆರಳಿನಂತೆ ಲಕ್ಷ್ಮಣನು ಸಭೆಯಿಂದ ಹೊರನಡೆದ. ತಂದೆಯು ಕ್ರಮಬದ್ಧವಾಗಿ ರಾಜ್ಯವನ್ನು ಕೊಡಲೆಂದು ಬಗೆದರೆ, ರಾಮನಿಗೆ ಅರಣ್ಯವಾಸ ದೊರಕಿತಲ್ಲ ಎಂದು ಸಭಾಜನವು ಶೋಕರಸಭಾಜನವಾಯಿತು. ಸೂರ್ಯ ಮುಳುಗಿದ ನಂತರದ ದಿಕ್ಕುಗಳಂತೆ, ಪ್ರಾಣವಾಯು ಹರಿದ ಶರೀರದಂತೆ, ಸಭೆಯೆಂಬ ಚಕ್ರವಾಕದ ಕಣ್ಣುಮನಸ್ಸುಗಳಿಗೆ ಇಳಿಕೆಯುಂಟಾಯಿತು.

ಈ ವಿಷಯವನ್ನೆಲ್ಲ ತಿಳಿದ ಸುಮಿತ್ರೆಯು ಅಪರಾಜಿತೆಯಲ್ಲಿಗೆ ಬಂದಳು. ಕೈಕೆಯು ಭರತನಿಗೆ ರಾಜ್ಯವನ್ನು ಬೇಡಿದುದನ್ನೂ, ರಾಮನು ರಾಜ್ಯತ್ಯಾಗ ಮಾಡಿದುದನ್ನೂ ತಾನು ಕರ್ಣಪರಂಪರೆಯಿಂದ ಕೇಳಿದುದಾಗಿ ಸುಮಿತ್ರೆ ನುಡಿದಳು. ಇದರಿಂದ ಅಪರಾಜಿತೆ ಭಯಗೊಂಡಳು. ವಿಧಿಯಿಂದ ಏನು ತಾನೇ ಸಂಭವಿಸದು ಎಂದು ಅವರಿಬ್ಬರೂ ಉಮ್ಮಳಗೊಂಡರು. ಆ ಹೊತ್ತಿಗೆ ಸರಿಯಾಗಿ ಬಲದೇವ ವಾಸುದೇವರು ಅಂತಃಪುರವನ್ನು ಹೊಕ್ಕು ತಾಯಂದಿರಿಗೆ ನಮಸ್ಕರಿಸಿ ಸಮುಚಿತಾಸನಗಳಲ್ಲಿ ಕುಳಿತರು. ಲಕ್ಷ್ಮಣನು ಶ್ರೀರಾಮನ ಪರೋಪಕಾರ ಪ್ರವೃತ್ತಿಯನ್ನು ವಿವರಿಸಿದಾಗ, ಅದನ್ನು ಕೇಳಿದ ಅಪರಾಜಿತಾದೇವಿ ದುಃಖಪೂರಿತಳಾದಳು. ಅವಳ ಕಣ್ಣೀರಿನ ಸೇಚನದಿಂದ ಮೋಹಮೂರ್ಛೆ ಎಂಬ ಬಳ್ಳಿಯು ಬೆಳೆಯಿತು. "ವಿಧಿಯು ನನ್ನನ್ನೇ ಬೆದರಿಸುತ್ತ ಅಟ್ಟಿಕೊಂಡು ಬರುತ್ತಿದ್ದಾನೆ: ಹಿಂದೆಯೇ ನನ್ನ ತವರುಮನೆ ನಾಶವಾಯಿತು; ಈಗ ಪತಿಯು ತಪಸ್ಸಿಗೆಂದು ಹೋಗುತ್ತಿದ್ದಾನೆ; ಮಗನೇ, ನೀನೂ ನನ್ನನ್ನು ಬಿಟ್ಟು ಹೋದರೆ ನನಗೆ ಗತಿ ಯಾವುದು? ನಾನು ಯಾರನ್ನು ಆಶ್ರಯಿಸಲಿ?" ಎಂದು ಗದ್ಗದ ಕಂಠದಿಂದ ನುಡಿದಳು. ಕಾಡು ಮನುಷ್ಯರು, ಕಾಡು ಪ್ರಾಣಿಗಳು, ಕಾಡುಗಿಚ್ಚು ಮುಂತಾದವುಗಳಿಂದ ಕೂಡಿದ ಅರಣ್ಯವನ್ನು ಮಗನು ಹೊಕ್ಕರೆ ಅದನ್ನು ತಾನು ಹೇಗೆ ಸಹಿಸಬಲ್ಲೆ ಎಂದು ರೋದಿಸಿದ ಆಕೆ, ಮದನಗ್ರಹಪೀಡಿತನಾಗಿ ಹಿರಿಯ ಮಗನನ್ನು ಘೋರ ಅಟವಿಗೆ ಕಳಿಸುವ ದಶರಥನಂತಹವನನ್ನು ತಾನೆಂದೂ ಕಂಡಿಲ್ಲವೆಂದು ಕಟಕಿಯಾಡಿದಳು; ರಾಮನನ್ನು ಕಾಡಿಗಟ್ಟಿ ತನ್ನ ಮಗನನ್ನು ಅರಮನೆಯನ್ನು ಹೊಗಿಸುವ ಕೈಕೆಯು ಕರುಣೆಯಿಲ್ಲದವಳು ಎಂದು ಹಲುಬಿದಳು; ತಂದೆ ಕೊಟ್ಟನೆಂದು ಕ್ರಮವನ್ನು ಕಡೆಗಣಿಸಿ ರಾಜ್ಯವನ್ನು ಒಪ್ಪಿಕೊಂಡ ಭರತನಷ್ಟು ಕೆಟ್ಟವರು ಇನ್ನಾರಿದ್ದಾರು ಎಂದು ದೂರಿದಳು; ಇದನ್ನು ತಡೆಯದೆ ಶತ್ರುಘ್ನನೂ

ಸುಮ್ಮನಿದ್ದನೆಂದ ಮೇಲೆ, ಇದರ ಹಿಂದಿನ ಸಂಚು ತಿಳಿಯುವುದಿಲ್ಲವೇ ಎಂದು ಕಹಿಯಾಗಿ ನುಡಿದಳು.

ವಿಧಿಯು ಕೈಕೆಗೆ ಅನುಕೂಲಕರವಾಗಿದೆ. ಹಾಗಾಗಿ ಅಕ್ರಮದಿಂದ ರಾಮನು ರಾಜ್ಯವನ್ನಿತ್ತರೂ ಅದನ್ನು ಪ್ರತಿಭಟಿಸಿದರೆ ಅಣ್ಣನಿಗೆ ನೋವಾಗುತ್ತದೆಂದು ಲಕ್ಷ್ಮಣನೂ ಸುಮ್ಮನಾದ. ಹಾಗಲ್ಲದೆ ಅವನು ಸಾಗರಾವರ್ತವನ್ನು ಮೀಟಿದ್ದರೆ ವಿದ್ವಿಷ್ಟಾಂಗನೆಯ ಗರ್ಭಪಾತವಾಗುತ್ತಿತ್ತು. ಅರಸನು ಕ್ರಮ ತಪ್ಪಿದಾಗ ಹಾವು ಮೇಲೆ ಬಿದ್ದಂತೆ, ಹುಚ್ಚು ಹಿಡಿದಂತೆ, ದೇಹ ಮರಗಟ್ಟಿದಂತೆ, ಶರೀರದಿಂದ ಉಸಿರು ಹೋದಂತೆ, ಸನ್ನಿಪಾತಜ್ವರ ಉಂಟಾದಂತೆ ಅಭಿಜನರು ವಿದ್ವಜ್ಜನರು ಮಂಡಲೇಶ್ವರರು ಸೇನಾಪತಿಗಳು ಮಂತ್ರಿಮಂಡಲ – ಇವರೆಲ್ಲ ಪ್ರತಿಭಟಿಸದೇ ಅವಿವೇಕದಿಂದ ಸುಮ್ಮನೇ ಇರುತ್ತಿದ್ದರೇ ಎಂದು ಅಪರಾಜಿತೆಯು ಉದ್ವೇಗಭರಿತಳಾಗಿ ನುಡಿದಳು. ಅದು ಚಿತ್ರದ ಸಭೆ, ಮದಸರ್ಪವು ಕಚ್ಚಿದ ಸಭೆ, ಮನುಷ್ಯಪ್ರಾಣಿಗಳ ಸಭೆ; ಇಲ್ಲದಿದ್ದರೆ ಅಭಿಜನಾನಂದನನಾದ ತನ್ನ ನಂದನನನ್ನು ಹೊರಗಟ್ಟುತ್ತಿತ್ತೇ ಎಂದು ಗೋಳಾಡಿದಳು. ಆನಂತರ ಮಗನ ಮುಖವನ್ನು ನೋಡುತ್ತ, "ಕ್ರಮವನ್ನು ನೋಡದೆ, ನಂಟರನ್ನು ತೊರೆದು, ನಾಡನ್ನು ಬಿಟ್ಟು, ಸಪ್ತಾಂಗಸಹಿತವಾದ ರಾಜ್ಯವನ್ನು ತಿರಸ್ಕರಿಸಿ, ಸಪತ್ನನನ್ನು ಸಿಂಹಾಸನದಲ್ಲಿ ಕೂರಿಸಿ, ತಾಯಿಗೆ ದುಃಖವನ್ನುಂಟುಮಾಡಿ ಹೋಗುವುದು ಎಷ್ಟು ಉಚಿತ? ನಾನು ಇಲ್ಲಿರುವುದಿಲ್ಲ; ನನ್ನನ್ನೂ ಜೊತೆಗೆ ಕರೆದುಕೊಂಡು ಹೋಗು" ಎಂದು ನೆಲದ ಮೇಲೆ ಮೈಯ್ಯನ್ನೀಡಾಡಿ ಕಣ್ಣೀರು ಸುರಿಸಿದಳು.

ಕೋಶಲದ ಮಹಾರಾಣಿಯು ಹಾಗೆ ಶೋಕಿಸಲು, ಲಕ್ಷ್ಮಣನು ಕೈಜೋಡಿಸಿಕೊಂಡು, "ಅಣ್ಣನಂತೆ ಕಲಿಯೂ ತ್ಯಾಗಿಯೂ ಬೇರಾರಿದ್ದಾರೆ? ನೆಲನೇಸರುಗಳಿರುವ ತನಕ ನೆನೆಯಬೇಕಾದಂತಹ ಕೂರ್ಮೆಹಿರಿಮೆಗಳನ್ನು ಅವನು ನಿಲ್ಲಿಸಿದ್ದಾನೆ; ಅದರಿಂದ ಆನಂದವನ್ನು ತಾಳದೇ ಶೋಕಿಸುವರೇ? ಅವನು ಚರಮಶರೀರಿ, ಅವನಿಗೆ ಬಾಧೆಯಿಲ್ಲ; ಉತ್ತಮಸತ್ವನಾದ ಆತನಿಗೆ ದುಃಖವಿಲ್ಲ; ಆ ಪುಣ್ಯಮೂರ್ತಿಗೆ ಎಡರುಗಳುಂಟಾಗವು; ಅನಂತವೀರ್ಯನಾದ ಅವನೆದುರು ಮೂರು ಲೋಕಗಳಲ್ಲಿಯೂ ಎದುರಿಸುವವರಿಲ್ಲ. ಇದನ್ನು ತಿಳಿದು ನಿಮ್ಮ ವಿಷಾದವನ್ನು ಪರಿಹರಿಸಿಕೊಳ್ಳಿ" ಎಂದು ಬೇಡಿಕೊಂಡ. "ಅಲಂಘ್ಯಬಲರಾದ ಅಕ್ಕಪಕ್ಕದ ಅರಸುಮಕ್ಕಳನ್ನು ಗೆದ್ದು ಬಲಭದ್ರನು ನಿಮ್ಮನ್ನು ನೆಲೆಗೊಳಿಸುವುದರಲ್ಲಿ ಸಂಶಯವಿಲ್ಲ. ಭರತನೂ ಸುಮಿತ್ರೆಯೂ ನಿಮ್ಮ ಪಾದಾಂಬುಜಸೇವೆಯನ್ನು ಗೈಯುತ್ತಾರೆ. ಆದ್ದರಿಂದ ನಿಮ್ಮ ದುಃಖವನ್ನು ಉಪಶಮಿಸಿಕೊಳ್ಳಿ" ಎಂದು ಮುಂತಾಗಿ ಕೇಳಿಕೊಂಡ ಮೇಲೆ ಕೌಶಲ್ಯೆಯು ವಿಗತಶೋಕಶಲ್ಯೆಯಾದಳು.

ಆನಂತರ ಅಪರಾಜಿತೆಯು ಮಗನ ಮುಖವನ್ನು ನೋಡಿ, ಸುಚರಿತೆಯಾದ ಸೀತೆಯನ್ನೂ ಜೊತೆಯಲ್ಲಿ ಕರೆದೊಯ್ಯಬೇಕೆಂದು ಸೂಚಿಸಿದಳು; ರಾಮನು ತಾಯಿಯ ಮಾತಿಗೆ ಸಮ್ಮತಿಸಿ ಅವಳ ಪದನಖಾಂಶುಗಳನ್ನು ತಲೆಯಲ್ಲಿ ತಳೆದ. ಹೀಗೆ ಅಪರಾಜಿತೆ-ಸುಮಿತ್ರೆಯರಿಂದ ಆಶೀರ್ವಾದ ಪಾರಿಜಾತಪುಷ್ಪಗಳನ್ನು ಸ್ವೀಕರಿಸಿ ರಾಮನು ಬೀಳ್ಕೊಂಡ; ಲಕ್ಷ್ಮಣನು ಅಣ್ಣನ ಪಾದಗಳನ್ನಿ ಕಣ್ಣಿಗೊತ್ತಿಕೊಂಡ. ಸುಮಿತ್ರೆಯು ಮಗನೆಡೆ ತಿರುಗಿ, "ನಿನ್ನ

ಆಯಾಸವನ್ನು ಗಮನಿಸದೆ ಶಯನಅನ್ನಪಾನಗಮನಗಳಲ್ಲಿ ರಾಮಸೀತೆಯರ ಪರಿಚರ್ಯೆ ಮಾಡುತ್ತಿರು" ಎಂದು ಕೇಳಿಕೊಂಡಳು. ಗುಣವನ್ನು ಗಮನಿಸದೆ ಕೈಕೆಯು ರಾಜಾರ್ಹನಾದ ರಾಮನನ್ನು ತನ್ನ ಮಗನ ನೆವದಿಂದ ಕಾಡಿಗಟ್ಟಿದಳು; ಅದೇ ಸುಮಿತ್ರೆಯು ತನ್ನ ಮಗನನ್ನೇ ಅಣ್ಣಅತ್ತಿಗೆಯರ ಸೇವೆಗೆಂದು ಅವರ ಹಿಂದೆ ಕಾಡಿಗೆ ಕಳಿಸಿದಳು. ಗುಣಹೀನರು ಗೈದ ಅನ್ಯಾಯವನ್ನು ಗುಣವಂತರು ನೇರ್ಪಡಿಸುವುದರಲ್ಲೇನು ಆಶ್ಚರ್ಯ!

ರಾಮಸೀತೆಲಕ್ಷ್ಮಣರು ಎಲ್ಲರಿಂದ ಬೀಳ್ಕೊಂಡು ಅಂಗಡಿಬೀದಿಗಳ ಮುಖಾಂತರವಾಗಿ ಕಾಡಿನೆಡೆಗೆ ನಡೆದರು. ಅವರನ್ನು ನೊಡಿ ದಾರಿಯಲ್ಲಿ ನಿಂತಿದ್ದ ಜನರು ಅನೇಕ ಬಗೆಯಾಗಿ ಮಾತಾಡಿಕೊಂಡರು. ಪರಸ್ತ್ರೀಯರು ಸೇಸೆಯಿಕ್ಕದೆ, ಶಂಖನಾದವು ಗಗನಕ್ಕೆ ಏರದೆ, ಮಂಗಲತೂರ್ಯನಿನಾದವುಂಟಾಗದೆ, ಗುಡಿತೋರಣಗಳನ್ನು ಕಟ್ಟದೆ, ಪಾಠಕರ ಸ್ತುತಿಯಿಲ್ಲದೆ ಈ ಅರಸುಗುವರರು ಎತ್ತ ಹೋಗುತ್ತಿರಬಹುದು ಎಂದು ಕೆಲವರು ಅಚ್ಚರಿಗೊಂಡರು. ಇಕ್ಕೆಲಗಳಲ್ಲೂ ಚಾರು ಚಂದ್ರಾನನೆಯರು ಚಾಮರವಿಕ್ಕಲು, ಆನೆಯ ಮೇಲೆ ಬೆಳ್ಗೊಡೆಯಡಿ ಕುಳಿತು, ಆನೆಯ ಬೃಂಹಿತಗಳ ನಡುವೆ ವೈಭವದಿಂದ ಸಾಗದೆ ರಾಮಾಚ್ಯುತಜಾನಕಿಯರು ಇದೇಕೆ ಕಾಲ್ನಡಿಗೆಯಿಂದ ಬರುತ್ತಿರುವರಲ್ಲ ಎಂಬ ಅನುಮಾನವನ್ನು ಕೆಲವರು ವ್ಯಕ್ತಪಡಿಸಿದರು. ಪುರಸ್ತ್ರೀಯರ ನಯನಪ್ರಭೆಯು ತಮ್ಮ ವಕ್ಷಸ್ಥಳದಲ್ಲಿ ರಸಾಭಿನಯವನ್ನು ಮಾಡಲು ಧಾರಾಪಂಚಕಗಳಲ್ಲಿ ವಿಚಿತ್ರಗತಿಯಿಂದ ಸಾಗುವ ಕುದುರೆಗಳನ್ನೇರಿ ಬರದೆ ಈ ಧೀರರು ನಡೆದುಕೊಂಡು ಬರಲು ಕಾರಣವೇನು ಎಂದು ಮತ್ತೆ ಕೆಲವರು ವಿಸ್ಮಯಗೊಂಡರು. ಓಲಗಶಾಲೆಯ ಮಂಗಳರತ್ನವೇದಿಕೆಯಲ್ಲಿ, ಇಂದುಕಾಂತಶಿಲಾನಿರ್ಮಿತ ರಾಜಾಂಗಣದಲ್ಲಿ, ಅರಮನೆಯ ಆವರಣದ ಉಪವನದಲ್ಲಿ, ಅರಮನೆಯೊಳಗಣ ಕೊಳಗಳಲ್ಲಿ, ವಿಲಾಸಗೃಹಗಳಲ್ಲಿ ಹಂಸಗಳೊಡನೆ ಕ್ರೀಡಿಸುವ ಜಾನಕಿಯು ಅಂಗಡಿಬೀದಿಗಳಲ್ಲಿ ಗಂಡನನ್ನು ಅನುಸರಿಸಿ ನಡೆಯುತ್ತ ಬರುತ್ತಿರುವಳಲ್ಲ ಎಂದು ಮತ್ತೂ ಕೆಲವರು ಅಚ್ಚರಿವಟ್ಟರು.

ವಸ್ತುಸ್ಥಿತಿ ತಿಳಿದವರು, ಪರಿಜನರ ಮನೋರಥವನ್ನು ನೆರವೇರಿಸಲು, ಅಯೋಧ್ಯೆಯ ಸಿಂಹಾಸನವನ್ನು ತನ್ನ ಅವಾರ್ಯವೀರ್ಯದಿಂದ ಕಾಪಾಡಲು, ಯಾಚಕರ ಇಷ್ಟಾರ್ಥವನ್ನು ಕೈಗೂಡಿಸಲು, ಉದ್ಧತರಾದ ರಾಜರನ್ನು ತನ್ನ ಭುಜಪ್ರತಾಪದಿಂದ ಗೆಲ್ಲಲು, ಶರಣಾಗತರನ್ನು ಕೃಪಾಣಧಾರಾಜಲದಿಂದ ಸಂರಕ್ಷಿಸಲು, ತನ್ನ ಆಜ್ಞೆಯಿಂದ ವರ್ಣಾಶ್ರಮನಿಯಮಗಳನ್ನು ಪಾಲಿಸುವಂತೆ ಮಾಡಲು, ಲೋಕದ ಕಳ್ಳಕಾಕರರ ಮದವೀರಗ್ರಹೋಚ್ಚಾಟನೆಯನ್ನು ತನ್ನ ವಜ್ರಾವರ್ತ ಚಾಪ ಟಂಕಾರದಿಂದಲೇ ನಿಗ್ರಹಿಸಲು, ತನ್ನ ಚಾರು ಚರಿತ್ರದಿಂದ ಸರಿಯಾದ ಬಾಳುವಿಕೆಯನ್ನು ತೋರಿಸಲು, ಸಹಜ ಸಾಹಿತ್ಯ ಕಲಾಕೌಮುದೀ ವಿಲಾಸದಿಂದ ವಿದ್ವಜ್ಜನರ ಮನಃಕುಮುದಿನಿಯನ್ನು ಅರಳಿಸಲು, ಪ್ರೇಮಪೂರ್ವಕವಾಗಿ ನಂಟರಿಷ್ಟರನ್ನು ನಡೆಸಿಕೊಳ್ಳಲು ಉದಾತ್ತರಾಘವನಲ್ಲದೆ ಮತ್ತಾರು ಸಮರ್ಥರು, ಇಂತಹವನನ್ನು ಕೈಕೆ ಕಾಡಿಗೆ ಅಟ್ಟುತ್ತಿರುವಳಲ್ಲ ಎಂದು ಕನಲಿ ಆಡಿಕೊಳ್ಳುವ ಮಾತುಗಳು ಕಿವಿಯ ಮೇಲೆ ಬೀಳುತ್ತಿರಲು ರಾಮಸೀತಾಲಕ್ಷ್ಮಣರು ನಡೆತಂದರು.

* * * * *

# ೭. ವನಪ್ರವೇಶ

ಸಂಜೆಯ ಹೊತ್ತಿಗೆ ರಾಮಾದಿಗಳು ಊರಿನ ಹೊರವಲಯದ ಅರಭಟ್ಟಾರಕರ ಬಸದಿಯ ಬಳಿ ಬಂದರು. ಉಮ್ಮಳದಿಂದ ಕೂಡಿದ ತಮ್ಮ ತಾಯಂದಿರನ್ನು ವಿನಯದ ಮಾತುಗಳಿಂದ ಸಮಾಧಾನಪಡಿಸಿ ಅರಮನೆಗೆ ಮರಳಿಸಿ ತಾವು ಜಿನಮಂದಿರಕ್ಕೆ ಬಂದರು. ಅದರ ಕನಕಪ್ರಾಕಾರವನ್ನು ಹೊಕ್ಕ ಸಾಹಿತ್ಯವಿದ್ಯಾಧರನಾದ ಶ್ರೀರಾಮನು ನಯನಾನಂದಕರವಾದ ಜಿನನಾಥ ದಿವ್ಯಗೃಹವನ್ನು ಮೇರುವನ್ನು ಬಲಗೊಳ್ಳುವ ಅತ್ರಿತನೂಜನಂತೆ ಬಲಗೊಂಡು ಬಂದ. ಸೀತಾಲಕ್ಷ್ಮಣರು ಅವನನ್ನು ಅನುಸರಿಸಿದರು. ಅರಭಟ್ಟಾರಕರ ಹೊಳೆವ ಚಿಗುರಿನಂತಹ ಕಾಲುಗುರ ಕಾಂತಿಯೆಂಬ ಗರಗಸವು ಬೆಸೆದುಕೊಂಡ ದೇಹಾತ್ಮಗಳನ್ನು ಬೇರ್ಪಡಿಸುವುದು ಎಂದು ದರ್ಶನಸ್ತುತಿಗೆಯ್ದು ರಾಮಲಕ್ಷ್ಮಣರು ಜಿನಭವನದ ಮಧ್ಯರಂಗದಲ್ಲಿ ಕುಳಿತರು. ಹೊರಗೆ ಭವಬದ್ಧ ಕ್ರೋಧದಿಂದ ಕತ್ತಲು ಬೆಳಕನ್ನು ಸಂಧಿಸಲು, ಚಕ್ರವಾಕಕ್ಕೆ ಶೋಕವುಂಟಾಗಲು, ದಿವಸಶ್ರೀಯನ್ನು ಬಿಟ್ಟು ಪದ್ಮಿನೀಸ್ತ್ರೀಯರನ್ನು ಕೈಗೊಂಡ ದಿವಸೇಂದ್ರನೆಂಬ ಉತ್ತಾನಪಾದನು ಭೀತಿಯಿಂದ ಅಂಬರವನ್ನು ತೊರೆದು ಸಮುದ್ರದಲ್ಲಿ ಇಳಿದ. ಕತ್ತಲಿಗೆ ಹೆದರಿ, ಬಿಸುಪನ್ನು ಕಳೆದುಕೊಂಡು, ತನ್ನ ಪರಿವಾರವಾದ ಜಕ್ಕವಕ್ಕಿಗಳನ್ನು ತೊರೆದು, ಕಡುಗೂರ್ಪ ಅಬ್ಜಿನಿಯೆಂಬ ನಲ್ಲಳನ್ನು ಕಡೆಗಣಿಸಿದ ರವಿಯು ಭೀತಿಯಿಂದ ಅಸ್ತಗಿರಿಯಲ್ಲಿ ಅಡಗಿಕೊಂಡ. ಕ್ಷಣಿಕ ವ್ಯಕ್ತಿಗೆ ಸ್ಥಿರತೆ ಎಲ್ಲಿ ಬರಬೇಕು! ದಿನಪನು ತನ್ನನ್ನು ಅಗಲಿ ಹೋದುದುರಿಂದ ಪೂರ್ವದಿಕ್ಕೆಂಬ ಕಾಂತೆಯ ಮುಖ ಕಂದಿದ ಹಾಗೆ ಮಬ್ಬು ಆವರಿಸಿತು. ಅವನನ್ನು ಕೂಡಲು ಪಶ್ಚಿಮದಿಗ್ವಿಲಾಸಿನಿಯು ಸಂಭ್ರಮಗೊಂಡಂತೆ ಸಂಜೆಗೆ ಬಣ್ಣವೇರಿತು. ಇದರಲ್ಲಿ ಅಚ್ಚರಿಯೇನಿಲ್ಲ; ಇನಿಯನು ತನ್ನನ್ನು ಸೇರಿದರೆ ಅಥವಾ ತೊರೆದರೆ ರಾಗ ಅಥವಾ ನೀರಾಗವನ್ನು ಹೊಂದದವರಾರು? ಚಕ್ರವಾಕಮಿಥುನಕ್ಕೆ ವಿರಹವ್ಯಾಕುಲವಾಯಿತು, ತಾವರೆಗಳು ಮುದುಡಿದವು; ದೋಷಾಂಧರಾದ ಕಾಮಾತುರರೂ ರಜೋಧಿಕರೂ ಖೇದವನ್ನು ಹೊಂದದಿರುತ್ತಾರೆಯೇ ಎಂದು ನಗುವಂತೆ ನೆಯ್ದಿಲೆಯ ಕೊಳವು ಅರಳಿ ದುಂಬಿಗಳ ಮಧುರದನಿಯಿಂದ ವಾಚಾಳಿಯಾಯಿತು! ತಾರೆಗಳು ಮಿಣಮಿಣನೆ ಕಾಣಿಸಿಕೊಂಡವು; ಆಗ ದಟ್ಟ ಕತ್ತಲೆಯಿಂದ ಕೂಡಿದ ಆಗಸವು ಹಾಲ್ಗಡಲಿನ ಸೀರ್ಪನಿಗಳು ಅಂಟಿಕೊಂಡ ಕೃಷ್ಣನ ದೇಹದಂತೆ ಕಾಣಿಸಿತು.

ಕಣ್ಣಿಗೆ ಇನ್ನೂ ನಿದ್ದೆ ಮೆತ್ತಿಕೊಂಡಿದ್ದರೂ ಮಧ್ಯರಾತ್ರಿಯಲ್ಲಿಯೇ ಎದ್ದು

ಪರಮಜಿನಪತಿಗೆ ನಮಸ್ಕರಿಸಿ ಬೀಳ್ಕೊಂಡು, ಬಿಲ್ಲುಬಾಣಗಳ ಸಮೇತ ಹೊರಟು ಊರ ಅಗಸೆಬಾಗಿಲನ್ನು ದಾಟಿ ದಕ್ಷಿಣಾಭಿಮುಖವಾಗಿ ಪ್ರಯಾಣ ಹೊರಟರು. ಅವರ ಹಿಂದೆ ಅನಂತ ಸಾಮಂತಸಂದೋಹವು ಬರಲು, ವಿಚಿತ್ರವಾದ ಕೊಡೆಗಳನ್ನು ಹಿಡಿದು ವಿವಿಧ ವಾಹನಗಳಲ್ಲಿ ಹಿಂಬಾಲಿಸುವ ಜನರನ್ನು ಕುರಿತು, "ಸೀತೆಗೆ ಆಯಾಸವಾಗುವುದೆಂದು ಮೆಲ್ಲನೆ ನಡೆಯುತ್ತಿದ್ದೇವೆ, ಇಲ್ಲದಿದ್ದರೆ ಈ ಹೊತ್ತಿಗೆ ದೂರ ಹೋಗಿರುತ್ತಿದ್ದೆವು" ಎಂದು ಹೇಳುತ್ತ ಮುಂದುವರಿದರು. ದಾರಿಯಲ್ಲಿನ ಹಳ್ಳಿಪಟ್ಟಣಗಳನ್ನು ನೋಡುತ್ತ ನಡೆದು ದೊಡ್ಡ ನದಿಯ ದಡವನ್ನು ಸೇರಿದರು. ಅಲ್ಲಿ, ಸಾಮಂತಾದಿಗಳನ್ನು ಸಾಂತ್ವನಗೊಳಿಸಿ ಹಿಂದಕ್ಕೆ ಕಳಿಸಿದ ರಾಮಸೀತೆಲಕ್ಷ್ಮಣರು ದೋಣಿಯಲ್ಲಿ ಕುಳಿತು ನದಿಯನ್ನು ದಾಟಿದರು. ಅವರ ವಿಯೋಗವನ್ನು ಸಹಿಸದ ಕೆಲವರು ಆ ಕಾರಣದಿಂದ ವೈರಾಗ್ಯ ಹುಟ್ಟಿ ನದೀತೀರದ ಜಿನಾಗಾರದಲ್ಲಿದ್ದ ಶತಕೇತುಗಳೆಂಬ ಗಣಧರಸ್ವಾಮಿಗಳ ಸಮಕ್ಷಮದಲ್ಲಿ ದೀಕ್ಷೆ ಪಡೆದರು; ಮತ್ತೆ ಕೆಲವರು ವಿಶೇಷ ವ್ರತಗಳನ್ನು ಕೈಗೊಂಡರು.

ಸಾಕೇತಪುರಕ್ಕೆ ಮರಳಿದವರು ನಡೆದುದೆಲ್ಲವನ್ನೂ ದಶರಥನಿಗೆ ವರ್ಣಿಸಿದರು. ಇದನ್ನು ಕೇಳಿಯೂ ಬಂಧುಗಳ ಅಗಲಿಕೆಯಿಂದ ಸೆಡೆಯದೆ, ಪುತ್ರಕಳತ್ರಮೋಹದಿಂದ ಕುಂದದೆ, ರಾಘವನು ಭರತನಿಗೆ ಪಟ್ಟಬಂಧವನ್ನೊಪ್ಪಿಸಿ ಕಾಡಿಗೆ ನಡೆಯಲು ಅದರ ಬಗ್ಗೆ ಮರೆತು ಕೂಡ ವಿಚಾರಿಸದೆ, ದಶರಥನು ಸರ್ವಭೂತಹಿತ ಮುನೀಂದ್ರರ ಪಾದಪಾರ್ಶ್ವದಲ್ಲಿ ದೀಕ್ಷೆಯನ್ನು ಕೈಗೊಂಡ. ಭರತನು ರಾಜ್ಯಭಾರವನ್ನು ವಹಿಸಿಕೊಂಡ. ಆದರೆ ಅಪರಾಜಿತೆಯು ಮಾತ್ರ ರಾಮನ ವನವಾಸಕ್ಲೇಶವನ್ನು ನೆನೆದು ಕಣ್ಣೀರು ಸುರಿಸಿದಳು. ಮಂಗಳಗೀತಗಳನ್ನು ಬಿಟ್ಟು ಸಿಂಹಶರಭಗಳ ಗರ್ಜನೆಯನ್ನು ನೀನು ಕೇಳುವ ಹಾಗಾಯಿತೇ; ಬೀಸುವ ಚಾಮರದ ಗಾಳಿಯನ್ನು ಬಿಟ್ಟು ಕಾಡಿನ ಬಿರುಗಾಳಿಯನ್ನು ಸೈರಿಸುವಂತಾಯಿತೇ; ವನಜಲಕೇಳಿಯ ಬದಲು ನಿರ್ಝರಸ್ನಾನದಲ್ಲಿ ತೃಪ್ತನಾಗುವಂತಾಯಿತೇ, ದಿವ್ಯಭೋಜನವನ್ನು ತೊರೆದು ಕಂದಮೂಲಗಳನ್ನು ತಿಂದು ಹೊಟ್ಟೆ ಹೊರೆವಂತಾಯಿತೇ; ಹಂಸಗಳೊಡನೆ ವಿನೋದದಿಂದ ನಡೆಯುವ ಸೀತೆಯನ್ನು ಕಾಡಿನಲ್ಲಿ ನಡೆಯಿಸುವಂತಾಯಿತೇ; ಅವಳ ನಡಿಗೆಯನ್ನು ಕಾಡುಮೃಗಗಳ ನಡೆಯೊಡನೆ, ಸೋರ್ಮುಡಿಯನ್ನು ನವಿಲುಗಳ ಸೋಗೆಯೊಡನೆ, ಮಾತನ್ನು ಕೋಗಿಲೆಯ ದನಿಯೊಡನೆ ಹೋಲಿಸುವಂತಾಯಿತೇ ಎಂದು ಸುಮಿತ್ರೆಯೂ ಶೋಕಿಸಿದಳು.

ಇದನ್ನು ಕೇಳಿ, "ಗಂಡನು ದೀಕ್ಷೆಗೊಂಡ, ಅಪರಾಜಿತೆಗೆ ಇಷ್ಟು ದುಃಖಭಾರವಾಯಿತು, ಮಗನೂ ತನ್ನ ಬಗ್ಗೆ ತಿರಸ್ಕಾರವನ್ನು ತಾಳಿದನಲ್ಲ" ಎಂದು ಕೈಕೆಯು ತನ್ನನ್ನು ತಾನೇ ನಿಂದಿಸಿಕೊಂಡಳು. ಆನಂತರ ಭರತನನ್ನು ಬರಮಾಡಿಕೊಂಡು, "ಮಗನೆ, ರಾಮಲಕ್ಷ್ಮಣರಿಲ್ಲದೆ ನಿನ್ನ ರಾಜ್ಯ ಶೋಭಿಸದು; ಅವರ ತಾಯಂದಿರು ಮಕ್ಕಳನ್ನು ಬಿಟ್ಟು ಉಳಿಯಲಾರರು. ಆ ಕಾರಣದಿಂದ ಬೇಗ ಹೋಗಿ ಅವರನ್ನು ತಡೆ; ನಾನೂ ಹಿಂದೆಯೇ ಬರುತ್ತೇನೆ" ಎಂದು ಕಳಿಸಿಕೊಟ್ಟಳು. ಇದಕ್ಕೆ ಒಪ್ಪಿದ ಭರತನು ರಾಮನನ್ನು ಕಳಿಸಿ ಬಂದ ಸಾಮಂತರೊಡನೆ ಹೋಗಿ ತೊರೆಯನ್ನು ದಾಟಿ, ನಡೆದು ಆಯಾಸಗೊಂಡಿದ್ದ ಜಾನಕಿಯನ್ನು ಉಪಚರಿಸುತ್ತಿದ್ದ ರಘುವೀರನನ್ನು ಕಂಡು ಅವನ ಕಾಲಿಗೆ ಬಿದ್ದು ಮೂರ್ಚೆಗೊಂಡ. ಶೀತಲೋಪಚಾರದಿಂದ ಮೇಲೆದ್ದು ಸೀತೆಲಕ್ಷ್ಮಣರಿಗೆ ನಮಿಸಿದ.

ಆನಂತರ ರಾಮನಿಗೆ ಕೈಮುಗಿದು, "ಅಕ್ರಮದಿಂದ ರಾಜ್ಯಕ್ಕೆ ಆಸೆಪಟ್ಟರೆ ನನಗೆ ದುರ್ಯಶವು ಪ್ರಾಪ್ತವಾಗುತ್ತದೆ. ಮನುಕುಲದಲ್ಲಿ ನಾಭಿರಾಜನಿಂದ ಈಚೆಗೆ ಅನಯವು ಆಗಿಲ್ಲ; ಅದನ್ನು ಮಾಡಿದ ನನಗೆ ಕುಲದೂಷಕನಾದ ಪಾಪವುಂಟಾಗುತ್ತದೆ. ಅನಯದಿಂದಾದ ಸಂಪತ್ತು ಅಭಾವದಿಂದ ಕೂಡಿರುತ್ತದೆ: ಹೇಗೆಂದರೆ, ಹಣವಿಲ್ಲದವರನ್ನು ಯಾರೂ ಹಳಿಯುವುದಿಲ್ಲ, ಅವರಿಗೆ ಪಾಪಲೇಪವೂ ಇಲ್ಲ; ಈ ಎರಡೂ ಅನಯದಿಂದ ಉಂಟಾಗುತ್ತವೆ. ಅಪೂಜ್ಯವೂ ಅಕ್ರಮದಿಂದ ಆದುದೂ ಆದ ಆಧಿರಾಜ್ಯವನ್ನು ನನಗೆ ನೀಡುವೆನೆನ್ನುವಿರಲ್ಲ!" ಎಂದು ಬಿನ್ನವಿಸಿಕೊಂಡ.

ಅಷ್ಟು ಹೊತ್ತಿಗೆ ಕೈಕೆಯಿ ನೂರು ಮಂದಿ ಸಾಮಂತರೊಡನೆ ಬಂದಳು. ರಾಮನು ಆಕೆಯನ್ನು ಕಂಡು ಎದ್ದು ಅವಳೆಡೆಗೆ ಸಾಗಿ ಪಾದಗಳಿಗೆರಗಿ ಹರ್ಷಭಾರಗೊಂಡ; ತನ್ನನ್ನು ಸ್ಥಾನಚ್ಯುತಿಗೊಳಿಸಿದವಳು ಎಂಬ ಭಾವನೆ ಕಿಂಚಿತ್ತೂ ಇಲ್ಲದೆ ರಾಮನು ಕೈಕೆಯ ಪಾದಾನತನಾದ. ಶ್ರೇಷ್ಠವ್ಯಕ್ತಿಗೆ ಪ್ರೀತಿಯಲ್ಲದೆ ಮನಃಕಷಾಯವುಂಟಾಗುತ್ತದೆಯೇ! ಆದರೆ ತನ್ನ ಕಾರ್ಯವನ್ನು ನೆನೆದ ಅವಳ ಮನಸ್ಸಿನಲ್ಲಿ ಉಮ್ಮಳ ತುಂಬಿತು; ಅವನನ್ನು ಹಿಡಿದೆತ್ತಿ ನಾನಾಪ್ರಕಾರದಿಂದ ಗೋಳಾಡಿದಳು. ಅವಿವೇಕದಿಂದ ತಾನು ಮಾಡಿದ ತಪ್ಪನ್ನು ಕ್ಷಮಿಸಿ ಮತ್ತೆ ರಾಜ್ಯವನ್ನು ಕೈಗೊಳ್ಳಲು ಕೇಳಿಕೊಂಡಳು; ತಮ್ಮಂದಿರೆಲ್ಲ ಅವನನ್ನು ಅನುಸರಿಸುತ್ತಾರೆ, ಆದ್ದರಿಂದ ತಡಮಾಡದೆ ಅಯೋಧ್ಯೆಗೆ ಹಿಂದಿರುಗುವಂತೆ ಪ್ರಾರ್ಥಿಸಿಕೊಂಡಳು. ಆಗ ರಾಮನು ನುಡಿದ ಮಾತುಗಳು: "ಅಕಳಂಕಚರಿತನಾದ ಕ್ಷತ್ರಿಯನು ಎರಡು ಮಾತನ್ನಾಡಿದರೆ ಇಹಪರಗಳೆರಡೂ ಇಲ್ಲವಾಗುತ್ತವೆ; ಮಾತಿಗೆ ತಪ್ಪುವುದಕ್ಕಿಂತ ಹೆಚ್ಚಿನ ಪಾತಕ ಮತ್ತೊಂದಿದೆಯೇ?" ತಂದೆಯ ಮಾತನ್ನು ಮೀರಿ, ವಿನಯದಿಂದಾಡಿದ ಮಾತಿನ ಮೇಲೆ ತಮ್ಮನ ರಾಜ್ಯವನ್ನು ಕಿತ್ತುಕೊಂಡರೆ ತನ್ನ ಮಾತು ಜಿಗುಪ್ಸೆಯನ್ನು ತರುತ್ತದೆ; ಆದ್ದರಿಂದ ಆ ಮಾತನ್ನು ಮತ್ತೆ ಆಡದಿರುವಂತೆ ಕೇಳಿಕೊಂಡ. ತಾನೇ ಕೊಟ್ಟ ರಾಜ್ಯವನ್ನು ಸ್ವೀಕರಿಸಿದರೆ ಅದು ಅಕ್ರಮವಾಗದು; ಹಾಗೆ ಮಾಡದಿದ್ದರೆ ತನ್ನ ಆಜ್ಞೆಗೆ ತಪ್ಪಿದ ಹಾಗೆ ಎಂದು ಭರತನಿಗೆ ಸೂಚಿಸಿದ. ಜೊತೆಗೆ ಗಣವಿಶುದ್ಧಸಿದ್ಧರಸಪ್ರವಾಹಕ್ಕೆ ಸೇತುವೆಯನ್ನು ಕಟ್ಟಿದ ಹಾಗೆ ಅವನಿಗೆ ಪಟ್ಟವನ್ನು ಕಟ್ಟಿದ. ರಾಮನ ಆಜ್ಞೆಗೆ ಕಟ್ಟುಬಿದ್ದು ಅವನು ಮರಳುವವರೆಗೂ ತಾನು ಧರೆಯನ್ನು ರಕ್ಷಿಸುವವನೇ ಹೊರತು ಮನಸ್ಸಾಕ್ಷಿಕವಾಗಿ ರಾಜ್ಯವನ್ನು ಅಪೇಕ್ಷಿಸುವವನಲ್ಲ ಎಂದು ಭರತನು ವಿನಯವನ್ನು ಮೆರೆದ. ಅಕ್ಷತಧೈರ್ಯನಾದ ಭರತನು ಲೋಭರತಪ್ರಪಂಚವನ್ನು ಎಂದಾದರೂ ಬಯಸುತ್ತಾನೆಯೇ! ಹಾಗೆ ಪ್ರತಿಜ್ಞೆ ಹೊತ್ತ ಭರತನನ್ನೂ ಕೈಕೆಯನ್ನೂ ಶ್ರೀರಾಮನು ಉಚಿತ ಪ್ರತಿಪತ್ತಿಯಿಂದ ಗೌರವಿಸಿ ಅಯೋಧ್ಯೆಗೆ ಮರಳಿಸಿ ಆನಂತರ ಲಕ್ಷ್ಮಣಸೀತಾಸಮೇತನಾಗಿ ಪಯಣವನ್ನು ಮುಂದುವರಿಸಿದ.

ಅಯೋಧ್ಯೆಗೆ ಮರಳಿದ ಭರತನು ಅವಳಿಯನ್ನು ಹೆತ್ತವರಂತೆ ಕ್ಷತ್ರಧರ್ಮ ಮತ್ತು ಧರ್ಮಗಳನ್ನು ಸಮಾನವಾಗಿ ಪರಿಪಾಲಿಸುತ್ತ, ವಿಕ್ರಾಂತದಿಂದ ಪಡೆದ ರಾಜ್ಯದಂತೆ ಸಂಯಮದಿಂದ ಸಂರಕ್ಷಿಸುತ್ತ, ತನ್ನಂತಹವರು ಬೇರಿಲ್ಲವೆಂಬಂತೆ ದಾನ ಪೂಜೆ ಶೀಲೋಪವಾಸಗಳನ್ನು ಅನುಸರಿಸಿದ. ಹೀಗೆ ಭರತನು ರಾಜ್ಯಸುಖವಿಮುಖನಾಗಿ ಅರಸುಗೈಯ್ಯುತ್ತಿದ್ದ.

ಈ ಕಡೆ ರಾಮನು ಸೀತೆಯ ಬಿಸಿಲ ಬೇಗೆಯನ್ನು ಚಿಗುರಿನ ಕೊಡೆಯಿಂದಲೂ,

ಬಾಯಾರಿಕೆಯ ಸಂಕಟವನ್ನು ತಣ್ಣೀರಿನಿಂದಲೂ, ಹಸಿವನ್ನು ಮಾಗಿದ ಹಣ್ಣುಗಳಿಂದಲೂ, ನಿದ್ರೆಯನ್ನು ಬಳ್ಳಿಯ ಮಂಟಪದಡಿಯಲ್ಲಿಯೂ, ನಡೆದ ಆಯಾಸವನ್ನು ಬಾಳೆ ಎಲೆಯ ಬೀಸಣಿಗೆಯ ಗಾಳಿಯಿಂದಲೂ ಪರಿಹರಿಸುತ್ತಿದ್ದ. ಆದರೆ ಸೀತೆಯು ಕಾಡಿನಲ್ಲಿ ನಡೆಯುವುದಕ್ಕಾಗಲೀ, ಬಿಸಿಲಿನ ತಾಪಕ್ಕಾಗಲೀ, ಬಿರುಗಾಳಿಯ ಬೀಸುವಿಕೆಗಾಗಲೀ, ರಾಮನು ತನ್ನೊಡನೆ ಇರುವನೆಂಬುದರಿಂದಾಗಿ, ಬೇಸರಗೊಳ್ಳಲಿಲ್ಲ. ಕಾಲಿಗೆ ಕಲ್ಲ ಹರಳುಗಳು ಒತ್ತಿದರೆ ಸೈರಿಸುತ್ತ, ಕಾಲನ್ನು ನೇವರಿಸಿಕೊಳ್ಳುತ್ತ ಸೀತೆಯು ನಿಧಾನವಾಗಿ ನಡೆಯುತ್ತಿದ್ದಳು. ಎದೆಯಿಂದ ಜಾರಿ ಬೀಳುವ ಮೇಲುದವನ್ನು ಆಗಾಗ್ಗೆ ಸಾವರಿಸುವ, ಚಂದ್ರನ ಅಮೃತಬಿಂದುವಿನಂತಹ ಮುಖದ ಮೇಲಿನ ಬೆವರ ಹನಿಗಳನ್ನು ಒರೆಸಿಕೊಳ್ಳುವ ನಸು ಬಾಡಿದ ಸೀತೆಯ ದೇಹವನ್ನು ಮುಪ್ಪುರಿಗೊಂಡ ಪ್ರೀತಿಯಿಂದ ನೋಡುತ್ತ ಶ್ರೀರಾಮನು ಅವಳೊಡನೆ ಹೆಜ್ಜೆ ಹಾಕುತ್ತಿದ್ದ. ಲಕ್ಷ್ಮಣನ ಸೇವೆಯಿಂದ ತಮ್ಮ ಆಯಾಸವನ್ನು ಕಳೆದುಕೊಳ್ಳುತ್ತ ಅವರು ನಾನಾ ಹಳ್ಳಿ ನಗರ ಜನಪದ ಆಶ್ರಮ ಮುಂತಾದವುಗಳಲ್ಲಿ ತಂಗುತ್ತ ಸಾವಧಾನವಾಗಿ ಮುಂದೆ ಸಾಗುತ್ತಿದ್ದರು.

ಹೀಗೆ ಸಾಗುತ್ತ ಬಂದ ಅವರು ಚಿತ್ರಕೂಟವನ್ನು ಸೇರಿದರು. ಹಣ್ಣುಗಳು ಜಗ್ಗಿರುವ ಸಾರ್ವರ್ತುಕ ಮರಗಳಿಂದಲೂ, ಒಡ್ಯಾಣದಂತೆ ಸುತ್ತುವರಿದ ಬಳ್ಳಿಮಾಡಗಳಿಂದಲೂ, ಬೆಟ್ಟದ ತಪ್ಪಲಿನ ಮದ್ದಾನೆಗಳ ಗಂಧದೊಡನೆ ಬೆರೆತ ಪರಿಮಳಭರಿತ ಕಮಲಗಳ ಸರೋವರಗಳಿಂದಲೂ ಕೂಡಿ ಆ ಪ್ರದೇಶವು ಕಣ್ಣುಮನಸ್ಸುಗಳಿಗೆ ಸಂತಸವನ್ನು ಉಕ್ಕಿಸುತ್ತಿತ್ತು. ನಾಗಲೋಕವನ್ನು ಪಾದಪೀಠವನ್ನಾಗಿ ಮಾಡಿಕೊಂಡು, ಭೂಮಿಯನ್ನು ಮೆಟ್ಟಿ, ತಾರಾನಿವಹವನ್ನು ಮುಟ್ಟಿ, ಹಲವಾರು ಮಣಿಗಳನ್ನು ಧರಿಸಿದಂತೆ ಹಲವಾರು ಗಿರಿನದಿಗಳಿಂದ ಚೆಲುವಾಗಿದ್ದ ಚಿತ್ರಕೂಟವನ್ನು ಅವರು ಉತ್ಸುಕರಾಗಿ ನೋಡುತ್ತ ಅದನ್ನು ದಾಟಿ ಹೋದರು. ಮುಂದೆ ಅವಂತೀ ನಾಡನ್ನು ಪ್ರವೇಶಿಸಿ ಆಲದ ಮರಗಳ ನೆರಳಿನಲ್ಲಿ ಮಾರ್ಗಾಯಾಸವನ್ನು ಪರಿಹರಿಸಿಕೊಂಡರು. ಸ್ವಲ್ಪ ಕಾಲದ ನಂತರ ಪಯಣವನ್ನು ಮುಂದುವರಿಸುತ್ತ, ಹಣ್ಣುಹಂಪಲುಗಳಿಂದ ತುಂಬಿ ನಿರ್ಜಂತುಕವಾದ ಈ ಪ್ರದೇಶವು ಕಾಯುವವರಿಲ್ಲದೆ, ಬೇಡರು ಮತ್ತು ನೆರೆಯ ಅರಸುಗಳ ದಾಳಿಯಿಂದ ಪಾಳಾಗಿದೆ ಎಂದು ಮಾತಾಡಿಕೊಂಡರು. ದಾರಿಯಲ್ಲಿ ಎದುರಿಗೆ ಬರುತ್ತಿದ್ದ ಒಬ್ಬನು ಅವರನ್ನು ಕಂಡು ನಮಸ್ಕರಿಸಿ ಮರವಟ್ಟವನಂತೆ ನಿಂತುಕೊಂಡ. ಅಭಯವನ್ನು ನೀಡಿ ಲಕ್ಷ್ಮಣನು ಆ ಪ್ರದೇಶವು ಹಾಳಾಗಿರುವುದಕ್ಕೆ ಕಾರಣವೇನೆಂದು ವಿಚಾರಿಸಿದನು. ಆಗ ಆ ಆಗಂತುಕನು ಕರಗಳನ್ನು ಜೋಡಿಸಿ, "ಇದು ಅವಂತೀ ನಾಡು. ಇದರಲ್ಲಿ ಉಜ್ಜಯಿನಿ ಎಂಬ ನಗರವಿದೆ. ಇದನ್ನಾಳುವವನು ಮದಿಸಿದ ಅರಿಗಜಗಳಿಗೆ ಸಿಂಹಸಮಾನನಾದ ಸಿಂಹೋದರನೆಂಬ ರಾಜ. ವಜ್ರಕರ್ಣ ಎಂಬುವವನು ಅವನ ಒಬ್ಬ ಸಾಮಂತ. ತನ್ನ ರತ್ನಮುದ್ರಿಕೆಯಲ್ಲಿ ಜಿನಬಿಂಬವನ್ನು ಅಳವಡಿಸಿಕೊಂಡು ತನ್ನ ಮುಂದೆ ಕೈಜೋಡಿಸಿಕೊಂಡು ತಲೆಬಾಗಿ ಜಿನಬಿಂಬಕ್ಕೆ ನಮಸ್ಕರಿಸುತ್ತ ಮೋಸಗೈಯುತ್ತಿದ್ದಾನೆ ಎಂಬ ವದಂತಿಯನ್ನು ಕೇಳಿ ಸಿಂಹೋದರ ಕೋಪಗೊಂಡ. ಹಾಗಾಗಿ ಅವನ ಮೇಲೆ ಎರಗಿ ಬಂದುದರಿಂದ ಈ ಪ್ರದೇಶವು ಹಾಳಾಗಿದೆ" ಎಂದು ವಿವರಿಸಿದ. ವಜ್ರಕರ್ಣನಿರುವ ದಶಪುರ ಇಲ್ಲೇ ಹತ್ತಿರದಲ್ಲಿದೆ ಎಂದು ತಿಳಿಸಿ ಆ ವ್ಯಕ್ತಿ ಮುಂದೆ ಹೋದ.

ತನ್ನ ಅಧಿರಾಜನು ದಂಡೆತ್ತಿ ಬಂದರೂ ಹೆದರಿ ಓಡದೆ, ತನ್ನ ವ್ರತವನ್ನೂ ಬಿಡದೆ, ಐಹಿಕ ಲಾಭವನ್ನು ಗಣಿಸದೆ, ಸದ್ದೃಷ್ಟಿಯನ್ನು ಬಿಟ್ಟು ಅಸದ್ದೃಷ್ಟಿಗೆ ಬಾಗದೆ ಇರುವ ವಜ್ರಕರ್ಣನ ಬಗ್ಗೆ ಅವರಿಗೆ ಮೆಚ್ಚಿಕೆಯುಂಟಾಯಿತು. ತನ್ನ ವ್ರತವನ್ನು ಪಾಲಿಸಿದ ವಜ್ರಕರ್ಣನ ಮೇಲೆ ಅಕಾರಣವಾಗಿ ದುರ್ಮತಿಯಾದ ಸಿಂಹೋದರನು ದಾಳಿ ಮಾಡಿದ್ದಾನೆ; ಅವನ ಮದವನ್ನಿಳಿಸಬೇಕು; ಇಲ್ಲದಿದ್ದರೆ ಉಪೇಕ್ಷಾದೋಷವುಂಟಾಗುತ್ತದೆ ಎಂದು ರಾಮಲಕ್ಷ್ಮಣರು ತೀರ್ಮಾನಿಸಿದರು. ಹಾಗಾಗಿ ಅಲ್ಲಿಂದ ಮುಂದುವರಿದು ದಶಪುರಕ್ಕೆ ಬಂದರು. ಕಪ್ಪು ಮೋಡದ ನಡುವೆ ಹೊಳೆಯುವ ಮಿಂಚಿನಂತೆ ಸೀತೆಯನ್ನು ಮಧ್ಯೆ ಇರಿಸಿಕೊಂಡು ಬರುತ್ತಿರುವ ಬಲದೇವ-ವಾಸುದೇವರನ್ನು ವಜ್ರಕರ್ಣನು ತನ್ನ ಹೊನ್ನ ಕರುಮಾಡದ ಮುಂದೆ ನಿಂತು ನೋಡಿದನು. ಲಲಿತ ಗಮನ, ವಿಶಾಲ ನೇತ್ರಗಳು, ಅನೂನ ವಕ್ಷಸ್ಥಳ, ಆಜಾನುಬಾಹುಗಳು – ಇವುಗಳಿಂದ ಕೂಡಿದ ಅಪ್ರಾಕೃತ ಚೆಲುವು ಇವರದು ಎಂಬ ಅಚ್ಚರಿ ಅವನಿಗುಂಟಾಯಿತು. ಇವರು ಕಾರಣಪುರುಷರೇ ಇರಬೇಕು; ತ್ರಿಭುವನವನ್ನೂ ತೃಣಕ್ಕೆ ಸಮಾನವಾಗಿ ಕಾಣುವ ಇವರು ಇಲ್ಲಿ ಬರುತ್ತಿರುವ ಕಾರಣವೇನಿರಬಹುದು ಎಂಬ ಕುತೂಹಲ ಅವನನ್ನು ಆವರಿಸಿತು. ಆಲೋಚನಾಮಗ್ನನಾಗಿ ಬಿಟ್ಟಗಣ್ಣಿನಿಂದ ನೋಡುತ್ತಿರಲು, ಅವರು ಪುರದ ಉತ್ತರ ಗೋಪುರದ ಬಳಿಯ ಜಿನೇಂದ್ರ ಮಂದಿರವನ್ನು ಪ್ರವೇಶಿಸಿದ್ದು ಕಾಣಿಸಿತು.

ಹಾಗೆ ಬಂದ ರಾಮಾದಿಗಳು ಜಗತ್ತ್ರಯವಿಭುವಿಗೆ ಮಣಿದು, "ನಿನಗೆ ಶಾಂತವೊಂದೇ ರಸ; ನಾವೂ ಆ ರಸದಲ್ಲಿಯೇ ಮುಳುಗಿ ಮಿಕ್ಕ ರಸಗಳನ್ನು ಕನಸಿನಲ್ಲಿಯೂ ಹಂಬಲಿಸದ ಹಾಗೆ ಕರುಣಿಸು" ಎಂದು ಬೇಡಿಕೊಂಡರು. ಜಿನದರ್ಶನದಿಂದ ಅವರಿಗೆ ಹರ್ಷವುಂಟಾಯಿತು; ಚೈತ್ಯಾಲಯದ ಮುಂದಿನ ಸರೋವರದಲ್ಲಿ ಅರಳಿದ್ದ ತಾವರೆಯ ಪರಿಮಳವನ್ನು ಹೊತ್ತು ಬೀಸುವ ತಂಗಾಳಿಯು ಅವರ ಮಾರ್ಗಶ್ರಮವನ್ನು ಹೋಗಲಾಡಿಸಿತು. ಅಷ್ಟು ಹೊತ್ತಿಗೆ ವಜ್ರಕರ್ಣನು ಕಳಿಸಿದ್ದ ಬಲ್ಮಾನಸರು ಅಲ್ಲಿಗೆ ಬಂದು ವಿನಯದಿಂದ ನಮಸ್ಕರಿಸಿದರು. ಶತ್ರುಸೈನ್ಯದ ಕಾವಲಿನಿಂದಾಗಿ ತಾನೇ ಬರಲೂ, ನಿಮ್ಮನ್ನು ಬರಮಾಡಿಕೊಳ್ಳಲೂ ಸಾಧ್ಯವಾಗದೆ ವಜ್ರಕರ್ಣನು ತಮ್ಮನ್ನು ಕಳಿಸಿದ್ದಾಗಿ ಅವರು ಬಿನ್ನವಿಸಿದರು. ಆನಂತರ ಮಣಿಮಯ ಭಾಜನಗಳಲ್ಲಿ ಅರ್ಘ್ಯಪಾದ್ಯಗಳನ್ನು ಸಮರ್ಪಿಸಿ, ಅಭ್ಯಾಗತ ಪ್ರತಿಪತ್ತಿಯನ್ನು ಗೈದರು; ತಾವು ತಂದಿದ್ದ ಆಹಾರವನ್ನು ಸಮರ್ಪಿಸಿದರು.

ಅವರನ್ನು ಕಳಿಸಿಕೊಟ್ಟ ನಂತರ ದಾಶರಥಿಯು ಸೌಮಿತ್ರಿಯ ಮುಖವನ್ನು ನೋಡಿ, "ವಜ್ರಕರ್ಣನು ನಮಗೆ ಅನಿಮಿತ್ತ ವಿನಯವನ್ನು ತೋರಿದ್ದಾನೆ. ಅಂತಹ ಮಾನ್ಯನ ಮೇಲೆ ಸಿಂಹೋದರನು ದಾಳಿ ಮಾಡಿದ್ದಾನೆ. ನೀನು ಅವನನ್ನು ನಿವಾರಿಸು" ಎಂದು ಆದೇಶಿಸಿದ. ತಕ್ಷಣವೇ ಅಂತಕನ ಅಪ್ಪಣೆಯಂತೆ ಕಾಳೋಗರವು ಬರುವ ಹಾಗೆ ಲಕ್ಷ್ಮಣನು ತನ್ನ ದಿವ್ಯಾಸ್ತ್ರಗಳ ಸಮೇತ ಹೊರಟ; ಬಾಗಿಲು ಕಾಯುವವನೊಡನೆ ನೇರವಾಗಿ ಸಿಂಹೋದರನ ಓಲಗವನ್ನು ಪ್ರವೇಶಿಸಿದ. "ನಾಡಿನ ಒಡೆಯನಾದ ಭರತನು ಹೇಳಿಕಳಿಸಿರುವ ಮಾತನ್ನು ಕೇಳು: ಜಿನಪತಿಗಲ್ಲದೆ ಇತರರಿಗೆ ಪೊಡೆವಡುವುದಿಲ್ಲವೆಂಬುದು ತಪ್ಪೇ? ವಜ್ರಕರ್ಣನ ಮೇಲಿನ ನಿನ್ನ ಮುನಿಸನ್ನು ಬಿಡು. ನಿನಗೆ ಜಿನೇಂದ್ರನಲ್ಲಿ ಮತ್ಸರವೇ?" ಎಂದು ಪೀತವಸನನು ಸಿಡಿಲಂತೆ ಗರ್ಜಿಸಿದ. ಅದನ್ನು ಕೇಳಿದ ಸಿಂಹೋದರನು ಕನಲಿ, "ನನಗೆ

ಶ್ರೇಯವಾವುದೆಂದು ಉಪದೇಶಿಸಲು ನೀನೇನು ನನ್ನ ಉಪಾಧ್ಯಾಯನೇನು? ಅಣ್ಣನ ರಾಜ್ಯವನ್ನು ಕಸಿದುಕೊಂಡ ಭರತನು ಮಹಾ ದೊಡ್ಡವನೇನು? ನನ್ನ ಆಳು ನನಗೆ ಎರಗದಿರಲು ಅವನನ್ನು ನಿಯಮಿಸಿದರೆ ನನ್ನನ್ನೇ ಹೆದರಿಸುವೆಯಾ? ನನ್ನ ಅಳವನ್ನು ಯುದ್ಧಮುಖದಲ್ಲಿ ನೋಡು" ಎಂದು ಮಾರ್ನುಡಿದು ಒರೆಯಿಂದ ಕತ್ತಿಯನ್ನು ಸೆಳೆದ. ಇದನ್ನು ಕಂಡ ಲಕ್ಷ್ಮಣನು ಸಿಂಹೋದರನ ಮೈಗಾವಲಿನವರನ್ನು ಬರಿಗೈಯ್ಯಲ್ಲೇ ಹಿಡಿದೆತ್ತಿ ನೆಲಕ್ಕೆ ಅಗಸನು ಬಟ್ಟೆಯನ್ನು ಒಗೆಯುವಂತೆ ಒಗೆದ. ಒಬ್ಬರಿಂದ ಒಬ್ಬರನ್ನು ಘಟ್ಟಿಸಿ, ಅಟ್ಟಿಸಿಕೊಂಡು ಹೋಗಿ ಸಿಡಿಲಿನಂತೆ ಮೇಲೆ ಬಿದ್ದು, ನಿರ್ದಯನಾಗಿ ಅವರನ್ನೆಲ್ಲ ಚದುರಿಸಿದ.

ಇದರಿಂದ ಸಿಂಹೋದರನಿಗೆ ಸಿಗ್ಗಾಯಿತು; ಸಿಂಹದಂತೆ ಲಕ್ಷ್ಮಣನ ಮೇಲ್ವಾಯ್ದ. ಅವನು ಬೀಸುವ ಕತ್ತಿಯಿಂದ ತಪ್ಪಿಸಿಕೊಂಡು ಲಕ್ಷ್ಮಣನು ಸಿಂಹೋದರನನ್ನು ಬಾಲಕನನ್ನು ಹಿಡಿಯುವಂತೆ ಹಿಡಿದುಬಿಟ್ಟ. ಮುನ್ನೀರು ಮೇರೆದಪ್ಪಿದಂತೆ ಮೇಲೆ ಬಿದ್ದ ಶತ್ರುಸೈನ್ಯವನ್ನು ವಾಸುದೇವನು ಕೃತಾಂತನಂತೆ ಸಂಹರಿಸಿದ. ಕೈಗೆ ಸಿಕ್ಕಿದುದನ್ನೇ ಆಯುಧವನ್ನಾಗಿ ಮಾಡಿಕೊಂಡ ಕೇಶವನು ಅದ್ಭುತವಾದ ಅಗುರ್ವಿನಿಂದ ಸಿಂಹೋದರನ ಚತುರಂಗಸೇನೆಯನ್ನು ಅಡಗಿಸಿದ. ಚಕಿತಗೊಂಡ ಅರಾತಿಬಲವು ನೋಡುತ್ತಿರಲು, ತನ್ನ ತೋಳುಗಳಲ್ಲಿ ಸಾಲಭಂಜಿಕೆಯಂತೆ ವೀರಲಕ್ಷ್ಮಿ ಮೆರೆಯುತ್ತಿರಲು, ತಲೆಯ ರಕ್ತದಿಂದ ತೋಯ್ದು ಕೆಂಪಾದ ಆನೆಯನ್ನು ಸಿಂಹವು ಎಳೆದುಕೊಂಡು ಹೋಗುವಂತೆ ಲಕ್ಷ್ಮಣನು ರಾಷ್ಟ್ರಕಂಟಕನಾದ ಸಿಂಹೋದರನನ್ನು ಬಾಳ್ದಲೆವಿಡಿದು ಒಯ್ದ. ಇದನ್ನು ಕರುಮಾಡದ ಎರಡನೆಯ ನೆಲೆಯಲ್ಲಿ ಪರಿಜನರೊಡನಿದ್ದ ವಜ್ರಕರ್ಣನು ಕಿವಿಯವರೆಗೂ ಕಣ್ಣಾಗಿ ನೋಡಿದ. ಗಣನಾತೀತವಾದ ಸೇನೆಯನ್ನು ಏಕಾಂಗಿಯಾಗಿ, ಅದೂ ಬರಿಗೈಯಲ್ಲಿ ಮೆಟ್ಟಿ ಸಿಂಹೋದರನನ್ನು ಕೊಂಡೊಯ್ದ ಈ ಉದ್ದಂಡನಿಗೆ ಎಣೆಯಾದ ಗಂಡನಾರು ಎಂದು ನೋಡಲು ಪುರಜನರು ಬಿಟ್ಟ ಕಣ್ಣವರಾಗಿ ಬೇರಾವುದನ್ನೂ ಲೆಕ್ಕಿಸದೆ ಮನೆಗಳಿಂದ ರಭಸದಿಂದ ಹೊರಬಂದರು.

ಆಗ, ಒಂದೇ ಸಮನೆ ಸುರಿಯುವ ಕಣ್ಣೀರು ಕಪೋಲಗಳನ್ನು ತೋಯಿಸುತ್ತಿರಲು ಅವಂತೀಶ್ವರನು ಬಂದು ಸಿಂಹೋದರನನ್ನು ಕೊಲ್ಲದೆ ಕಾಪಾಡಬೇಕೆಂದು ಲಕ್ಷ್ಮಣನ ಕಾಲಿಗೆರಗಿ ಬೇಡಿಕೊಂಡ. ಆಗ ಲಕ್ಷ್ಮೀಧರನು, ವಜ್ರಕರ್ಣನ ಮೇಲೆ ಮಲೆತು ದಾಳಿ ಮಾಡಿದ ಕಾರಣದಿಂದ ಅವನನ್ನು ಅಡಗಿಸು ಎಂದಷ್ಟೇ ರಾಮನು ತನಗೆ ಹೇಳಿ ಕಳಿಸಿದ್ದನೇ ಹೊರತು, ಅವನನ್ನು ಕೊಲ್ಲುವುದಕ್ಕಲ್ಲ; ಹಾಗಾಗಿ ಯೋಚಿಸದಿರುವಂತೆ ಅವನಿಗೆ ಸಮಾಧಾನ ಹೇಳಿದ; ಅಂತೆಯೇ ಶೋಕಪಡದಿರುವಂತೆ ಸಿಂಹೋದರನ ಮಾನಿನೀಜನಕ್ಕೆ ತನ್ನ ಘನಗಂಭೀರಧ್ವನಿಯಿಂದ ಸಾಂತ್ವನ ಹೇಳಿ ಅವನನ್ನು ರಾಮನ ಬಳಿಗೆ ಕರೆದೊಯ್ದ. ಅಷ್ಟು ಹೊತ್ತಿಗೆ ಇವರು ಬಲಾಚ್ಯುತರು ಎಂಬ ವಿಷಯ ಸಿಂಹೋದರನಿಗೆ ತಿಳಿದುಹೋಯಿತು. ಲಕ್ಷ್ಮಣನ ವೀರರಸ ಪ್ರವಾಹದಲ್ಲಿ ಕೊಚ್ಚಿ ಹೋದ ಮಹಾವೃಕ್ಷದಂತಿದ್ದ ಮೃದುಮನಸ್ಸಿನವನೂ, ಮೂಲಬಲವನ್ನು ಕಳೆದುಕೊಂಡವನೂ, ಅವಿಚಾರನೂ ಆದ ಅವಂತೀವಲ್ಲಭನು ರಾಘವನ ಪಾದಗಳ ಮೇಲೆ ಕೆಡೆದ. ಲಕ್ಷ್ಮಣನ ದೋರ್ವಲವನ್ನು ಮನಸ್ಸಿನಲ್ಲಿ ಮೆಚ್ಚಿದ ರಾಮನು ಸಿಂಹೋದರನಿಗೆ ಅಭಯವಿತ್ತು, ವಜ್ರಕರ್ಣನೊಡನೆ

ಮತ್ತೆ ಮಧುರ ಬಾಂಧವ್ಯವನ್ನು ಹೊಂದಲು ಹೇಳಿದ. ಆಗ ಅವಂತೀವಲ್ಲಭನು ಕೈಗಳನ್ನು ಮುಗಿದು, "ತಮ್ಮ ಪಾದುಕೆಗಳನ್ನು ಹಿಡಿದೆನೆಂಬ ಧನ್ಯಭಾವವೇ ನನಗೆ ಸಾಕು, ಬೇರೇನೂ ಬೇಡ. ನಾನಿನ್ನು ಫಲ ಮೂಲ ವಲ್ಕಲಗಳನ್ನು ನೆಚ್ಚಿ ವನವಾಸ ಮಾಡಿ ತಪಶ್ಚರಿತ್ರನಾಗಲು ಅವಕಾಶ ಮಾಡಿಕೊಡಿ" ಎಂದು ಬೇಡಿಕೊಂಡ.

ಬರಿಗೈಯಿಂದ ಒಬ್ಬಂಟಿಯಾಗಿ ಸಿಂಹೋದರನನ್ನು ಗೆದ್ದವನು ಸಾಮಾನ್ಯನಾಗಿರಲಾರ ಎಂದು ನಿಶ್ಚೈಸಿಕೊಂಡ ವಜ್ರಕರ್ಣನು ಪರಿಮಿತ ಪರಿವಾರದೊಂದಿಗೆ ಬಂದು ಬಸದಿಯನ್ನು ಬಲಗೊಂಡು ನಿಧಿಯಿರುವಲ್ಲಿ ದೀಪವು ಬಾಗುವಂತೆ ಶ್ರೀರಾಮನ ಪಾದಗಳಿಗೆರಗಿದ. ಅವನ ಕೋಮಲ ಪಾದದ್ವಯವು, ತನ್ನ ಉಂಗುಷ್ಠನಖದೀಪ್ತಿಯಿಂದಲೂ ತಳದ ಕೆಂಬಾರದಿಂದಲೂ ಅವನಿಗೆ ಧೈರ್ಯ–ಆತ್ಮವಿಶ್ವಾಸಗಳನ್ನುಂಟುಮಾಡಿದವು. ಅಂತೆಯೇ ರಘುವೀರನ ಮಾತುಗಳೆಂಬ ಅಮೃತಧಾರೆಯು ಅವನ ಮೈಯಲ್ಲಿ ಪುಳಕಗಳನ್ನೆಬ್ಬಿಸಿತು. ಆನಂತರ ವಜ್ರಕರ್ಣನು, ತಲೆಬಾಗದಿದ್ದರೆ ದಂಡನೆಯನ್ನೂ ಬಾಗಿದರೆ ಉನ್ನತಿಯನ್ನೂ ನೀಡುವ ವಿಚಿತ್ರಗುಣನಿಧಿಯಾದ ಉಪೇಂದ್ರನ ಪಾದಗಳಿಗೆ ನಮಸ್ಕರಿಸಿದ. ಅವನ ಮನಸ್ಸಿನಲ್ಲಿ ಕಾರುಣ್ಯರಸ ತುಂಬಿತು, ದೇಹವನ್ನು ರಾಘವನ ದೇಹಕಾಂತಿ ಆವರಿಸಿತು; ಅಮೃತದ ಕೊಳದಲ್ಲಿ ಮುಳುಗಿದವನಂತೆ ಅವನಿದ್ದ.

ಆ ಹೊತ್ತಿಗೆ, ಮನ್ಮಥನ ಗಾಡಿಗೆ ಭಂಗವೊಡ್ಡುವಂತಹ ರೂಪವುಳ್ಳ ವಿದ್ಯುದಂಗನು, ತನ್ನ ಕಿರೀಟದ ರತ್ನಗಳ ಕಾಂತಿಯು ಆಗಸವನ್ನು ಮುಟ್ಟುತ್ತಿರಲು, ಸ್ವಲ್ಪವೇ ಚತುರಂಗಬಲಸಮೇತನಾಗಿ ಅಲ್ಲಿಗೆ ಬಂದ. ಮೊದಲು ಕಾಮಧ್ವಂಸಿಯಾದ ಜಿನನಿಗೂ, ಆನಂತರ ರಾಮಲಕ್ಷ್ಮಣರಿಗೂ ಆನತನಾಗಿ ಬಂದು ವಜ್ರಕರ್ಣನ ಪಕ್ಕದಲ್ಲಿ ಕುಳಿತ. ಬಂದವನು ಯಾರೆಂದು ಲಕ್ಷ್ಮಣನು ವಿಚಾರಿಸಿದಾಗ, ಈತನು ಕುಂಡಲಪುರದ ವ್ಯಾಪಾರಿಯಾದ ವಿದ್ಯುದಂಗ; ವ್ಯಾಪಾರಕ್ಕೆಂದು ಉಜ್ಜಯಿನಿಗೆ ಹೋದಾಗ ಅಲ್ಲಿ ಕಾಮಲತೆ ಎಂಬ ವಿಲಾಸಿನಿಗೆ ಒಲಿದ. ಅವಳ ಕಾರಣದಿಂದ ರತ್ನತ್ರಯಾರಾಧಕನಲ್ಲದವನಿಗೆ ತಾನು ಎರಗುವುದಿಲ್ಲ ಎಂಬ ನಿರ್ಧಾರ ಮಾಡಿದ. ಇದನ್ನು ಕೇಳಿ ಕಡುಮುಳಿದ ಸಿಂಹೋದರನು ಅವನನ್ನು ಕೊಲ್ಲಲೆಂದು ಬಳಿಯಟ್ಟಿದ. ಈ ವಿಚಾರವನ್ನು ತಿಳಿದು ದಶಪುರಕ್ಕೆ ಬರುವಾಗ ತನ್ನನ್ನು ಎದುರಲ್ಲಿ ಕಂಡು ಈ ವೃತ್ತಾಂತವನ್ನು ತಿಳಿಸಿದ. ಅವನನ್ನು ಹೋಗಗೊಡದೆ ಉಳಿಸಿಕೊಂಡೆ; ಅವನು ತನಗೆ ಕದನಸಹಾಯಕನಾಗಿ ಉಳಿದುಕೊಂಡ ಎಂದು ವಜ್ರಕರ್ಣನು ನಿರೂಪಿಸಿದ.

ವಜ್ರಕರ್ಣನ ವ್ರತಪರಿಪಾಲನವನ್ನು ಮೆಚ್ಚಿದ ರಾಮನು ಮೆಚ್ಚಿದುದನ್ನು ಬೇಡಿಕೊಳ್ಳೆಂದು ಹೇಳಲು, "ಸ್ವಾಮಿ, ತಾವು ನನ್ನ ಪ್ರಾಣವನ್ನುಳಿಸಿದಿರಿ, ಮಂಗಳವನ್ನುಂಟುಮಾಡಿದಿರಿ. ಈ ಧಾರಿಣಿಯು ಅಣುವಿಗಿಂತ ಕಿರಿದು; ತಮ್ಮ ಸತ್ವವನ್ನು ಹೊಗಳಲು ಫಣಿಪತಿಗೂ ಅರಿದು. ನನ್ನ ಪುಣ್ಯದ ಕಾರಣದಿಂದ ತಾವಿಲ್ಲಿಗೆ ದಯಮಾಡಿಸಿದಿರಿ. ತಮ್ಮ ಪಾದಸೇವೆಯಲ್ಲದೆ ಬೇರೇನನ್ನೂ ಬೇಡಲು ನನಗೆ ಉಳಿದಿಲ್ಲ. ಆದ್ದರಿಂದ ಸಿಂಹೋದರನಿಗೆ ಕರುಣೆ ತೋರಿಸಿ" ಎಂದು ವಿನೀತನಾಗಿ ಬಿನ್ನವಿಸಿಕೊಂಡ. ಲಕ್ಷ್ಮೀಧರನಿಗೆ ಅವನ ಬಗ್ಗೆ ಮೆಚ್ಚಿಕೆಯುಂಟಾಯಿತು. "ಕಡೆದಾಗ ಹಾಲುಗಡಲು ಬೇರೆ ಬೇರೆ ವಸ್ತುಗಳನ್ನು ನೀಡಲಿಲ್ಲವೇ? ತೇಯಲು ಚಂದನವು ಸುಗಂಧವನ್ನು ನೀಡದೇ? ಹಿಂಡಿದಾಗ ಕಬ್ಬಿನಿಂದ ಇನಿದಾದ ರಸವೊಸರದೇ? ಕಾಸಿದಾಗ

ಚಿನ್ನವು ಕಾಂತಿಯನ್ನು ಪಡೆಯದೇ? ಹಾಗೆಯೇ ಒಳ್ಳೆಯವರು ಎಷ್ಟೇ ಕಷ್ಟ ಪಟ್ಟರೂ ಇತರರಿಗೆ ಉಪಕಾರವನ್ನೇ ಮಾಡುವರೇ ವಿನಾ ಬಾಧೆಯನ್ನುಂಟುಮಾಡರು. ತನ್ನನ್ನು ಕೊಲ್ಲುವ ಆಲೋಚನೆಯನ್ನಿರಿಸಿಕೊಂಡಿದ್ದ ಸಿಂಹೋದರನ ಬಗ್ಗೆಯೂ ವಜ್ರಕರ್ಣನು ಒಳ್ಳೆಯ ಭಾವನೆಯನ್ನೇ ಇರಿಸಿಕೊಂಡಿದ್ದಾನೆ. ಪರೋಪಕಾರಪ್ರಿಯನಿಗೆ ಪರಪೀಡನೆಯಲ್ಲಿ ಮನಸ್ಸು ಬಾರದು," ಎಂದು ಅವನ ಗುಣವನ್ನು ಹೊಗಳಿದ. ಆನಂತರ ಸಿಂಹೋದರ–ವಜ್ರಕರ್ಣರು ಪರಸ್ಪರ ಕೈಹಿಡಿದುಕೊಳ್ಳುವಂತೆ ಮಾಡಿ, ತಮ್ಮ ಮನಸ್ತಾಪವನ್ನು ನೀಗಿಕೊಳ್ಳಲು ಹೇಳಿದ; ಅವರಿಬ್ಬರಿಗೂ ನಾಡುಬೀಡುಗಳನ್ನು ಸಮಾನವಾಗಿ ಹಂಚಿಕೊಟ್ಟ. ಇಬ್ಬರೂ ರಾಮನ ಆಜ್ಞೆಗೆ ಅನುಗುಣವಾಗಿ ನಡೆಯಬೇಕೆಂದೂ, ಇಲ್ಲದಿದ್ದರೆ ಅಣ್ಣನ ಬಾಣಕ್ಕೆ ಮುಖದಾಕ್ಷಿಣ್ಯ ಇರದು ಎಂದು ಲಕ್ಷ್ಮಣನು ಎಚ್ಚರಿಕೆಯಿತ್ತ.

ಬಳಿಕ ವಜ್ರಕರ್ಣನು ರಾಮಾದಿಗಳನ್ನು ತನ್ನ ಅರಮನೆಗೆ ಆಹ್ವಾನಿಸಿ ಕೊಂಡೊಯ್ದ. ಅವರು ಬರುವಾಗ ದಶಪುರದಲ್ಲಿ ಎಲ್ಲೆಲ್ಲೂ ತೋರಣಗಳು, ಮೇಲೆದ್ದ ಗುಡಿಗಳು, ದಿಕ್ಕರಿಗಳ ಕಿವಿ ಗಡಚಿಕ್ಕುವ ಹರೆಗಳ ಧ್ವನಿ ತುಂಬಿದ್ದವು. ಆತುರದಿಂದ ಬೀದಿಗಳಲ್ಲಿ ಸೇರಿದ ಜನರು ಬೆರಳಿನಿಂದ ತೋರುತ್ತ, "ಇವಳೇ ವನಿತಾರತ್ನವಾದ ಕೋಮಲೆ ಜನಕಜೆ, ಹಿಮವತ್ಪರ್ವತದಂತೆ ಉತ್ತುಂಗನಾದ ರಾಮ ಇವನೇ, ಸಿಂಹೋದರನ ಕದನಮದೋದ್ರೇಕ ರೌದ್ರಗ್ರಹವನ್ನು ಉಚ್ಚಾಟಿಸಿದ ಮಾಂತ್ರಿಕ ಲಕ್ಷ್ಮಣ ಇವನೇ" ಎಂದು ಕಣ್ಣು ತಣಿಯುವಂತೆ ಅವರನ್ನು ನೋಡಿದರು. ಹೀಗೆ ರಾಮಲಕ್ಷ್ಮಣರು ಪುರಜನದ ಮನಸ್ಸಿನೊಡನೆ ಊರನ್ನೂ ಅರಮನೆಯನ್ನೂ ಪ್ರವೇಶಿಸಿದರು, ಮಣಿಮಯಮಂಟಪದಲ್ಲಿರಿಸಿದ್ದ ಮಣಿಮಯಾಸನದಲ್ಲಿ ಮಂಡಿತರಾದರು. ವಜ್ರಕರ್ಣನು ಬಂಧುಜನಗಳೊಡಗೂಡಿ ಅವರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಗೌರವಿಸಿದ; ಅಲ್ಲದೆ, ಸಿಂಹೋದರನಿಗೂ ಇತರ ಅರಸುಮಕ್ಕಳಿಗೂ ವಸ್ತ್ರಾಭರಣಗಳನ್ನಿತ್ತು ಉಪಚರಿಸಿದ; ಎಲ್ಲರಿಗೂ ಮಜ್ಜನ ಭೋಜನಾದಿ ಸತ್ಕಾರಗಳನ್ನು ಮಾಡಿದ. ಮಾರನೆಯ ದಿವಸ, ವಜ್ರಕರ್ಣನು ತನ್ನ ಎಂಟು ಮಂದಿ ಹೆಣ್ಣುಮಕ್ಕಳನ್ನೂ, ಉಳಿದ ರಾಜರು ತಮ್ಮ ಮುನ್ನೂರು ಮಂದಿಯನ್ನೂ ಲಕ್ಷ್ಮಣನಿಗಿತ್ತು ಮದುವೆ ಮಾಡಿದರು. ಸಿಂಹೋದರನನ್ನು ಉಜ್ಜಯಿನಿಗೆ ಬೀಳ್ಕೊಟ್ಟ ಬಳಿಕ ರಾಮಾದಿಗಳು ದಶಪುರದಲ್ಲಿ ಕೆಲವು ದಿನ ಕಾಲ ಕಳೆದರು.

ಅಷ್ಟರಲ್ಲಿ ಬೇಸಿಗೆ ಕಾಲಿರಿಸಿತು. ಬಳ್ಳಿಗಿಡಪೆರ್ಮರಗಳೆಲ್ಲ ಒಣಗಿದವು, ತನ್ನ ಕಿರಣಗಳೆಂಬ ಯಂತ್ರನಾಳಗಳಿಂದ ಭಾನುವು ಭೂಮಿಯ ರಸವನ್ನೆಲ್ಲ ಹೀರಿಬಿಟ್ಟ, ಕಾಡುಗಿಚ್ಚಿನ ಹೊಗೆಯು ದೆಸೆಗಳನ್ನೆಲ್ಲ ಕಪ್ಪಗೆ ವ್ಯಾಪಿಸಿತು, ಕಾಸಾರಗಳು ಬತ್ತಿದವು, ಮಾರುತನು ಕಣ್ಮರೆಯಾದ, ಜೀರಿಕೆಗಳ ಝೇಂಕಾರವು ಎಲ್ಲೆಡೆ ತುಂಬಿತು. ಜೀರುಂಡೆಗಳು ಕೂಗಿದವು, ಎಲೆಗಳುದುರಿ ದೊಡ್ಡ ಮರಗಳೆಲ್ಲ ಬತ್ತಲಾದವು, ತೊರೆಗಳು ಹರಿಯುವುದು ನಿಂತಿತು, ಬಿರುಬಯಲಲ್ಲಿ ಮರೀಚಿಕೆಗಳು ಮೈದೋರಿದವು. ಸೋತ ರಾಜಪರಿವಾರವು ದೆಸೆಗೆಟ್ಟು ಹೋಗುವಂತೆ ನಿಸ್ಸಾರ ಸರೋವರಗಳನ್ನು ಬಿಟ್ಟು ಕೊಕ್ಕರೆ ಕಳಹಂಸ ಚಕ್ರವಾಕ ಮುಂತಾದ ಪಕ್ಷಿಗಳ ಗುಂಪು ಗುಳೆ ಹೋದವು. ತನ್ನ ಪರಿವಾರವಾಗಿದ್ದ ಜಲಚರಗಳ ಮರಣದಿಂದಾದ ಖೇದದಿಂದ ಹೃದಯ ಬಿರಿದಂತೆ ತಪನತಾಪದಿಂದ ಕೆರೆಗಳು ಬಿರುಕುಬಿಟ್ಟವು. ಉರಿಯುವ ಬಿಸಿಲಿನಲ್ಲಿ ಸೀದುಹೋದುವೇನೋ ಎನ್ನಿಸುವಂತೆ

ದುಂಬಿಗಳೂ ಕೋಗಿಲೆಗಳೂ ಮರಗಳ ಎಲೆಗಳ ಸಂದಿಗಳಲ್ಲಿ ಮುಳುಗುವ ಸೂರ್ಯನಂತೆ ಅಡಗಿದವು. ನಾನು ನಲ್ಮೆಯಿಂದ ಈಕೆಯ ಕೈಹಿಡಿದೆ, ಇವಳೂ ನನ್ನನ್ನು ತುಂಬ ಪ್ರೀತಿಸುತ್ತಾಳೆ ಎಂಬ ವಿವೇಕವು ನಾಶವಾಗಲು, ಚಂಡಪ್ರಭನು ಅವಳ ವಾಸಸ್ಥಳವನ್ನು ಬತ್ತಿಸಿ ತಾನೂ ನೋವನ್ನು ಪಡೆದ; ಅನುದಿನವೂ ವಾರುಣಿಯನ್ನು ಸೇವಿಸುತ್ತಿದ್ದವನು ಉನ್ಮಾರ್ಗಕ್ಕೆ ಅವಕಾಶ ಮಾಡಿಕೊಡುವ ಕುವಲಯದ್ರೋಹಿಯು ಏನು ತಾನೇ ಮಾಡಲಾರ! ತೃಷ್ಣೆಯಿಂದ ಮರೀಚಿಕೆಗಳನ್ನೇ ನೀರೆಂದು ಭ್ರಮಿಸಿ ಹಗಲೆಲ್ಲ ಓಡಾಡಿ ಮೃಗಸಂಕುಲದ ಗಂಟಲು ಆರಿತು, ಬೆಂದ ಅವುಗಳ ಚರ್ಮದ ಕೂದಲು ಉದುರಿತು, ನಾಲಗೆ ಒಣಗಿತು, ನಟ್ಟ ದಿಟ್ಟಿಗಳೊಡನೆ ಅಳ್ಳೆಗಳು ಹೊಯ್ದುಕೊಂಡು ನಡೆಯು ಕೆಟ್ಟಿತು; ಬಾಯಾರಿಕೆಯಿಂದ ಯಾರು ತಾನೇ ಬೇಯುವುದಿಲ್ಲ? ಬಿರುಬಿಸಿಲು ಕುದಿವ ಎಣ್ಣೆಯ ಹಾಗೆ ದೇಹವನ್ನು ಸುಡಲು, ಸರೋವರವನ್ನು ಹೊಕ್ಕ ಕಾಡಾನೆಗಳ ಹಿಂಡು, ಹಗೆಗಳು ನಂಟರಲ್ಲೂ ಕೋಪವನ್ನು ತೋರಿಸುವಂತೆ ಅಲ್ಲಿದ್ದ ತಾವರೆಗಳ ದಂಟನ್ನು ಕಿತ್ತು ಬಿಸಾಡಿದವು. ಗಿರಿತಪ್ಪಲಿನಲ್ಲಿದ್ದ ಕಾದ ಬಿದಿರ ಮುತ್ತುಗಳನ್ನು ನೀರಿನ ಹನಿಗಳೆಂದು ಭಾವಿಸಿ ನುಂಗಿದ ನವಿಲುಗಳ ಗಂಟಲು ಕೆಂಡವನ್ನು ನುಂಗಿದಂತೆ ಬೆಂದುಹೋಯಿತು! ಬಿಸಿಲಿನ ಬೇಗೆಯಿಂದ ಬಳಲಿ ವಿಷ್ಣುವು ಮತ್ಸ್ಯಾವತಾರವನ್ನು ತಾಳುತ್ತಾನೆ; ಸೂರ್ಯನು ಹಿಮಪರ್ವತದ ಅರುಗಿಗೇ ನಡೆಯುತ್ತಾನೆ; ದೇವತೆಗಳು ಆಗ್ನೇಯ ದಿಕ್ಕೆಂದು ಭಾವಿಸಿ ಹವಿಸ್ಸನ್ನು ಸ್ವೀಕರಿಸದೆ ಚಂದ್ರಕಲೆಯನ್ನೇ ನುಂಗುತ್ತಾರೆ; ಶಿವನು ಪಾರ್ವತೀವ್ಯಾಮೋಹವನ್ನು ತೊರೆದು ಗಂಗೆಯನ್ನು ಒಲಿಯುತ್ತಾನೆ – ಇದು ಖಂಡಿತ!

ಇಂತಹ ಬೇಸಿಗೆಯ ಕೆಲದಿನಗಳನ್ನು ದಶರಥತನೂಜರು ದಶಪುರದಲ್ಲಿ ಕಳೆದು ಅಲ್ಲಿಂದ ಹೊರಡಲು ಸಿದ್ಧರಾದಾಗ ವಜ್ರಕರ್ಣನು ದುಃಖಗೊಂಡ. ಸರಿ, ಸೀತಾಸಮೇತರಾಗಿ ರಾಮಲಕ್ಷ್ಮಣರು ದಕ್ಷಿಣಾಭಿಮುಖವಾಗಿ ಕಾಡಿನಲ್ಲಿ ತಮಗೆ ತಿಳಿದ ದಾರಿಯನ್ನು ಹಿಡಿದು ಮುನ್ನಡೆದರು. ರಾಘವನು ತನ್ನ ಬಗ್ಗೆ ಲಾಘವ ಮನೋಭಾವವನ್ನು ತಾಳಿದನೆಂಬ ಕೋಪದಿಂದ ಬೆಳಿಗ್ಗೆಯೇ ಭೂಮಿ ಕಡುಬಿಸಿಯಾಯಿತು. ಇನಕುಲ ಸಾಮ್ರಾಜ್ಯವನ್ನು ಒಲ್ಲದೆ ತಮ್ಮನಿಗೊಪ್ಪಿಸಿದ ರಾಮನ ಮೇಲೆ ಕೋಪಗೊಂಡಂತೆ ಇನನು ಬಿಸುಪೇರಿದ. ಇಂತಹ ಬಿಸಿಲಲ್ಲಿಯೇ ನಡೆಯುತ್ತ ಬಂದ ಅವರು ಉಜ್ಜಯಿನಿಯ ಪಶ್ಚಿಮ ಭಾಗದಲ್ಲಿದ್ದ ದಟ್ಟ ಕಾಡನ್ನು ದಾಟಿ ಕುರವಕವೆಂಬ ಊರಿನ ಬಳಿ ಬಂದರು; ಸೀತೆಯು ಬಿರುಬಿಸಿಲಿಂದ ಬಳಲಿ ಬಳಿಯಲ್ಲಿದ್ದ ಆಲದ ಮರದ ನೆರಳಲ್ಲಿ ವಿಶ್ರಮಿಸಲೆಂದು ಕುಳಿತಳು. ಲಕ್ಷ್ಮಣನು ನೀರನ್ನು ತರಲೆಂದು ಹೊರಟ.

ಮುಂದೆ ಅನತಿ ದೂರದಲ್ಲಿ ಮನ್ಮಥನ ವನದುರ್ಗದಂತಿದ್ದ ಕಾಡಿನ ಪ್ರದೇಶವೊಂದಿತ್ತು. ಅಲ್ಲಿದ್ದ ಕೊಳವು ವನಲಕ್ಷ್ಮಿಯ ಮುಖದಂತೆ ಮನೋಹರವಾಗಿತ್ತು. ಬಳಿಯಲ್ಲಿಯೇ ಕೆಲವರು ಹದಿಹರೆಯದವರು ಕೊಳದ ಕಾವಲು ಕಾಯುತ್ತಿದ್ದರು. ಅಲ್ಲಿಗೆ ಕೂರಸಿಯಂತೆ ಹೊಳೆಯುವ ದೇಹದ ಲಕ್ಷ್ಮಣನು ಬಂದ. "ಬರಬೇಡ" ಎಂಬ ಅವರ ಎಚ್ಚರಿಕೆಯ ಮಾತನ್ನೂ ಮೀರಿ ಸೌಮಿತ್ರಿಯು ಬಂದವನೇ ಬೊಗಸೆಯಲ್ಲಿ ಹಿಡಿದ ತಾವರೆಯ ಎಲೆಯ ದೊನ್ನೆಯಲ್ಲಿ ಕೊಳದ ನೀರನ್ನು ಮೊಗೆದುಕೊಂಡು ಹೊರಟ. ಎದುರಲ್ಲಿ ಹೆಣ್ಣಾನೆಯೊಂದನ್ನೇರಿ, ತನ್ನನ್ನು ಕಂಡು ಕಣ್ಸೆಟಗೊಂಡು, ತೀಕ್ಷ್ಣವಾದ ಅಂಕುಶದ

ಹೊಳಪಿನೊಡನೆ ಸೇರಿದ ಹಾಲಲ್ಲಿ ಅದ್ದಿದ ಮಿಂಚಿನ ಗೊಂಚಲಂತೆ ಕಾಂತಿಯುಕ್ತಳಾದ ಗಂಡುಡುಗೆಯನ್ನು ತೊಟ್ಟ ಬಾಲೆಯೊಬ್ಬಳು ಕಾಣಿಸಿದಳು. ಈ ಹುಡುಗಿಯೇಕೆ ಈ ವೇಷ ಧರಿಸಿದ್ದಾಳೆ ಎಂಬುದನ್ನು ತಿಳಿಯುವ ಕುತೂಹಲದಿಂದ ಲಕ್ಷ್ಮಣ ಅವಳ ಹತ್ತಿರ ಬಂದ. ವಾರಿಜಾಕ್ಷನ ಕಡುಗಾಡಿಯನ್ನು ಕಂಡ ಆ ರಾಜತನೂಜೆಯ ದೇಹದಲ್ಲಿ ಕಂತುಶರಗಳು ನಾಟಿದವು, ಬೆವರ ಹನಿಸಂದೋಹ ಮೈದೋರಿತು, ಪುಳಕಗಳೆದ್ದುವು, ಮನಸ್ಸಿನಲ್ಲಿ ಕುತೂಹಲವು ತುಂಬಿತು. ಅವನಿಗೆ ಶರಣಾಗಿ ಬರುವಂತೆ ಆನೆಯಿಂದಿಳಿದ ಆಕೆ, ಇವನು ಆದೇಶಪುರುಷನಿರಬೇಕೆಂದು ನಿಶ್ಚೈಸಿ, ಅವನ ಕೈಹಿಡಿದವಳೇ ತನ್ನರಮನೆಗೆ ಬಿಜಯಗೈಯಬೇಕೆಂದು ಬಿನ್ನವಿಸಿಕೊಂಡಳು.

ಅವನನ್ನು ಕರೆದೊಯ್ದು ಹಂಸತೂಲಿಕಾತಲ್ಪದಲ್ಲಿ ಕುಳ್ಳಿರಿಸಿ, ಜೊತೆಯಲ್ಲಿ ತಾನೂ ಕುಳಿತು ಅವನ ವಿಚಾರವನ್ನು ತಿಳಿಯಲಪೇಕ್ಷಿಸಿದಳು. ಆ ವಿಚಾರಗಳನ್ನೆಲ್ಲ ಮುಂದೆ ಹೇಳುವುದಾಗಿಯೂ, ತಾನೀಗ ಅತ್ತಿಗೆಯ ನೀರಡಿಕೆಯನ್ನು ತಣಿಸಲು ನೀರನ್ನು ಹುಡುಕಿಕೊಂಡು ಹೊರಟಿದ್ದಾಗಿ ಲಕ್ಷ್ಮಣನು ತಿಳಿಸಿದ. ಆ ಕೆಲಸವನ್ನು ತಾನು ಮಾಡುವೆನೆಂದು ತಿಳಿಸಿದ ಆಕೆ, ತನ್ನ ಸಖಿಯರೊಡನೆ ಸೀತೆಗೆಂದು ತಂಪಾದ ನೀರನ್ನು ಕಳಿಸಿಕೊಟ್ಟಳು. ಅವರು ರಾಮಸೀತೆಯರಿದ್ದೆಡೆಗೆ ಬಂದರು. ಅವರೀರ್ವರೂ ಮನದಣಿಯೆ ಹಿಮಸಲಿಲವನ್ನು ಕುಡಿದು ಬಳಲಿಕೆಯನ್ನು ನೀಗಿಕೊಂಡರು. ಆನಂತರ ಆ ಹೆಂಗೆಳೆಯರ ಜೊತೆಗೆ ಲಕ್ಷ್ಮಣನಿದ್ದಲ್ಲಿಗೆ ಬಂದರು.

ಅವರಿಗೆ ಮಜ್ಜನಭೋಜನಾದಿ ಸತ್ಕಾರಗಳನ್ನು ಮಾಡಿದ ಕನ್ನಿಕೆಯ ತಾಯಿ ಪೃಥ್ವೀಮತಿ ಮಹಾದೇವಿಯು ಪರಿಜನರನ್ನೆಲ್ಲ ಹೋಗಲು ಹೇಳಿ ರಾಮಾದಿಗಳನ್ನು ಕಟ್ಟೇಕಾಂತದಲ್ಲಿ ನಿಲ್ಲಿಸಿಕೊಂಡಳು. ಆಮೇಲೆ ತಾಯಿಯ ಇಂಗಿತವರಿತ ಮಗಳು ತನ್ನ ಗಂಡುಡುಗೆಯನ್ನು ಕಳಚಿ ಕಟಕ ಕಟಿಸೂತ್ರ ಮೊದಲಾದ ಸುಂದರ ಆಭರಣಗಳನ್ನು ಧರಿಸಿ ಅಲಂಕೃತಳಾಗಿ ಬಂದಳು. ರೂಪಪರಾವರ್ತನ ವಿದ್ಯೆಯಿಂದ ಕಾಮನು ರತಿಯಾದಂತೆ ಆ ಕನ್ನಿಕೆಯು ಸಾಣೆಹಿಡಿದ ಕತ್ತಿಯಂತೆ ಕಾಂತಿಯುಕ್ತಳಾಗಿದ್ದಳು. ಅವಳ ನಡಿಗೆಯು ಹಂಸಕ್ಕೂ ನಾಚಿಕೆ ತರುವಂತಿತ್ತು; ಚೆಲುವಿನಲ್ಲಿ ಸೀತೆಯ ಸಮಧಿಕೆಯೆಂಬಂತಿದ್ದ ಅವಳು ಬಂದವಳೇ ಪಕ್ಕದಲ್ಲಿ ಕುಳಿತಳು. ಅವಳ ನಗೆಗಣ್ಣು, ನಿಮಿರಿದ ಹುಬ್ಬುಗಳು, ನಳಿದೋಳುಗಳು, ಸರೋಜಾನನ, ಮದಾಳಿಕುಲಕುಂತಳ, ಕಳಹಂಸಯಾನ, ಪೀನ ಕುಚಗಳು ಲಕ್ಷ್ಮಣನ ಈಕ್ಷಣವನ್ನು ಒಂದೇ ಕ್ಷಣಕದಲ್ಲಿ ಸೆರೆಗೈದವು; ತನ್ನ ಮನಸ್ಸನ್ನು ಆ ಮಾನಿನಿಗಿತ್ತು ಅವನು ಮರವಾನಸನಂತೆ ಕುಳಿತುಬಿಟ್ಟ.

ಈ ಕನ್ನಿಕೆ ಪುರುಷವೇಷ ತೊಡಲು ಕಾರಣವೇನೆಂದು ದಾಶರಥಿಯು ಪ್ರಶ್ನಿಸಿದ. ಆಗ ಆ ಕನ್ಯೆಯ ತಾಯಿಯು ರಾಮನಿಗೆ ಕೈಮುಗಿದು ಹಿನ್ನೆಲೆಯನ್ನು ನಿರೂಪಿಸತೊಡಗಿದಳು: ಈ ಕುರವಕಪುರವನ್ನು ಆಳುವ ಅರಸ ವಾಲಖಿಲ್ಯ. ವಿಂಧ್ಯಾಟವಿಯಲ್ಲಿರುವ ಮ್ಲೇಚ್ಛರಾಜನಾದ ರೌದ್ರಭೂತಿಯು ಅವನ ಮೇಲೆ ತನ್ನ ಕಿರಾತಬಲದೊಂದಿಗೆ ದಾಳಿಮಾಡಿ, ಎಲ್ಲವನ್ನೂ ದೋಚಿ ವಾಲಖಿಲ್ಯನನ್ನು ಸೆರೆ ಹಿಡಿದು ಒಯ್ದ. ಈ ವಿಷಯವನ್ನು ಅವಂತೀವಲ್ಲಭನಾದ ಸಿಂಹೋದರನು ಕೇಳಿ, ಈ ನಾಡಿನ ಅರಸನು ಅಪುತ್ರಕನಾದ್ದರಿಂದ ಅವನ ರಾಜ್ಯವನ್ನು ತಾನು ಪಡೆಯಲು ಹೊಂಚು ಹಾಕಿದ. ಆದರೆ ವಾಲಖಿಲ್ಯನ ರಾಣಿಯು ಗರ್ಭಿಣಿಯೆಂಬ

ವಿಚಾರವನ್ನು ಮಂತ್ರಿಮುಖ್ಯನು ಬಿನ್ನವಿಸಿದ. ಆ ಮಾತನ್ನು ಕೇಳಿದ ಸಿಂಹೋದರನು, ರಾಜನಿಗೆ ಗಂಡುಮಗುವಾದರೆ ಅವನೇ ರಾಜ್ಯದ ಒಡೆಯನೆಂದು ಮನ್ನಿಸುವುದಾಗಿ ಮಾತುಕೊಟ್ಟ. ಕೆಲಕಾಲಾನಂತರ ರಾಣಿಗೆ ಮಗು ಹುಟ್ಟಿತು; ಆದರೆ ಹೆಣ್ಣುಮಗು! ಆ ಮಗುವೇ ಇವಳು. ಮಂತ್ರಿಮುಖ್ಯನು ಗಂಡುಮಗು ಹುಟ್ಟಿದೆಯೆಂದು ವದಂತಿ ಸೃಷ್ಟಿಸಿದ; ಮಗುವಿಗೆ ಕಲ್ಯಾಣಮಾಲನೆಂಬ ಹೆಸರನ್ನೂ ಇಟ್ಟ. ಮಗು ಬೆಳೆಯಿತು. ಒಂದು ದಿವಸ ದಿವ್ಯಜ್ಞಾನಿಗಳನ್ನು ಕಂಡು ವಾಲಖಿಲ್ಯನು ಸೆರೆಯಿಂದ ಬಿಡುಗಡೆಗೊಳ್ಳುವುದು ಯಾವಾಗ ಎಂದು ಮಂತ್ರಿಮುಖ್ಯ ಬೆಸಗೊಂಡ. ಈ ಹುಡುಗಿಯು ಗಂಡುಡುಗೆಯನ್ನು ತೊಟ್ಟಿದ್ದರೂ ಹೆಣ್ಣೆಂದು ಗುರುತಿಸಿ ಅವಳ ಕೈಹಿಡಿಯುವವನು ನಿಮ್ಮ ಖೇದವನ್ನು ಹೋಗಲಾಡಿಸಿ ವಾಲಖಿಲ್ಯನನ್ನು ಬಂಧಮುಕ್ತಗೊಳಿಸುತ್ತಾನೆ; ಅಂತಹ ವೀರನನ್ನು ಪುರೋಪವನದ ಬಳಿಯ ಸರೋವರದ ಬಳಿ ನೀವು ಕಾಣುವಿರಿ ಎಂದು ಆ ದಿವ್ಯಜ್ಞಾನಿಯು ಭವಿಷ್ಯ ನುಡಿದ. ಆದ್ದರಿಂದ ಈ ಸರೋವರಕ್ಕೆ ಅಂದಿನಿಂದ ಕಾವಲನ್ನಿಟ್ಟು ಅಲ್ಲಿಯೇ ಬೀಡುಬಿಟ್ಟಿದ್ದರೆಂದೂ, ತಮ್ಮ ಪುಣ್ಯೋದಯದಂತೆ ರಾಮಾದಿಗಳು ಬಿಜಯಗೈದರೆಂದೂ ಶೋಕಗದ್ಗದಕಂಠೆಯಾದ ತಾಯಿ ಬಿನ್ನವಿಸಿದಳು.

ಅವಳನ್ನು ಸೀತೆ ಸಂತೈಸಿದಳು. ಲಕ್ಷ್ಮಣನು ಜಾನಕಿಗೆ ಕೈಮುಗಿದು, "ರಾಘವನ ಶರಗಳಿಗೆ ಲೋಕತ್ರಯವೇ ಮಣಿಯುತ್ತವೆ. ಈ ತಾಯಿ ಸ್ವಲ್ಪ ಕಾಲ ಸುಮ್ಮನಿರಲಿ; ಈ ಹುಡುಗಿಯು ಮೊದಲಿನಂತೆಯೇ ಗಂಡುಡುಗೆಯಲ್ಲಿರಲಿ. ನಾನು ಆ ಬೇಡರ ಪಡೆಯನ್ನು ಬೆನ್ನಟ್ಟಿ ವಾಲಖಿಲ್ಯನನ್ನು ಸೆರೆಯಿಂದ ಬಿಡಿಸಿ ಈ ಹುಡುಗಿಯನ್ನು ಮದುವೆ ನಿಲ್ಲುತ್ತೇನೆ" ಎಂದು ನುಡಿದ. ಅಂತೆಯೇ ಅವರನ್ನೊಡಂಬಡಿಸಿ ಅಂದು ರಾತ್ರಿಯೇ ರಾಮಾಚ್ಯುತರು ಬಲದೊಂದಿಗೆ ಹೊರಟರು. ಲತೆಗಳನ್ನು ಕುಣಿಸುವ, ಹರಿಣಿಗಳಿಗೆ ಬಂಧುರವಾದ, ನೆಲ್ಲಿಗಿಡಗಳಲ್ಲಿ ಮರ್ಮರವನ್ನುಂಟುಮಾಡುವ, ಆನೆಗಳ ಸೊಂಡಿಲುಗಳಿಗೆ ತಂಪುಂಟುಮಾಡುವ ಗಾಳಿಯು ಅರಣ್ಯದಲ್ಲಿ ಬೀಸುತ್ತಿತ್ತು. ಗಾಳಿಯನ್ನು ತಡೆದು, ದಿಕ್ಕುಗಳನ್ನೇ ಆವರಿಸಿ, ಮೇಲಿನ ಆಗಸವನ್ನೇ ನುಂಗಿಬಿಟ್ಟಿತು ಎಂಬ ರೀತಿಯಲ್ಲಿ ಕತ್ತಲೆಯಿಂದ ತುಂಬಿದ ದಟ್ಟಡವಿಯು ನೋಡಲು ಭೀಕರವೆನಿಸಿತು. ಅದನ್ನು ಪ್ರವೇಶಿಸುವಷ್ಟರಲ್ಲಿ, ತಮ್ಮ ಪೇರಡವಿಯನ್ನು ಯಾರೋ ಹೊಕ್ಕಿದ್ದಾರೆಂದು ತಿಳಿದ ಲುಬ್ಧಕರು ತಂಡತಂಡವಾಗಿ ಬಂದು ಸುತ್ತುವರಿದರು. ಲಕ್ಷ್ಮಣನು ನಸುನಕ್ಕು ಕೃತಾಂತನಂತೆ ತನ್ನ ದಂಡದಿಂದಲೇ ಅವರನ್ನೆಲ್ಲ ಬೀಳುವೊಡೆದ. ಬೇಡಪಡೆಯು ಬೆಗಡುಗೊಂಡು ಓಡಿ ಹೋಗಿ ಈ ವಿಚಾರವನ್ನು ತಮ್ಮ ಒಡೆಯನಿಗೆ ಅರುಹಿತು. ಅವನು ಕೋಪದಿಂದ ಅತಿಪ್ರಬಲಕಿರಾತ ಪಡೆಯೊಂದಿಗೆ ಜನಾರ್ದನನ ಮೇಲೇರಿ ಬಂದ. ಆಗ ಲಕ್ಷ್ಮಣನು ಲಯಕಾಲದ ಕಾಳರಾತ್ರಿಯಂತೆ ಸಾಗರಾವರ್ತವನ್ನು ಜೇವೊಡೆದ. ಅದರ ಠೇಂಕಾರವನ್ನು ಕೇಳಿದ ರೌದ್ರಭೂತಿಯು ಇವರು ಸಾಮಾನ್ಯರಲ್ಲ, ಕಾರಣಪುರುಷರೆಂಬುದನ್ನು ತಿಳಿದುಕೊಂಡುಬಿಟ್ಟ. ಅವನಲ್ಲಿ ಭಯ ತುಂಬಿತು; ಇವರಲ್ಲಿ ಆಗ್ರಹವು ಸರಿಯಲ್ಲ, ಅಚಲಿತಧೈರ್ಯರಾದ ಇವರ ಅನುಗ್ರಹವನ್ನು ಹೊಂದಿ ತನ್ನ ವಿಗ್ರಹವನ್ನುಳಿಸಿಕೊಳ್ಳಲು ನಿರ್ಧರಿಸಿ ಅವನು ರಥದಿಂದಿಳಿದ.

ಬಂದವನೇ ರಾಮಾಚ್ಯುತರ ಮುಂದೆ ಕೈಮುಗಿದು ನಿಂತು, ಇಲ್ಲಿಯವರೆಗೂ

ಅರಿಯದೆ ತಾನು ಆಚರಿಸಿದ ಅನ್ಯಾಯವನ್ನು ಮನ್ನಿಸಬೇಕೆಂದು ಬೇಡಿಕೊಂಡು, ಇನ್ನು ಮುಂದೆ ಅವರು ಹೇಳಿದಂತೆ ನಡೆದುಕೊಳ್ಳುವುದಾಗಿ ಬಿನ್ನವಿಸಿಕೊಂಡ. ಲಕ್ಷ್ಮಣಕುಮಾರನು ಅವನಿಗೆ ಅಭಯವನ್ನಿತ್ತು, ಅವನು ಸೆರೆಹಿಡಿದಿದ್ದ ವಾಲಖಿಲ್ಯನನ್ನು ಕರೆತರುವಂತೆ ಹೇಳಿ ಕಳಿಸಿದ. ಅಂತೆಯೇ ಆ ಕ್ಷಣವೇ ಹೋದ ರೌದ್ರಭೂತಿಯು ಮಾರನೆಯ ಕ್ಷಣವೇ ಕರೆತಂದ. ಬಂದ ವಾಲಖಿಲ್ಯನು ಕಾಲಿಗೆ ಬಿದ್ದಾಗ ಅವನನ್ನು ಬಲನಾರಾಯಣರ ದೇಹಕಾಂತಿಯು ಆವರಿಸಿತು; ಕೆಲಕಾಲ ಬೇಡರ ಸೆರೆಯಲ್ಲಿದ್ದ ದೋಷವೆಂಬ ಕೆಸರನ್ನು ತೊಳೆದುಕೊಳ್ಳಲು ಯಮುನಾನದಿಯಲ್ಲಿ ಮುಳುಗುವ ಪಾಪನಿವಾರಕನಂತೆ ಅವನು ಕಾಣಿಸಿದ. ರಾಮಪ್ರೇಮವಚನಾಮೃತವರ್ಷದಿಂದ ಹರ್ಷಿತನಾದ ಅವನು ಮುಕುಳಿತಾಂಜಲಿಯಾಗಿ, "ಸೂರ್ಯನಿಗೆ ಕತ್ತಲೆ, ಶರಭಕ್ಕೆ ಜಿಂಕೆ ಸೆಡೆಯುವಂತೆ ರೌದ್ರಭೂತಿಯು ನಿಮಗೆ ಸೆಡೆತು ನಿಂತ; ನಿಮ್ಮಂತಹವರಿಂದಲ್ಲದೆ ಇವನ ಕೈಯೆಂಬ ಜವನ ಬಾಯಿಂದ ನನ್ನನ್ನು ಪಾರುಮಾಡುವುದು ಸಾಧ್ಯವೇ? ನಿಮ್ಮ ಕರುಣೆಯಿಂದ ನನಗೆ ವೃತ್ತಿಜಾತಿಗಳಿಂದಲೂ ಬಂಧಮೋಕ್ಷವಾಯಿತು; ಅಪಾರ ದುಃಖಭಾರವನ್ನೂ ನಾನು ನೀಗಿಕೊಂಡೆ; ನಿಮ್ಮನ್ನು ನೋಡಿ ನಾನು ಕೃತಾರ್ಥನಾದೆ; ನಿಮ್ಮಂತಹ ಉದಾರಚರಿತರೂ, ದುರ್ವಾರ ಬಾಹಾಬಲರೂ ಲೋಕದಲ್ಲಿ ಮತ್ತಾರಿದ್ದಾರೆ?" ಎಂದು ಬಿನ್ನವಿಸಿದ. ಅವರು ತನ್ನ ಪುರಾತನ ಪುಣ್ಯವೇ ರೂಪುಗೊಂಡಂತಿರುವರೆಂದೂ, ತಮಗೆ ಅಪಾರ ಉಪಕಾರ ಮಾಡಿದರೆಂದೂ ಕೃತಜ್ಞತೆ ಸಮರ್ಪಿಸಿದ. ಊರಿಗೆ ಹೋದಾಗ ಎಲ್ಲ ವಿಷಯವೂ ತಾನೇ ತಿಳಿಯುವುದೆಂದು ಲಕ್ಷ್ಮಣನು ಹೇಳಿ, ವಾಲಖಿಲ್ಯನನ್ನು ಊರಿಗೆ ಸೇರಿಸಲು ರೌದ್ರಭೂತಿಗೆ ಆಜ್ಞಾಪಿಸಿದ. ಅದರಂತೆ ನಡೆದಾಗ, ವಾಲಖಿಲ್ಯನು ರಾಮಲಕ್ಷ್ಮಣರ ಸಾಹಸವನ್ನು ತನ್ನ ಬಂಧುಬಾಂಧವರಿಗೆ ವಿವರಿಸಿದ. ಒಂದು ಶುಭಮುಹೂರ್ತದಲ್ಲಿ ತನ್ನ ಮಗಳನ್ನು ಲಕ್ಷ್ಮಣಕುಮಾರನಿಗಿತ್ತು ಮದುವೆ ಮಾಡಿಕೊಟ್ಟು ತಾನು ಸುಖದಿಂದ ಅರಸುಗೈಯುತ್ತಿದ್ದ.

ಇತ್ತ ರಾಮಲಕ್ಷ್ಮಣರು ವಿಪಿನದಲ್ಲಿ ದಕ್ಷಿಣಾಭಿಮುಖವಾಗಿ ಮುಂದುವರಿದರು. ಸುತ್ತಾಡುವ ಶರಭಗಳಿಂದ ಕೂಡಿದುದೂ, ಉಗ್ರ ಖಡ್ಗಮೃಗಗಳಿಂದ ಸಂಛನ್ನವೂ, ಹಾವುಗಳ ವಿಷಾಗ್ನಿಯಿಂದ ದಗ್ಧವೂ, ಮದ್ದಾನೆಗಳಿಂದ ತುಂಬಿದುದೂ, ಕತ್ತಲೆಯ ಮೊತ್ತವೆಂಬಂತೆ ಆಗಸದವರೆಗೂ ಹಬ್ಬಿದ್ದ ಬೇಡರ ಕೋಲಾಹಲದಿಂದೊಡಗೂಡಿದುದೂ ಆದ ಆ ಕಾಡಿನಲ್ಲಿ ಕಲುಷಿತ ಸಿಂಧುವಿನೊಡನೆ ವಿಂಧ್ಯಪರ್ವತವಿತ್ತು. ಇನ್ನು ಮುಂದೆ ನೆಲವಿಲ್ಲ ಎಂಬಂತೆ, ಇಷ್ಟೇ ದಿಕ್ಕಿನ ಸೀಮೆ ಎಂಬಂತೆ, ಕತ್ತಲೆಯು ಚಂದ್ರಸೂರ್ಯರ ತೇಜಸ್ಸಿಗೆ ಅದಿರದೆ ಇದಿರೊಡ್ಡಿ ನಿಂತಿತೋ ಎಂಬಂತೆ ಕತ್ತಲೆಯಿಂದ ಆವರಿಸಿ, ಕಾಡಾನೆಯ ಸಿಂಹ ಹೆಬ್ಬುಲಿಗಳ ಸಮೂಹದಿಂದ ಕೂಡಿದ ಕುಲಪರ್ವತಗಳ ಸ್ಪರ್ಧಿಯಾದ ವಿಂಧ್ಯವು ನಿಂತಿತ್ತು. ಅದರ ತಪ್ಪಲಲ್ಲಿ ಚಂದನಗಂಧಿಯೂ, ಮೃಗಮದತಿಲಕೆಯೂ, ಹೊಂಗೆಯ ಚಿಗುರಿನ ಕೂದಲುಳ್ಳವಳೂ, ಮರಳ ದಿಣ್ಣೆಯೆಂಬ ಜಘನಸ್ಥಳೆಯೂ, ಮದಗಜ ವಿಲಾಸವತಿಯೂ ಆದ ವನಲತೆಯೆಂಬ ಸುಂದರಿಯು ಕಣ್ಗೊಳಿಸಿದಳು.

ವಿಂಧ್ಯನಗವನ್ನು ದಾಟಿ ತಾವಿಯೆಂಬ ತೊರೆಯನ್ನು ಹಾದು ಅರುಣೆ ಎಂಬ ಅಗ್ರಹಾರವನ್ನು ಹೊಕ್ಕು ಒಂದು ಮನೆಯ ಬಳಿ ಬಂದರು. ಆ ಮನೆಯ ಬ್ರಾಹ್ಮಣವಧುವು ರಾಮಾದಿಗಳನ್ನು ಕಂಡು ಕುಳಿತುಕೊಳ್ಳಲು ಪೀಠವನ್ನಿತ್ತಳು; ಸೀತೆಗೆ ಶಿತೋದಕವನ್ನಿತ್ತು

ಪಥಶ್ರಮವನ್ನಾರಿಸಿದಳು. ಅಷ್ಟರಲ್ಲಿ ಅವಳ ಗಂಡನು ಮನೆಗೆ ಬಂದ. "ಇವರಿಗೆ ಇಲ್ಲೇಕೆ ಜಾಗವಿತ್ತೆ?" ಎಂದು ಅರ್ಘ್ಯಪಾದ್ಯಪಲಾಶಕಾಂಡಕುಶಕುಸುಮವನ್ನು ಹಿಡಿದ ಅವನು ಹೆಂಡತಿಯನ್ನು ಪ್ರಶ್ನಿಸಿದ. ಆ ಬ್ರಾಹ್ಮಣನ ಹೆಸರು ಕಪಿಲ. ಅವನ ಕೆಡುನುಡಿಯನ್ನು ಕೇಳಿ ಜಾನಕಿಯು, "ಕಾಡಿನಲ್ಲಿ ನಾವು ಆರಾಮವಾಗಿ ಬದುಕೋಣ; ಈ ಮನೆಯಲ್ಲಿರುವುದು ಬೇಡ" ಎಂದಳು. ಲಕ್ಷ್ಮಣನು ಕೋಪದಿಂದ ಅವನೆಡೆ ನೋಡಿದ. ಆಗ ರಾಮನು, "ಇವನು ದ್ವಿಜನಾದ್ದರಿಂದ ಅವಧ್ಯ; ದುರ್ಬಲರು ಏನೆಂದರೂ ಸಹಿಸಿಕೊಳ್ಳಬೇಕಲ್ಲವೇ?" ಎಂದು ತಮ್ಮನನ್ನು ಸಂತೈಸಿದ.

ಮುಂದೆ ಅವರು ಆ ಊರು ಬಿಟ್ಟು ಹೆದ್ದಾರಿಯಗುಂಟ ಮುನ್ನಡೆದರು. ತನ್ನ ಬಿಳಲುಗಳಿಂದ ಹುತ್ತದಂತೆಯೂ, ನಾನಾ ರೆಂಬೆಕೊಂಬೆಗಳಿಂದ ಅಮರಾವತಿಯಂತೆಯೂ ಹರಡಿಕೊಂಡಿದ್ದ, ತನ್ನ ಎಲೆಚಿಗುರುಗಳಿಂದ ಗಾಳಿಯನ್ನೂ ಸೂರ್ಯಕಿರಣಗಳನ್ನೂ ತಡೆಯುತ್ತಿದ್ದ ಒಂದು ಆಲದ ದೊಡ್ಡ ಮರದೆಡೆಗೆ ಬಂದರು. ಅಲ್ಲಿ ವಾಸಿಸುತ್ತಿದ್ದ ಇಭಕರ್ಣನೆಂಬುವವನು ಅವರ ತೇಜಸ್ಸನ್ನು ಕಂಡು ಬೆಚ್ಚಿ ಅಲ್ಲಿಂದ ಓಡಿಹೋಗಿ, ವಿಂಧ್ಯಾಟವಿಯಲ್ಲಿದ್ದ ಕ್ರೀಡಾಪೂತನೆಂಬುವ ಯಕ್ಷರಾಜನ ಬಳಿ ಬಂದ. ಚಂಡಕೋದಂಡಧಾರಿಗಳಾದವರು ತನ್ನ ಆವಾಸಕ್ಕೆ ಬಂದಾಗ ತಾನು ಹೆದರಿ ಓಡಿಬಂದುದಾಗಿ ಅವನಿಗೆ ತಿಳಿಸಿದ. ಹಾಗೆ ಬಂದವರು ಈ ಯುಗದ ಬಲದೇವ ವಾಸುದೇವರೆಂಬುದನ್ನು ಕ್ರೀಡಾಪೂತನು ತನ್ನ ಅವಧಿಜ್ಞಾನದಿಂದ ಅರಿತ. ಅವರಿಗೆ ಉಚಿತ ರೀತಿಯಲ್ಲಿ ಸತ್ಕಾರ ಮಾಡಲೆಂದು ತನ್ನ ಊರನ್ನೇ ಅವನು ಮಣಿಮಾಡಪ್ರಾಕಾರ, ಗೋಪುರಅಟ್ಟಾಳಕಗಳು, ಬಹಿಃಪುರ-ಅಂತಃಪುರಗಳಿಂದ ಕೂಡಿದ ಅರಮನೆ, ಆನೆಕುದುರೆಗಳ ಲಾಯಗಳು ಮುಂತಾದವುಗಳಿಂದ ಕೂಡಿದ ಅಮರಾವತಿಗಿಂತ ಸುಂದರವಾದ, ಮಾಂಡವ್ಯನಿಗೂ ನಿರ್ಮಿಸಲು ಅಸಾಧ್ಯವಾದ, ಮತ್ತೊಂದು ನಗರವನ್ನು ನಿರ್ಮಿಸಿದ. ಮಳೆಗಾಲ ಬರುವ ಹೊತ್ತಿಗೆ ಆ ಕಾಡಿನಲ್ಲಿಯೂ ಯಕ್ಷನಿರ್ಮಿತವಾದ ನಗರವು ಉಂಟಾಗಬೇಕಾದರೆ ರಘುರಾಮನ ಪುಣ್ಯೋದಯಕ್ಕೆ ಎಣೆಯುಂಟೆ?

ಆನಂತರ ಸೇವಾತತ್ಪರ ಮನೋಭಾವದಿಂದ ಕೂಡಿ, ತನ್ನ ಬಿಂಕವನ್ನು ಬದಿಗೊತ್ತಿದ ನನೆವಿಲ್ಲನಂತೆ ಸುಂದರಾಕಾರನಾದ ಕ್ರೀಡಾಪೂತನು ಬಂದು ರಾಘವನ ಚರಣಗಳಿಗೆ ನೀರನ್ನೆರೆದು ಕೈಮುಗಿದು ಮುಂಬರುವ ಮಳೆಗಾಲಪೂರ್ತಿ ಬೇರೆಲ್ಲಿಗೂ ಹೋಗದೆ ತನ್ನ ಪುರದಲ್ಲಿಯೇ ಉಳಿದುಕೊಂಡು ತನ್ನನ್ನು ಚರಿತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಂಡ. ತನ್ನ ಪ್ರಿಯನುಡಿಗಳಿಂದ ಒಪ್ಪಿಸಿ ಅವರನ್ನು ತಾನು ನಿರ್ಮಿಸಿದ್ದ ನಗರಕ್ಕೆ ಕರೆತಂದ. ಅರಮನೆಯಲ್ಲಿ ಸಕಲ ಸೌಲಭ್ಯಗಳನ್ನು ಒದವಿಸಿದ ಆ ಯಕ್ಷನು ರಘುಸುತನಿಗೆ ಅಭಿಷೇಕವನ್ನು ಮಾಡಿದ. ಆ ಉಚಿತೋಪಚಾರದಕ್ಷನಾದ ಯಕ್ಷನು ಬೇಡದಿದ್ದರೂ ರಾಮನಿಗೆ ಬೇಕಾದ್ದನ್ನೆಲ್ಲ ನೀಡಿದ.

ಮತ್ತೆ ಈ ಕಡೆ ಕಪಿಲನು ಎಂದಿನಂತೆ ಓಡಾಡುತ್ತ ಬಂದವನು ತಾನು ಇದುವರೆಗೂ ಕಾಣದ ದಿವ್ಯಪುರವೊಂದು ಆ ಕಾಡಿನಲ್ಲಿರುವುದನ್ನು ನೋಡಿ ಅಚ್ಚರಿಗೊಂಡ. ಆ ಹೊತ್ತಿಗೆ ಸಮಯಾ ಎಂಬ ಹೆಸರಿನ ಯಕ್ಷಿಯು ಪ್ರತ್ಯಕ್ಷಳಾದಳು. ಈ ಊರಿನ ಹೆಸರೇನು ಇದಕ್ಕೆ ಒಡೆಯನಾರು ಎಂಬ ಬಗ್ಗೆ ಆಕೆಯನ್ನು ಕಪಿಲ ಪ್ರಶ್ನಿಸಿದ. ರಾಮಪುರವೆಂಬುದು ಅದರ ಹೆಸರು, ರಘುರಾಮನೇ ಇದರ ಒಡೆಯ, ಅವನು ಬೇಡಿದ್ದನ್ನು ನೀಡುವ ಕಲ್ಪಾರಾಮ

ಎಂದು ಹೇಳಿ, ಅವನೂ ಹೋಗಿ ಬೇಕಾದ್ದನ್ನು ಬೇಡಿಕೊಳ್ಳುವಂತೆ ಬ್ರಾಹ್ಮಣನಿಗೆ ಸಲಹೆಯಿತ್ತಳು. ಇದನ್ನು ಕೇಳಿದ ಕಪಿಲ ವಿಷಣ್ಣಗೊಂಡ; ಆ ರಾಜನ ದರ್ಶನ ಮಾಡುವ ಉಪಾಯವನ್ನು ತಿಳಿಸಬೇಕೆಂದು ಕೈಮುಗಿದು ದೇವತೆಯನ್ನು ಕೇಳಿಕೊಂಡ. ಆ ಊರಿನ ಪೂರ್ವಭಾಗದಲ್ಲಿ ಒಂದು ಜಿನಾಲಯವಿದೆ, ಅಲ್ಲೊಬ್ಬ ಸನ್ಮುನಿಗಳಿರುವರು, ದೃಢವ್ರತನಾಗಿ ಉಪಾಸಕಕ್ರಮದಿಂದ ಅವರ ಬಳಿ ಹೋಗಿ ಬೇಡಿಕೊಂಡರೆ, ಅರಮನೆಯನ್ನು ಕಾಯುವ ಯಕ್ಷರಾಕ್ಷಸರು ಅವನನ್ನು ತಡೆಯುವುದಿಲ್ಲವೆಂದು ಆಕೆ ತಿಳಿಸಿದಳು.

ಯಕ್ಷಿ ಹೇಳಿದ ರೀತಿಯಲ್ಲಿಯೇ ವಿಪ್ರನು ಜಿನಾಲಯಕ್ಕೆ ಬಂದ; ಜಿನಮುನಿಗಳನ್ನು ಕಂಡು ಧರ್ಮವನ್ನು ಬೆಸಗೊಂಡು ಲಘುಕರ್ಮಿಯೆನಿಸಿ ದರ್ಶನಶುದ್ಧನೂ ಅಣುವ್ರತಧಾರಿಯೂ ಆದ. ಆನಂತರ ಋಷಿನಿವೇದಕನೊಡನೆ ಹೋಗಿ ರಘುವೀರನಿಗೆ ಗಂಧೋದಕವನ್ನು ನೀಡಿ ಸಾಷ್ಟಾಂಗವೆರಗಿ ನಿಂತ. ವ್ರತವನ್ನು ಸ್ವೀಕರಿಸಿದ್ದರಿಂದ ಅವನಿಗೆ ರಾಮನು ಮೆಚ್ಚುಗೊಟ್ಟು ಕಳಿಸಿದ. ಎರಗದೆ ಬಾಳುವೆಗೆಟ್ಟ ಕಡೆಯಲ್ಲಿಯೂ ಹೊನ್ನಿನ ಮಳೆಯನ್ನು ಸುರಿಸಿ ಪರಾರ್ಥವೃತ್ತಿಯಲ್ಲಿ ಜೀವನ ಪಾವನವಾಗಿರಲು, ಮಳೆಗಾಲದ ಸೊಂಪನ್ನೂ ಇಳಿಕೆಗ್ಯೆಯುವಂತೆ ತನ್ನ ಕೊಳಕನ್ನು ತೊಳೆದ ವಾಸುದೇವ–ಸೀತೆಯರ ಬಗ್ಗೆ ಭಕ್ತಿಯನ್ನು ಮೆರೆದ. ರಾಮಲಕ್ಷ್ಮಣರು ಆ ಯಕ್ಷನ ವಿನಯೋಪಚಾರದಿಂದ ಸಂತುಷ್ಟರಾದರು.

ಅಷ್ಟರಲ್ಲಿ ಬೇಸಗೆಯ ಬಿಸಿಲಿಗೆ ತಣ್ಣನೆ ಗಾಳಿ ಬೀಸಿ ಮೊಲ್ಲೆಗೆ ಮೊಗ್ಗುಗಳ ತೊಂಡು ಒಡೆಯಿತು; ಕೇದಗೆಗಳಲ್ಲಿ ಬಿಳಿಯ ಸುಳಿ ಮೂಡಿತು; ಚಾತಕಗಳ ಸೊಕ್ಕು ಹೆಚ್ಚಿತು; ಹಂಸಗಳಿಗೆ ರಾಗದ ಅಸ್ಥಿರತೆಯುಂಟಾಯಿತು; ನವಿಲುಗಳ ಗರಿಗಳಲ್ಲಿ ಕಣ್ಣುಗಳು ತೆರೆದುಕೊಂಡವು; ಬೆಟ್ಟ ತಂಪಾಯಿತು. ಪಶ್ಚಿಮಾನಿಲದ ಸೋಂಕಿನಿಂದ ಲತೆಗಳಲ್ಲಿ ಪರಿತಾಪ ಕಡಮೆಯಾಯಿತು, ಪುಳಕಗಳು ಹೊಮ್ಮಿದವು; ನದಿಗಳಲ್ಲಿಯೂ ಭೂಮಿಯಲ್ಲಿಯೂ ಆನಂದಾಶ್ರುಗಳು ಚಿಮ್ಮಿದವು. ಹಸುರುಗಪ್ಪಿನ ಕಡಹದ ಹೂಗಳನ್ನೂ, ಕಂಪನ್ನು ಸೂಸುವ ಲೋಧ್ರದ ಅಲರುಗಳನ್ನೂ ದುಂಬಿಗಳು ಮುತ್ತಿಕೊಂಡವು. ಹೀಗೆ ಮಳೆಗಾಲದ ಬರವು ಅಖಿಲಜನ ಮನೋವಿಕಾಸಕ್ಕೆ ಅನುವು ಮಾಡಿತು. ಆಗಸದಲ್ಲಿ ನೆರವಿಗಟ್ಟಿದ ಮೋಡಗಳ ಅಲೆಗಳು ಊರಿನ ಉದ್ಯಾನವನ್ನು ನೋಡಲೆಂದು ಬಂದವೋ, ನೀಲಪರ್ವತಗಳು ತಮಗಾದ ಪರಿಭವವನ್ನು ನೀಗಿಸಿಕೊಳ್ಳಲು ಇಂದ್ರನ ಮೇಲೆ ದಂಡೆತ್ತಿ ಹೊರಟವೋ, ಬಡಬದ ಭೀತಿಯಿಂದ ಕಡಲು ಆಕಾಶದ ಶರಣು ಹೊಕ್ಕಿರುವುದೋ ಎಂಬಂತೆ ಕಾಣುತ್ತಿದ್ದವು. ಪಡುವಣ ಕಡಲಿಂದ ಬಡಬಾಗ್ನಿಯ ಕಿಡಿಗಳ ಸಮೇತ ಹೊಗೆ ಹೊಮ್ಮಿದಂತೆ ದಟ್ಟವಾದ ನೀಲ ನೀರದನಿವಹದ ನಡುವೆ ಕುಡಿಮಿಂಚುಗಳು ಹೊಳೆದವು. ಹೊತ್ತುರಿವ ಬಡಬಾಗ್ನಿಯ ಹೊಗೆ ಆವರಿಸಲು ಪಡುವಣ ಕಡಲಿನಲ್ಲಿರಲಾರದೆ ಉಮ್ಮಳದಿಂದ ಕಪ್ಪಾಗಿ, ನೀರು ಕುಡಿದು ದಪ್ಪಗಾದ ಆನೆಗಳ ಹಿಂಡು ಹೋಗುತ್ತಿವೆಯೋ ಎಂಬಂತೆ ಮೋಡಗಳ ರಾಶಿ ತೋರಿದವು.

ಮೇಘಕಾಲವು ಬರಲು ಆಗಸಗೃಹದ ಬಾಗಿಲಲ್ಲಿ ತೋರಣ ಕಟ್ಟಿದಂತೆ, ಅಥವಾ ದಿಗ್ದೇವಿಯು ಪಂಚರತ್ನಗಳ ಕಂಠೀಹಾರವನ್ನು ಧರಿಸಿದಳೆಂಬಂತೆ, ಅಥವಾ ಹೊಸ ಮೋಡವೆಂಬ ಮದಗಜಕ್ಕೆ ಹಗ್ಗ ಕಟ್ಟಿದ ಹಾಗೆ ಬಣ್ಣಬಣ್ಣದ ಕಾಮನಬಿಲ್ಲು ಆಗಸದಲ್ಲಿ ಮೈದೋರಿತು. ವಸುಧಾವಲ್ಲಭೆಯು ಮೇಘಕಾಲನೊಡನೆ ಸಂಭೋಗ ಮಾಡುವಾಗಿನ

ತಿಕ್ಕಾಟದಲ್ಲಿ ಬಣ್ಣಸರವು ಹರಿದು ಮುತ್ತುಗಳೂ ಕೆಂಪು ಹರಳುಗಳೂ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆಯೋ ಎಂಬಂತೆ ಆಲಿಕಲ್ಲುಗಳೂ ಕೆಂಪು ಮಳೆಹುಳುಗಳೂ ಸೂಸಿದವು. ಪಶ್ಚಿಮಾನಿಲನು ಬೀಸಿದಾಗ ರಾಗವು ಉತ್ಕಟವಾಗಿ ಚಾತಕಗಳು ತಮ್ಮ ಒಣಗಿದ ಕೊಕ್ಕನ್ನು ತೆರೆದು, ರೆಕ್ಕೆಗಳನ್ನು ಬಿಚ್ಚಿಕೊಂಡು, ವಿಯತ್ತಳಕ್ಕೆ ಕಂಠವನ್ನೆತ್ತಿ, ಮೋಡಗಳಿಂದ ಬಿದ್ದ ಮಳೆಯ ಹನಿಗಳನ್ನು ಹೀರಿ ಸಂತಸದಿಂದ ಉಬ್ಬಿದವು. ಆಗಸದಲ್ಲಿ ಚಿತ್ತರಗೊಂಡ ಕುಡಿಮಿಂಚುಗಳು ಚಾತಕಗಳಿಗೆ ಪ್ರೇಮದ ಬಳ್ಳಿಯಂತೆ, ಸೋಗೆನವಿಲಿಗೆ ಕಾಂಚನದ ಚಂಚಲ ಲಾಸ್ಯದಂತೆ, ಘನಲಕ್ಷ್ಮಿಗೆ ಮೇಖಲೆಯಂತೆ, ಜಾರರ ಆಗಮನಕ್ಕೆ ಹಚ್ಚಿಟ್ಟ ದೀಪಮಾಲೆಯಂತೆ, ವಿಯೋಗಿಗಳಿಗೆ ಉರಿಯನ್ನು ಹೆಚ್ಚಿಸುವ ಯಂತ್ರದಂತೆ ಕಾಣಿಸಿದವು. ಸುಮ್ಮನೆ ಗರ್ಜಿಸುವ, ತಕ್ಕ ಜಾಗ ತಕ್ಕದ್ದಲ್ಲದ ಜಾಗ ಎನ್ನದೆ ಎರಗುವ ಅಸ್ಥಿರವಾದ ಮಿಂಚು ಕ್ಷಣದಲ್ಲಿ ಕಣ್ಮರೆಯಾಗುವವು; ದಾರಿಯನ್ನವು ತೋರಿಸಲಾರವು.

ದಿಗಂಚಿನಲ್ಲಿ ಗುಡುಗಿನ ಗಂಭೀರನಾದವು ಗರ್ಭಿಣಿಯಾದ ಆಶಾವಧುವಿನ ಪುಂಸವನಸಮಯದಲ್ಲಿ ಕೇಳಿಬರುವ ತೂರ್ಯಸ್ವನದಂತೆ; ಬೆಳ್ಳಕ್ಕಿಗಳಿಗೆ ಮಾಂಗಲ್ಯವರ್ಧನವಾಗಲು ಬಾಜಿಸುವ ನಗಾರಿಯಂತೆ; ದೂರದ ಜಾಗದಲ್ಲಿ ವೈಡೂರ್ಯರತ್ನವು ಹುಟ್ಟಿದಾಗ ಆದ ಆನಂದಭೇರೀರವದಂತೆ ಕೇಳಿಸಿತು. ಪ್ರಿಯವಿರಹಾಲಂಬಿನಿಯರಾದ ಕಳಹಂಸಗಳು ತಮ್ಮ ಮನ ಗಮನಗಳಲ್ಲಿ ಗುಡುಗಿನ ಸದ್ದು ಉಂಟುಮಾಡಿದ ಭಯವನ್ನು ನೆನಪಿಸಿದವು. ತೋರಕಿಡಿಗಳನ್ನುಗುಳುತ್ತ, ಭೂಮಿಯ ಮೇಲೆ ಕಾಲನ್ನೂರಿ, ಆಗಸದ ವಿಸ್ತಾರವನ್ನೆಲ್ಲ ವ್ಯಾಪಿಸುವಂತೆ ಮೋಡಗಳೆಂಬ ಕೂದಲನ್ನು ಬಿರಿಹುಯ್ದುಕೊಂಡು, ಮಿಂಚುಗಳೆಂಬ ಹೊಳೆಯುವ ದಾಡೆಗಳನ್ನು ಚಾಚಿಕೊಂಡು, ಸೂರ್ಯಚಂದ್ರರನ್ನು ನುಂಗಿ ಬೇಸಗೆಯನ್ನು ಬೆಚ್ಚಿಸುವ ಮಳೆಯೆಂಬ ಕಾಳಾಸುರನು ಗರ್ಜಿಸುತ್ತ ಬಂದ. ಮದಿರೆಯ ಅಮಲೇರಿದ ಜನಸಮೂಹದ ಆಶಯದಂತೆ ಸರೋವರಗಳು ಅಲ್ಲೋಲಕಲ್ಲೋಲಗೊಂಡವು; ಮನೋಜನ ದೀಪಗಳೆಂಬ ಮೊಗ್ಗುಗಳಂತೆ ಕಾನನವು ಕರಗಿತು; ವಿರೋಧಿಗಳ ಸೈನ್ಯದಂತೆ ಪ್ರವಾಹವು ಅನುಕೂಲಕರ ಮಾರ್ಗಗಳ ಮೇರೆ ಮೀರಿತು; ಮಳೆಗಾಲವಿದೇನು ಅತಿಶಯವಾಯಿತೋ! ಅಲುಗಾಡುವ ತನ್ನ ಮೋಡಗಳ ಹಾರದಿಂದ ನವವಿಧವಾದ ಕಣ್ಣ ಹೊಳಪು ರಂಜಿಸಲು, ಗುಡುಗಿನ ಸದ್ದಿನಿಂದ ನವಿಲುಗಳು ಕುಣಿಯಲು, ಕೇತಕೀಧವಳಕಟಾಕ್ಷೆಯಾದ ಘನಾಘನಲಕ್ಷ್ಮಿಯು ರಸಮಗ್ನತೆಯಿಂದ ಪುಳಕಗೊಂಡು ಮಿಂಚುಗಳ ಗೊಂಚಲೆಂಬ ಸುವರ್ಣಮಾಲೆಯನ್ನು ನೀಡಿದಳು.

ಇನಿದಾದ ಒಗರ ರುಚಿಯಿಂದ ಕೂಡಿ, ನೀಲಗೆಂಪು ಬಣ್ಣದಿಂದ ನುಣುಪಾದ ನೇರಿಳೆಯ ಹಣ್ಣುಗಳು ಅರಗಿಳಿಗಳ ಒಲವನ್ನು ತೊಲಗಿಸಿತು. ಮಾವಿನ ಮರಗಳಲ್ಲಿ ಹಣ್ಣುಗಳು ಬರಿದಾಗಲು, ನೇರಿಳೆಯ ಹಣ್ಣನ್ನು ಸವಿಯುವ ಉತ್ಸಾಹದಿಂದ ಗಿಳಿ ತನ್ನ ಸ್ವಭಾವವನ್ನು ಮರೆತು ಪ್ರೌಢಿಯನ್ನು ಮೆರೆಯಿತು; ಮಾವಿನ ಚಿಗುರಿನ ಸವಿಯಿಂದ ವಂಚಿತವಾಗಿ ವ್ಯಾಕುಲಗೊಂಡ ಕೋಗಿಲೆಯು ಹಟಮಾರಿತನದಿಂದ ಮೌನವನ್ನಾಶ್ರಯಿಸಿತು. ಮಳೆಗಾಲದಲ್ಲಿ ಹಸುರು ಹುಲ್ಲನ್ನು ಮೇದು ಹೊಟ್ಟೆಯಲ್ಲಿ ಜಾಗವೇ ಇಲ್ಲದಂತಾಗಲು, ಕುಸಿಯುವ ಹಾಗೆ ಹಾಲಿನಿಂದ ತುಂಬಿ ಉಬ್ಬಿದ ಕೆಚ್ಚಲನ್ನು ಕರುಗಳು ಹೀರುತ್ತಿರಲು, ಕಣ್ಣುಗಳನ್ನು ಅರೆ ಮುಚ್ಚಿಕೊಂಡು, ಕಟವಾಯಿಯಲ್ಲಿ ನೊರೆ

ಜಿನುಗುತ್ತಿರಲು, ಹೊದರಡಿ ಕಾಡ ಎಮ್ಮೆಗಳು ನಿಂತವು. ಸುರಿಯುವ ಮಳೆಗೆ ಹೆದರಿ, ಸ್ವಲ್ಪ ಮೇದು ಗಿರಿಕಂದರಗಳಲ್ಲಿ ಸಂಗ್ರಹಿಸಿಟ್ಟ ಗರಿಕೆಯನ್ನು ಜಿಂಕೆಗಳು ತಮ್ಮ ಮರಿಗಳಿಗೆಂದು ಕೊಂಡೊಯ್ದವು. ಭೋರೆಂದು ಬೀಳುವ ಜಲಧಾರೆಗಳಲ್ಲಿ ಗಂಡು ಹೆಣ್ಣು ಆನೆಗಳು ನೀರನ್ನು ತೂರುವ ಆಟದಲ್ಲಿ ಮಗ್ನವಾದವು. ಮನ್ಮಥನು ವಿರಹಿಗಳಿಗೆ ಉಂಟುಮಾಡಿದ ಮಾರಣ ಹೋಮಧೂಮಪಟಲಗಳ ಹಾಗೆಯೂ, ರತಿಯು ನೀರೆರೆದು ಬೆಳಸಿದ ಹೊಂಗೆಯ ತೋಪಿನ ಹಾಗೆಯೂ ಕಪ್ಪು ಮೋಡಗಳು ಆಗಸದಲ್ಲಿ ನೆರೆದವು. "ಕಾಮನು ಮೊಲ್ಲೆಯ ಹೂಗಳಿಂದ ತಿವಿಯುತ್ತಿದ್ದಾನೆ, ವಿರಹಿಗಳೇ, ಒಂದಾಗಿ" ಎಂದು ಕೂಗಿಕೊಳ್ಳುಂತೆ ಸೋಗೆಗಳು ಕೇಕೆ ಹಾಕಿದವು. ಕುಡುಮಿಂಚಿನ ಕೈದೀವಿಗೆಯನ್ನು ಹಿಡಿದು ಕೇದಗೆ ಹೂವಿನ ಗರಿಗಳಿಂದ ವಿರಹಿಗಳ ಮೇಲೆ ಕ್ರೂರಿಯಾದ ಮನ್ಮಥನು ಬಾಣಪ್ರಯೋಗ ಮಾಡುತ್ತಾನೆ; ಮನ್ಮಥನು ತಾವರೆ ದಂಟುಗಳ ಹೆದೆಯನ್ನೂ, ಹೂವಿನ ಬಾಣಗಳನ್ನೂ, ಕಬ್ಬಿನ ಬಿಲ್ಲನ್ನೂ ಒಲ್ಲದೆ ಕಾಮನಬಿಲ್ಲಿನಿಂದಲೇ ವಿರಹಿಗಳ ಮೇಲೆ ದಾಳಿಗೈದು ಸಂತೋಷಿಸುತ್ತಾನೆ!

ತೀವ್ರವಾದ ಮಳೆಗಾಲವು ಮುಗಿದು ಶರತ್ಕಾಲವು ಪ್ರವೇಶಿಸಲು, ಮೊಲ್ಲೆಯ ಮೊಗ್ಗುಗಳು ಪಲ್ಲಟಗೊಂಡವು, ಗಿರಿಮಲ್ಲಿಗೆಯು ಹೂವಿಲ್ಲದೆ ಬರಿದಾಯಿತು, ಕದಂಬವೃಕ್ಷಗಳ ಮುಖ ವಿವರ್ಣಗೊಂಡವು, ಚಾತಕಗಳು ಹೊಸ ನೀರನ್ನು ಕುಡಿಯುವ ವ್ರತವನ್ನು ಕೈಗೊಂಡವು, ಸೋಗೆನವಿಲುಗಳು ಕುಣಿದು ದಣಿದವು, ಹಂಸಮಂಡಲಿಯು ತಾವರೆಯ ದಂಟನ್ನು ತಿಂದು ಕೊಬ್ಬಿತು, ನಿರ್ಝರಗಳು ಗಿರಿದರಿವನಗಳಿಗೆ ಅಭಿಷೇಕ ಮಾಡಿದವು, ಹೊನ್ನಮರಗಳು ಹೊಸ ಚಿಗುರಿನಿಂದ ಕಂಗೊಳಿಸಿದವು, ಹೊಂದಾವರೆಯಲ್ಲಿ ದಟ್ಟೈಸಿದ ಮಕರಂದವು ದುಂಬಿಗಳಿಗೆ ಆಹ್ವಾನ ಕಳಿಸಿತು. ಕುಡಿಮಿಂಚಿನ ನಾಲಗೆಗಳುಳ್ಳ ಮಳೆಗಾಲವೆಂಬ ವಿಷಸರ್ಪವು ಆಕಾಶವೆಂಬ ಪೊದರಿನಲ್ಲಿ ಪೊರೆಯನ್ನು ಕಳಚಿ ಹೋದ ಹಾಗೆ ಬಿಳಿಯ ಮೋಡಗಳು ಪಸರಿಸಿದವು. ರಾತ್ರಿ ಚಂದ್ರನೊಡನೆಯೇ ಹೋಗದ ಶರತ್ಕಾಲದ ಬೆಳುದಿಂಗಳು ಸೂರ್ಯನ ಬಿಸಿಲಿನಿಂದ ಕೆನೆಗಟ್ಟಿದ ಹಾಗೆ ಮುಗಿಲು ಆಗಸಕ್ಕೆ ಮೆತ್ತಿಕೊಂಡವು. ಮೀನ ಮೇಷ ವೃಷಭಗಳನ್ನು ಒಲ್ಲದೆ ಕನ್ಯಾರಾಶಿಯೊಡನೆ ಸೇರಿ ತನ್ನ ತೇಜಸ್ಸು ಮಸುಳಿಸಲು, ಏನು ಮಾಡಲಿ ಎಂದು ತುಲವನ್ನೇರಿ ಸೂರ್ಯನು ಭೂವಲಯಕ್ಕೆ ರಂಜನೆಯುಂಟುಮಾಡಿದ. ಚಂದ್ರಕಿರಣಗಳು ಮೆತ್ತಿಕೊಂಡ ಕೊಕ್ಕುಗಳುಳ್ಳ ಚಕೋರಗಳು ಕಡಲಲ್ಲಿ ಈಸಾಡುವ ಮೀನುಗಳಂತೆ ಶರತ್ಕಾಲದ ಬೆಳುದಿಂಗಳಲ್ಲಿ ಸುಳಿದಾಡಿದವು. ಸುತ್ತಮುತ್ತ ಓಡಾಡುತ್ತ ಕಾಲನ್ನು ಹಿಡಿದು ಆಟವಾಡುತ್ತ ಬಂದು ತಾಯ ಮೊಲವಾಲನುಣ್ಣುವ ಶಿಶುಗಳಂತೆ ಗಿಳಿಗಳು ಹಾಲುತೆನೆಯ ಬತ್ತದ ಹಾಲನ್ನುಂಡವು. ದೂರದಿಂದಲೇ ಎತ್ತರವಾಗಿ ಬೆಳೆದ ಕಾಚಿಯ ತೆನೆಗಳನ್ನು ನೋಡಿದ ಗಿಳಿಗಳ ಹಿಂಡು ಅದರಲ್ಲಿ ಸಾರವಿಲ್ಲವೆಂದು ತಿಳಿಯದೆ ಅದಕ್ಕಾಗಿ ಹಂಬಲಿಸಿದವು.

ಅತ್ಯುತ್ಸಾಹದಿಂದಲೂ ಪ್ರೀತಿಯಿಂದಲೂ ಯಕ್ಷನು ಸೇವೆಗೈಯುಲು, ಸಾಹಿತ್ಯನಟೀಶೈಲೂಷನೂ, ಅತ್ಯೂರ್ಜಿತ ಶುಭಚರಿತನೂ, ಸಜ್ಜನಾಧಾರನೂ, ಆಕಾಶಗಂಗೆಯಲ್ಲಿನ ತೆರೆಗಳಂತೆ ಮೇಲಾಡುವ ಯಶಸ್ಸುಳ್ಳ ಶ್ರೀರಾಮನು ಹರ್ಷದಿಂದಿದ್ದ.

* * * * *

# ೮. ಚಾರಣದರ್ಶನ

ಇಷ್ಟವಿಷಯಸುಖಾನುಭವವನ್ನು ಪಡೆಯುತ್ತ, ದೇವನಿರ್ಮಿತವಾದ ಆ ನಗರಿಯಲ್ಲಿ ಅಪ್ರಾಕೃತ ಮಾನಧನನಾದ ಬಲದೇವನು ಸುಖದಿಂದಿದ್ದ. ಶರತ್ಕಾಲವು ಕಳೆಯಲು ಮುಂದೆ ಹೊರಡಲು ರಾಮ ನಿಶ್ಚೈಸಿದ. ಆಗ ಯಕ್ಷನು ಶ್ರೀರಾಮನಿಗೆ ಅಮೂಲ್ಯ ಮುತ್ತಿನ ಹಾರವನ್ನೂ, ಲಕ್ಷ್ಮಣನಿಗೆ ಮಣಿಕುಂಡಲವನ್ನೂ, ಸೀತಾದೇವಿಗೆ ಚೂಡಾರತ್ನವನ್ನೂ ವೀಣಾರತ್ನವನ್ನೂ ಉಡುಗೊರೆಯಾಗಿತ್ತ, ತೊಂದರೆಯಾದಾಗ ತನ್ನನ್ನು ನೆನೆಸಿಕೊಳ್ಳಬೇಕೆಂದು ಬಿನ್ನವಿಸಿಕೊಂಡು ಸ್ವಲ್ಪದೂರ ಅವರನ್ನು ಕಳಿಸಿಕೊಟ್ಟು ಬಂದು ವೈಕುರ್ವಣಪುರವನ್ನು ಅದೃಶ್ಯಗೊಳಿಸಿ ತನ್ನರಮನೆಗೆ ನಡೆದ.

ಇತ್ತ ರಾಮಲಕ್ಷ್ಮಣರು ಅನೇಕ ದಿನಗಳ ಕಾಲ ನಿತ್ಯವೂ ಪಯಣಿಸಿ ವಿಜಯಪುರದ ಬಹಿರುದ್ಯಾನದ ಬಳಿ ಬಂದರು. ತನ್ನ ಮೊದಲಿನ ಬಿಸುಪನ್ನು ಕಳೆದುಕೊಂಡು, ಹತ್ತೂ ದಿಕ್ಕುಗಳಿಂದ ಹಿಮ್ಮೆಟ್ಟಿದ ಕಿರಣಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡು ಪಶ್ಚಿಮದ ಕೈಯಲ್ಲಿನ ಕೆಂಪು ಹರಳಿನ ಕನ್ನಡಿಯಂತೆ ಚಂಡಕಿರಣನು ಕಂಗೊಳಿಸಲು, ಉತ್ಕಂಠಿತವಾದ ಹಂಸಗಳ ಮಧುರಸ್ವನಗಳ ನಡುವೆ ರಾಮಾದಿಗಳು ಆ ಬನವನ್ನು ಹೊಕ್ಕರು. ಆ ವನದ ಅತಿಶಯ ವಿಲಾಸವನ್ನು ಸೀತೆಗೆ ತೋರಿಸುತ್ತ ಬಂದು ತಿಳಿಗೊಳವೊಂದರ ತಡಿಯಲ್ಲಿದ್ದ ಹೊಂಗೆಯ ತೋಪಿನ ಲತಾಗೃಹದಲ್ಲಿ ವಿಶ್ರಮಿಸಿಕೊಂಡರು. ಆ ಬಳ್ಳಿಮಾಡದ ನಯವಾದ ಜಾಗದಲ್ಲಿ ಲಕ್ಷ್ಮಣನು ಅತ್ತಿಗೆಗಾಗಿ ಹೂವಿನ ಎಸಳುಗಳಿಂದ ಹಾಸಿಗೆಯನ್ನು ನಿರ್ಮಿಸಿದ. ಸೌಮಿತ್ರಿಯ ನಿರತಿಶಯ ಪ್ರೀತಿಯನ್ನು ಹಾಗೆ ಹೀಗೆ ಎಂದು ವರ್ಣಿಸಲಾದೀತೇ! ರಾಮನು ನಿದ್ದೆ ಮಾಡುವಾಗ ಅವನು ಅನತಿ ದೂರದಲ್ಲಿದ್ದ ಮಾವಿನ ತೋಪೊಂದರಲ್ಲಿ ರಕ್ಷಣೆಗಾಗಿ ಎಚ್ಚೆತ್ತಿದ್ದ.

ಇನ್ನು ಇತ್ತಲಿನ ವಿಷಯ. ವಿಜಯಪುರದ ಅಧಿಪತಿ ಪೃಥ್ವೀಧರ; ಅವನ ಹೆಂಡತಿ ಇಂದ್ರಾಣಿ; ಅವರ ಮಗಳು ವನಮಾಲೆ ಎಂಬ ಬಾಲೆ. ಅವನಂತಹ ಚೆನ್ನಿಗರು ಇನ್ನಿಲ್ಲ, ಬಿಲ್ಲಾಳಿಲ್ಲ, ಕಲಿಯಿಲ್ಲ ಎಂದು ಲಕ್ಷ್ಮಣನನ್ನು ಕಂಡಿದ್ದವರು ಬಣ್ಣಿಸುವುದನ್ನು ಕೇಳಿ ಅವಳು ಅವನ ಬಗ್ಗೆ ಕಿವಿವೇಂಟಗೊಂಡಿದ್ದಳು; ತನಗೆ ಲಕ್ಷ್ಮೀಧರನೇ ಗಂಡ ಎಂದು ತೀರ್ಮಾನಿಸಿಕೊಂಡಿದ್ದಳು. ಸಹಜವೇ, ಲಕ್ಷ್ಮಣನ ಗಾಡಿಯನ್ನು ನೋಡಿದವರಾರು ತಾನೇ ಅವನಿಗೆ ಕಣ್ಸೋಲುವುದಿಲ್ಲ! ಅದಕ್ಕೆ ಅವಳ ತಾಯ್ತಂದೆಯರ ಒಪ್ಪಿಗೆಯೂ ಇತ್ತು; ಅವಳನ್ನು ಲಕ್ಷ್ಮಣನಿಗೇ ಕೊಟ್ಟು ಮದುವೆ ಮಾಡಲು ನಿಶ್ಚೈಸಿದ್ದರು. ಆದರೆ ದಶರಥನು

ದೀಕ್ಷೆ ಪಡೆದದ್ದು, ರಾಮಲಕ್ಷ್ಮಣರು ಕಾಡಿಗೆ ಹೋದದ್ದು ಅವರಿವರ ಬಾಯಿಂದ ಅವರ ಕಿವಿಯ ಮೇಲೆ ಬಿತ್ತು. ಹೀಗಾಗಿ ಮಗಳನ್ನು ಇಂದ್ರಪುರವನ್ನಾಳುವ ಸುಂದರಕುಮಾರನಿಗೆ ಮದುವೆ ಮಾಡಿಕೊಡಲು ತಾಯ್ತಂದೆಯರು ತೀರ್ಮಾನಿಸಿದರು.

ಈ ವಿಷಯವನ್ನು ತಿಳಿದ ವನಮಾಲೆಯು ವನದೇವತೆಯನ್ನು ಅರ್ಚಿಸುವ ನೆವದಿಂದ ಉಪವಾಸವನ್ನು ಕೈಗೊಂಡು ಯಾವುದೋ ಪುಣ್ಯಪ್ರೇರಣೆಯಿಂದ ಕೆಲವು ಮಂದಿ ಸಹಚರಿಯರೊಡನೆ ಲಕ್ಷ್ಮಣನಿದ್ದ ಕಡೆಗೇ ಬಂದಳು. ವನದೇವತೆಯನ್ನು ಪೂಜಿಸಿ ಜಾಗರಣೆ ಮಾಡಿದಳು. ಎಲ್ಲರೂ ನಿದ್ದೆಯಲ್ಲಿರುವಾಗ ತಾನು ಎದ್ದು ಹೊರಟಳು. ದೇಹದ ಪರಿಮಳವು ವನವನ್ನೆಲ್ಲ ಆವರಿಸಿತು, ಕಣ್ಣ ಕಾಂತಿಯು ರತ್ನಮಂಡಿತವಾದ ಎಳೆಬಿಸಿಲಂತೆ ಹರಡಿ ಕತ್ತಲನ್ನು ಹಿಮ್ಮಟ್ಟಿಸಿತು. ಹೀಗೆ ಓಡಾಡುವವಳನ್ನು ಸ್ವಲ್ಪ ದೂರದಿಂದ ಕಣ್ಣೆವೆಯಿಕ್ಕದೆ ನೋಡತೊಡಗಿದ ಲಕ್ಷ್ಮಣನಿಗೆ, ಇವಳೇನು ವನಲಕ್ಷ್ಮೀವಧುವೋ ಸುರಪ್ರಮದೆಯೋ, ವಿದ್ಯಾಧರಸ್ತ್ರೀಯೋ ಅನ್ನಿಸಿತು. ಅವನಿಗೆ ಅಚ್ಚರಿಯೆನಿಸಿತು: ವನದಲ್ಲಿ ಈ ಬಾಲೆ, ಅದೂ ಒಬ್ಬಳೇ, ಮಧ್ಯರಾತ್ರಿ ಬೇರೆ, ಜೊತೆಗೆ ಯಾರೂ ಇಲ್ಲವಲ್ಲ, ಯಾವುದೋ ಕಾರಣದಿಂದ ಭೀತಿಗೊಂಡು ಇಲ್ಲಿಗೆ ಬಂದಿರಬಹುದೇ ಎಂಬ ಆಲೋಚನೆಗಳು ಅವನನ್ನು ಆವರಿಸಿದವು. ಇದರ ಚೂಲಮೂಲವನ್ನು ಹುಡುಕಬೇಕೆಂದು ನಿರ್ಧರಿಸಿದ ಲಕ್ಷ್ಮೀಧರನು ಅವಳ ಹಿಂದೆಯೇ ಸಾಗಿದ. ಮುಂದೆ ಸಾಗಿದ ಅವಳು ಅವನಿತಲವನ್ನು ಆಲಂಗಿಸಿದ, ಅನೇಕ ಬಿಳಲುಗಳಿಂದಾಗಿ ಕತ್ತಲು ಆವರಿಸಿದ್ದ ಒಂದು ದೊಡ್ಡ ಆಲದ ಮರದಡಿಗೆ ಹೋದಳು. ಉದ್ವೇಗವು ಏನನ್ನು ತಾನೇ ಮಾಡಿಸದು!

ಮರದಡಿ ನಿಂತ ಕನ್ನಿಕೆಯು, "ರಾಮಾನುಜನಾದ ಲಕ್ಷ್ಮಣಕುಮಾರನು ಧರ್ಮಕರ್ಮಸಂಯೋಗದಿಂದ ಈ ಕಡೆ ಬಂದರೆ, ಈ ಆಲದಲ್ಲಿ ದೇವತೆ ಯಾರಾದರೂ ವಾಸಿಸುತ್ತಿದ್ದರೆ, ಅವನಿಗೆ ಹೇಳಿ: ವನಮಾಲೆ ನಿನಗಲ್ಲದೆ ಬೇರೆಯವನ ವಧುವಾಗಲು ಸಾಧ್ಯವಿಲ್ಲ ಎಂದು ಹೇಳಿ ನೇತುಹಾಕಿಕೊಂಡು ಸತ್ತಳು" ಎಂದು ಕರುಣೆಯುಕ್ಕುವಂತೆ ಕೇಳಿಕೊಂಡಳು. ಸಾವಿಗೆ ಇಂತಿಷ್ಟೂ ಹೆದರದೆ, ತನ್ನ ಪಾಪದ ಕಾರಣದಿಂದಾಗಿ ಈ ಜನ್ಮದಲ್ಲಿ ಮನಃಪ್ರಿಯನ ಕೈಹಿಡಿಯುವ ಯೋಗವುಂಟಾಗಲಿಲ್ಲ, ಮುಂದಿನ ಹುಟ್ಟಿನಲ್ಲಾದರೂ ಲಕ್ಷ್ಮಣನೇ ತನಗೆ ಗಂಡನಾಗಲಿ ಎಂದು ಹೇಳಿಕೊಂಡ ಅವಳು ತನ್ನ ಕೊರಳಿಗೆ ಒಂದು ಬಳ್ಳಿಯ ಕುಣಿಕೆಯನ್ನು ಬಿಗಿದುಕೊಂಡಳು. ಅವಳ ಎರಡಿಲ್ಲದ ನಲ್ಮೆಯನ್ನು ಎಷ್ಟು ಹೊಗಳಿದರೂ ಸಾಲದು!

ಅವಳ ಮಾತನ್ನು ಕೇಳಿದ ಲಕ್ಷ್ಮಣನು ಓಡಿ ಬಂದ; ಅವಳು ಅರಸುತ್ತಿದ್ದ ವ್ಯಕ್ತಿ ತಾನೇ; ಇನ್ನು ಮರಣದ ಆಲೋಚನೆಯನ್ನು ಬಿಡಲು ಅವಳಿಗೆ ಹೇಳಿದ. ಅವಳು ಗುಡುಗಿನ ಸದ್ದು ಕೇಳಿದ ನವಿಲಿನಂತಾದಳು. ಸೂರ್ಯನು ತನ್ನ ಕಿರಣಗಳಿಂದ ತಾವರೆಯನ್ನು ಅಪ್ಪುವ ಹಾಗೆ ಲಕ್ಷ್ಮಣನು ಅವಳನ್ನು ಕಕ್ಕುಲತೆಯಿಂದ ತಬ್ಬಿಕೊಂಡ; ಬಳ್ಳಿಯ ನೇಣಿನಿಂದ ಅವಳನ್ನು ಬಿಡಿಸಿ ಅವಳ ರಾಗಮೋಹಗಳ ಲತಾಪಾಶಕ್ಕೆ ತನ್ನನ್ನೊಡ್ಡಿಕೊಂಡ! ತನ್ನೆದುರಿಗಿದ್ದ ಗಂಡರ ನೀರನಾದ ಅವನ ಬಗ್ಗೆ ಕೇಳಿ ಪ್ರೀತಿಸಿದ್ದ ದೇಹದ ನೀಲಕಾಂತಿ, ತಾವರೆಯೆಸಳಿನಂತಹ ಕಣ್ಣುಗಳು, ವಿಶಾಲ ವಕ್ಷಸ್ಥಳ, ನೀಳವಾದ ಬಾಹುಗಳು, ಪೀವರ ನಿತಂಬಗಳನ್ನು ವನಮಾಲೆಯು ಕಣ್ಣಾರೆ ನೋಡಿ ಅತ್ಯಂತ ಸಂಭ್ರಮಗೊಂಡಳು. ಅವಳ ಮೈ ಬೆವರಿತು,

ಲಜ್ಜೆಯಿಂದ ತಲೆ ತಗ್ಗಿತು. ನೀಳವಾದ ಉಸಿರು ಹೊಮ್ಮಿತು. ಕಣ್ಣು ಕುಡಿನೋಟವನ್ನು ಬೀರಿತು; ಹೀಗೆ ಆ ಬಾಲೆಯು ಪೀತಾಂಬರನ ಸನ್ನಿಧಿಯಲ್ಲಿದ್ದಳು. ಲಕ್ಷ್ಮಣನೂ ಅವಳೆಡೆಗೆ ನೋಡಿದ. ಇಬ್ಬರೂ ಕಣ್ಣು ಮಿಟುಕಿಸದೆ ನೋಡುತ್ತಿರಲು ಅವರಿಬ್ಬರ ಮೇಲೆ ಪುಲ್ಲಶರನು ಹೂಬಾಣಗಳ ಮಳೆಗರೆದ. ಲಕ್ಷ್ಮಣನ ಕಾರಣದಿಂದ ಸರಿ ರಾತ್ರಿ, ಯಾರೂ ಇಲ್ಲದ ಕಡೆ ಬಳ್ಳಿಯಿಂದ ನೇಣು ಬಿಗಿದುಕೊಂಡು ಅವಳು ಸಾಯಲು ಹೊರಟಾಗ, ಅವನೇ ದೈವಪ್ರೇರಣೆಯಿಂದ ಅಲ್ಲಿಗೆ ಬಂದು ಕೈಹಿಡಿದು ಸಾವಿನಿಂದ ತಪ್ಪಿಸಿದ. ಅಂದ ಮೇಲೆ ಸಾವು ಬಾರದವರನ್ನು ಕೊಲ್ಲಲು ಯಾರಿಂದಲಾದರೂ ಸಾಧ್ಯವೇ? ಲಕ್ಷ್ಮಣ ಅವಳನ್ನು ಕರೆದುಕೊಂಡು ಅಣ್ಣನಿದ್ದಲ್ಲಿಗೆ ಬಂದ.

ಈ ಕಡೆ ವನಮಾಲೆಯ ಕೆಳದಿಯರು ಶಯ್ಯಾತಳದಲ್ಲಿ ಅವಳನ್ನು ಕಾಣದೆ ಗಾಬರಿಗೊಂಡರು. ಅವಳಿಗಾಗಿ ವನದಲ್ಲೆಲ್ಲ ಹುಡುಕಾಡಿದರು. ಕೊನೆಗೆ ಅವಳಿದ್ದ ಜಾಗಕ್ಕೆ ಬಂದು, ಅವಳೊಡನಿದ್ದವರು ಮಹಾನುಭಾವರಾದ ರಾಮಲಕ್ಷ್ಮಣರೆಂದು ತಿಳಿದರು. ಈ ವಿಷಯ ಪೃಥ್ವೀಧರ ಮಹಾರಾಜನಿಗೆ ತಿಳಿಯಿತು. ತಕ್ಷಣವೇ ಊರನ್ನು ಅಷ್ಟಶೋಭೆಯಿಂದ ಅಲಂಕರಿಸಲು ಹೇಳಿ, ಚತುರಂಗಬಲಸಮೇತನಾಗಿ ಹೋಗಿ ಅವರನ್ನು ರಾಜಭವನಕ್ಕೆ ಕರೆದೊಯ್ದು ಉಪಚರಿಸಿದ. ಮುಂದೆ ಒಂದು ಶುಭದಿನ ಮುಹೂರ್ತದಲ್ಲಿ ವನಮಾಲೆ-ಚಕ್ರಪಾಣಿಯರ ಲಗ್ನ ನೆರವೇರಿತು.

ಅಷ್ಟು ಹೊತ್ತಿಗೆ, ನಂದ್ಯಾವರ್ತಪುರವನ್ನು ಆಳುತ್ತಿದ್ದ ಅತಿವೀರ್ಯನ ದೂತನೊಬ್ಬ ಬಂದು, ತಲೆಬಾಗಿ ದೂರದಲ್ಲಿ ನಿಂತು, ಒಂದು ಅಕ್ಷೌಹಿಣಿ ಬಲಸಮೇತ ತನ್ನ ಜೊತೆಯಲ್ಲಿ ಭರತನ ಮೇಲೆ ಯುದ್ಧಕ್ಕೆ ನಡೆಯಬೇಕೆಂಬ ರಾಜಾದೇಶವನ್ನು ಪೃಥ್ವೀಧರ ಮಹಾರಾಜನಿಗೆ ಅರುಹಿದ. ಕೋಪವೆಂಬ ವಿಷದ ಬಳ್ಳಿಯ ಚಿಗುರಿನಂತೆ ಹೊಳೆಯುತ್ತಿದ್ದ ಚಕ್ರಿಯ ತುಟಿಯ ಮೇಲೆ ಮೊಗ್ಗು ಮೂಡುವಂತೆ ಮುಗುಳ್ನಗೆ ಕಾಣಿಸಿತು. ಅವನು ದೂತನ ಮುಖವನ್ನು ನೋಡಿ, ಭರತನ ವಿಷಯವೇನೆಂದು ಕೇಳಿದ. ಅದಕ್ಕೆ ಆ ದೂತನು ಈ ರೀತಿ ನಿರೂಪಿಸಿದ: ತನಗೆ ಭರತನು ಆಳಾಗಿರಬೇಕೆಂದು ಅತಿವೀರ್ಯವಲ್ಲಭನು ಬೆಸಸಿ ವಿನೀತಾಪುರಕ್ಕೆ ದೂತನನ್ನು ಅಟ್ಟಿದ; ತನ್ನ ಮೇಲೆ ಕಾಳಗಕ್ಕೆ ಬರಲು ಅವನಿಗೆ ಅಸಾಧ್ಯವೆಂದೂ, ತನ್ನಲ್ಲಿ ಅಪರಿಮಿತ ಚತುರಂಗಬಲವಿರುವುದಾಗಿಯೂ ಹೆದರಿಸಿದ. ಅದನ್ನು ಕೇಳಿ ಶತ್ರುಘ್ನನು ಕೋಪಗೊಂಡ; ಕನಸಿನಲ್ಲಿಯಾದರೂ ಮನುಪ್ರಸೂತರಾದ ತಮಗೆ ಭಯಲೋಭಗಳು ಹುಟ್ಟುವುದಿಲ್ಲವೆಂದೂ, ಅಂದ ಮೇಲೆ ಅತಿವೀರ್ಯ ಯಾವ ಮಹಾ, ಅಷ್ಟು ಪರಾಕ್ರಮವಿದ್ದರೆ ಯುದ್ಧಕ್ಕೆ ಬರಲಿ, ತಾನು ಅವನ ಕೈಯಲ್ಲಿ ಬಿಲ್ಲಿನ ಬದಲು ಹುಲ್ಲು ಹಿಡಿಸುತ್ತೇನೆ ಎಂದು ಗದರಿ ದೂತನನ್ನು ಹಿಂದಕ್ಕೆ ಕಳಿಸಿದ. ಹೀಗಾಗಿ ಭರತನ ಮೇಲೆ ಅತಿವೀರ್ಯನು ಸಂಗರಕ್ಕೆ ಮೇಲೆತ್ತಿ ಹೊರಟ. ಭರತನ ಮೇಲೆ ಅತಿವೀರ್ಯನು ಯುದ್ಧಕ್ಕೆ ಬಂದ ಎಂಬುದೇ ಪರಾಭವ; ಪರಾಭವ ಎಂದರೆ ಬೇರೆ ಕೋಡಿರುತ್ತದೆಯೇ, ಎಂದು ನಿಶ್ಚೈಸಿದ ಭರತನು ಶತ್ರುಘ್ನಸಮೇತನಾಗಿ ನಂದ್ಯಾಪುರದತ್ತ ಹೊರಟ. ಆ ಸಮಯದಲ್ಲಿ ಮಿಥಿಲೆಯ ರಾಜ ಕನಕನೂ, ಉಜ್ಜಯಿನಿಯನ್ನಾಳುವ ಸಿಂಹೋದರನೂ ತಮ್ಮ ಅಸಂಖ್ಯಾತ ಬಲದೊಡನೆ ಭರತನನ್ನು ಸೇರಿದರು. ಈ ಕಡೆ ತನ್ನ ದೂತನಿಗಾದ ಅವಮಾನವನ್ನು ಕೇಳಿ ಗುಡುಗಿನ ಸದ್ದು ಕೇಳಿ ಕೋಪಗೊಳ್ಳುವ ಸಿಂಹದಂತಾದ

ಅತಿವೀರ್ಯನು ಭರತನಿಗೆದುರಾಗಿ ಸೈನ್ಯಸಮೇತ ಹೊರಟಿದ್ದಾನೆ ಎಂದು ವಾಯುಗತಿ ಎಂಬ ಹೆಸರಿನ ಆ ದೂತನು ನಿರೂಪಿಸಿದ.

ಈ ವಾರ್ತೆಯನ್ನು ಕೇಳಿದ ಪೃಥ್ವೀಧರನು ಆ ದೂತನನ್ನು ಮನ್ನಿಸಿ ಕಳಿಸಿದ. ಆನಂತರ ರಾಘವನ ಕಡೆ ತಿರುಗಿ, ತಾನು ಹೋಗಿ ಕಾಳಗವನ್ನು ನಿಲ್ಲಿಸುವುದಾಗಿ ಹೇಳಿದ. ಆಗ ಲಕ್ಷ್ಮಣನು ಅದನ್ನು ಮಾಡಲು ತಾನೇ ಸಾಕು ಎಂದು ಮನಃಪವನವೇಗದ ಕುದುರೆಗಳನ್ನು ಕಟ್ಟಿದ ರಥಗಳನ್ನು ತರಿಸಿದ. ಮೂವರೂ ಅವುಗಳನ್ನೇರಿ ನಂದ್ಯಾವರ್ತ ನಗರದ ಹೊರವಲಯದಲ್ಲಿ ಬೀಡುಬಿಟ್ಟರು. ಆಗ ಸೀತೆಯು, "ಅತಿವೀರ್ಯನ ಶೌರ್ಯವನ್ನು ಭರತನೇ ಎದುರಿಸಬಲ್ಲ; ಆದರೆ ಯುದ್ಧಕ್ಕೆ ಮುಂಚೆಯೇ ಅವನನ್ನು ಹತಪ್ರಭನನ್ನಾಗಿ ಮಾಡಿ" ಎಂದು ಸಲಹೆಯಿತ್ತಳು. ಆಗ ಲಕ್ಷ್ಮಣನು ತನ್ನ ಕರಸರೋಜಗಳನ್ನು ಮುಗಿದು, "ತಾಯೇ, ಅದಾವ ಮಹಾ! ಬರಿಗೈಯಿಂದಲೇ ಅವನನ್ನು ಮನೆದೊತ್ತಿನ ಹಾಗೆ ಹಿಡಿದು ತಂದು ಅಣ್ಣನ ಕಾಲಿಗೆರಗಿಸುತ್ತೇನೆ" ಎಂದು ಭರವಸೆಯಿತ್ತ. ರಾಮನು, "ಅತಿವೀರ್ಯನನ್ನು ಗೆಲ್ಲುವುದು ಭರತನಿಗಾವ ದೊಡ್ಡ ವಿಷಯ?" ಎಂದ. ಅದಕ್ಕುತ್ತರವಾಗಿ ಲಕ್ಷ್ಮಣನು, "ಅಕಸ್ಮಾತ್ ಭರತನೇನಾದರೂ ಸೋತರೆ ನಮ್ಮ ಕುಲಕ್ಕೇ ಅವಮಾನವಲ್ಲವೇ?" ಎಂದು ಹೇಳಿದ. ಆಗ ರಾಮನು ಹೇಳಿದ್ದು: "ಇವತ್ತಿಗೆ ಮೂರನೆಯ ದಿನದಂದು ಶತ್ರುಘ್ನನು ನಂದ್ಯಾವರ್ತಪುರದ ಮೇಲೆ ದಾಳಿ ಮಾಡಿ, ಹಲವರು ರಾಜಕುಮಾರರನ್ನು ಕೊಂದು, ಊರಿನ ಹೊರವಲಯದಲ್ಲಿನ ಏಳುನೂರ ಆರು ಆನೆಗಳನ್ನೂ ಅರವತ್ತು ಸಾವಿರ ಕುದುರೆಗಳನ್ನೂ ಹಿಡಿದುಕೊಂಡು ಹೋಗುವನು."

ಮಾರನೆಯ ದಿನ ಅವರು ಊರೊಳಗೆ ಹೋದರು; ಲಕ್ಷ್ಮಣನು ಸೀತೆರಾಮರನ್ನು ಒಂದು ಜಿನಾಲಯದಲ್ಲಿರಿಸಿ ಬಂದ. ಧನುಸ್ಸನ್ನಾಗಲೀ ದಿವ್ಯಾಸ್ತ್ರಗಳನ್ನಾಗಲೀ ಗದೆಯನ್ನಾಗಲೀ ಧರಿಸದೆ ಏಕಾಂಗಿಯಾಗಿ ತನ್ನ ದುರ್ಧರ ಬಾಹುಗಳನ್ನೇ ನೆಮ್ಮಿಕೊಂಡ ಜನಾರ್ದನನು ಅತಿವೀರ್ಯನು ಅದಟ ಅತಿಪ್ರಚಂಡಬಲ ಎಂಬುದನ್ನು ಗಣಿಸದೆ ಅವನ ಅರಮನೆಯ ಬಳಿಗೆ ಪಾಶದಂಡಗಳಿಲ್ಲದ ಯಮನಂತೆ ಬಂದು ನಿಂತ. ಅರಮನೆಯ ಬಾಗಿಲಲ್ಲಿ ಭರತನ ದೂತನೊಬ್ಬ ಬಂದು ನಿಂತಿದ್ದಾನೆ ಎಂಬ ವಿಷಯ ಪಡಿಯರನೊಬ್ಬನಿಂದ ಅತಿವೀರ್ಯನಿಗೆ ತಿಳಿಯಿತು. ಬರಸಿಡಿಲನ್ನು ಆಹ್ವಾನಿಸುವಂತತೆ ಅವನನ್ನು ಕರೆತರಲು ಹೇಳಿದ. ಲಕ್ಷ್ಮಣನು ಬಂದು ಎರಗದೆ ವಜ್ರಸ್ತಂಭದ ಹಾಗೆ ಸೆಟೆದು ಅವನೆದುರು ನಿಂತ. ಕೋಪದಿಂದ ಕಣ್ಣರಳಿಸಿಕೊಂಡು ಅತಿವೀರ್ಯನು ಬಂದ ಕಾರಣವೇನೆಂದು ಕೇಳಿದ. ಆಗ ಗಭೀರರವದಿಂದ ಲಕ್ಷ್ಮೀಧರನು ಹೀಗೆಂದ: "ಭರತೇಶ್ವರನು ನಿನ್ನ ಮೇಲೆ ದಂಡೆತ್ತಿ ಬರುತ್ತಿದ್ದಾನೆ; ಅವನನ್ನೆದುರಿಸಲು ಯಾರಿಂದ ತಾನೇ ಸಾಧ್ಯ? ಅವನ ಆಜ್ಞೆಯನ್ನು ತಲೆಯಲ್ಲಿ ಧರಿಸಿ ನಮಸ್ಕಾರಪೂರ್ವಕವಾಗಿ ಕಪ್ಪವನ್ನು ತೆತ್ತು ಬದುಕಿಕೋ; ಎದುರು ನಿಲ್ಲದೆ ಅವನ ಸೇವೆಗೆ ನಿಲ್ಲುವುದು ಕ್ಷೇಮಕರ; ಇಲ್ಲದಿದ್ದರೆ ನಿನ್ನ ಆಯುಸ್ಸು ಈ ಕ್ಷಣದಿಂದಲೇ ಕ್ಷಯಿಸುತ್ತದೆ. ಆಳಾಗಿ ಬದುಕದೆ ಬಿಲ್ಲಾಳಾಗಿ ಎದುರಿಸ ಹೊರಟ ನೃಪಕಂಠಗಳನ್ನು ಭರತನ ಹರಿತವಾದ ಕತ್ತಿಯ ಅಲಗು ಕೋಮಲವಾದ ತಾವರೆದಂಟುಗಳನ್ನೆಂತೋ ಅಂತೆ ಕತ್ತರಿಸಿಬಿಡುತ್ತದೆ."

ಈ ಮಾತುಗಳನ್ನು ಕೇಳಿದ ಅತಿವೀರ್ಯನು ಕಡುಮುಳಿದ. ಸಿಡಿಲ ದನಿಯನ್ನು ಕೇಳಿದ

ಸಿಂಹದಂತೆ ಗಜರಿ, ತನ್ನ ಕತ್ತಿಯನ್ನು ಝಳಪಿಸಿ ಬೀಸಿದ. ಅದನ್ನು ಲಕ್ಷ್ಮಣನು ಬಿಗಿಯಾಗಿ ಹಿಡಿದುಕೊಂಡು ಅವನ ಕೈಯ ಕತ್ತಿ ಕಳಚಿ ಬೀಳುವಂತೆ ಮಾಡಿದ; ಅತಿವೀರ್ಯನ ಕಂಠವು ಬಿಸುಪಾದ ನೆತ್ತರನ್ನು ಕಾರಿಕೊಂಡಿತು; ಮತ್ತೊಂದು ಕೈಯಿಂದ ಅವನ ಮೂತಿಯು ಜಜ್ಜಿಹೋಗುವಂತೆ ಬಲವಾಗಿ ಗುದ್ದಿದ. ಅಬ್ಬಾ, ಅವನೆಂಥ ಅಲಂಘ್ಯಬಲ! ಹಾಗೆ ಮಾಡಿದವನೇ, ಭರತನನ್ನು ಎದುರಿಸಲು ಬಂದವರೊಡನೆ ಹೋದರೆ ಕಾಡಾನೆಯು ತಾವರೆಯನ್ನು ಕೀಳುವಂತೆ ಅವನ ತಲೆಯನ್ನು ಕಿತ್ತುಬಿಡುವುದಾಗಿ ಎಚ್ಚರಿಸಿದ. ಅತಿವೀರ್ಯನೊಡನೆ ಸೇರಲೆಂದು ಅಲ್ಲಿ ನೆರೆದಿದ್ದ ಇತರ ರಾಜರುಗಳಲ್ಲಿಯೂ ಲಕ್ಷ್ಮಣನು ಅಜೇಯನೆಂಬ ಭಾವನೆ ಮೂಡಿತು. ಅವರೆಲ್ಲ ಹಾವು ಮೇಲೆ ಬಿದ್ದ ಅಂಜುಬುರುಕರಂತೆ ಹೌಹಾರಿದರು. "ಅತಿವೀರ್ಯನು ಹತವೀರ್ಯನಾಗಿದ್ದಾನೆ; ಇವನನ್ನು ನಾನು ಎಳೆದುಕೊಂಡು ಹೋಗುತ್ತೇನೆ: ಧೈರ್ಯವುಳ್ಳವರು ಇದ್ದರೆ ಅಡ್ಡಿಪಡಿಸಬಹುದು" ಎಂದು ಗರ್ಜಿಸಿ ಜನಾರ್ದನನು ಎಳೆದುಯ್ದ; ಎದುರಾದ ಸಾಮಂತರನ್ನು ತನ್ನ ಕೈ ಕಾಲು ತಲೆಗಳಿಂದ ಹೊಡೆಯುತ್ತ ಚದುರಿಸಿದ. "ಓಹೋಹೋ, ಇವನು ಭರತನನ್ನು ಎದುರಿಸುವನಲ್ಲವೇ? ರಣಕ್ರೀಡಾಸಕ್ತನಲ್ಲವೇ? ಸಾಕೇತ ಪುರದ ಅಧಿರಾಜನಾಗಬೇಕೆಂಬ ಆಸೆಯುಳ್ಳವನಲ್ಲವೇ? ಬೆದರಿಕೆಯ ಪತ್ರವನ್ನು ಕಳಿಸುತ್ತಾನಲ್ಲವೇ?" ಎಂದು ಹಂಗಿಸುತ್ತ ಶತ್ರುಂಜಯನಾದ ಸೌಮಿತ್ರಿಯು ಅತಿವೀರ್ಯನನ್ನು ಕೋತಿಯಂತೆ ಎಳೆದು ತಂದು ಭರತನ ಪಾದಗಳತ್ತ ದೂಡಿದ.

ಏನು ಹೇಳುವುದು, ಬಲಿಷ್ಠನಿಗಿಂತ ದೊಡ್ಡ ಕೃಪಾಳು ಯಾರಿದ್ದಾರು? ಅವನನ್ನು ಕಂಡ ಭರತನು ರೋಷಾವೇಶಕ್ಕೊಳಗಾಗದೆ ಅವನನ್ನು ನಂದ್ಯಾವರ್ತದ ಅಧಿಪತಿಯಾಗಿ ಮಾಡಿದ. ಆಗ ಅತಿವೀರ್ಯನು ರಾಮಲಕ್ಷ್ಮಣರ ಕಾಲಿಗೆ ಬಿದ್ದು, ತನಗೆ ಅರಸುತನದ ಮೇಲಿನ ವ್ಯಾಮೋಹ ಹೊರಟುಹೋಗಿದೆಯೆಂದೂ, ರಾಜ್ಯವನ್ನು ಬೇಕಾದವರಿಗೆ ನೀಡಬಹುದೆಂದೂ ಅವರ ಕ್ಷಮೆ ಕೋರಿದ. ಆನಂತರ ನಿಶ್ಚಲಮನಸ್ಕನಾಗಿ ಹೋಗಿ ಶ್ರುತಧಾರಣ ಭಟ್ಟಾರಕರ ಪದಪಾರ್ಶ್ವದಲ್ಲಿ ವೈರಾಗ್ಯದ ಪೆರ್ಚಿನಿಂದ ದೀಕ್ಷೆ ಪಡೆದ. ಆಗ ರಾಮನು ಅವನ ಮಗನಾದ ವಿಜಯರಥನಿಗೆ ಪಟ್ಟಕಟ್ಟಿದ. ಅವನ ತಂಗಿ ರತಿಮಾಲೆಯೊಡನೆ ಲಕ್ಷ್ಮಣನ ವಿವಾಹ ನೆರವೇರಿತು.

ಆನಂತರ ಸೀತಾರಾಮಲಕ್ಷ್ಮಣರು ನಂದ್ಯಾವರ್ತ ನಗರವನ್ನು ಬಿಟ್ಟು ಹೊರಟರು; ಅನೇಕ ದಿನಗಳ ಪ್ರಯಾಣದ ಬಳಿಕ ಕ್ಷೇಮಾಂಜಲಿಪುರವನ್ನು ಸೇರಿದರು. ಆ ಊರಿನ ಹೊರವಲಯದ ಮನೋಹರವಾದ ಉದ್ಯಾನವನದಲ್ಲಿ ಬೀಡುಬಿಟ್ಟರು. ಲಕ್ಷ್ಮಣನು ತಾನೊಬ್ಬನೇ ಊರನ್ನು ನೋಡಲು ಹೊರಟ. ದಾರಿಯಲ್ಲಿ ಹಲವರು ಸೇರಿ ಜಿತಪದ್ಮೆ ಎಂಬುವವಳ ಬಗ್ಗೆ ಮಾತಾಡಿಕೊಳ್ಳುತ್ತಿರುವುದು ಅವನ ಕಿವಿಗೆ ಬಿತ್ತು. ಅವಳು ಯಾರು ಎಂದು ಲಕ್ಷ್ಮಣನು ವಿಚಾರಿಸಿದಾಗ ಅವನ ಸಮುದ್ರಘೋಷದಂತಹ ಗಂಭೀರ ಧ್ವನಿಯನ್ನು ಕೇಳಿ, ಇವನು ಕಾರಣಪುರುಷನಿರಬೇಕೆಂದು ಅಲ್ಲಿದ್ದವರಿಗನ್ನಿಸಿತು. ಅವರಲ್ಲಿ ಒಬ್ಬ ಹಿರಿಯನು ಹೀಗೆಂದ: "ಈ ಊರಿನ ರಾಜ ಶತ್ರುಂದಮ; ಅವನ ಅರಸಿ ಕನಕಾಭೆ; ಅವರ ಮಗಳೇ ರತಿಯಂತಹ ರೂಪಿನ ಜಿತಪದ್ಮೆ. ಅವಳು ಹುಟ್ಟಿದಾಕ್ಷಣವೇ ಅರಮನೆಯ ಶಸ್ತ್ರಶಾಲೆಯಲ್ಲಿ ಒಂದು ಶಕ್ತಿಯೂ ಹುಟ್ಟಿತು. ಆಗ ಒಂದು ಅಶರೀರವಾಣಿಯಾಗಿ,

ದೇವತಾಧಿಷ್ಠಿತವಾದ ಆ ಶಕ್ತಿಯಿಂದ ಹೊಡೆದಾಗ ಅದನ್ನು ನಿಶ್ಚಲನಾಗಿ ಅಡಗಿಸುವ ಮಹಾಸತ್ವನೇ ಈ ಕನ್ನಿಕೆಗೂ ದಕ್ಷಿಣ ಭರತ ದೇಶಕ್ಕೂ ಒಡೆಯನಾಗುವನೆಂದು ಭವಿಷ್ಯ ನುಡಿಯಿತು. ಅದಕ್ಕನುಗುಣವಾಗಿಯೇ ಮಗಳ ಮದುವೆ ಮಾಡಲು ರಾಜನು ನಿಶ್ಚೈಸಿದ. ಆದರೆ ಕನ್ಯಾಲೋಭದಿಂದ ಅನೇಕ ರಾಜಕುಮಾರರು ಬಂದು ಈ ಶಕ್ತ್ಯಾಯುಧದ ಹೊಡೆತದಿಂದ ಸತ್ತರು."

ಇದನ್ನು ಕೇಳಿದ ಲಕ್ಷ್ಮಣನು ನೇರವಾಗಿ ಅರಮನೆಯ ಬಾಗಿಲಿಗೆ ಬಂದ; ರಾಜಪುತ್ರನೊಬ್ಬನು ಕನ್ಯಾರ್ಥಿಯಾಗಿ ಬಂದಿರುವನೆಂದು ಪಡಿಯರನ ಮೂಲಕ ರಾಜನಿಗೆ ಹೇಳಿಕಳಿಸಿದ. ಅವನನ್ನು ಒಳಗೆ ಬರಮಾಡಿಕೊಳ್ಳಲಾಯಿತು. ಸಿರಿಯ ನೀಲ ಸಿಂಹಾಸನದಂತಹ ವಕ್ಷಸ್ಥಳ ಮತ್ತು ವೀರಸಿರಿಯ ಮರಕತ ಮಣಿಪೀಠದಂತಹ ಬಾಹುದ್ವಯಗಳಿಂದ ಕೂಡಿದ ಉಪೇಂದ್ರನು ರಾಜಸಭೆಯನ್ನು ಹೊಕ್ಕ. ಶುಭಲಕ್ಷಣಕ್ಕೆ ತವರೆನಿಸಿದ, ಕಂತುರಾಜನಂತೆ ರೂಪವುಳ್ಳ, ದರ್ಪಭಂಗವನ್ನು ಮಾಡಬಲ್ಲ ಶಕ್ತಿಯುಳ್ಳವನಂತಿದ್ದ ಅವನನ್ನು ಕಂಡೊಡನೆಯೇ, ತನ್ನ ಮಗಳಿಗೆ ಇವನೇ ತಕ್ಕ ವರ ಎಂಬ ಭಾವನೆ ಶತ್ರುಂದಮ ರಾಜನಲ್ಲುಂಟಾಯಿತು. ತನಗಿಕ್ಕಿದ ಮಣಿಪೀಠದ ಮೇಲೆ ಕುಳಿತ ಅವನನ್ನು ಕಂಡು ರಾಜನ ಪಕ್ಕದಲ್ಲಿದ್ದ ಜಿತಪದ್ಮೆಯು ಅವನಲ್ಲಿ ಕಣ್ಸೋಟಗೊಂಡಳು; ಇವನೇನಾದರೂ ಶಕ್ತಿಶಸ್ತ್ರಹತಿಯಿಂದ ಹತನಾದರೆ ತಾನೂ ಸಾಯುವುದಾಗಿ ಕಂತುಹರಪೀಡಿತ ಚೇತಃಪದ್ಮೆಯಾದ ಅವಳು ತೀರ್ಮಾನಿಸಿದಳು.

ರಾಜನು ಸೌಮಿತ್ರಿಗೆ, "ನಿನ್ನ ಮುಖ ನೋಡಿದರೆ ನಿನ್ನ ಮೇಲೆ ಶಕ್ತಿಪ್ರಯೋಗ ಮಾಡುವ ಮನಸ್ಸೇ ನನಗೆ ಬರುವುದಿಲ್ಲ. ಆದ್ದರಿಂದ ಈ ಕನ್ನಿಕೆಯ ಆಸೆಯನ್ನು ಬಿಟ್ಟು ಹೊರಟುಬಿಡು" ಎಂದ. ಆದರೆ ಅದಕ್ಕಂಜದೆ ಲಕ್ಷ್ಮಣನು, ಕೂಡಲೇ ಶಕ್ತಿಯನ್ನು ತರಿಸಿ, ತನ್ನ ಅಳವು ಹೆಚ್ಚೋ ಅದರದ್ದೋ ಪರೀಕ್ಷಿಸಲು ಕೇಳಿಕೊಂಡ. ನೋಟದಿಂದಲೇ ವಿಷಬೀರುವ ಹಾವಿನಂತಿದ್ದ ಶಕ್ತಿಯನ್ನು ಭಟರು ಶಸ್ತ್ರಶಾಲೆಯಿಂದ ತಂದಿಟ್ಟರು. ಅದನ್ನು ನಾನಾ ಬಗೆಯಿಂದ ಪೂಜಿಸಿ, ಮಂತ್ರಗಳಿಂದ ಪಾವನಗೈದರು. ಆನಂತರ ಅದನ್ನು ಪ್ರಯೋಗಿಸಿದಾಗ, ಅದು ಕಡೆಗಾಲದ ಸಿಡಿಲಿನಂತೆ ಕಿಡಿಗಳನ್ನು ಕಾರುತ್ತ, ಭೋರ್ಗರೆಯುತ್ತ ಬಂತು. ಲಕ್ಷ್ಮಣನು ಎಡಗೈಯಿಂದಲೇ ಅದರ ತಲೆಯನ್ನು ಹಿಡಿದುಕೊಂಡು ಅದನ್ನು ಅಡಗಿಸಿಬಿಟ್ಟ. ಆಕಾಶದಿಂದ ಹೂವಿನ ಮಳೆ ಸುರಿಯಿತು, ಮಂದ್ರ ಭೇರಿರವವು ವ್ಯೋಮಾಂತರವನ್ನು ತುಂಬಿತು. ಅಮರ ಸಮಿತಿಯು ಲಕ್ಷ್ಮೀಧರನ ವೀರ್ಯವನ್ನು ಹೊಗಳಿತು. ಚಕಿತಚಿತ್ತನಾದ ಶತ್ರುಂದಮನು ಸೌಮಿತ್ರಿಯ ಪರಾಕ್ರಮಕ್ಕೆ ತಲೆಬಾಗಿದ. ಆನಂತರ ಲಕ್ಷ್ಮಣನನ್ನು ವಿವಿಧ ವಸ್ತ್ರಾಭರಣಗಳಿಂದ ಅಲಂಕರಿಸಿ, ಮಿತ ಪರಿವಾರದೊಡನೆ ಸೀತೆರಾಮರಿದ್ದಲ್ಲಿಗೆ ನಡೆದುಕೊಂಡು ಬಂದ. ರಾಜನು ಅವರನ್ನು ತನ್ನರಮನೆಗೆ ಕರೆತಂದು ಉಪಚರಿಸಿದ. ಒಂದು ಶುಭದಿನ ಮುಹೂರ್ತದಲ್ಲಿ ಪದ್ಮೋದರನಿಗೂ ಜಿತಪದ್ಮೆಗೂ ವಿವಾಹಮಂಗಳವು ನೆರವೇರಿತು.

ಆ ಊರಿನಲ್ಲಿ ಕೆಲವು ದಿವಸಗಳು ತಂಗಿದ್ದು ಆ ಮೂವರೂ ಪೂರ್ವಾಭಿಮುಖವಾಗಿ ಪ್ರಯಾಣ ಬೆಳಸಿದರು. ಒಂದು ದಿನ ಸಂಜೆ ವಂಶಸ್ಥಲವೆಂಬ ನಗರದ ಸಮೀಪದಲ್ಲಿನ ಬೆಟ್ಟದ ಬಳಿ ಬಂದರು. ಜನರೆಲ್ಲ ಭಯಭೀತರಾಗಿ ಓಡಿ ಹೋಗುತ್ತಿರುವುದನ್ನು

ನೋಡಿದ ರಘುವೀರನು ಅದಕ್ಕೆ ಕಾರಣವೇನೆಂದು ಬೆಸಗೊಂಡನು. ಕಳೆದ ಮೂರು ದಿನಗಳಿಂದಲೂ ರಾತ್ರಿಯ ಹೊತ್ತು ಆ ಗಿರಿ ಶಿಖರಿಯಲ್ಲಿ ಹಲವು ಸಿಡಿಲುಗಳು ಸೇರಿ ಆದಂತಹ ಭಯಂಕರ ಸದ್ದು ಆಗುತ್ತಿದೆ; ಅದೇನೆಂದು ತಿಳಿಯದು; ಆದ್ದರಿಂದಲೇ ಜನರೆಲ್ಲ ಓಡಿಹೋಗುತ್ತಿರುವರೆಂಬ ವಿಷಯ ತಿಳಿಯಿತು. ಆ ಶಬ್ದವನ್ನು ಯಾರು ಮಾಡುತ್ತಿರುವರೆಂಬುದನ್ನು ಅರಿಯಲು ಆ ಪರ್ವತದ ಮೇಲೆ ಹತ್ತಿ ನೋಡಿದಾಗ, ಅಲ್ಲಿ ಚತುರ್ಮುಖ ಪ್ರತಿಮಾ ಯೋಗದಲ್ಲಿ ನಿಂತು ಶುಭಧ್ಯಾನದಲ್ಲಿ ಮಗ್ನರಾಗಿದ್ದ ಮಹರ್ಷಿಯೊಬ್ಬರು ಕಾಣಿಸಿದರು. ಅವರ ಸುತ್ತ ಅನೇಕ ವಿಷಸರ್ಪಗಳು ಸುತ್ತಾಡುತ್ತಿದ್ದವು; ಅವರ ದೇಹದ ಮೇಲೆ ಅಡಿಯಿಂದ ಮುಡಿಯವರೆಗೆ ಚೇಳುಗಳು ಮುತ್ತಿಕೊಂಡಿದ್ದವು. ರಾಮಲಕ್ಷ್ಮಣರು ಅಲ್ಲಿ ಕಾಲಿಟ್ಟಾಗ ಅವರ ಪುಣ್ಯಪ್ರಭಾವದಿಂದ ಅವೆಲ್ಲ ಮಾಯವಾದವು. ಅವರು ಮಹರ್ಷಿಗಳನ್ನು ಅಲ್ಲಿ ದೊರೆತ ಸುಗಂಧ ಕುಸುಮಗಳಿಂದ ಅರ್ಚಿಸಿದರು. ಅಷ್ಟು ಹೊತ್ತಿಗೆ ಸೂರ್ಯ ಮುಳುಗಿದ. ಆಗ ಅತಿ ರೌದ್ರಕರವಾದ ಭೂತಭೇತಾಳಸಮೂಹವೂ, ಗರ್ಜನೆ ಮಾಡುವ ಸಿಂಹಶರಭಶಾರ್ದೂಲಗಳೂ, ಅತ್ಯದ್ಭುತವಾದ ಮಿಂಚುಗುಡುಗುಗಳೂ ಕಾಣಿಸಿಕೊಂಡವು; ಬಿಸುನೆತ್ತರ ಮಳೆ ಸುರಿಯಿತು. ಇವೆಲ್ಲ ಆ ಮುನಿಗೆ ದೇವತೆಯು ಮಾಡುತ್ತಿದ್ದ ಉಪಸರ್ಗ. ಆದರೆ ಇವೆಲ್ಲ ಆ ಪರಮ ಮುನಿಯ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಬಿರುಗಾಳಿ ಬೀಸಿದರೆ ಮರವು ಅಲ್ಲಾಡಬಹುದೇ ಹೊರತು ಮೇರುಗಿರಿ ಕಂಪಿಸುವುದೇ!

ಮುನಿಗೆ ಉಪಸರ್ಗ ಮಾಡುತ್ತಿದ್ದ ದೇವನ ರೌದ್ರವನ್ನು ಹೋಗಲಾಡಿಸಲು ರಾಮಲಕ್ಷ್ಮಣರು ತಮ್ಮ ದಿವ್ಯಧನುಸ್ಸುಗಳನ್ನು ಹೆದೆಯೇರಿಸಿ ಸಜ್ಜಾದರು. ಬಲಾಚ್ಯುತರು ಬಿಲ್ಲುಗಳ ಠೇಂಕಾರವನ್ನು ಮಾಡಲು ಮಂದರವೇ ಕೆಡೆದು ಬಿತ್ತೋ, ಸೂರ್ಯನ ರಥವು ಭೂಮಿಯ ಮೇಲೆ ಅಪ್ಪಳಿಸಿತೋ, ಆಕಾಶವು ಕಳಚಿಕೊಂಡಿತೋ, ಭೂಮಿಯೇ ಗುಡುಗಿತೋ, ಪ್ರಳಯಕಾಲದ ಬೆಂಕಿಯಿಂದ ವಜ್ರವೇದಿಕೆಯು ಒಡೆಯಿತೋ ಎನ್ನುವಂತೆ ಸದ್ದಾಯಿತು. ಆ ರೌದ್ರಧ್ವನಿಯನ್ನು ಕೇಳಿ ಆಸೆಯು ಭಗ್ನಗೊಂಡು ಅಗ್ನಿಪ್ರಭನು ಹತಪ್ರಭನಾದ. ತನ್ನ ವಿಭಂಗಜ್ಞಾನದಿಂದ ಇವರು ಎಂಟನೆಯ ಬಲದೇವವಾಸುದೇವರೆಂಬ ತಿಳಿವು ಅವನಿಗಾಗಿ, ಓಡಿ ತನ್ನ ಜ್ಯೋತಿರ್ಲೋಕವನ್ನು ಸೇರಿಕೊಂಡ. ಹೀಗೆ ದೇವೋಪಸರ್ಗವು ಉಪಶಮನಗೊಳ್ಳಲು ದೇಶಭೂಷಣ ಮುನಿಪರು ಶುಕ್ಲಧ್ಯಾನದಲ್ಲಿ ನಿರತರಾದರು. ಕೊನೆಗೆ ಅವರಿಗೆ ಘಾತಿಚತುಷ್ಟಯವುಂಟಾಗಿ, ಅನಂತಜ್ಞಾನವೇ ಮುಂತಾದ ಕೇವಲಲಬ್ಧಿಯು ದೊರೆಯಿತು. ಅವರನ್ನು ಪೂಜಿಸಲು ದುಂದುಭಿ ನಿನಾದವಾಗಲು, ಮಂದಾರ ನಮೇರು ಕುಸುಮಗಳೊಡನೆ ದೇವನಿಕಾಯವು ಬಂದಿತು.

ಅವರೆಲ್ಲ ಪೂಜಿಸಿದ ಮೇಲೆ ಉದಾತ್ತ ರಾಘವನು ಕೈಮುಗಿದುಕೊಂಡು ಕೊರಳನ್ನು ಮೇಲೆತ್ತಿ, ಅವರಿಗೆ ಉಪಸರ್ಗವುಂಟಾದ ಬಗೆ ಹೇಗೆಂದು ವಿವರಿಸಲು ಕೇಳಿಕೊಂಡ. ಆಗ ದೇಶಭೂಷಣಕೇವಲಿಗಳು ಹೀಗೆ ನಿರೂಪಿಸಿದರು: ಪದ್ಮಪುರವನ್ನಾಳುವ ವಿಜಯಪರ್ವತ ಕ್ಷಿತಿಪತಿಯ ಚರನ ಹೆಸರು ಅಮೃತಸ್ವರ. ತನ್ನ ಹೆಂಡತಿಯಲ್ಲವನಿಗೆ ಉದಿತ ಅನುದಿತ ಎಂಬ ಇಬ್ಬರು ಗಂಡುಮಕ್ಕಳಾದರು. ಅವಳ ಜೊತೆ ಆ ಊರಿನ ವಸುಭೂತಿ ಎಂಬ ಹೆಸರಿನ ಬ್ರಾಹ್ಮಣ ಒಳಸಂಬಂಧವಿರಿಸಿಕೊಂಡಿದ್ದ. ಗಂಡನು ಬದುಕಿದ್ದರೆ ತಮಗೆ

ಬೇಕಾದಂತೆ ಬಾಳಲು ಅಡ್ಡಿಯಾಗುವುದೆಂದು ಬಗೆದು ಅವಳು ವಿವೇಕವಿಕಲೆಯಾಗಿ ನುಡಿದಾಗ, ಬ್ರಾಹ್ಮಣನು ದುರಿತಕ್ಕೂ ಹೆದರದೆ ಅಮೃತಸ್ವರನನ್ನು ಯಾರೂ ಅರಿಯದಂತೆ ಕೊಂದುಬಿಟ್ಟ. ಅಪವಾದ, ನರಹತ್ಯೆಗಳಿಗೆ ಹೇಸದ ಆ ಹೆಂಗಸು ಗಂಡನನ್ನು ಕೊಲ್ಲಿಸಿದ ಬಳಿಕ ಪುತ್ರವಧೆಗೂ ನಿಶ್ಚೈಸಿದಳು. ತನ್ನೊಡನೆ ಮಾರಕ್ರೀಡೆಗೆ ಬಂದ ಉಪಪತಿಗೆ ಮಕ್ಕಳನ್ನು ಕೊಲ್ಲಲು ಸೂಚಿಸಿದಳು. ಅವಳಾಡಿದ ಮಾತು ಅವಳ ಸೊಸೆಯಾದ ಉದಿತನ ಹೆಂಡತಿಯ ಕಿವಿಗೆ ಬಿತ್ತು. ಈ ವಿಷಯವನ್ನು ಅವಳು ತನ್ನ ಗಂಡನಿಗೆ ತಿಳಿಸಿದಳು. ವಸುಭೂತಿಯ ಹೆಂಡತಿ ರತಿಕಾರಿಣಿಯೂ ಈ ವಿಷಯವನ್ನು ಗುಟ್ಟಾಗಿ ತಿಳಿಸಿದಳು. ಆಗ ಉದಿತ ಅನುದಿತರು ಸೇರಿಕೊಂಡು ವಸುಭೂತಿಗೆ ಉಪಾಯದಿಂದ ಅಪಾಯವನ್ನುಂಟುಮಾಡುವ ಬಗ್ಗೆ ಆಲೋಚಿಸಿ, ಅವನನ್ನು ಮುಗಿಸಿಬಿಟ್ಟರು. ಹಾಗೆ ಸತ್ತ ವಸುಭೂತಿಯು ಶಾರ್ದೂಲಾಸ್ಯವೆಂಬ ದಟ್ಟ ಕಾಡಿನಲ್ಲಿ ಕಾಲಜಂಘನೆಂಬ ಹೆಸರಿನ ಬೇಡನಾಗಿ ಹುಟ್ಟಿದ.

ಇತ್ತ, ಆ ಪದ್ಮಪುರದ ಉದ್ಯಾನದಲ್ಲಿ ಸುಮತಿವರ್ಧನರೆಂಬ ಆಚಾರ್ಯರು ಬಂದ ವಿಷಯವನ್ನು ಋಷಿನಿವೇದಕನು ಬಂದು ಅರುಹಿದಾಗ ವಿಜಯಪರ್ವತ ಮಹಾರಾಜನು ಬಂದು ಅವರನ್ನು ಅರ್ಚಿಸಿ ಧರ್ಮವನ್ನು ಕೇಳಿ ವೈರಾಗ್ಯಪರನಾಗಿ ದೀಕ್ಷೆಗೊಂಡ. ಅವನ ಜೊತೆಯಲ್ಲಿಯೇ ಉದಿತ ಅನುದಿತರೂ ದೀಕ್ಷೆ ಪಡೆದು ತೀರ್ಥವಂದನಾರ್ಥವಾಗಿ ಸಮ್ಮೇದಶೈಲಕ್ಕೆ ಹೊರಟರು. ಮಾರ್ಗಮಧ್ಯದಲ್ಲಿ ಆ ಮುನಿಯುಗಳವನ್ನು ಕಂಡ ಕಾಲಜಂಘನು ಹಿಂದಿನ ಜನ್ಮದ ವೈರದಿಂದಾಗಿ ಅವರನ್ನು ಕೊಲ್ಲಲು ರಭಸದಿಂದ ಓಡಿ ಬಂದ. ಬರುವ ರೀತಿಯಿಂದ ಅವನ ಉದ್ದೇಶವನ್ನು ಊಹಿಸಿಕೊಂಡು ಉಪಸರ್ಗದ ನಿವಾರಣೆಗೆ ಅವರು ಆಹಾರವನ್ನು ತೊರೆದು ನಿಂತಾಗ ಕಿರಾತನಾಯಕನು ಉಪಶಾಂತನಾದ. ಇದಕ್ಕೆ ಕಾರಣವೇನೆಂದು ಹಲಿಯು ಬೇಡಿಕೊಳ್ಳಲು ಮುನಿಮುಖ್ಯರು ಹೀಗೆಂದರು: "ಯಕ್ಷವೆಂಬ ಹೆಸರಿನ ಹಳ್ಳಿಯಲ್ಲಿ ಸುರೂಪ ಕರುಷ ಎಂಬ ಅಣ್ಣತಮ್ಮಂದಿರಿದ್ದರು. ಆ ಊರಿಗೆ ಒಮ್ಮೆ ಒಬ್ಬ ವ್ಯಾಧನು ಹಕ್ಕಿಯೊಂದನ್ನು ಹಿಡಿದು ತಂದ. ಅವರು ಬೆಲೆ ಕೊಟ್ಟು ಆ ಹಕ್ಕಿಯ ಪ್ರಾಣವನ್ನುಳಿಸಿದರು. ಆ ಹಕ್ಕಿಯು ಅಹಿಂಸೆಯನ್ನು ಹಿಡಿದು ಸತ್ತು ಆ ಬೇಡವಟ್ಟಿಯ ಒಡೆಯನಾಗಿ ಹುಟ್ಟಿತು. ಆ ಸುರೂಪ ಕರುಷರು ಸತ್ತು ಉದಿತ ಅನುದಿತರಾಗಿ ಹುಟ್ಟಿದರು. ಈ ಕಾರಣದಿಂದ ಕಾಲಜಂಘನು ಅವರನ್ನು ಕೊಲ್ಲದೆ ಉಳಿಸಿದ." ಮುಂದೆ ಉದಿತ ಅನುದಿತ ಮುನಿವರರು ಸನ್ಯಸನದಿಂದ ಉದಿತೋದಿತಚರಿತರಾಗಿ ಉತ್ಕೃಷ್ಟವಾದ ದೇವಗತಿಯನ್ನು ಪಡೆದರು. ಬೇಡನು ಸತ್ತ ನಂತರ ನಾನಾ ಜನ್ಮಗಳನ್ನೆತ್ತಿ ಕೊನೆಗೆ ಮನುಷ್ಯನಾಗಿ, ತಪಸ್ವಿಯಾದ. ಸತ್ತನಂತರ ಜ್ಯೋತಿರ್ಲೋಕದಲ್ಲಿ ಅಗ್ನಿಪ್ರಭನೆಂಬ ದೇವನಾದ.

ಇತ್ತ, ಭರತಕ್ಷೇತ್ರದ ಅರಿಷ್ಟಪುರವನ್ನಾಳುವ ಪ್ರಿಯವ್ರತ ಎಂಬ ಮಹಾರಾಜನಿಗೆ ಪದ್ಮಾವತಿ ಕನಕಾಭೆ ಎಂಬ ಇಬ್ಬರು ಅರಸಿಯರಿದ್ದರು. ಪದ್ಮಾವತಿಯಲ್ಲಿ ಉದಿತ ಅನುದಿತರು ಮಕ್ಕಳಾಗಿ ಹುಟ್ಟಿದರು; ಅವರಿಗೆ ರತ್ನರಥ ವಿಚಿತ್ರರಥ ಎಂಬ ಹೆಸರಿಟ್ಟರು. ಅಗ್ನಿಪ್ರಭನು ಕನಕಾಭೆಗೆ ಅಸುಂದರನೆಂಬ ಮಗನಾಗಿ ಹುಟ್ಟಿದ. ಪ್ರಿಯವ್ರತನು ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ ದೀಕ್ಷೆಪಡೆದ. ಆರುದಿನಗಳ ಕಾಲ ಸನ್ಯಸನ ವಿಧಿಯಿಂದ ತಪಸ್ಸು ಮಾಡಿ

ಸ್ವರ್ಗಕ್ಕೆ ಹೋದ. ಮುಂದೆ, ಅರಸನೊಬ್ಬನು ತನ್ನ ಮಗಳಾದ ಶ್ರೀಪ್ರಭೆಯನ್ನು ರತ್ನರಥನಿಗೆ ಕೊಟ್ಟು ಮದುವೆ ಮಾಡಲು ಮುಂದೆ ಬಂದ. ಆದರೆ ಅನುಂದರನು ಆಕೆಯನ್ನು ಬಯಸಿ ಬೇಡಿದ. ತಂದೆ ಒಪ್ಪದಿದ್ದಾಗ ಅರಸನ ಮೇಲೆ ದಂಡೆತ್ತಿ ಬಂದ. ಈ ವಿಷಯ ತಿಳಿದು ಕೋಪಗೊಂಡ ರತ್ನರಥ ಮತ್ತು ವಿಚಿತ್ರರಥರು ಅವನ ಮೇಲೆ ದಾಳಿಯಿಟ್ಟರು. ಅವನನ್ನು ಹಿಡಿದರೂ ಕೊಲ್ಲದೆ ದೇಶದಿಂದ ಹೊರಗಟ್ಟಿದರು. ಇದರಿಂದ ಅನುಂದರನು ಕೋಪಗೊಂಡು ತಾಪಸನಾದ.

ಮುಂದೆ ರತ್ನರಥ ವಿಚಿತ್ರರಥರು ದೀರ್ಘಕಾಲ ಅರಸುಗೈದು ಕೊನೆಗೆ ವೈರಾಗ್ಯದಿಂದ ತಪಸ್ಸಿಗೆ ತೊಡಗಿದರು. ಆ ಫಲದಿಂದ ನಾಕಲೋಕವನ್ನು ಪಡೆದು, ಆನಂತರ ಸಿದ್ಧಾರ್ಥನಗರದ ಅರಸು ಕ್ಷೇಮಂಕರ ಮಹಾರಾಜನಿಗೂ ಅವನ ಪತ್ನಿ ವಿಮಲಾದೇವಿಗೂ ದೇಶಭೂಷಣ–ಕುಲಭೂಷಣರೆಂಬ ಮಕ್ಕಳಾಗಿ ಹುಟ್ಟಿದರು. ಅವರನ್ನು ತಂದೆಯು ವಿದ್ಯಾಭ್ಯಾಸಕ್ಕೆಂದು ಬೇರೊಂದೂರಿಗೆ ಕಳಿಸಿದ. ಅಲ್ಲಿ ಸಾಗರಘೋಷರೆಂಬ ಗುರುಗಳ ಬಳಿ ಸಕಲ ವಿದ್ಯೆಗಳನ್ನೂ ಕಲಿತಿದ್ದಾಯಿತು. ಗುರುಗೃಹಾಗಮನ ಪೂಜಾನಂತರ ತುಂಬ ಸಡಗರದಿಂದ ತಮ್ಮ ಊರನ್ನು ತಲುಪುವ ಸಮಯದಲ್ಲಿ, ದೇಶಭೂಷಣರಾದ ತಾವು ಕರಮಾಡವೊಂದರ ಮೇಲಿದ್ದ ಕನ್ಯೆಯೊಬ್ಬಳನ್ನು ಕಂಡು ಆಕರ್ಷಣೆಗೊಂಡರು; ಅವಳು ಅರಸುಮಗಳಿರಬೇಕೆಂದು ಅನ್ನಿಸಿತು; ಅವಳ ಬಗ್ಗೆಯೇ ಯೋಚಿಸುತ್ತ ಅರಮನೆಯನ್ನು ಹೊಕ್ಕರು. ಆದರೆ ಅವಳು ತಮ್ಮ ತಂಗಿಯೆಂಬ ವಿಷಯ ಗೊತ್ತಾಗಿ, ತಾವು ಸಲ್ಲದನ್ನು ಆಲೋಚಿಸಿದೆವೆಂಬ ಭಾವನೆಯೇ ತಮ್ಮ ವೈರಾಗ್ಯಕ್ಕೆ ಕಾರಣವಾಯಿತು. ತಕ್ಷಣ ದೀಕ್ಷೆವಡೆದು ಚಾರಣಋದ್ಧಿಯನ್ನು ಹೊಂದಿದರು. ಮೂರು ಜನ್ಮಗಳಲ್ಲಿಯೂ ತಂದೆಯಾಗಿದ್ದ ಕ್ಷೇಮಂಕರ ಮಹಾರಾಜನು ತಮ್ಮ ಬಗೆಗಿನ ನಿರತಿಶಯ ಪ್ರೇಮದಿಂದ ತಮ್ಮ ಅಗಲಿಕೆಯನ್ನು ಸಹಿಸಲಾರದೆ, ಆಹಾರವನ್ನು ತೊರೆದು ಸನ್ಯಸನವಿಧಿಯಿಂದ ಮುಡಿಪಿ ಗರುಡಾಧಿಪನಾಗಿ ಮಹಾಲೋಚನನೆಂಬ ಹೆಸರನ್ನು ಹೊಂದಿ, ತಮಗೆ ಈಗ ಕೇವಲಪ್ರಾಪ್ತಿಯಾದುದನ್ನು ತಿಳಿದು ಪೂಜಿಸಲು ಬಂದಿದ್ದಾನೆ ಎಂದು ನಿರೂಪಿಸಿದರು.

ಹಿಂದೆ ಹೇಳಿದಂತೆ, ತಾಪಸರೂಪವನ್ನು ಪಡೆದ ಅನುಂದರನು ಕೌಮುದಿ ಎಂಬ ನಗರದಲ್ಲಿ ಇದ್ದಾನೆ. ಅವನನ್ನು ಆ ಊರಿನ ಒಡೆಯನು ಹೊಗಳಲು, ಅವನ ಮಗಳು ನಾಗದತ್ತೆ ಅವನಲ್ಲಿ ಅನುರಕ್ತಗೊಂಡಳು. ಮಹಾರಾಣಿ ಮದನವೇಗೆಯು ಅವನು ಮಿಥ್ಯಾರೂಪಿಯೆಂದೂ, ಸುಮ್ಮನೆ ಗುಣಾರೋಪಣ ಮಾಡಕೂಡದೆಂದೂ ತಿಳಿಸಿದಳು. ಆಗ ಸುಮುಖನು ಸುಮ್ಮನಾದ. “ನನ್ನ ಮೇಲೆ ಕೋಪಮಾಡಿಕೊಳ್ಳಬೇಡಿ. ನೀವು ಅನುಜ್ಞೆ ಕೊಟ್ಟರೆ ಸಾಕು; ನಿಮ್ಮ ನಚ್ಚಿನ ತಪೋಧನನನ್ನು ಕರೆದು ತಂದು ನಿಮ್ಮ ಕಾಲಿಗೆ ಬೀಳುವಂತೆ ಮಾಡುತ್ತೇನೆ” ಎಂದು ಮಹಾರಾಣಿಯು ಅವನನ್ನು ಒಡಂಬಡಿಸಿ, ತನ್ನ ಮಗಳನ್ನು ಗುಟ್ಟಾಗಿ ಕರೆದು, ತಾಪಸನ ತಪಸ್ಸನ್ನು ಕೆಡಿಸುವ ಉಪಾಯವನ್ನು ಹೇಳಿಕೊಟ್ಟು ಕಳಿಸಿದಳು. ಸಮ್ಮೋಹನ ವಿದ್ಯೆಯೇ ಸಾಕಾರಗೊಂಡಂತೆ ನಾಗದತ್ತೆಯು ತಾಯಿ ಹೇಳಿದಂತೆ ಏಕಾಂಗಿಯಾಗಿ ಸಂಜೆಯ ಹೊತ್ತಿನಲ್ಲಿ ಮುನಿಯಿದ್ದೆಡೆಗೆ ಬಂದಳು.

ಆಗ ಮುನಿಯು ಸೂಕ್ತವನ್ನು ಜಪಿಸುತ್ತಿದ್ದ. ರಾಜಕುಮಾರಿಯ ಕಾಲ್ಗೆಜ್ಜೆಯ ಸದ್ದು ಅವನ ಕಿವಿಗೆ ಅತನುಚಾಪಟಂಕಾರವೆಂಬಂತೆ ಕೇಳಿಸಿತು. ಅವನ ಜಪ ತಪ್ಪಿತು; ಕಣ್ದೆರೆದು

ನೋಡಿದ. ಎದುರಿಗಿದ್ದ ತರುಣಿಯ ಘನಸ್ತನವೇ ಮುಂತಾದ ಅವಯವಗಳು ಅವನ ತಪೋಭಂಗ ಮಾಡಿದವು. ಸ್ಮರರಾಗವು ಅವನಲ್ಲಿ ಬೇರುಬಿಟ್ಟಿತು, ಬ್ರಹ್ಮಚರ್ಯನಿಷ್ಠೆಯು ಕರಗಿತು. "ನೀನು ಈ ಸಂಜೆಯ ಹೊತ್ತಿನಲ್ಲಿ ಅಂಜದೇ ಒಬ್ಬಳೇ ಬಂದ ಕಾರಣವೇನು?" ಎಂದು ಅವಳನ್ನು ಪ್ರಶ್ನಿಸಿದ. ತನ್ನ ತಾಯಿ ತನ್ನ ಮೇಲೆ ಅಕಾರಣವಾಗಿ ಕೋಪಗೊಂಡು ಜಡಿದು ಬಡಿದಳು; ದುಃಖದಿಂದ ಅಲ್ಲಿಗೆ ಬಂದು ಅವನನ್ನು ಕಂಡದ್ದರಿಂದ ತನಗೆ ಅಪರಿಮಿತ ಸಂತಸವುಂಟಾಯಿತು ಎಂದು ನಾಗದತ್ತೆ ವಿವರಿಸಿದಳು. ತನಗೂ ಸನ್ಯಾಸದೀಕ್ಷೆಯನ್ನು ಕೊಡಲು ಕೇಳಿಕೊಂಡಳು. ಅವಳು ಹೇಳಿದುದು ನಿಜವೆಂದೇ ತಿಳಿದ ಅನುಂದರಮುನಿಯು, 'ಇದಾವ ಮಹಾ' ಎಂದು ಕೊಡಲುದ್ಯುಕ್ತನಾದ. ಅದಕ್ಕವಳು, ತಾನಿನ್ನೂ ಕನ್ಯೆಯಾದ್ದರಿಂದ ತನ್ನ ಸಾಕಿದ ತಾಯ ಬಳಿಗೆ ಹೋಗಿ ಕೇಳಿಕೊಳ್ಳಲು ಹೇಳಿದಳು. ತನ್ನ ಹೆತ್ತ ಮಗಳನ್ನು ನಮಗೆ ಕೊಡುವರೇ ಎಂದು ಅವನು ಸಂಶಯ ವ್ಯಕ್ತಪಡಿಸಿದ. ಕನ್ಯೆಯಾದ ತನ್ನನ್ನು ತಾಯಿ ಕೊಡುವಳು ಎಂದು ಅವಳು ಭರವಸೆಯಿತ್ತಳು. ಆದರೆ ಮದನಸಂತಾಪದಿಂದ ತಾಪಸನು ಅವಳ ಕೈಹಿಡಿಯಲು ಆತುರಪಟ್ಟ. ಆಗ ಅವಳು, ಆತುರಗೊಳ್ಳದಿರುವಂತೆಯೂ, ತನ್ನ ತಾಯಿಯ ಬಳಿ ಹೋಗಿ ಕೇಳಿದರೆ ತನ್ನನ್ನು ಕೊಟ್ಟು ಅವನಿಗೆ ಮದುವೆಯನ್ನೇ ಮಾಡುವರೆಂದೂ ತಿಳಿಸಿದಳು. ಅದಕ್ಕೊಪ್ಪಿದ ಅವನು ಅವಳೊಡನೆ ಹೊರಟ.

ರಾತ್ರಿಯ ಹೊತ್ತು ರಾಜಪುತ್ರಿಯೊಡನೆ ಬಂದು ಅರಮನೆಯನ್ನು ಹೊಕ್ಕು ಮದನವೇಗೆಗೆ ಕೈಮುಗಿದು, "ನಿಮ್ಮ ಸಾಕುಮಗಳಾದ ನಾಗದತ್ತೆಯನ್ನು ನನಗೆ ಕೊಟ್ಟು ಕನ್ಯಾದಾನದ ಫಲವನ್ನು ಪಡೆಯಿರಿ" ಎಂದು ಕೇಳಿಕೊಂಡು ಸಾಷ್ಟಾಂಗಪ್ರಣತನಾದ. ಆ ಸಮಯಕ್ಕೆ ಸರಿಯಾಗಿ ರಾಣಿಯಿದ್ದಲ್ಲಿಗೆ ರಾಜನೂ ಬಂದ. ಅಲ್ಲಿ ಗೊರವನೊಬ್ಬನಿರುವುದು ಕಂಡು ತೀವ್ರ ಕೋಪವುಂಟಾಯಿತು. ನಾನಾ ಬಗೆಯಿಂದ ಅವನನ್ನು ಬಯ್ದು ಹೊರಗೆ ಕಳಿಸಿದ. ಈ ಅವಮಾನದಲ್ಲಿಯೇ ಅವನು ಸತ್ತ. ಕಾಯಕ್ಲೇಶದ ಫಲದಿಂದಾಗಿ ಅವನು ಜ್ಯೋತಿರ್ಲೋಕದಲ್ಲಿ ಅಗ್ನಿಪ್ರಭನೆಂಬ ದೇವನಾಗಿ ಹುಟ್ಟಿದ.

ಅತ್ತ, ಅನಂತವೀರ್ಯ ಕೇವಲಿಗಳ ಪೂಜೆಗೆ ಬಂದ ದೇವನೊಬ್ಬನು, "ಮುನಿಸುವ್ರತ ತೀರ್ಥಕರ ಭಟ್ಟಾರಕರ ಸಂತಾನದಲ್ಲಿ ನಿಮ್ಮಂತೆಯೇ ಕೇವಲಿಗಳಾಗಿ ಧರ್ಮೋಪದೇಶ ಗೈಯುವವರಾರು?" ಎಂದು ಕೇಳಿದ. ಅದಕ್ಕವರು ತಮ್ಮ ಗಂಭೀರ ಧ್ವನಿಯಲ್ಲಿ "ದೇಶಭೂಷಣರೆಂಬ ದಿವ್ಯಮುನಿಗಳು" ಎಂದುತ್ತರಿಸಿದರು. ಆ ಸಭೆಯಲ್ಲಿದ್ದ ಅಗ್ನಿಪ್ರಭನು ಇದನ್ನು ಕೇಳಿದ. ವಿಭಂಗಜ್ಞಾನದಿಂದ ತಮ್ಮ ಜತೆಗಿನ ಜನ್ಮಾಂತರದ ವೈರ ಅವನಿಗೆ ಅರಿವಾಯಿತು. ನಮಗೆ ವಿಘ್ನಗಳನ್ನು ಮಾಡಲು ಯೋಚಿಸಿದ್ದ ಈತನು ಪುಣ್ಯಪುರುಷನೂ ಚರಮದೇಹಧಾರಿಯೂ ಆದ ನೀನು ಕೋಪಗೊಳ್ಳುವೆಯೆಂದು ಹೆದರಿ ತನ್ನ ವೈರವನ್ನು ಬಿಟ್ಟು ಇಲ್ಲಿಗೆ ಬಂದಿದ್ದಾನೆ ಎಂದು ಮುನಿಗಳು ರಾಘವನಿಗೆ ಕತೆಯನ್ನು ಹೇಳಿ ಮುಗಿಸಿದರು.

ಇದನ್ನೆಲ್ಲ ಕೇಳಿದ ರಾಘವನಿಗೆ ಸಂತೋಷವಾಯಿತು. ರಾಮನ ಗುಣಪ್ರತಿಷ್ಠೆಗೂ ಸಮಯಪರಿಪಾಲನ ಶಿಲಸಂಪತ್ತಿಗೂ ಮೆಚ್ಚಿ, ತನ್ನನ್ನು ನೆನಸಿಕೊಂಡಾಗ ತಾನು ಬರುವುದಾಗಿ ಅವನಿಗೆ ಅಗ್ನಿಪ್ರಭನು ಮೆಚ್ಚನ್ನಿತ್ತನು. ಹರ್ಷಬಾಷ್ಪಾಂಬುವರ್ಷನಾದ

ಗರುಡನು ಆ ಕೇವಲಿಯ ಪಾದಗಳಿಗೆರಗಿ ತನ್ನ ಲೋಕಕ್ಕೆ ಮರಳಿದ. ದೇಶಭೂಷಣ ಕೇವಲಿಗಳು ತಮ್ಮ ಧರ್ಮಾಮೃತದಿಂದ ಭವ್ಯಾವಳಿಗಳನ್ನು ತಣಿಸಲೆಂದು ಆರ್ಯಾಖಂಡದ ವಿಹಾರ ಕೈಗೊಂಡರು. ಆನಂತರ ವಂಶಸ್ಥಲಪುರವನ್ನಾಳುವ ಸುಪ್ರಭ ಮಹಾರಾಜನು ಬಂದು ರಾಮಲಕ್ಷ್ಮಣರನ್ನು ಪೂಜಿಸಿದ. ಆ ಊರಿನ ಗಿರಿತಟದಲ್ಲಿ, ಸುಂದರ ಚೈತ್ಯಾಲಯಗಳಿಂದಲೂ ಬಹು ಪ್ರಾಕಾರ ಹರ್ಮ್ಯಗಳಿಂದಲೂ ಕೂಡಿದ ಏಕಾಂತಕಮನೀಯವಾದ ಒಂದು ನಗರವನ್ನು ಕಟ್ಟಿಸಿ, ರಾಮಲಕ್ಷ್ಮಣರನ್ನು ಅದರಲ್ಲಿರಿಸಿದ. ಅದರಿಂದಾಗಿ ಆ ಗಿರಿಗೆ ರಾಮಗಿರಿ ಎಂಬ ಹೆಸರಾಯಿತು.

* * * * *

# ೯. ಸೀತಾಪಹರಣ

ಸೀತಾಬಲಾಚ್ಯುತರು ರಾಮಗಿರಿಯಲ್ಲಿ ಕೆಲಕಾಲವಿದ್ದು ದಕ್ಷಿಣ ದಿಕ್ಕಿನಲ್ಲಿ ನಡೆದು ಕೆಲವು ದಿನಗಳಲ್ಲಿ ಕಾಡಿನ ನಡುವಣ ಕರ್ಣರವೆಯೆಂಬ ನದಿಯನ್ನು ದಾಟಿ, ಅದಕ್ಕೂ ತೆಂಕಣದಲ್ಲಿದ್ದ ಒಂದು ರಮ್ಯಪ್ರದೇಶದಲ್ಲಿ ವಿಶ್ರಮಿಸಿದರು. ಒಂದು ದಿನ ಸುಗುಪ್ತಿ ಗುಪ್ತರೆಂಬ ಚಾರಣಯುಗಳವು ಗಗನತಳದಿಂದ ನೆಲಕ್ಕಿಳಿದು ಮಾಸೋಪವಾಸದ ಪಾರಣೆಯ ನಿಮಿತ್ತ ಕಾಂತಾರಚರ್ಯೆಗೆಂದು ಬಂದರು. ಅವರನ್ನು ದೂರದಿಂದಲೇ ನೋಡಿ ಸಂಭ್ರಮರಸವಶನಾದ ಶ್ರೀರಾಮನು ಅವರನ್ನು ಆಹ್ವಾನಿಸಿ ಉಚಿತ ಪೀಠದಲ್ಲಿ ಕುಳ್ಳಿರಿಸಿ ದಿವ್ಯಾರ್ಚನೆಗೈದ. ಆನಂತರ ನಿರವದ್ಯಾಹಾರವನ್ನು ಸಮರ್ಪಿಸಿದ. ಅವರು ಕೈಯೆತ್ತಿ "ಅಕ್ಷಯ ದಾನ" ಎಂದು ಹರಸಿದರು. ಕೂಡಲೇ ಹೊನ್ನಿನ ಮಳೆಗರೆಯಿತು. ರಾಮಾದಿಗಳು ಮುನಿಗಳ ತಪಸ್ಸಾಮರ್ಥ್ಯಕ್ಕೆ ರೋಮಾಂಚಕಂಚುಕಿತದೇಹರಾದರು. ಅವರ ಬಳಿ ಕೆಲಹೊತ್ತು ಧರ್ಮಶ್ರವಣ ಮಾಡಿದರು. ಅವರು ಉಪದೇಶ ಮಾಡುತ್ತಿದ್ದಾಗ ಅದನ್ನು ಕೇಳಿದ ಒಂದು ಹದ್ದು, ಮುನಿದರ್ಶನ ಮಾತ್ರದಿಂದಲೇ ತನಗೆ ಕಳೆದ ಭವದ ನೆನಪು ಬಂದು, ಅವರ ಪಾದೋದಕದಲ್ಲಿ ಹೊರಳಿ ಪಾಪಗಳನ್ನೆಲ್ಲ ಕಳೆದುಕೊಂಡು ತಲೆಬಾಗಿ ಅವರ ಮುಂದೆ ನಿಂತಿತು. ಅದನ್ನು ನೋಡಿದ ರಾಘವನು ಮುನಿಗಳಿಗೆ ಕೈಮುಗಿದು ಆ ವಿಹಗದ ವಿಚಾರವನ್ನು ವಿವರಿಸಬೇಕೆಂದು ಕೇಳಿಕೊಂಡ. ಆಗ ಆ ಚಾರಣ ಋಷಿಗಳು ಹೀಗೆಂದು ನಿರೂಪಿಸಿದರು:

ಈ ಕಾಡು ಹಿಂದೆ ಕರ್ಣಕುಂಡಲ ಮುಂತಾದ ಅನೇಕ ಹಳ್ಳಿಗಳ ಒಂದು ಸಮೂಹ. ಅದನ್ನಾಳುತ್ತಿದ್ದವನು ದಂಡಕ ಎಂಬ ಬೇಡರ ಅರಸ. ಅವನ ಹೆಂಡತಿ ದುರ್ಮನಸ್ಕೆಯಾದ ಮಸ್ಕರಿ ಎನ್ನುವವಳು. ಒಮ್ಮೆ ದಂಡಕನು ಬೇಟೆಯಾಡುತ್ತ ಬಂದವನು ಒಂದೆಡೆ ಕಲ್ಲಿನ ಹಾಗೆ ತಪಸ್ಸಿನಲ್ಲಿ ತೊಡಗಿದ್ದ ಮಹಾ ಋಷಿಗಳನ್ನು ನೋಡುತ್ತ ಬೇಟೆಯಾಡುವುದನ್ನು ಮರೆತ. ಅವಿವೇಕಿಯಾದ ಅವನು ಮನೆಗೆ ವಾಪಸು ಬರುವಾಗ ಒಂದು ಸತ್ತ ಹಾವನ್ನು ತಂದು ಮುನಿಗಳ ಕೊರಳಿಗೆ ಸುತ್ತಿ ಹೋದ. ಆದರೆ ಆ ಮುನಿಗಳದು ಉಪಸರ್ಗವು ಹಿಂಗುವವರೆಗೂ ಕೈಯನ್ನು ಚಲಿಸದ ವ್ರತವಾದ್ದರಿಂದ ಸುಮ್ಮನಿದ್ದರು. ಮತ್ತೊಂದು ದಿನ ದಂಡಕನು ಮೃಗಯಾ ನಿಮಿತ್ತವಾಗಿ ಅದೇ ಸ್ಥಳಕ್ಕೆ ಬಂದ. ಮುನಿಗಳ ಕೊರಳಿನಲ್ಲಿದ್ದ ಹಾವಿನ ಕಳೇವರವನ್ನು ಯಾವನೋ ಒಬ್ಬ ತೆಗೆದೆಸೆಯುತ್ತಿದ್ದುದನ್ನು ನೋಡಿ ದಂಡಕ ಅದೇನೆಂದು ಏನೂ ಅರಿಯದವನಂತೆ ಕೇಳಿದ. ಅದಕ್ಕೆ ಆ ಇನ್ನೊಬ್ಬನೆಂದ: "ಯಾರೋ

ಗೊತ್ತಿಲ್ಲ, ಕ್ರೂರಾತ್ಮನಾವನೋ ಈ ದಿವ್ಯ ಮುನಿಗೆ ಇದನ್ನು ತೊಡಿಸಿ ನರಕ ವಾಸಕ್ಕೆ ಎಡೆ ಮಾಡಿಕೊಂಡಿದ್ದಾನೆ." ಆ ಮಾತನ್ನು ಕೇಳಿ ದಂಡಕನಿಗೆ ಭಯವಾಯಿತು; ಜೊತೆಗೆ ಮುನಿಪತಿಯ ಧೈರ್ಯವನ್ನು ಕಂಡು ಮೆಚ್ಚಿಕೆಯೂ ಆಯಿತು. ತಕ್ಷಣವೇ ಮುನಿಯ ಕಾಲಿಗೆ ಬಿದ್ದು ಕ್ಷಮೆ ಯಾಚಿಸಿದ. ಎಷ್ಟಾದರೂ ಭವ್ಯನಿಗೆ ಉಪಶಮವು ಸಹಜವಲ್ಲವೇ! ತನ್ನನ್ನು ಕ್ಷಮಿಸಬೇಕೆಂದು ಪದೇ ಪದೇ ಬೇಡಿಕೊಂಡ ದಂಡಕನಿಗೆ ಮುನಿಗಳು ಸಂಯಮಿಗೆ ಕ್ಷಮಾಗುಣವೇ ಮುಖ್ಯ ಎಂದುತ್ತರಿಸಿದರು. ಎಡವಿದ ಕಲ್ಲನ್ನೋ ತಾಗಿದ ಮರವನ್ನೋ ಶಪಿಸಿದರೆ ಅದೊಂದು ಬಗೆ; ಆದರೆ ಕರ್ಮಫಲವನ್ನು ಹೋಗಲಾಡಿಸಲು ಸಹಾಯ ಮಾಡುವ ಜನರ ಮೇಲೆ ಮುನಿಸಿಕೊಂಡರೆ ಅದು ಕೃತಘ್ನತೆಯಲ್ಲವೇ! ಹೀಗೆಂದು ಆ ಮುನಿಗಳು ದಂಡಕನಿಗೆ ಅಹಿಂಸಾ ಧರ್ಮವನ್ನು ಉಪದೇಶಿಸಿದರು. ದಂಡಕನು ಅದಕ್ಕನುಗುಣವಾಗಿ ನಡೆದುಕೊಳ್ಳುತ್ತಿದ್ದ. ಆದರೆ ಪಾಪರತರಾದ ಅರಸಿಯೂ ಅಮಾತ್ಯನೂ ಮಧು ಮದ್ಯ ಮಾಂಸಸೇವನೆಯಲ್ಲಿ ಆಸಕ್ತರಾಗಿ ಅರಸನ ಸಚ್ಚಾರಿತ್ರ್ಯವನ್ನು ಕೆಡಿಸಬೇಕೆಂದು ನಿರ್ಧರಿಸಿದರು. ಮುನಿಗಳ ಮೇಲೆ ಸುಳ್ಳು ಕಳ್ಳತನದ ಆರೋಪ ಹೊರಿಸಿ, ಅವರು ಅನಾಚಾರದಲ್ಲಿ ತೊಡಗಿರುವರೆಂದು ದೂರಿದಾಗ ದಂಡಕನು ಮುನಿಗಳ ಬಗ್ಗೆ ಮುನಿಸಿಕೊಂಡ. ಈ ಚಾಡಿಕೋರರ ನುಡಿಗಳನ್ನು ದಿಟವೆಂದೇ ನಂಬಿ ಅವನು ಎಲ್ಲೆಡೆ ಡಂಗುರ ಹೊಯ್ಸಿ ಜೈನಮುನಿ ಸಂಕುಲವನ್ನು ನಗರದಿಂದ ಹೊರಹಾಕಿಸಿದ. ಮುನಿಗಳಾರಾದರೂ ಊರನ್ನು ಹೊಕ್ಕರೆ ಅವರನ್ನು ಕೊಲ್ಲುವ ಆಜ್ಞೆ ಹೊರಡಿಸಿದ. ಈ ಆಜ್ಞೆಯನ್ನು ಅರಿಯದ ಕೆಲವರು ಮುನಿಗಳು ಊರಿಗೆ ಬಂದಾಗ ಅವರನ್ನು ಪಾತಕಿಯಾದ ದಂಡಕನು ಕೊಲ್ಲಿಸಿದ ಕೂಡ. ಈ ಬಗೆಯಲ್ಲಿ ಋಷಿವಧೆಯಿಂದ ಉತ್ಕಟ ಪಾಪಸಂಚಯ ಮಾಡಿಕೊಂಡ.

ಹೀಗಿರಲು ಒಂದು ದಿನ ಆ ಊರಿಗೆ ಮಹಾ ತಪೋಧನರಾದ ಅನೇಕ ಮಂದಿ ವಿಹಾರಿಗಳು ಬಂದರು. ಅವರನ್ನು ದಾರಿಯಲ್ಲಿ ಕಂಡ ಒಬ್ಬನು ಈಗ ಊರನ್ನು ಪ್ರವೇಶಿಸುವುದು ಬೇಡವೆಂತಲೂ, ಮತ್ತಾವಾಗಲಾದರೂ ಬರುವಂತೆಯೂ ವಿನಂತಿಸಿಕೊಂಡ. ಅದಕ್ಕೆ ಕಾರಣವೇನೆಂದು ಅವರು ವಿಚಾರಿಸಲಾಗಿ, ಇವನು ದಂಡಕನ ಋಷಿಘಾತದ ವಿಷಯವನ್ನು ತಿಳಿಸಿದ. ಇದರಿಂದ ಒಗೆದ ಕರುಣಾರಸವು ವಿಷವೃಕ್ಷದ ಬೀಜವು ಮೊಳೆಯುವಂತೆ ಮಾಡಿತು. ಚತುರಂಗಬಲಸಮೇತನಾದ ತನ್ನನ್ನಾರು ಎದುರಿಸಬಲ್ಲರು, ತನ್ನ ದೋಃಪರಿಘವು ದುರ್ಧರವೆಂದು ಬಗೆದು ನಿಷ್ಕಾರಣವಾಗಿ ಸಾಧುಜನವನ್ನು ಕೊಂದ ದಂಡಕನ ಬಗ್ಗೆ ಆ ಮುನಿಗೆ ಕೋಪಾವೇಶವುಂಟಾಯಿತು. ತನ್ನ ಕೋಪವೆಂಬ ಉರಿಯಿಂದ ಅರಸ ಅರಸಿ ಊರು ನಾಡು ಕಾಡು ಪರಿಜನರೆಲ್ಲರನ್ನೂ ಆ ಮುನಿಯು ಸುಟ್ಟುರುಹಿದ. ಹೇಳಹೆಸರಿಲ್ಲದಂತೆ ರಾಜನ ವಂಶವನ್ನೆಲ್ಲ ವಹ್ನಿಜ್ವಾಲೆಯು ಆಸ್ವಾದಿಸಿತು. ಎಲ್ಲವನ್ನೂ ಸುಟ್ಟ ಮುನಿಯ ಕೋಪಾಗ್ನಿಯು ಅವನ ಗತಿಯನ್ನೂ ಕೆಡಿಸಿತು. ಅರಿವುಳ್ಳವನು ಮುಳಿಸನ್ನು ಹತ್ತಿಕ್ಕಿಕೊಳ್ಳಬೇಕಲ್ಲವೇ? ಹೀಗೆ ಸಾಧುಸಂಘವನ್ನು ವಧೆಗೈದ ಅರಸ ಅರಸಿ ಅಮಾತ್ಯರೂ, ಕ್ರೋಧಕ್ಕೆ ಮನಸ್ಸನ್ನಿತ್ತ ತಪಸ್ವಿಯೂ ಸತ್ತು ನರಕದಂಡನೆಗೊಳಗಾದರು; ಆನಂತರ ಅನೇಕ ದುರ್ಗತಿಗಳಲ್ಲಿ ತೊಳಲಿದರು. ಅವರಲ್ಲಿ ದಂಡಕನು ಈಗ ಹದ್ದಾಗಿದ್ದಾನೆ ಎಂಬ ಮಾತನ್ನು ಕೇಳಿ ಆ ಪಕ್ಷಿಗೆ ಖೇದವುಂಟಾಯಿತು.

ತಿಳಿವಳಿಕೆಯಿಲ್ಲದೆ ಅವನು ನರಕವನ್ನನುಭವಿಸಿದನೆಂದೂ, ಈಗ ತಮ್ಮನ್ನು ಕಂಡ ಕಾರಣದಿಂದ ಅವನ ಕರ್ಮಬಂಧವು ಹರಿಯಿತೆಂದೂ ಚಾರಣ ಮುನಿವರ್ಯರು ಅದರ ಮನೋವಿಷಾದವನ್ನು ಕಳೆದರು. ಅದಕ್ಕೆ ಬಿಡುಗಡೆಯ ಕಾಲ ಸಮನಿಸಿತೆಂದು ತಿಳಿದು ಅಣುವ್ರತಗಳನ್ನು ಉಪದೇಶಿಸಿದರು. ಅಂತೆಯೇ ರಾಮಲಕ್ಷ್ಮಣಸೀತೆಯರನ್ನು ಹರಸಿ ಚಾರಣರು ಹೋದರು.

ರಾಮಾದಿಗಳು ಸುಗುಪ್ತ ಚಾರಣರ ತಪಸ್ಸಾಮರ್ಥ್ಯದರ್ಶನ ಬಲದಿಂದ ಕೃತಾರ್ಥರಾಗಿ ಮಾರನೆಯ ದಿನ ದಂಡಕಾರಣ್ಯದಲ್ಲಿ ದಕ್ಷಿಣ ದಿಕ್ಕಿಗೆ ಪಯಣ ಬೆಳಸಿದರು. ಕೌಂಚ ನದಿಯನ್ನು ದಾಟಿ ಒಂದೆಡೆ ವಿಶ್ರಮಿಸಿದರು. ಆ ನದಿಯ ಸಮೀಪದಲ್ಲಿ ಸರ್ವರತ್ನಗರ್ಭವೆನಿಸಿದ ದಂಡಕ ಗಿರಿಯಿತ್ತು. ಅದರಲ್ಲಿ ಎಂಟನೇ ಒಂದು ಯೋಜನದಾಳದಲ್ಲಿ ಪಾತಾಳಲಂಕೆ ಎಂಬ ಪುರವಿತ್ತು. ಅದರ ಅರಸು ಖರ; ಅವನ ಹೆಂಡತಿ ರಾವಣನ ತಂಗಿಯಾದ ಚಂದ್ರನಖಿ; ಅವರಿಗೆ ಶಂಭುಕ ಸುಂದರ ಎಂಬ ಇಬ್ಬರು ಗಂಡುಮಕ್ಕಳು. ಹಿರಿಯ ಮಗ ಶಂಭುಕನು ಕಳೆದ ಹನ್ನೆರಡು ವರ್ಷಗಳಿಂದ ಸೂರ್ಯಹಾಸವೆಂಬ ಖಡ್ಗಕ್ಕಾಗಿ ಸಾಧನೆ ಮಾಡುತ್ತಿದ್ದ. ಅವನ ಯೋಗಕ್ಷೇಮ ವಿಚಾರಿಸಿ ಆ ಖಡ್ಗವನ್ನು ದಯಪಾಲಿಸಲೆಂದು ಸಹಸ್ರಾರು ಯಕ್ಷರೂ ಅಮರರೂ ಬಂದರು; ಆ ಖಡ್ಗರತ್ನವನ್ನು ಒಂದು ಬಿದಿರ ಮೆಳೆಯಲ್ಲಿರಿಸಿ ಮೇರು ಮಂದಾರ ಪುಷ್ಪಗಳಿಂದ ಅರ್ಚಿಸಿದರು.

ಇತ್ತ ಲಕ್ಷ್ಮಣನು ವನವಿಲಾಸನಿರೀಕ್ಷಣಕುತೂಹಲದಿಂದ ಆ ಕಡೆಗೇ ಬಂದ. ಖಡ್ಗಸಿದ್ಧಿಯ ಸಮಾಚಾರವನ್ನು ಹೊತ್ತು ತಂದ ದೇವದೂತನಂತೆ ಸುಳಿಗಾಳಿಯೊಡನೆ ಹರ್ಷದ ಮಳೆಯಂತೆ ಒಂದು ದಿವ್ಯ ಪರಿಮಳವು ಬಂದು ಲಕ್ಷ್ಮಣನ ಮೂಗಿಗೆ ಬಡಿಯಿತು. ಅವನಿಗೆ ಅದು ಭೂಲೋಕದ ಕುಸುಮಸೌರಭದಂತೆ ತೋರದೆ, ದೇವಲೋಕದ ಮಂದಾರಸೌರಭವಿರಬೇಕೆನ್ನಿಸಿತು. ಆ ತನಿಗಂಪಿನ ಹಾದಿಯನ್ನೇ ಅನುಸರಿಸಿ ದುಂಬಿಯ ಹಾಗೆ ಬಂದ ಜನಾರ್ದನನು ಹಸಿರಿನಿಂದ ನಳನಳಿಸುತ್ತಿದ್ದ ಆ ಬಿದಿರ ಮೆಳೆಯನ್ನು ತಲುಪಿದ. ಅವನ ಪಾದಪದ್ಮರುಚಿಯಿಂದ ಆ ಸ್ಥಳವೂ, ದೇಹಕಾಂತಿಯಿಂದ ವಂಶಸ್ಥಳವೂ ದ್ವಿಗುಣ ದೀಪ್ತಿಯನ್ನು ಪಡೆದವು. ದೇವಕುಸುಮಗಳಿಂದಲೂ ರತ್ನಮಾಲೆಯಿಂದಲೂ ಅರ್ಚಿತಗೊಂಡು ಪೊದರಿನ ಮೇಲಿದ್ದ ಆ ಸೂರ್ಯಹಾಸಿಯನ್ನು ಕಂಡು ಅದಕ್ಕೆಂದು ಅವನು ಕೈನೀಡಿದ. ಜಯಲಕ್ಷ್ಮಿಯ ನಯನೋತ್ಪಲಕಾಂತಿಯಂತೆ ಹೊಳೆಯುತ್ತಿದ್ದ ಆ ಅಸಿಯು ತಾನಾಗಿ ಬಂದು ಲಕ್ಷ್ಮಣನ ಕೈಗಳಲ್ಲಿ ಸೇರಿತು. ಕಾಳಸರ್ಪದಂತಿದ್ದ ಅವನ ತೋಳಿನಲ್ಲಿ ಆ ಕತ್ತಿಯು ಹೊಗೆಯ ನಿಶ್ವಾಸಧೂಮದಂತೆ ತೋರಿತು. ಅದನ್ನು ಹಿಡಿದು ರಭಸವಾಗಿ ಝಳಪಿಸಿದ; ಆ ರಭಸಕ್ಕೆ ನೆಳಲಿನ ರೂಪದಲ್ಲಿ ದಿನಪತಿಯೇ ನಡುಗಿಬಿಟ್ಟ. ಕೂರ್ಪನ್ನು ಪರೀಕ್ಷಿಸಲೆಂದು ಜನಾರ್ದನನು ಕತ್ತಿಯಿಂದ ಬಿದಿರ ಮೆಳೆಗೆ ಬೀಸಿದ; ನೈದಿಲೆಯ ದಂಟಿನ ಹಾಗೆ ವಂಶವನವು ಹರಿದು ಬಿತ್ತು. ಅದರೊಡನೆ ಒಂದು ತಲೆ ಹರಿದು ಮೇಲೆ ಹಾರಿತು; ಅಟ್ಟೆಯಿಂದ ರಕ್ತಧಾರೆಯು ಚಿಮ್ಮಿ, ಧಾರೆಯ ನಾಳದ ಮೇಲಿನ ಕೆಂದಾವರೆಯಂತೆ ರಕ್ತಸಿಕ್ತ ತಲೆ ಕಾಣಿಸಿತು.

ಅದನ್ನು ಕಂಡು ಲಕ್ಷ್ಮಣನಿಗೆ ತಾನು ನಿರಪರಾಧಿಯನ್ನು ಕೊಂದ ಪಾಪಪ್ರಜ್ಞೆ

ಆವರಿಸಿತು. ದೀರ್ಘಕಾಲ ದೃಢನಿಶ್ಚಯದಿಂದ ದೇಹವನ್ನು ನಿರೋಧಿಸಿ ಸಾಧಿಸಿದ ಈ ಕೃಪಾಣವೇ ಅವನ ಮೃತ್ಯುವಿಗೆ ಕಾರಣವಾಯಿತಲ್ಲ ಎಂದು ಲಕ್ಷ್ಮೀಧರನ ಮನಸ್ಸು ಕರುಣೆಯಿಂದ ತುಂಬಿತು. ಆಗ ಆ ಖಡ್ಗವನ್ನು ರಕ್ಷಿಸುತ್ತಿದ್ದ ಯಕ್ಷಾಮರಸಹಸ್ರವು ಲಕ್ಷ್ಮಣನಿಗೆ "ನೀನೇ ನಮ್ಮ ಒಡೆಯ" ಎಂದು ನಮಸ್ಕರಿಸಿ ಹೋದರು. ಅಚ್ಯುತನು ಅಣ್ಣನ ಬಳಿ ಬಂದು ಕರವಾಳದ ವೃತ್ತಾಂತವನ್ನೆಲ್ಲ ಸಾದ್ಯಂತವಾಗಿ ನಿರೂಪಿಸಿ, ಕಣ್ಣುಕೋರೈಸುವ ಆ ಕತ್ತಿಯನ್ನು ಅವನ ಕೈಗಿತ್ತ. ಬಲದೇವನ ದೇಹಕಾಂತಿಯು ಅದನ್ನು ಆವರಿಸಿದಾಗ ಅದು ಚಂದ್ರಹಾಸದಂತೆ ತಣ್ಣಗಾಯಿತು.

ಅಷ್ಟು ಹೊತ್ತಿಗೆ ಈ ಕಡೆ, ತನ್ನ ಮಗನು ಇಂದು ದಿವ್ಯ ಖಡ್ಗದ ಸಿದ್ಧ ಪಡೆಯುತ್ತಾನೆಂಬ ಉತ್ಸಾಹದಿಂದ ಚಂದ್ರನಖಿಯು ಉಲ್ಕಾಪಾತದ ಹೊಳಪಿನಿಂದ ಕೂಡಿ ನಾನಾ ಪೂಜಾಸಾಮಗ್ರಿಗಳೊಡನೆ ಆಗಸದಿಂದ ನೆಲಕ್ಕಿಳಿದಳು. ಬಂದು ನೋಡಿದರೆ, ಮಗನ ತಲೆ ಒಂದೆಡೆಗಿದೆ; ದೇಹ ಮತ್ತೊಂದೆಡೆ! ಭಯದಿಂದ ಕೂಡಿದ ಅವಳ ಎದೆ ಹವ್ವನೆ ಹಾರಿ, ವಿಷಾದ ವಹ್ನಿಗೆ ಇಂಧನವಾಯಿತು. "ಖರನ ಮಗನೂ, ದಶಕಂಧರನ ಅಳಿಯನೂ ಆದ ಶಂಭುಕಕುಮಾರನ್ನು ಕೊಂದವರಾರೋ!" ಎಂದು ಹೊಟ್ಟೆ ಹೊಸೆದುಕೊಂಡು ಅತ್ತಳು. ಅತ್ತೂ ಅತ್ತೂ ಬಾಯಿ ಬತ್ತಿತು, ಹೊಡೆದುಕೊಂಡು ಕೈಬೆರಳುಗಳು ಊದಿಕೊಂಡವು, ಕಣ್ಣೀರಿನ ಹೊನಲು ಕೆನ್ನೆಗಳ ಮೇಲೆ ಹರಿಯಿತು; ಶೋಕರಸಾಕುಳಚಿತ್ತೆಯಾಗಿ ಅವಳು ಮೂರ್ಚೆವೋದಳು. ಸ್ವಂತ ಮಗನ ವಿಯೋಗವನ್ನಾರು ತಾನೇ ಸೈರಿಸಬಲ್ಲರು?

ಕೆಲಕಾಲಾನಂತರ ಮೈತಿಳಿದೆದ್ದು, ಹನ್ನೆರಡು ವರ್ಷಗಳ ಕಾಲ ದೇಹವನ್ನು ದಂಡಿಸಿ ಬಾಳನ್ನು ಪಡೆದ ಬಾಲಕನನ್ನು ಕೊಂದವನ ಬೇರಿಗೆ ಕುದಿನೀರನ್ನು ಸುರಿಯುವೆನೆಂದು ನಿಶ್ಚೈಸಿ ಮೇಲೆದ್ದಳು. ದುಃಖಕೋಪಗಳೆರಡೂ ಬೆರೆತು ಆ ಖೇಚರಿಯು ಸಿಡಿಲುಮಿಂಚುಗಳಿಂದ ಕೂಡಿ ಕೆಂಡದ ಮಳೆ ಸುರಿಸುವ ಪ್ರಲಯಕಾಲದ ಮೋಡದಂತಿದ್ದಳು. ರೋದನದಿಂದ ಸುತನ ಶಿರಚ್ಛೇದನದ ಅಳಲು ಆರದು, ಅದು ಆರುವುದು ಶತ್ರುವಿನ ರಕ್ತವನ್ನು ಕುಡಿದಾಗ ಮಾತ್ರವೇ ಎಂದು ಅವಳು ಸರ್ವವಿನಾಶಕಾರೀ ಭೈರವಿಯ ರೂಪವನ್ನು ಪಡೆದಳು. ಹೆಜ್ಜೆ ಗುರುತುಗಳನ್ನು ಅನುಸರಿಸುತ್ತ ಕೊನೆಗೆ ರಾಮಲಕ್ಷ್ಮಣರಿದ್ದ ಜಾಗಕ್ಕೆ ಬಂದಳು. ಅಲ್ಲಿದ್ದ ಲಕ್ಷ್ಮಣನನ್ನು ಕಂಡವಳಿಗೆ ತನ್ನ ಪುತ್ರವಿಯೋಗವು ಮರೆತೇ ಹೋಯಿತು; ತನ್ನ ಕಂದನನ್ನು ಕೊಂದವನನ್ನು ಕೊಲ್ಲಲು ಮಾಡಿದ್ದ ಪ್ರತಿಜ್ಞೆ ಹಿಂದೆ ಸರಿಯಿತು; ಅದರ ಬದಲು ಲಕ್ಷ್ಮಣನ ಗಾಡಿಯು ಅವಳನ್ನು ಆಕರ್ಷಿಸಿ ಅವನನ್ನು ಕೂಡುವ ಆಸೆ ಮೈದೋರಿತು. ವಿಷಯಾಸವಮತ್ತರಿಗೆ ಮತ್ತೇನು ಯೋಚನೆ ಇರಬಲ್ಲುದು!

ಕಂತುಸಂತಾಪದಿಂದಾದ ಅವಳ ನಡತೆ ಪರಿವರ್ತನಗೊಂಡಿತು. ತನ್ನ ರೂಪಪರಾವರ್ತನ ವಿದ್ಯೆಯಿಂದ ಚಂದ್ರನು ತಾರುಣ್ಯಲಕ್ಷ್ಮಿಯನ್ನು ಪಡೆದಂತೆ ಅವಳು ಸುಂದರಳಾದ ಕನ್ಯೆಯಾಗಿ ಮಾರ್ಪಟ್ಟಳು. ನನಗಣೆಯ ಅಧಿದೇವತೆಯಂತೆ ರಾಮಾದಿಗಳ ಬಳಿ ಬಂದಳು; ನೆಯ್ದಿಲ ಎಸಳಿನಲ್ಲಿ ಅಮೃತದ ಹನಿಗಳಿರುವಂತೆ ತನ್ನ ಕಣ್ಣುಗಳಲ್ಲಿ ನೀರು ತಂದುಕೊಂಡಳು. ಪ್ರವಾಹದಲ್ಲಿ ಬೆಂಡು ತೇಲಿದಂತೆ, ತಿಳಿನೀರಲ್ಲಿನ ಚಂದ್ರಬಿಂಬದಂತೆ ಅವಳು ಕೃತಕ ಶೋಕವನ್ನು ತಂದುಕೊಂಡಳು. ಅವಳ

ದುಃಖವನ್ನು ಕಂಡ ಜನಕಾತ್ಮಜೆ ಚಂದ್ರನಖಿಯನ್ನು ಹತ್ತಿರ ಕರೆತಂದು ಕುಳ್ಳಿರಿಸಿಕೊಂಡು ಕಣ್ಣನೀರನ್ನೊರೆಸಿ ಸಾಂತ್ವನ ಹೇಳಿದಳು. ಪಾಪ, ಅವಳಿಗೆ ಈ ಕನ್ಯೆಯ ಕಪಟ ಹೇಗೆ ತಿಳಿಯಬೇಕು! ಅವಳ ಕಡೆ ರಘುವೀರನೂ ಕರುಣಾರಸ ತುಂಬಿದ ಪ್ರಸನ್ನ ದೃಷ್ಟಿಯನ್ನು ಬೀರಿದ. "ಬಿಸಿಲುಬೆಳದಿಂಗಳುಗಳೂ ಗಾಳಿಯೂ ಒಳಬರಲು ಅಸಾಧ್ಯವೆನಿಸಿದ ಈ ದುರ್ಗಮ ಅರಣ್ಯಕ್ಕೆ ನೀನು ಹೆದರಿಕೆಯಿಲ್ಲದೆ ಹೇಗೆ ಬಂದೆ?" ಎಂದವನು ಬೆಸಗೊಂಡ. ಆಗ ಕಪಟಿಯಾದ ಅವಳು ತನ್ನ ಕರಗಳನ್ನು ಜೋಡಿಸಿ, "ನನ್ನ ತಾಯ್ತಂದೆಯರನ್ನು ಯಮನು ಒಮ್ಮೆಗೇ ಕರೆದೊಯ್ದ. ನಿಸ್ಸಹಾಯಕತೆಯಿಂದ ನಾನು ಈ ಹಳುವಿನಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸಿ ಬಂದೆ. ಆದರೆ ನನ್ನ ಪುಣ್ಯೋದಯದಿಂದ ನಿಮ್ಮ ದರ್ಶನವಾಯಿತು. ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು ನನ್ನನ್ನು ಗಾಂಧರ್ವವಿಧಿಯಿಂದ ವಿವಾಹವಾಗಿ" ಎಂದು ಬೇಡಿಕೊಂಡಳು. ಅದನ್ನು ಕೇಳಿದ ಜನಕಜೆ ಮುಗುಳ್ನಗುತ್ತ ರಾಮಲಕ್ಷ್ಮಣರ ಕಡೆ ನೋಡಿದಳು; ಚಂದ್ರನಖಿ ಸಿಗ್ಗುಗೊಂಡಳು. ಮಗನು ಸತ್ತ ದುಃಖವನ್ನೂ ಮರೆತು ಆ ಪಾತಕಿಯು ಪರಪುರುಷನಿಗೆ ಅಳುಪಿದಳು. ಇಚ್ಛೆ ಕೈಗೂಡದಾಗ ಅವಳ ಮನಸ್ಸಿನ ಉಬ್ಬೆಗವು ಇಮ್ಮಡಿಸಿತು. ಇವರಿಗೆ ತಕ್ಕುದ್ದನ್ನು ಮಾಡುವೆನೆಂಬ ಕೋಪದಿಂದ ಅವರ ದೃಷ್ಟಿವಲಯದಿಂದ ದೂರ ಹೋಗಿ ಮಿಂಚಿನಂತೆ ಆಕಾಶಕ್ಕೆ ನೆಗೆದಳು.

ಮನೋವೇಗದಿಂದ ಹೋದ ಅವಳು ಊರನ್ನು ಸೇರಿ ಅರಮನೆಯನ್ನು ಹೊಕ್ಕಳು. ಕೂದಲನ್ನು ಕೆದರಿಕೊಂಡು, ಕಣ್ಣ ನೀರನ್ನು ಸುರಿಸುತ್ತ, ಹೊಟ್ಟೆ ಹೊಸೆದುಕೊಳ್ಳುತ್ತ, ಜೋರಾಗಿ ಅಳುತ್ತ ತನ್ನ ಗಂಡನಾದ ಖರನ ಚರಣೋಪಾಂತದಲ್ಲಿ ಕೆಡೆದಳು. ಅವಳ ಶೋಕಕ್ಕೆ ಕಾರಣವೇನೆಂದು ಅವನು ಬೆಸಗೊಂಡ. ಮಗನನ್ನು ಕಾಣುವ ಆಸೆಯಿಂದ ಕಾಡಿಗೆ ಹೋಗಿ ನೋಡಿದಾಗ, ಅವನ ರುಂಡಮುಂಡಗಳೆರಡೂ ಬೇರ್ಪಟ್ಟಿದ್ದುದನ್ನು ಕಂಡ ತನ್ನ ಹೊಟ್ಟೆಯಲ್ಲಿ ಕತ್ತಿಯಿಂದ ಚುಚ್ಚಿದಂತಾಗಿ ಶೋಕಾನಲವು ದೇಹವನ್ನು ಸುಡಲು ತಾನು ಮೂರ್ಚೆಗೆ ಸಂದುದು, ಎಚ್ಚರಗೊಂಡು ಮಗನ ಸಾವಿಗೆ ಕಾರಣನಾದವನನ್ನು ಕೊಲ್ಲಲು ಹೋದಾಗ ತನಗೆ ಅವಮಾನವಾದುದು ಇವುಗಳನ್ನು ಅರ್ಧ ನಿಜ, ಅರ್ಧ ಸುಳ್ಳನ್ನು ಬೆರೆಸಿ ಹೇಳಿದಳು. "ನಿನ್ನ ಹೆಂಡತಿಯಾಗಿ, ತ್ರಿಭುವನ ವಿಜಯಿಯಾದ ದಶಾಸ್ಯನ ತಂಗಿಯಾಗಿ ನನಗೆ ಈ ಪರಿಭವವುಂಟಾಯಿತು. ಇದು ನನ್ನ ಹಿಂದಿನ ಜನ್ಮದ ಕರ್ಮಬಂಧವಿರಬೇಕು. ನನ್ನ ಮಗನನ್ನು ಕೊಂದ ಮನುಜರು ಕವಚ ತೊಟ್ಟು, ಬಿಲ್ಲುಬಾಣಗಳನ್ನು ಹಿಡಿದು ತಮ್ಮನ್ನು ಮೀರಿಸುವವರಾರೂ ಇಲ್ಲ ಎಂಬ ಗರಿಮೆಯಿಂದ ಕೂಡಿದ್ದಾರೆ" ಎಂದು ಗೋಳಿಟ್ಟಳು. ದಾರಕವಿದಾರಣ, ದಾರಪರಾಭವಗಳ ವಿವರಗಳು ಖರನ ಕಿವಿಯಲ್ಲಿ ಕಾದ ಕಬ್ಬಿಣವನ್ನು ಸುರಿದಂತಾಯಿತು. ಅವನ ಎದೆಯಲ್ಲಿಯೂ ದುಃಖ ತುಂಬಿಕೊಂಡಿತು. ಬೀಜದಿಂದ ಮೂಡಿದ ವಿಷದ ಮೊಳಕೆಯ ರೀತಿಯಲ್ಲಿ ಅವನ ಶೋಕಬೀಜವು ಕೋಪಾಗ್ನಿಯನ್ನುಂಟುಮಾಡಿ ಅದು ಬಳ್ಳಿಯಂತೆ ಹಬ್ಬಿತು. ಕೋಪಾನಲ ಧೂಮಲೇಖೆಯಂತೆ ಆ ದೈತ್ಯನ ಹುಬ್ಬುಗಳು ಹಾರಿದವು; ಕೋಪಶೀಖಿಯು ಹೊಮ್ಮಿದಂತೆ ಕಣ್ಣುಗಳು ಕೆಂಪಾದವು; ಕೋಪಾನಲ ತಾಪದಿಂದ ರಣರಸವು ಕಾದು ಉಕ್ಕೇರುವಂತೆ ಕೆನ್ನೆಗಳ ಮೇಲೆ ಬೆವರಹನಿಗಳು ಮೂಡಿದವು. ಮಗನನ್ನು ಕೊಂದು ತನ್ನ ಹೆಂಡತಿಗೆ ಅವಮಾನ ಮಾಡಿದವನೊಡನೆ ಹೋರಾಡಿ ಅವನ ತಲೆಯನ್ನು ಕಿತ್ತುಕೊಳ್ಳುವುದಾಗಿ

ಅವನು ಪ್ರತಿಜ್ಞೆ ಮಾಡಿದ. ದೇವದಾನವರೇ ತನ್ನ ಎದುರು ನಿಲ್ಲಲಾರರೆಂದಾಗ, ಹುಲು ಮಾನವರು ತನ್ನನ್ನೆದುರಿಸಬಲ್ಲರೇ ಎಂದು ಅವರನ್ನು ದೆಸೆಬಲಿಗೊಡುವುದಾಗಿ ಗರ್ಜಿಸಿದ; ಕತ್ತಿಯನ್ನು ಸೆಳೆದುಕೊಂಡ. ಆಗ ಮಂತ್ರಿಗಳು ಅವನಿಗೆ ಬುದ್ಧಿ ಹೇಳಿದರು: ನೀನು ಹೋರಾಡಲು ಪಣ ತೊಟ್ಟವರು ಸಾಧಾರಣರಿರಲಾರರು; ಸೂರ್ಯಹಾಸವನ್ನು ದಕ್ಕಿಸಿಕೊಂಡವರೆಂದ ಮೇಲೆ ಅವರು ಮಾನವಮಾತ್ರರಾಗಿರಲಾರರು ಎಂದು ವಿದ್ಯಾಧರನನ್ನು ಎಚ್ಚರಿಸಿದರು; ಸಾಮಂತರನ್ನೆಲ್ಲ ಬರಮಾಡಿಕೊಂಡು ವಿಚಾರಿಸಿ ಆನಂತರ ಸಮರ ಸನ್ನದ್ಧನಾಗಬೇಕೆಂದು ಬಿನ್ನವಿಸಿಕೊಂಡರು; ಮನುಷ್ಯರಾಗಿಯೂ ಅಜೇಯರಾದ ಅವರ ಸ್ವರೂಪವನ್ನು ವಿವರಿಸಿದರು. ಅದನ್ನು ಗಮನಿಸಿದ ಖರನು ಅವರ ವಿಷಯವನ್ನು ದಶಕಂಧರನಿಗೆ ತಿಳಿಸಲು ದೂತರನ್ನಟ್ಟಿದ.

ಆನಂತರ ಕನಕಾಚಲದ ತುದಿಯಿಂದ ಎದ್ದು ಕೋಪಗೊಂಡು ಗರ್ಜಿಸುತ್ತ ಮೇಲೇಳುವ ಸಿಂಹದಂತೆ ಖಡ್ಗದಂತೆ ಚೂಪಾದ ಉಗುರುಗಳುಳ್ಳ ಖರನು ಸಿಂಹಾಸನದಿಂದೆದ್ದ. ಅವನ ಜೊತೆಗೇ ಹದಿನಾಲ್ಕು ಸಾವಿರ ಮಣಿಮಕುಟರು ಮೇಲೆದ್ದಾಗ ಅವರ ಕಿರೀಟದ ಕಾಂತಿಯು ಅಡವಿಯನ್ನು ಆವರಿಸುವ ಕಾಡುಗಿಚ್ಚಿನ ಬೇಗೆಯಂತೆ ಆಗಸವನ್ನು ಆವರಿಸಿತು. ಹಾಗೆ ಅಸಂಖ್ಯಾತ ಸಾಮಂತಸೇನೆಯೊಡನೆ ಖರ ಮತ್ತು ದೂಷಣರು ಗಾಳಿಗೆದುರಾಗಿ ಮುನ್ನುಗ್ಗುವ ಮುಗಿಲ ರಾಶಿಯಂತೆ ಗಗನವೀಧಿಯಲ್ಲಿ ರಾಮಲಕ್ಷ್ಮಣರನ್ನು ಅರಸಿ ಹೊರಟರು.

ಆ ಸೇನೆಯ ತಮಟೆ ಭೇರಿ ನಗಾರಿ ಮುಂತಾದ ರಣವಾದ್ಯಗಳು ಸಮುದ್ರಘೋಷದಂತೆ ಕೇಳಿ ಬರಲು ಸೀತೆಯು ಕುತೂಹಲ ಗಾಬರಿಗಳಿಂದ ಅದೇನೆಂದು ರಾಮನನ್ನು ಕೇಳಿದಳು. ತನಗೆ ಸಿಕ್ಕಿದ ಕತ್ತಿಯ ಹರಿತವನ್ನು ಪರೀಕ್ಷಿಸಲು ಲಕ್ಷ್ಮಣನು ಅದನ್ನು ಬಿದಿರ ಮೆಳೆಯಲ್ಲಿ ಬೀಸಿದಾಗ ಅದರೊಡನೆ ಕತ್ತು ಕತ್ತರಿಸಿ ಸತ್ತವನ ಬಂಧುಗಳು ತಮ್ಮ ಮೇಲೆ ಕಾಳಗಕ್ಕೆ ಬರುತ್ತಿರಬೇಕೆಂದು ಊಹಿಸಿದ ರಾಮನು, ಗಗನಚರರ ಪ್ರಚಂಡ ಬಲಕ್ಕೆದುರಾಗಿ ಕಾಳಗಕ್ಕೆ ಸಿದ್ಧವಾಗುವವನಂತೆ, ಜಾನಕಿಯ ಮುಖಸರೋರುಹದಲ್ಲಿ ನೆಲಸಿದ್ದ ಪ್ರಶ್ನೆಗೆ ಉತ್ತರಿಸುವವನಂತೆ, ತನ್ನ ಕೈಯನ್ನು ದಿವ್ಯಚಾಪದ ಮೇಲಕ್ಕೆ ತಂದ. ಆಗ ಲಕ್ಷ್ಮಣನು, "ವಜ್ರಾವರ್ತ ಚಾಪಕ್ಕೆ ನೀವು ಕೈಯಿಡುವಷ್ಟು ಶತ್ರುಗಳ ಬಲ ದೊಡ್ಡದೇ? ಆ ಬಿಲ್ಲಿನ ವಿರುದ್ಧ ದೇವೇಂದ್ರ ಧರಣೀಂದ್ರರಲ್ಲದೆ ಬೇರಾರು ನಿಲ್ಲಬಲ್ಲರು? ನನಗೆ ಅನುಜ್ಞೆ ಕೊಡುವುದಾದರೆ ಈ ವಿದ್ಯಾಧರ ಸೈನ್ಯವನ್ನು ಒಂದು ನಿಮಿಷದಲ್ಲಿ ಹದ್ದುಗಳಿಗೆ ಔತಣವಾಗಿಸುತ್ತೇನೆ" ಎಂದ. ರಾಮ ಅದಕ್ಕೆ ಒಪ್ಪಿಗೆಯಿತ್ತ. ಅಪಾಯಗಳಿಂದ ತುಂಬಿದ ಕಾಡಿನಲ್ಲಿ ಸೀತೆಯನ್ನು ಅಗಲದಿರಬೇಕೆಂದು ಬಿನ್ನವಿಸಿಕೊಂಡ ಲಕ್ಷ್ಮಣನು, ತನಗೆ ಯುದ್ಧವು ಕಷ್ಟಕರವೆನಿಸಿದಾಗ ತಾನು ಸಿಂಹನಾದವನ್ನು ಮಾಡುವುದಾಗಿಯೂ, ಆಗ ನೆರವಿಗೆ ಬರಬೇಕೆಂದೂ ವಿನಯದಿಂದ ನುಡಿದು ಅಣ್ಣಅತ್ತಿಗೆಯರನ್ನು ಬೀಳ್ಕೊಂಡ.

ಎದೆಯ ಮೇಲೆ ಕವಚವನ್ನು ಸುತ್ತಿಕೊಂಡು, ಹೆಗಲಿಗೆ ಬತ್ತಳಿಕೆಯನ್ನು ಬಿಗಿದು, ಬಿಲ್ಲಿಗೆ ಹೆದೆಯೇರಿಸಿ ಠೇಂಕಾರ ಮಾಡಿದ ಜನಾರ್ದನನು ವಿಯಚ್ಚರ ಸೇನೆಯನ್ನೆದುರಿಸಲು ಹೊರಟ. ಎದುರಿನ ಸೈನ್ಯದಲ್ಲಿ ಆಯುಧಗಳನ್ನು ಹಿಡಿದ ನಾಯಕರ ದಂಡನ್ನು ಕಂಡು ಅವನಿಗೆ ಬೆಳ್ಳಕ್ಕಿಗಳ ಹಿಂಡನ್ನು ಕಂಡಂತಾಯಿತು. ಭೂಮಿಯ ಮೇಲೆ ನಿಂತು ತನ್ನ ಬಿಲ್ಲಿಗೆ

ಕೈಯಿಕ್ಕಿದಾಗ ಆಕಾಶದಲ್ಲಿದ್ದವರೆಲ್ಲ ಅವನ ಮೇಲೆ ಅಂಬುಗಳನ್ನೆಸೆದರು; ಆಗ ಬೆಟ್ಟವನ್ನು ಮಂಜಿನ ಮಳೆ ಆವರಿಸಿದಂತಾಯಿತು. ಗಗನೇಚರರು ಸುರಿದ ಹೊಸಮಸೆಯ ಬಾಣಗಳು ಬೆಂಕಿಯ ಬಾಯಿಗೆ ಬೀಳುವ ಮಿಡತೆಗಳಂತೆ ನಗಧರನ ಮೇಲೆ ಬಿದ್ದವು. ಖೇಚರರ ಬಿಲ್ಲುಗಳಿಂದ ಒಂದೇ ಸಮನೆ ಹೊರಬಿದ್ದ ಸೂರ್ಯತೇಜವನ್ನು ಮೀರಿಸಿದ ಕಣೆಗಳು ಬಾಡಬಾಗ್ನಿಯ ಮೇಲೆ ಬೀಳುವ ಮಳೆಯಂತೆ ಹರಿಯ ಮೇಲೆ ಸುರಿದವು. ಆದರೆ ಆ ಶರಪಂಜರವನ್ನು ಸೂರ್ಯಹಾಸದಿಂದ ತರಿದು ಉಪೇಂದ್ರನು ಬಿದಿರಿನ ಹೊದರಿನಿಂದ ಹೊರಬಂದ ಮೃಗೇಂದ್ರನಂತೆ ಕಾಣುತ್ತಿದ್ದ. ಕೃಷ್ಣನು ಬಿರುಸಾಗಿ ಬಾಣಪ್ರಯೋಗ ಮಾಡಲು ಖರನ ಬಲವು ದೆಸೆಗೆಟ್ಟು ಓಡಲಾರಂಭಿಸಿತು. ಆದರೆ ಗರುಡಧ್ವಜನು ಶತ್ರುಗಳನ್ನು ಯಮನಂತೆ ಬೆನ್ನಟ್ಟಿ ಬಾಣಗಳನ್ನು ಬಿಡಲು ವಿಯಚ್ಚರಸೈನ್ಯದಲ್ಲಿ ಕೆಲವರು ಸತ್ತು, ಮತ್ತೆ ಕೆಲವರು ಗಾಯಗೊಂಡರು, ಮಿಕ್ಕುಳಿದವರು ಪಲಾಯನಗೈದರು. ಅವನು ಬಿಟ್ಟ ನಾರಾಚಗಳು ಯಮನ ಆಣತಿಯಿಂದ ಹಿಂಬಾಲಿಸಿದ ದೃಷ್ಟಿವಿಷಾಹಿಗಳಂತೆ ಖಚರರ ಪ್ರಾಣವಾಯುವನ್ನು ಹೀರಿದವು. ಬಾಣ ಬಿಟ್ಟು ಆಗಸದಲ್ಲಿ ಖಚರರ ಹೆಣಗಳನ್ನು ಬಿತ್ತಲು ಅಲ್ಲಿಂದ ನೆತ್ತರ ಮಳೆ ಸುರಿಯಿತು; ಹೆಣಗಳು ನೆಲದ ಮೇಲೆ ಬಿದ್ದವು. ಬಾಣಗಳು ಎಲ್ಲಿಂದ ಬಂದುವೆಂದು ಯಾರಿಗೂ ಕಾಣಿಸದು; ಆದರೆ ಅವು ಚುಚ್ಚಿಕೊಳ್ಳುತ್ತಿದ್ದುದು ಮಾತ್ರ ಗೋಚರವಾಗುತ್ತಿತ್ತು! ಹೀಗಾಗಿ ಅವು ಮಾಯದ ಅಂಬುಗಳಂತೆ ತೋರಿದವು. ವಿಷದ ಬಾಣಗಳೆನ್ನುವಂತೆ ಅವು ಎದುರು ಬಂದವರನ್ನು ಹೊಡೆದುರುಳಿಸಲು ಮೇಲಿನಿಂದ ಹೆಣದ ರಾಸಿ ನೆಲಕ್ಕೆ ಬಿದ್ದು ಆಕಾಶವೆಲ್ಲ ಬಯಲಾಯಿತು. ಹೀಗೆ ಸಿಡಿಲಿನ ಬೆಂಕಿ, ಸಿಂಹದ ಪರಾಕ್ರಮ, ಭೈರವನ ಭೀಕರತೆ ಹಾಗೂ ಪ್ರಳಯಕಾಲದ ಯಮನ ರಭಸಗಳು ಒಂದೆಡೆ ಸೇರಿದಂತೆ ಲಕ್ಷ್ಮಣನು ಖರದೂಷಣರೊಡನೆ ಕಾದುತ್ತಿದ್ದ.

ಅಷ್ಟರಲ್ಲಿ ಇತ್ತ, ರಾವಣನಿಗೆ ಖರದೂಷಣರು ಕಳಿಸಿದ ವಾರ್ತೆ ಮುಟ್ಟಿತು. ಶಂಭುಕನ ಸಾವಿಗೆ ಅವನು ದುಃಖಪಟ್ಟ. ಹುಬ್ಬುಗಳ ಗಂಟಿನಲ್ಲಿ ಕಪ್ಪಾದ ಅವನ ಮುಖವು ಕಗ್ಗತ್ತಲೆಯನ್ನೂ ಹೆದರಿಸುವಂತಿತ್ತು, ಕೆಂಪಾದ ಬಿಡುಗಣ್ಣುಗಳ ಬಣ್ಣವು ಕಿಸುಸಂಜೆಯನ್ನೂ ಅಂಜಿಸುವಂತಿತ್ತು, ಅದುರುವ ತುಟಿಗಳು ಅಲ್ಲಾಡುವ ಕೊಳ್ಳಿಗಳಂತೆ ಕಂಡವು. ಹೀಗೆ ದಶಕಂಧರನು ಪ್ರಳಯಕಾಲದ ಸಮುದ್ರದಂತೆ ಕದಡಿಹೋದ; ತಪಸ್ಸಿನಲ್ಲಿ ತೊಡಗಿದ್ದ ನಿರಪರಾಧಿಯಾದ ತನ್ನ ತಂಗಿಯ ಮಗನನ್ನು ವಿದಾರಿಸಿದವನನ್ನು ತರಿದು, ಅವನ ಮೈಯ ರಕ್ತವನ್ನು ಬಸಿದು ಖರನ ಶೋಕಾನಲವನ್ನು ಆರಿಸುತ್ತೇನೆಂದು ಪ್ರತಿಜ್ಞೆ ಮಾಡಿ ತನ್ನ ಚಂದ್ರಹಾಸಚಾಪವನ್ನು ಝಳಪಿಸಿದ. ಕೋಪದುರಿಯ ಹೊಗೆಯು ನೆಗೆಯುವಂತೆ ಪದ್ಮಹರಿನೀಲಮಣಿಗಳ ಕಾಂತಿಯ ಕಿರೀಟವನ್ನು ಧರಿಸಿದ ಕದನಮದೋದ್ಧತನಾದ ರಾವಣನು ಸಿಂಹಪೀಠದಿಂದ ಮೇಲೆದ್ದು ಖಚರನಾಯಕರನ್ನೆಲ್ಲ ಬರಹೇಳಿದ. ತನ್ನ ಯಶಸ್ಸಿನ ಪ್ರಭೆಗೆ ಹೆದರಿ ಚಂದ್ರನು ಕಾಂತಿಗುಂದಿ ಕತ್ತಲಾಗುವಂತೆ, ಬಲಗೈಯ ಖಡ್ಗದ ಹೊಳಪಿನಿಂದ ಅವನ ದೇಹದೀಪ್ತಿಯು ಕುಗ್ಗಿ, ರಾಹು ತನ್ನ ಹರಿನೀಲ ವಿಮಾನವನ್ನೇರುವಂತೆ ರಾವಣನು ಪುಷ್ಪಕವನ್ನೇರಿದನು. ಗಾಳಿ ಪ್ರತಿಕೂಲವಾಗಿದೆಯೆಂಬಂತೆ ಪತಾಕೆಯು ಹಿಮ್ಮುಖವಾಗಿ ಹಾರಿತು, ಹೋಗುವುದು ನಯವಲ್ಲ ಎಂಬ ಕೈಸನ್ನೆ ಮಾಡುವಂತೆ ಗಂಟೆಯ ಧ್ವನಿ ಕೇಳಿಬರಲು, ಪುಣ್ಯದೇವತೆಯ ಕಣ್ಣೀರಿನಂತೆ ಮುತ್ತುಗಳು ಉದುರಲು ಪುಷ್ಪಕವು ದಂಡಕಾರಣ್ಯದೆಡೆಗೆ ಹಾರಿತು.

ಆ ಸಮಯದಲ್ಲಿ, ಒಂದು ತೋಪಿನ ತಂಪಾದ ನೆರಳಿನಲ್ಲಿ, ಬರಸಿಡಿಲಿನ ಪಕ್ಕದಲ್ಲಿನ ಕುಡುಮಿಂಚಿನಂತೆ ರಾಮನೊಡನಿರುವ ಸೀತೆ ದಶಾಸ್ಯನ ಕಣ್ಣಿಗೆ ಬಿದ್ದಳು. ದೃಷ್ಟಿಗೆ ಹಾಕಿದ ಬಲೆಯಂತೆ, ಹೃದಯಕ್ಕಿಟ್ಟ ವಜ್ರದ ಸಂಕೋಲೆಯಂತೆ ರೂಪವತಿಯಾದ ಸೀತೆಯು ಕಣ್ಣೆದುರಿಗಿರಲು ರಾವಣನ ಚಿತ್ತವು ತಾವರೆಯೆಸಳಿನ ಮೇಲಿನ ನೀರ ಹನಿಯಂತೆ ಚಂಚಲಗೊಂಡಿತು. ನೋಡಿದ ಮಾತ್ರದಿಂದಲೇ ಈ ವನಿತೆಯ ಕೊಂಕಿದ ಕೂದಲು ನೀಲಚ್ಛವಿಯಿಂದ ತನ್ನ ಮನಸ್ಸನ್ನು ನೇರಗೊಳಿಸಿತಲ್ಲ ಎಂದು ಅವನಿಗೆ ಅಚ್ಚರಿಯೆನಿಸಿತು! ಅಲ್ಲಿ ಮೃಗಲೋಚನ ಇಲ್ಲಿ ಮೃಗ, ಅಲ್ಲಿ ವಟಫಲ ಇಲ್ಲಿ ವಟ, ಹಗಲು ಕೂಡ ಹೊಳೆಯುವ ಈ ಚಂದ್ರನು ಎಲ್ಲಿಂದ ಬಂದಿತು ಎಂಬಂತೆ ಅವಳ ನಗುಮುಖವನ್ನು ಕಂಡ. ಸೀತೆಯ ಚಂಚಲವಾದ ಕಣ್ಣುಗಳು ತಳತಳಿಸಿ ಹೊಳೆಯಲು ಖೇಚರ ಚಕ್ರವರ್ತಿಯ ಚಿತ್ತವು ಕೊಳದಲ್ಲಿ ಎಳೆಯ ಬಾಳೆಮೀನುಗಳು ತರತರದಿಂದ ಹೊಳೆಯುವಂತೆ ಒಂದೇ ಕ್ಷಣದಲ್ಲಿ ಕದಡಿಹೋಯಿತು. ಶಿರೀಷಪುಷ್ಪದಲ್ಲಿ ನಲವಿನಿಂದ ಸುತ್ತಾಡುವ ದುಂಬಿಯಂತೆ ಈ ಪಾಣ್ಬನ ಕಣ್ಣುಗಳು ಮನ್ಮಥನ ಪಾಶಗಳಂತಿದ್ದ ಸೀತೆಯ ಬಾಹುಲತೆಗಳಲ್ಲಿ ಹಾರಾಡಿದವು. ಸುಳಿಗೊಂಡ ಅವಳ ನಾಭಿಕೂಪವೆಂಬ ಸುಳಿಯಿಂದ ಹೊರಬರಲಾರದ ನಯನಗಳನ್ನೇ ಅನುಸರಿಸಿದ ಅವನ ಪಾತಕ ಮನಸ್ಸು ಸುಳಿಗೆ ಸಿಕ್ಕಿದ ಹರಿಗೋಲಿನಂತೆ ಸುಳಿದಾಡಿತು. ಮುತ್ತಿನ ಹಾರದ ಕಾಂತಿಕಿರಣಗಳ ಗೊಂಚಲು, ಸುಧಾರಸಧಾರೆ, ಚಂದ್ರಲೇಖೆ, ಕರ್ಪೂರಶಲಾಕೆಗಳು ಕೂಡ ಇವಳಷ್ಟು ಕಣ್ಣಿಗೆ ಹಿತ ನೀಡಲಾರವು; ಬ್ರಹ್ಮನು ಶೃಂಗಾರ ಸಮುದ್ರವನ್ನು ಕಡೆದಾಗ ಕಾಮನ ಮಗಳಾಗಿ ಹುಟ್ಟಿದಳೇನೋ ಎಂಬಂತೆ ಕಾಣುವ ಜನಕಜೆಯನ್ನು ದಶಕಂಧರನು ನೋಡಿಯೇ ನೋಡಿದ; ಅವನ ಇರಾದೆಯನ್ನರಿತ ಮನ್ಮಥನು ಇದೇ ಸಮಯವೆಂದು ಅವನ ಮೇಲೆ ಬಾಣಗಳ ಮಳೆಗರೆದ.

ಹಲಮಂದಿ ವಿದ್ಯಾಧರಸ್ತ್ರೀಯರೂ ದೇವತಾಸ್ತ್ರೀಯರೂ ಮಾನವಸ್ತ್ರೀಯರೂ ತಾವಾಗಿ ಮೇಲೆ ಬಿದ್ದು ಮೋಹವನ್ನು ತೋರಿದರೂ ಅಲುಗಾಡದ ಇವನ ಧೃತಿ ಎತ್ತಹೋಯಿತು ಎಂಬ ಮೂದಲಿಕೆಯಿಂದಲೂ, ರೂಪಿನಲ್ಲಿ ನನಗಿಂತ ತಾನೇ ಮೇಲು ಎಂಬ ಜಂಬ ಇವನದು ಎಂಬ ಮಾತ್ಸರ್ಯದಿಂದಲೂ, ಬಹುಕಾಲದ ಮೇಲೆ ತನ್ನ ಕೈಗೆ ಸಿಕ್ಕಿದ್ದಾನೆಂಬ ಉತ್ಸಾಹದಿಂದಲೂ, ಬಾಣಕ್ಕೆ ಬಾಣವನ್ನು ಹೂಡುವಂತೆ ಮನ್ಮಥನು ಲಂಕಾಧಿಪತಿಯ ಮೇಲೆ ಶರಗಳ ಮಳೆ ಸುರಿದ. ಪಂಚಬಾಣಗಳಿಂದ ಮನಸ್ಸು ಅಗೆವುಗಿಲಾಗುವಂತೆ ಮನ್ಮಥನು ಬಾಣಗಳನ್ನು ಬಿಟ್ಟು, ಕೊನೆಗೆ ಭಯಂಕರ ಕೋಪಗೊಂಡು ಕೋದಂಡದಲ್ಲಿರಿಸಿದ ಬಾಣವನ್ನೆಳೆದು, 'ನಿನ್ನ ಚೆಲುವಿನಿಂದಾಗಿ ದಶಗ್ರೀವನು ನನಗೆ ಕೈವಶವಾದ' ಎಂಬ ಕೃತಜ್ಞತೆಯಿಂದ ವೈದೇಹಿಯೆಂಬ ಕಾಂತಾರತ್ನಕ್ಕೆ ತನ್ನ ಕಿರೀಟದ ಮಣಿಗಳ ಹೊಳಪಿನ ಅರ್ಘ್ಯವನ್ನಿತ್ತ. ಮನ್ಮಥನ ಬಾಣಗಳು ರಾವಣನ ಮನಸ್ಸಿನ ನಡುವಿನವರೆಗೂ ನಾಟಿಕೊಂಟವು; ಆ ಕ್ಷಣದಿಂದ ಅವನ ಸತ್ಕೀರ್ತಿಯ ಗತಿ ಅವನತಿಗೊಂಡಿತು, ಗೆಲವಿನ ಪತನ ಆರಂಭವಾಯಿತು, ಮನೋಧೃತಿ ಸಮತೋಲನವನ್ನು ಕಳೆದುಕೊಂಡಿತು, ಸತ್ಯ ಶೌಚಗುಣಗಳ ಸಂಪತ್ತು ನಾಶಗೊಂಡವು; ಅಂದರೆ ಅವನು ಕನಿಷ್ಠನಾದ. ವಿಷಯ ಲೋಭದಿಂದ ಕಿಡಿ ಮಸಿಯಾದಂತೆ ಯಾರು ತಾನೇ ನಿಕೃಷ್ಟರಾಗುವುದಿಲ್ಲ? ವಿಹಿತವಾದ ತನ್ನ ವೈಯಕ್ತಿಕ ನಡತೆಯನ್ನು. ಗುಣಸಂಪನ್ನತೆಗಾಗಿ ವಂಶಪಾರಂಪರ್ಯದಿಂದ

ಬಂದ ಪ್ರಖ್ಯಾತಿಯನ್ನು, ದುಷ್ಟನಿಗ್ರಹ ಶಿಷ್ಟ ಪರಿಪಾಲನಕ್ಷಮತೆಯನ್ನು ಉಳಿಸಿಕೊಳ್ಳದೆ, ಕಾಲವಶನಾದ ಲಂಕೇಶ್ವರನು ಅನ್ಯಾಂಗನಾಸ್ಪೃಹೆಯನ್ನು ಹೊಂದಿದನಲ್ಲವೇ! ಇದೇನೂ ವಿಸ್ಮಯಾವಹವಲ್ಲ; ಕಾಲವಶದಿಂದ ಕಡಲು ಕೂಡ ತನ್ನ ಮೇರೆಯನ್ನು ಮೀರುವುದಲ್ಲವೇ?

ಹಾಗೆ ರಾವಣನ ಮನಸ್ಸು ಆಕರ್ಷಣೆಗೊಳಗಾಗಲು, ಮದ್ದಾನೆಯ ಮದಧಾರೆಗೆ ಆಸೆಪಡುವ ದುಂಬಿಯಂತೆ ದಶವದನನು ರಘುವೀರನ ಪಕ್ಕದಲ್ಲಿದ್ದ ಸುದತಿಯ ಮೇಲೆ ಮೋಹಗೊಂಡ. ವಿಷಯಲಂಪಟನು ತನ್ನ ಕೇಡನ್ನು ಮುಂಗಾಣಲಾರ! ತನ್ನ ದೃಷ್ಟಿಮಾತ್ರದಿಂದಲೇ ಕೊಲ್ಲುವ ವಿಷಸರ್ಪದ ಹೆಡೆಯ ಮೇಲಿನ ಮಣಿಗೆ ಕೈಯಿಕ್ಕುವ ಗಾಂಪನಂತೆ ರಾವಣನು ರಘೂದ್ವಹನ ವಧುವಾದ ಜನಕಜೆಗೆ ತನ್ನ ಮನಸ್ಸನರ್ಪಿಸಿದ. ಪರವಧುವಿಗೆ ಮೋಹಗೊಳ್ಳುವ ಮಹಾಪಾತಕ ಒಂದೆಡೆ, ಶ್ರೀರಾಮನನ್ನು ಯುದ್ಧದಲ್ಲಿ ಎದುರಿಸದೆ ಮರೆಯಲ್ಲಿದ್ದು ವಂಚನೆಯಿಂದ ಸೀತೆಯನ್ನು ಕದ್ದೊಯ್ಯುವ ಆಲೋಚನೆಯಿಂದಾದ ಅಳುಕು ಮತ್ತೊಂದೆಡೆ ಅವನ ಜಸವು ಮಸುಳಿಸಲು ಕಾರಣವಾಯಿತು. ಆಗ ದಶಾನನನು ಅವಲೋಕಿನೀ ವಿದ್ಯಾಧಿದೇವತೆಯನ್ನು ಸ್ಮರಿಸಿಕೊಂಡ. ಆತ್ಮಸತ್ವದ ಕೊರತೆಯೇ ವಿನಾಶವನ್ನು ಸೂಚಿಸುವುದಿಲ್ಲವೇ?

ಅಂತು ನೆನದಾಗ ಅವಲೋಕಿನೀ ವಿದ್ಯಾಧಿದೇವತೆಯು ಮನಸ್ಸಿನಷ್ಟೇ ವೇಗವಾಗಿ ಬಂದು ಅವನ ಮುಂದೆ ಪ್ರತ್ಯಕ್ಷವಾಗಿ "ಬೆಸನಾವುದು?" ಎಂದು ಕೇಳಿತು. "ಎದುರಿಗಿರುವವರು ಯಾರು?" ಎಂದು ರಾಮಸೀತೆಯರತ್ತ ತೋರಿಸಿ ಕೇಳಿದ ರಾವಣ. ಆಗ ದೇವತೆ ಹೀಗೆಂದಿತು: "ಅಯೋಧ್ಯೆಯ ಸಿಂಹಾಸನಕ್ಕೆ ಅಧಿಪತಿಯೂ, ಇಕ್ಷ್ವಾಕು ವಂಶಸಂಭವನೂ ಆದವನು ಅನರಣ್ಯ; ಅವನ ಮಗ ದಶರಥ ಮಹಾರಾಜ; ಅವನ ಮಕ್ಕಳು ಇವರು, ಈ ಯುಗದ ಬಲದೇವ ವಾಸುದೇವರು; ಇವರೇ ದೇವತಾಧಿಷ್ಠಿತಗಳಾದ ವಜ್ರಾವರ್ತ ಸಾಗರಾವರ್ತಗಳೆಂಬ ಚಾಪರತ್ನಗಳನ್ನು ಸುಲಭವಾಗಿ ವಶಪಡಿಸಿಕೊಂಡ ರಾಮಲಕ್ಷ್ಮಣರೆನ್ನುವವರು; ಅಸೀಮ ಬಲಪರಾಕ್ರಮವುಳ್ಳವರು; ಈಕೆ ರಾಮನ ಹೆಂಡತಿ, ಮಿಥಿಲಾಪುರವರೇಶ್ವರನಾದ ಹರಿವಂಶದ ಜನಕನ ಮಗಳೂ, ರಥನೂಪುರಚಕ್ರವಾಳ ಪುರವನ್ನಾಳುವ ಪ್ರಚಂಡಬಲಪರಾಕ್ರಮಿಯಾದ ಪ್ರಭಾಮಂಡಲನ ತಂಗಿಯೂ ಆದ ಸೀತಾದೇವಿ." ಮರುಕ್ಷಣವೇ ಲಂಕಾಪತಿಯ ಬಾಯಿಂದ ಬಂದ ಪ್ರಶ್ನೆ: "ಈ ಇಬ್ಬರನ್ನೂ ಅಗಲಿಸುವ ಉಪಾಯವಾವುದು?" ಎಂಬುದು.

ಈ ಮಾತನ್ನು ಕೇಳಿದ ದೇವತೆಯೇ ಭಯಚಕಿತಚಿತ್ತೆಯಾದಳು. ಅವಳಿಗೆ ದಶಾನನನ ಇಂಗಿತ ತಿಳಿಯಿತು. ಅದಕ್ಕಾಗಿ ಹೀಗೆಂದಳು: "ವಿಚಾರ ಮಾಡಿದರೆ, ಸಾಧಾರಣಜನಗಳ ಜೊತೆಯೂ ವಿರೋಧ ಸರಿಯಲ್ಲ; ಅಂದ ಮೇಲೆ, ಅಧಿಕ ಬಲರೂ, ಕಾರಣಪುರುಷರೂ ಆದ ಇವರೊಡನೆ ನಿಷ್ಕಾರಣವಾಗಿ ವಿರೋಧ ತೋರಿಸುವುದೇ? ಅಧರ್ಮನಿರತರನ್ನು ನಿಯಮಿಸುವುದರ ಮೂಲಕ ಸಕಲ ಜಗತ್ತನ್ನೂ ಕಾಪಾಡುವ ಕರ್ತವ್ಯ ನಿನ್ನದು; ನೀನೇ ಮೋಹಾವಿಷ್ಟನಾಗುವುದೆಂದರೆ ಕಾಯುವವರೇ ಕತ್ತಿ ಹಿಡಿದರು ಎಂಬ ನುಡಿಗೆ ಎಡೆಯಾಗುತ್ತದೆ. ದಶಾಸ್ಯನೇ, ಅನ್ಯಾಯದ ಮಾರ್ಗವನ್ನು ಹಿಡಿಯುವವರನ್ನು ನೀನು ದಂಡಿಸುತ್ತೀಯೆ; ಆದರೆ ನೀನೇ ಹಾಗೆ ಮಾಡಿದರೆ ನಿನ್ನನ್ನು ಬೇರಾರು ದಂಡಿಸುವವರು? ಸಮುದ್ರವೆಲ್ಲ ಕುದಿನೀರಾದರೆ ಅದನ್ನು ತಣ್ಣಗಾಗಿಸಲು ತಣ್ಣೀರು ಎಲ್ಲಿ ಸಿಕ್ಕುತ್ತದೆ? ಹದಿನಾಲ್ಕು

ಸಾವಿರ ಮಂದಿ ಮುಖ್ಯ ನಾಯಕರೊಡನೆ ಅಸಂಖ್ಯಾತ ಬಲವನ್ನು ಕೂಡಿ ಖರದೂಷಣರು ಅಪರಿಮಿತ ಕೋಪಾವೇಶದಿಂದ ಎದುರಾದರೂ ಲಕ್ಷ್ಮಣನು ಲೆಕ್ಕಿಸದೆ ಅತ್ತ ಭರದಿಂದ ಕಾದಾಟದಲ್ಲಿ ತೊಡಗಿದ್ದಾನೆ; ಇನ್ನು ಈ ಕಡೆ, ರಾಮನು ನಿಶ್ಶಂಕೆಯಿಂದ ಹೆಂಡತಿಯೊಡನೆ ವಿನೋದದಿಂದ ಇದ್ದಾನೆ; ಇಂಥವರ ಹೊತೆ ವಿದ್ವೇಷದಿಂದ ಕೂಡುವುದು ದೂಷಣವೇ ಸರಿ."

ಈ ಬಗೆಯಲ್ಲಿ ದೇವತೆಯು ಮನಸ್ಸು ಬಿಚ್ಚಿ ಮಾತಾಡಿದಳು. ಅದನ್ನು ಕೇಳಿ ಲಂಕೇಶ್ವರನು ಕಡುಮುಳಿದ. ಅವನ ಕಿವಿಯಲ್ಲಿ ಕಾಮನ ಜಯಭೇರಿಯ ಭೋರ್ಗರೆತವೇ ತುಂಬಿಕೊಂಡಿರಬೇಕಾದರೆ, ದೇವತೆಯಾಡಿದ ದಿವ್ಯವಚನಗಳು ಹೃದಯಕ್ಕೆ ಇಳಿಯಲಿಲ್ಲ. ಇತರರ ಬುದ್ಧಿಮಾತುಗಳು ವಿಧಿಯನ್ನು ಮೀರಲು ಸಾಧ್ಯವೇ! "ನಾನೊಂದನ್ನು ವಿಚಾರಿಸಿದರೆ ಇದನ್ನೆಲ್ಲ ಏಕೆ ಕಿರಿಚಿ ಹೇಳುತ್ತಿದ್ದೀಯೆ? ಅಯ್ಯೋ ಮರುಳೆ, ಮನುಷ್ಯಮಾತ್ರರು ಲಂಕಾಪತಿಯನ್ನು ಎದುರಿಸಬಲ್ಲರೇ?" ಎಂದು ಕೋಪಾವಿಷ್ಟನಾಗಿ ನುಡಿದ. ವಿದ್ಯಾದೇವತೆಯೂ ಇದರಿಂದ ಕನಲಿದಳು. 'ಜಾನಕಿಯನ್ನು ಕದ್ದೊಯ್ಯಲು ದಶರಥಕುಮಾರರಿಂದ ಇವನ ಸಾವುಂಟಾಗಬೇಕು ಎಂದಿರುವ ವಿಧಿಯನ್ನು ನಿಯಂತ್ರಿಸುವುದು ಇವನಿಗೆ ಹೇಗೆ ಸಾಧ್ಯ? ಮಾನವರ ಕೃತ್ಯಗಳು ಪುರಾತನ ಕರ್ಮಾಯತ್ತವಲ್ಲವೇ' ಎಂದು ದೇವತೆ ಅರಿತುಕೊಂಡಳು. ಹೀಗಾಗಿ ಅವನ ಪ್ರಶ್ನೆಗೆ ಉತ್ತರವಾಗಿ, ಯುದ್ಧಕ್ಕೆ ಹೋಗುವಾಗ ತನಗೇನಾದರೂ ತೊಂದರೆಯಾದರೆ ಸಿಂಹನಾದವನ್ನು ಮಾಡುವುದಾಗಿಯೂ, ಆಗ ತನ್ನ ಬೆಂಬಲಕ್ಕೆ ಬರಬೇಕೆಂದೂ ಲಕ್ಷ್ಮಣನು ರಾಮನಿಗೆ ಹೇಳಿಹೋಗಿರುವ ವಿಷಯವನ್ನರುಹಿಳು. "ಹಾಗಾದರೆ ರಣಕ್ಷೋಣಿಗೆ ಈಗಲೇ ಹೋಗಿ ಲಕ್ಷ್ಮಣನಿಗೆ ಕೇಳಿಸದ ಹಾಗೆ ವೈಕುರ್ವಣಶಕ್ತಿಯಿಂದ ಸಿಂಹನಾದವನ್ನು ಮಾಡು" ಎಂದು ರಾವಣನು ದೇವತೆಗೆ ಹೇಳಿದ. ಅದಕ್ಕೊಪ್ಪಿ ಅವಲೋಕಿನೀ ವಿದ್ಯಾಧಿದೇವತೆ ಅತ್ತ ನಡೆದಳು.

ಅವಲೋಕಿನಿಯು ಮಾಡಿದ ಸಿಂಹನಾದವು ರಾಮನಿಗೆ ಕೇಳಿಸಿತು. ತನ್ನ ತಮ್ಮನನ್ನು ಯುದ್ಧದಲ್ಲಿ ಯಾರೂ ಗೆಲ್ಲಲಾರರು ಎಂಬುದು ಮರೆತು ಹೋಗಿ, ಸಿಂಹನಾದವನ್ನು ಮಾಡಿರಬೇಕಾದರೆ ಕದನವು ಅವನಿಗೆ ಕಷ್ಟಕರವಾಗಿರಬೇಕು ಎಂಬ ಚಿಂತೆಯೇ ರಾಮನಂತಹವನ ಮನಸ್ಸನ್ನೂ ಆವರಿಸಿತು. ಇಲ್ಲದಿದ್ದರೆ ಜಾನಕೀಹರಣವು ಹೇಗೆ ನಡೆದೀತು? ಕರ್ಮವಿಪಾಕವು ಯಾರ ಮನಸ್ಸಿಗಾದರೂ ವೈಕಲ್ಯವನ್ನು ತಾರದಿರುತ್ತದೆಯೇ? ಜಟಾಯುವನ್ನು ಕಾವಲಿಗಿರಿಸಿ, ಓಪಳಿಗೆ ಧೈರ್ಯ ಹೇಳಿ, ಕೋಪಗೊಂಡು ಬಲದೇವನು ವೈರಿಬಲವನ್ನು ಸದೆಬಡಿಯಲೆಂದು ಚಾಪಧರನಾಗಿ ಹೊರಟ.

ಅಷ್ಟರಲ್ಲಿ ಇತ್ತ, ಪರವಧುವಿಗೆ ಆಸೆಪಟ್ಟು ಅಧೋಗತಿಗೆ ಇಳಿಯುವುದನ್ನು ಅಭಿನಯಿಸುವಂತೆ ರಾವಣನು ನಭದಿಂದ ನೆಲಕ್ಕೆ ಸೀತೆಯ ಬಳಿ ಇಳಿದ. ಟೀಕೆಗೂ ಪಾಪಕ್ಕೂ ಅಂಜದವರು ಏನು ತಾನೇ ಮಾಡಲಾರರು! ದೋಷಿಯು ಕಾಸಿದ ಕುಳವನ್ನು ದಿವ್ಯವಾಗಿ ಹಿಡಿಯುವಂತೆ, ಮುಗ್ಧವಾದ ಕೂಸು ಸಂಭ್ರಮದಿಂದ ಕಾಳೋರಗವನ್ನು ಹಿಡಿಯುವಂತೆ, ಅವಿವೇಕಿಯೂ ದುಸ್ಸಾಹಸಿಯೂ ಆದ ರಾವಣನು ಸೀತೆಯನ್ನು ಹಿಡಿದುಕೊಂಡ. ಅವಳನ್ನು ತನ್ನ ವಿಮಾನದಲ್ಲಿ ಕೂರಿಸಿದ. ಆನಂತರ ಚತುರ್ದಶ

ಭುವನಗಳಲ್ಲಿಯೂ ತನ್ನ ಅಪವಾದ ಆವರಿಸುವಂತೆಯೂ ಚಂದ್ರನನ್ನು ರಾಹು ಹಿಡಿಯುವಂತೆಯೂ ಜನಕಸುತೆಯನ್ನು ಒಯ್ದ. ಆಗ ರಾಮನು ಕಾಪಿಗಿಟ್ಟಿದ್ದ ಜಟಾಯುವು ಕೋಪದಿಂದ ಕೆಂಡದಂತೆ ಕೆಂಪಾದ ಕಣ್ಣುಗಳಿಂದ ರಾವಣನನ್ನು ನುಂಗುವಂತೆ ನೋಡಿದ; ಅವನನ್ನು ಶತಖಂಡವಾಗಿ ತುಂಡರಿಸುವೆನೆಂದು ನಿರ್ಧರಿಸಿ, ತನ್ನ ಹರಿತವಾದ ಉಗುರುಗಳಿಂದಲೂ, ಚೂಪಾದ ಕೊಕ್ಕಿನಿಂದಲೂ ಬಲವಾಗಿ ಇರಿಯಲೆಂದು ಹತ್ತಿರ ಬಂದ. ಅದನ್ನು ಗಮನೋತ್ಸುಕನಾದ ರಾವಣನು ಕಂಡು ನಸುನಗೆಯಿಂದ ತನ್ನ ಕೈಯಿಂದ ಹೊಡೆಯಲು ಜಟಾಯುವಿನ ಎರಡೂ ರೆಕ್ಕೆಗಳು ಮುರಿದುಬಿದ್ದವು; ಆಗ ಇಂದ್ರನ ವಜ್ರಾಹತಿಯಿಂದ ನೆಲಕ್ಕೆ ಬೀಳುವ ಬೆಟ್ಟದಂತೆ ಜಟಾಯುವೂ ಕೆಡೆದುರುಳಿದ. ರೆಕ್ಕೆ ಕತ್ತರಿಸಿ ನೆಲಕ್ಕೆ ಬಿದ್ದ ತನ್ನ ನೋವಿಗಿಂತಲೂ ಹೆಚ್ಚಾಗಿ ರಾಮನ ಅಗಲಿಕೆಯಿಂದ ಸೀತಾಮಾತೆಗೆ ಎಷ್ಟು ದುಃಖವುಂಟಾಗಿದೆಯೋ ಎಂಬ ಉಮ್ಮಳ ಅವನಿಗೆ ಹೆಚ್ಚಾಯಿತು.

ರಾವಣ ಪುಷ್ಪಕದಲಿದ್ದ ಸೀತೆಯೊಡನೆ ತನ್ನ ಪಯಣವನ್ನು ಮುಂದುವರಿಸಿದ. ರಾಮಚಂದ್ರಾನನೆಯು ಸಿಂಹದ ಕೈಗೆ ಸಿಕ್ಕಿ ಬಿದ್ದ ಹರಿಣದಂತಾದಳು. ಅವಳ ನೀಳ ಕಂಗಳಿಂದ ನೀರು ಒತ್ತರಿಸಿಕೊಂಡು ಬಂದಿತು, ಅದನ್ನು ತನ್ನ ರೆಪ್ಪೆಗಳಿಂದ ಒತ್ತಿ ಹಿಡಿದಳು. ಕಾರ್ಮುಗಿಲಿನಿಂದ ಉಕ್ಕಿ ಬರುವ ಹನಿಗಳ ಜಾಲದಂತೆ ಅವಳ ಮೈಮೇಲೆಲ್ಲ ಬೆವರಿನ ಹನಿಗಳು ಕಾಣಿಸಿದವು. ಮನಸ್ಸು ಹಿಂಜಗ್ಗಿ, ದುಃಖ ಒತ್ತರಿಸಲು, ನಸು ಅರಳಿದ ಎವೆಗಳ ನಡುವಿನಿಂದ ಕಣ್ಣೀರು ಸುರಿಯಲು, ಕಂಠವು ಬಿಗಿದು ಗದ್ಗದ ಶಬ್ದವು ಹೊಮ್ಮಲು ಭೀತೆಯಾದ ಸೀತೆಯು ದಿಕೆಟ್ಟು ಅತ್ತಾಗ 'ಹಾ' ಎಂಬ ದುಃಖೋದ್ಗಾರವು ಹೊರಬಂದಿತು; ದಿಗ್ವನಿತೆಯರು ಅವಳೊಡನೆ ಅಳುವ ರೀತಿಯಲ್ಲಿ ಆ ಸದ್ದು ಎಲ್ಲ ದಿಕ್ಕುಗಳಲ್ಲಿ ಮಾರ್ದನಿಗೊಂಡಿತು. ಧುತ್ತೆಂದು ರಾವಣ ಎದುರಾದಾಗ ಶೋಕದೊಡನೆ ಆತಂಕವೂ ಉಂಟಾಯಿತು; ಅವಳು ಅತ್ತಾಗ ಪುಷ್ಪಕ ವಿಮಾನದಲ್ಲಿದ್ದ ಸುಂದರವಾದ ಅಲಂಕಾರ ಬೊಂಬೆಗಳೂ ಅವಳೊಡನೆ ಅಳುತ್ತಿರುವಂತೆ, ಬೆವರಿದಾಗ ಕೂಡೆ ಬೆವರಿದಂತೆ ತೋರಿ, ಲಂಕೆಯು ಉರಿದು ಬೂದಿಯಾಗುವುದನ್ನೂ, ರಾವಣನ ಔನ್ನತ್ಯದ ಕೇಡನ್ನೂ ಸಾರಿ ಹೇಳುವಂತೆ ತೋರಿತು. ಸೀತೆಯ ಕಣ್ಣುಗಳಿಂದ ಉದುರಿದ ದೊಡ್ಡ ದೊಡ್ಡ ಹನಿಗಳು ಅವಳ ಎದೆಯ ಮೇಲೆ ಹೊಸಮುತ್ತಿನ ಹಾರವನ್ನು ರಚಿಸಿದವು; ಅವಳ ಕಣ್ಣ ಕೆಂಪು ಕಿವಿಗಳಿಗೆ ಅರುಣಚ್ಛವಿಯನ್ನು ಉಂಟುಮಾಡಿತು. ಬಲೆಯಲ್ಲಿ ಬಿದ್ದ ಸೋಗೆ ನವಿಲಿನ ಹಾಗೆ ಭಯಾಕುಲೆಯಾದ ಜಾನಕಿಯು ಮನಸ್ಸಿನಲ್ಲಿ ನೆಲೆನಿಂತ ರಾಮನನ್ನು ನೋಡಬಯಸಿ ಹೊರಗಣ ದೃಶ್ಯವನ್ನು ಕಾಣಲು ಹೇಸಿದಂತೆ ಕಣ್ಮಲರುಗಳು ಮುಚ್ಚಿಕೊಂಡವು; ಅವಳು ಮೂರ್ಛೆ ಹೋದಳು; ತಂಗಾಳಿಯ ತೀಟದಿಂದ ಸ್ವಲ್ಪ ಹೊತ್ತಿನಲ್ಲಿಯೇ ಮೂರ್ಛೆಯಿಂದ ಎಚ್ಚೆತ್ತಳು; ಆಗಲೂ 'ಹಾ' ರವ ಅವಳ ಬಾಯಿಂದ ಹೊಮ್ಮಿತು. ಸೂರ್ಯನು ಮೂಡಿದಾಗ ಮುಚ್ಚಿಕೊಳ್ಳುವ ನೈದಿಲೆಗಳಂತೆ ಸೀತೆಯ ದೃಷ್ಟಿಯು ಓಸರಿಸಿ, ತಲೆ ಬಾಗಿದಾಗ ಲೋಕಕಂಟಕ ರಾವಣನ ರೂಪು, ಪಾದ, ನಖಗಳು ವಿಮಾನದ ಕಿರುಗನ್ನಡಿಗಳಲ್ಲಿ ಹಲವಾಗಿ ಕಂಡು ಬೆಚ್ಚಿ ತನ್ನ ತರಲೇಕ್ಷಣಗಳನ್ನು ಕೈಗಳಿಂದ ಮುಚ್ಚಿಕೊಂಡಳು. ಕ್ರೂರಾತ್ಮನೂ ವಂಚಕನೂ ಆದ ಈ ದುರಾಚಾರಿ ಪರಿಣಾಮವನ್ನು ಯೋಚಿಸದೆ ನನ್ನನ್ನು ಒಯ್ಯುತ್ತಿದ್ದಾನಲ್ಲ; ಕಾಪಾಡುವವರಾರು ಎಂದು ಸೀತೆ ಶೋಕಿಸಿದಳು. ಆದರೆ ರಾವಣನಿಗೆ

ಸೀತೆಯ ದುಃಖವಾಗಲೀ, ತಾನು ಅನಂತವೀರ್ಯ ಕೇವಲಿಗಳ ಪಾದಸನ್ನಿಧಿಯಲ್ಲಿ ಕೈಗೊಂಡಿದ್ದ ಪರಾಂಗನಾವಿರತಿವ್ರತವು ಭಂಗಗೊಂಡದ್ದಾಗಲೀ ಗಮನಕ್ಕೇ ಬರಲಿಲ್ಲ; ಅವನು ಮುಂದುವರೆದ.

ಈ ಕಡೆ, ದೇವೇಂದ್ರನ ವಜ್ರಾಯುಧದಂತಹ ತನ್ನ ವಜ್ರಾವರ್ತ ಚಾಪಕ್ಕೆದುರಾಗಿ ನಿಲ್ಲುವವನಾರು ಎಂಬ ಹೆಮ್ಮೆಯಿಂದ ರಾಮನು ತಮ್ಮನ ನೆರವಿಗಾಗಿ ಧಾವಿಸಿದ. ಅವನನ್ನು ಕಂಡು ಲಕ್ಷ್ಮಣನಿಗೆ ಆಶ್ಚರ್ಯವಾಯಿತು; "ಅಪಾಯಗಳಿಂದ ತುಂಬಿದ ಅಡವಿಯಲ್ಲಿ ಅತ್ತಿಗೆಯೊಬ್ಬರನ್ನೇ ಬಿಟ್ಟು ಏಕೆ ಬಂದಿರಿ?" ಎಂದು ಕೇಳಿದ. ಅವನ ಸಿಂಹನಾದವನ್ನು ಕೇಳಿಯೇ ತಾನು ಬಂದುದಾಗಿ ರಾಮನು ಉತ್ತರಿಸಿದ. "ತಮ್ಮ ಅನುಗ್ರಹದಿಂದಾಗಿ ನನಗೆ ಎದುರಾಗುವ ಸೈನ್ಯವಾವುದೂ ಇಲ್ಲ; ಇದು ಯಾರೋ ಮಾಯಾವಿಯ ಕೈವಾಡವಿರಬೇಕು. ಆದ್ದರಿಂದ ದಯವಿಟ್ಟು ಬೇಗ ಹಿಂದಿರುಗಿ; ನಾನು ಈ ಯುದ್ಧವನ್ನು ಮುಗಿಸಿ ನಿಮ್ಮ ಬೆನ್ನ ಹಿಂದೆಯೇ ಬರುತ್ತೇನೆ" ಎಂದು ಲಕ್ಷಣನು ಅಣ್ಣನನ್ನು ಕೇಳಿಕೊಂಡ. ರಾಮನ ಮನಸ್ಸು ಚಿಂತೆಗೊಳಗಾಯಿತು: ತಮ್ಮನು ಸಿಂಹನಾದವನ್ನು ಮಾಡಿರಲಿಲ್ಲ; ಸೀತೆಯೊಬ್ಬಳನ್ನೇ ಕಾಡಿನಲ್ಲಿ ಬಿಟ್ಟು ಬರಲಾಗದು ಎಂಬ ವಿಚಾರವೇಕೆ ನನ್ನ ಮನಸ್ಸಿಗೆ ಹೊಳೆಯಲಿಲ್ಲ! ಜೊತೆಗೆ ಎಡಗಣ್ಣು ಬೇರೆ ಅದುರುತ್ತಿತ್ತು; ಇದರಿಂದ ಏನು ಕೇಡು ಕಾದಿದೆಯೋ ಎಂದು ಅವನು ಸರ್‍ರನೆ ಹಿಂದಿರುಗಿದ.

ಬಂದು ನೋಡಿದರೆ, ತಾವಿದ್ದ ಲತಾಭವನದಲ್ಲಿ ಸೀತೆ ಕಾಣಲಿಲ್ಲ! ಅವನ ಧೈರ್ಯವೆಲ್ಲ ಬೆಂಕಿಯಲ್ಲಿ ಬಿದ್ದ ಪಾದರಸದಂತೆ ಕರಗಿಹೋಯಿತು. ಜನಕಸುತೇ, ವೈದೇಹಿ ಎಂಬ ಶಬ್ದಗಳು ಅವನ ತುಟಿಯಿಂದ ಹೊಮ್ಮಿದರೆ, ಅವಳ ಬಗೆಗಿನ ಮೋಹವು ಮನಸ್ಸನ್ನಾವರಿಸಿತು; ಗಾಳಿಗೆ ಸಿಕ್ಕಿದ ದೀಪದಂತೆ ಮೂರ್ಛೆಗೊಳಗಾಗಿ ರಾಮ ಕುಸಿದುಬಿದ್ದ. ಸ್ವಲ್ಪ ಹೊತ್ತಿನಲ್ಲಿಯೇ ಎಚ್ಚರಗೊಂಡ. ಮೈ ಬೆಚ್ಚಗಾಗಿತ್ತು; ಅದುರಿದ ತಾಣದಲ್ಲಿಯೇ ಕಣ್ಣು ಮತ್ತೆ ಅದುರಿತು; ಮೂಗಿನ ಹೊಳ್ಳೆಗಳಿಂದ ನಿಧಾನವಾಗಿ ಉಸಿರು ಹೊಮ್ಮಿತು; ಮುಚ್ಚಿದ್ದ ರೆಪ್ಪೆಗಳು ತೆರೆದುಕೊಳ್ಳುತ್ತಿದ್ದಂತೆ "ಹಾ ಜಾನಕಿ" ಎನ್ನುತ್ತ ಮೇಲೆದ್ದ. ಸುತ್ತಮುತ್ತಲೂ ಸೀತೆಗಾಗಿ ಹುಡುಕಾಡಿದ. ಅನತಿದೂರದಲ್ಲಿ ಪ್ರಾಣೋತ್ಕ್ರಮಣ ಸಂಕಟದಿಂದ ಮುಲುಗುಡುತ್ತಿದ್ದ ಜಟಾಯುವು ಕಾಣಿಸಿದ. ಅವನ ಈ ಸ್ಥಿತಿಗೆ ಸೀತೆಯ ಅಪಹರಣವೇ ಕಾರಣವಾಯಿತೆಂದು ತಿಳಿದು ರಾಮನ ಸಂಕಟ ಇಮ್ಮಡಿಸಿತು. ಸಂಸಾರವಿಷಮವಿಷಾಪಹಾರಕ್ಕೆಂದು ಪಂಚನಮಸ್ಕಾರಗಳನ್ನು ಹೇಳಿ ಅದಕ್ಕೆ ಸದ್ಗತಿಯೊದಗಿಸಿದ.

ವೈದೇಹಿಯು ಆ ವನಾಂತರದಲ್ಲೆಲ್ಲೂ ಕಾಣಿಸದಿದ್ದಾಗ ಅವನ ಮನಸ್ಸು ಬೇಗುದಿಗೊಂಡಿತು. ಕಳಹಂಸದ ನಡಿಗೆಯವಳನ್ನು, ಮೃಗಮದಾಮೋದಾಸ್ಯನಿಶ್ವಾಸೆಯನ್ನು, ಚಿಗುರಿನಂತಹ ಅಧರೆಯವಳನ್ನು, ತಾವರೆಮೊಗದವಳನ್ನು, ಭೃಂಗಕುಂತಳೆಯನ್ನು, ಕೈರವನೇತ್ರೆಯನ್ನು, ಪಿಕರವಪ್ರಖ್ಯಾತೆ ಸೀತೆಯನ್ನು ಯಾರಾದರೂ ಕಂಡಿರಾ ಎಂದು ಸುತ್ತಲಿನ ತಾವರೆಗಳನ್ನೂ ಮದಾಳಿಸಂದೋಹವನ್ನೂ ಕನ್ನೈದಿಲೆಗಳನ್ನೂ ಮತ್ತ ಕೋಗಿಲೆಗಳನ್ನೂ ಮನಕರಗುವಂತೆ ವಿಚಾರಿಸಿದ. ಸೀತೆಯೊಡನೆ ಕಳೆದ ಸನ್ನಿವೇಶಗಳನ್ನು ನೆನಪಿಗೆ ತರುವ ಸ್ಥಳಗಳು ಅವನ ಕಣ್ಣಿಗೆ ಬಿದ್ದವು: ಆ ಮದಗಜಗಮನೆಯು ಕಾಡಾನೆಯ

ಘೀಳನ್ನು ಕೇಳಿ ಹೆದರಿ ತನ್ನನ್ನು ಅಪ್ಪಿಕೊಂಡ ಬೇಲದ ತೋಪು; ಚಂದ್ರಕಾಂತಶಿಲೆಯ ಶಯ್ಯಾತಳವನ್ನೊಲ್ಲದೆ ಆ ಚಕೋರಲೋಲಲೋಚನೆಯು ಹೊಂಗೆಯ ನೆರಳಲ್ಲಿ ನಿರ್ಮಿಸಿಕೊಂಡಿದ್ದ ಬಯಲುದಾವರೆಯ ಎಸಳುಗಳ ಹಾಸಿಗೆ; ಆ ಪೃಥುನಿತಂಬೆಯು ಹಂಸದಂತೆ ಓಡಾಡಿದಾಗ ಮೂಡಿದ್ದ ಹೆಜ್ಜೆಗುರುತುಗಳಿಂದ ಕೂಡಿದ ತಿಳಿಗೊಳದ ಮರಳುದಡ; ಆ ಮದಾಳಿ ಪಟಲ ಕುಟಿಲಕುಂತಳೆಯು ಚೆನ್ನೈದಿಲ ಎಸಳುಗಳಿಂದ ತನ್ನ ತೋರುಗುರುಗಳನ್ನು ಅಲಂಕರಿಸಿಕೊಂಡಿದ್ದ ಕಾಸಾರತೀರ; ಆ ಶಿರೀಷದಾಮಕೋಮಲೆಯು ಸಂಭ್ರಮದಿಂದ ಬಿರಿಮುಗುಳನ್ನು ಆರಿಸಿಕೊಂಡ ವನತರುಲತಾವಿತಾನಗಳು; ಸಂಭೋಗಾತುರನಾದ ತನ್ನನ್ನು ಓಡಾಡಿ ಕಾಡಿಸಿದ ಚಂದನಲತಾಮಂದಿರ; ಕನಕಕದಳೀಶ್ಯಾಮೆಯು ತನ್ನ ಅನಂಗಕೇಳಿಯ ಪರಿಶ್ರಮವನ್ನಾರಿಸಿಕೊಂಡ ಸಂಪಗೆಯ ಜೊಂಪ – ಎಲ್ಲವೂ ಅವಳ ನೆನಪನ್ನು ಬಲದೇವನ ಮನದಲ್ಲಿ ದಟ್ಟೈಸುವಂತೆ ಮಾಡುತ್ತಿದ್ದವು. ನಾನಾ ತೆರದಿಂದ ಹಂಬಲಿಸಿ, ಕಾಡಿನಲ್ಲೆಲ್ಲ ತಿರುಗಾಡಿ, ಧಾರಾಕಾರವಾಗಿ ಕಣ್ಣೀರು ಸುರಿಸಿ ರಘುರಾಮ ದಣಿದ.

ಅಷ್ಟರಲ್ಲಿ ಇತ್ತ, ಎರಡು ತೋಳುಗಳು ಮತ್ತು ಒಂದು ಬಿಲ್ಲು ಇವುಗಳ ನೆರವಿನಿಂದಲೇ ಖೇಚರಭೂಚರನ್ನು ಒಬ್ಬಂಟಿಯಾಗಿ ಕೊಲ್ಲುತ್ತಿದ್ದ ಲಕ್ಮಣನನ್ನು ಕಂಡು 'ಇವನಿಂದ ತನ್ನ ಮನೋವಾಂಛಿತವು ನೆರವೇರುವುದು' ಎಂಬ ಆಸೆಯಿಂದ ವಿರಾಧಿತನು ಅವನಿಗೆ ಶರಣಾಗಲೆಂದು ಬಂದ. ತಲೆಬಾಗಿ ಅವನು ತನಗೆ ಯಾವುದೇ ಬೆಸನನ್ನು ಈಯಬಹುದೆಂದು ಬೇಡಿಕೊಂಡ. ಅವನ ಅನುಮತಿ ಪಡೆದು ನೆಲಮುಕ್ಕಿನಂತೆ ನಭಕ್ಕೆ ನೆಗೆದು ಖರನ ಎದುರು ನಿಂದ. ತನ್ನ ತಂದೆಯನ್ನು ಕೊಂದು ಪಾತಾಳಲಂಕೆಯಲ್ಲಿ ಅಡಗಿಕೊಂಡಿದ್ದರಿಂದ ಇಲ್ಲಿಯವರೆಗೂ ತನ್ನಿಂದ ತಪ್ಪಿಸಿಕೊಂಡಿದ್ದನೆಂದೂ, ಅವನೀಗ ತನ್ನ ಕೈಗೆ ಸಿಕ್ಕಿರುವನೆಂದೂ ಮೂದಲಿಸಿ ಅವನೊಡನೆ ಕಾದಾಟಕ್ಕೆ ತೊಡಗಿದ. ಎಲ್ಲೆಲ್ಲಿ ನೋಡಿದರೂ ಮೊರೆದು ಹರಿಯುವ ರಕ್ತಪ್ರವಾಹ; ನರಳುತ್ತ ಹೊರಳುವ ಭಟರು; ರಥಗಳ ಓಡಾಟದಿಂದ ತಗ್ಗುಬಿದ್ದ ನೆಲ – ಇವುಗಳು ಕಣ್ಣುಮನಸ್ಸುಗಳಿಗೆ ಭಯವನ್ನುಂಟುಮಾಡುತ್ತಿದ್ದ ಆ ರಣರಂಗದಲ್ಲಿ ಅಬ್ಜೋದರನು ಅಟ್ಟಿಸಿಕೊಂಡು ಹೋಗಿ ಕೊಲ್ಲುವ ಯಮನಂತೆ ಕಾಣಿಸಿದ.

ಲಕ್ಷ್ಮಣನ್ನು ಕಂಡ ಖರನು ವಿರಾಧಿತನನ್ನು ಲೆಕ್ಕಿಸದೆ ಅವನ ಮೇಲೆ ನುಗ್ಗಿ ಬಂದ. ತನ್ನ ಹೆಂಡತಿಗೆ ಅಪಮಾನ ಮಾಡಿದವನು, ತನ್ನ ಮಗನನ್ನು ಕೊಂದವನು ತನ್ನ ಗಂಡಗುಣವನ್ನೂ ಗಣಿಸದೆ ಕಾದಾಟಕ್ಕೆ ಬಂದ ಅವನ ಮೇಲೆ ಕೋಪದ ಕೆಂಡವನ್ನು ಕೆದರಿ ಖರನು ತನ್ನ ಕೋದಂಡವನ್ನೆತ್ತಿಕೊಂಡು ಆಗಸಮಾರ್ಗದಲ್ಲಿ ನುಗ್ಗಿ ಬಂದ; ನೀಲಮೇಘಶ್ಯಾಮನ ಮೇಲೆ ಬಾಣಗಳ ಮಳೆಯನ್ನೇ ಕರೆದ; ಅಲ್ಲಿ ಕವಚದ ಕಾಂತಿಯೇ ಮಿಂಚು, ಕಣ್ಣುಗಳಲ್ಲಿ ಉಕ್ಕುವ ಕೋಪವೇ ಸಿಡಿಲು, ಧನುಸ್ಸಿನ ಟಂಕಾರವೇ ಗುಡುಗುಗಳಾದವು! ಹೀಗೆ ಬಂದ ಅವನು ಬಿಟ್ಟ ಚೂಪಾದ ಬಾಣಗಳನ್ನು ರಾಮಾನುಜನು ಮಂಡಲಾಗ್ರದಿಂದ ಖಂಡಿಸಿ ಭೈರವನಂತೆ ಭಯಂಕರನಾದ. ಅವನು ಅರಳಿಸಿದ ತನ್ನೆರಡು ಕಣ್ಣುಗಳು ಮೂರನೆಯ ಕಣ್ಣನ್ನು ಇಳಿಕೆಗೊಳಿಸಿತು, ಬಿಲ್ಲಿನಲ್ಲಿ ಹೂಡಿದ ಬಾಣವು ಕಾಲಾಗ್ನಿರುದ್ರನ ಗಂಟಿಕ್ಕಿದ ಹುಬ್ಬಿಗಿಂತಲೂ ಭೀಕರವೆನಿಸಿತು. ಶತ್ರುವಿನ ಬಿಲ್ಲು

ಮುರಿಯುವಂತೆ, ಸಿಡಿಲು ಬಡಿದಂತೆ, ಸಾರಥಿಯನ್ನು ಆಹುತಿ ತೆಗೆದುಕೊಳ್ಳುವಂತೆ, ತೇರುಗಳು ನುಚ್ಚುನುರಿಯಾಗುವಂತೆ ಹೊಡೆದ ಲಕ್ಷ್ಮಣನು, ಮುಳಿದು ಕತ್ತಿಯನ್ನೆತ್ತಿ ಹಾಯ್ದು ಬಂದ ಖರನ ತಲೆಯು ಹಾರುವ ಹಾಗೆ ತನ್ನ ಸೂರ್ಯಹಾಸವನ್ನು ಬೀಸಿದ. ಆ ಕದನದಲ್ಲಿ ಸೌಮಿತ್ರಿಯ ಕೋಪಾಗ್ನಿಯ ಝಳಕ್ಕೆ ಹೆದರಿ ಓಡಿಬಂದ ವಿಜಯಲಕ್ಷ್ಮಿಯು ರಾಮನ ತಮ್ಮನ ಹರಿತವಾದ ಕತ್ತಿಯ ಅಲುಗನ್ನು ಆಶ್ರಯಿಸಿದಳು. ತನ್ನ ಅಣ್ಣನ ಮರಣದ ದುಃಖದಿಂದ ಆಗ್ರಹಗೊಂಡ ದೂಷಣನನ್ನು ವೀರಾಗ್ರೇಸರನು ಜವನಿಗೆ ಗ್ರಾಸವನ್ನಾಗಿ ಮಾಡಿದ. ಹೀಗೆ ಲಕ್ಷ್ಮಣನೊಡನೆ ಜಯಲಕ್ಷ್ಮಿಯು ಸಮನಿಸಲು ಅಮರಸಮೂಹವು ಜಯಜಯನಿನದದೊಡನೆ ಹೂಮಳೆಯನ್ನು ಸುರಿಸಿತು. ತಮ್ಮ ಕೈದುಗಳನ್ನು ಬಿಸುಟು ಶರಣು ಬಂದ ವಿರೋಧಿ ವಾಹಿನಿಯನ್ನು ತನ್ನ ನಿಯಂತ್ರಣದಲ್ಲಿರಿಸಿಕೊಳ್ಳಲು ವಿರಾಧಿತನಿಗೆ ಸೂಚಿಸಿದ ವಾಸುದೇವನು ಅವರವರನ್ನು ಪೂರ್ವವೃತ್ತಿಯಲ್ಲಿಯೇ ಉಳಿಸಿ ಅಲ್ಲಿಂದ ಹೊರಟ.

ತಮ್ಮ ನಿವಾಸಕ್ಕೆ ಮರಳಿದ ಲಕ್ಷ್ಮಣನಿಗೆ ದೂರದಲ್ಲಿ ಕಾಣಿಸಿದ್ದೇನು: ಮದಜಲಧಾರೆಯಿಲ್ಲದ ದಿಕ್ಕರಿಯಂತೆ, ಚಂದ್ರನಿಲ್ಲದ ಆಗಸದಂತೆ, ಕಲ್ಪಲತೆಯಿಲ್ಲದ ನಂದನೋದ್ಯಾನದಂತೆ, ಅಲೆಗಳಿಲ್ಲದ ಕಡಲಂತೆ, ಕೇಸರಿಣಿಯಿಲ್ಲದ ಕೇಸರಿಯಂತೆ ಕಾಂತಿಹೀನನಾಗಿದ್ದ ಸೀತೆಯಿಲ್ಲದ ರಾಮ! ಅವನ ಎದೆ ಧಸಕ್ಕೆಂದಿತು. ಮನದ ತಳ್ಳಂಕದೊಡನೆ ಹತ್ತಿರ ಬಂದ; ಅಣ್ಣನ ಚರಣಾರವಿಂದದ ಮೇಲೆ ಹಣೆಯಿಟ್ಟು ನಮಸ್ಕರಿಸಿದ. ಅತ್ಯಂತ ವಿಷಮ ಯುದ್ಧದಲ್ಲಿಯೂ ದೇಹದ ಮೇಲೆ ಒಂದಿನಿತೂ ಗಾಯದ ಗುರುತಿಲ್ಲದೆ ಅಜೇಯನೆನಿಸಿ ಬಂದ ತಮ್ಮನನ್ನು ಕಂಡು ರಾಮ ಮನದಲ್ಲೇ ಮೆಚ್ಚಿದ; ಮತ್ತೆ ಮತ್ತೆ ಆಶೀರ್ವಚನಗಳನ್ನು ಸುರಿಸಿದ. ಆಗ ಲಕ್ಷ್ಮಣನು, "ಎಲ್ಲಿ, ಅಮ್ಮ ಕಾಣಿಸುತ್ತಿಲ್ಲವಲ್ಲ!" ಎಂದ. "ನಾನು ನಿನ್ನ ಬಳಿಗೆ ಬಂದ ಹೊತ್ತಲ್ಲಿ ಅವಳನ್ನು ಯಾವ ಸಿಂಹ ಶರಭದಂತಹ ರೌದ್ರ ಪ್ರಾಣಿಯು ಹೊತ್ತೊಯ್ದಿತೋ ಕಾಣೆ. ಅಥವಾ ಯಾರಾದರೂ ಮಾಯಾವಿ ಕದ್ದೊಯ್ದಿರಬೇಕು. ಇಷ್ಟು ಹೊತ್ತೂ ಕಾಡಿನಲ್ಲೆಲ್ಲ ಅವಳಿಗಾಗಿ ಹುಡುಕಾಡಿದೆ, ಕಾಣಿಸಲಿಲ್ಲ" ಎಂದು ನಿಟ್ಟುಸಿರು ಬಿಟ್ಟ ರಾಮ. ಇದನ್ನು ಕೇಳಿ ಲಕ್ಷ್ಮಣನ ಹೃದಯ ವಿಷಣ್ಣಗೊಂಡಿತು; ಜೊತೆಗೆ ಅವನ ಕೋಪವೆಂಬ ಬೆಂಕಿ ಭುಗಿಲೆದ್ದಿತು. "ಅತ್ತಿಗೆಯನ್ನುಯ್ದವನು ಎಲ್ಲಿ ಬೈತಿಟ್ಟುಕೊಂಡರೂ ಸರಿ; ಭೂಮಿಯನ್ನೇ ತಲೆಕೆಳಗು ಮಾಡುತ್ತೇನೆ, ಕುಲಪರ್ವತವನ್ನು ಅದರ ನೆಲೆಯಿಂದ ನೂಕುತ್ತೇನೆ, ಲವಣಸಮುದ್ರದ ನೀರನ್ನೆಲ್ಲ ಚೆಲ್ಲಿಬಿಡುತ್ತೇನೆ, ಆಕಾಶವನ್ನು ನೆಲಕ್ಕಿಳಿಸುತ್ತೇನೆ, ನನಗೆ ಇದಿರಾದವರನ್ನು ಜವನಿಗೆ ಔತಣ ಮಾಡುತ್ತೇನೆ" ಎಂದು ಸಿಡಿಲಿದ.

ಅಷ್ಟು ಹೊತ್ತಿಗೆ ಸೇನೆಯೊಂದು ತಮ್ಮೆಡೆಗೆ ಬರುವುದು ಬಲದೇವನಿಗೆ ಕಾಣಿಸಿತು. ಇದಾರು ಎಂದು ಕೇಳಿದಾಗ, ಅದು ವಿರಾಧಿತನದು ಎಂದು ವಾಸುದೇವ ಉತ್ತರಿಸಿದ. ತನಗೆ ಅವನು ಕದನಸಹಾಯನೆಂದೂ, ರಾಮದರ್ಶನಕ್ಕಾಗಿ ಸೇನಾಸಹಿತನಾಗಿ ಇತ್ತ ಬರುತ್ತಿರುವನೆಂದೂ ವಿವರಿಸಿದ. ಆ ಹೊತ್ತಿಗೆ ಅಲ್ಲಿ ತಲುಪಿದ ವಿರಾಧಿತನು ರಾಮನಿಗೆ ಮೈಯಿಕ್ಕಿ ತನ್ನ ವೃತ್ತಾಂತವನ್ನು ಈ ರೀತಿ ಬಿನ್ನವಿಸಿಕೊಂಡ: ತನ್ನ ತಂದೆ ಪಾತಾಳಲಂಕೆಯ ಅಧಿಪತಿಯಾದ ಚಂದ್ರೋದರ ವಿಯಚ್ಚರ; ಅವನನ್ನು ತನ್ನ ಭುಜಾದಂಡದಿಂದ ಅಮರ

ಕಾಮಿನೀ ಪರ್ಯಂಕ ಶೇಖರನಾದ ಖರನು ಗುಟ್ಟಾಗಿ ಕೊಂದ; ಆಗ ನಮ್ಮ ಪರಿಜನರು ಓಡಿಹೋಗಿ ಈ ವನದುರ್ಗಪ್ರದೇಶದಲ್ಲಿ ಅಡಗಿಕೊಂಡರು; ವಿರಾಧಿತನೆಂಬ ಹೆಸರಿನ ನಾನು ಇಲ್ಲಿಯೇ ಬೆಳೆದು ಕೆಲಕಾಲದ ಪ್ರಯತ್ನದಿಂದ ಸಕಲ ವಿದ್ಯೆಗಳನ್ನೂ ಕಲಿತೆ; ಹಗೆಯನ್ನು ಹೇಗೆ ಸದೆಬಡಿಯಬೇಕೆಂಬುದೇ ನನ್ನನ್ನು ಕಾಡುತ್ತಿದ್ದ ಸಮಸ್ಯೆಯಾಗಿತ್ತು; ಹೀಗೆ ದುಃಖದಿಂದಿರಬೇಕಾದರೆ ಒಂದು ದಿನ ಒಬ್ಬ ದಿವ್ಯಜ್ಞಾನಿಗಳ ದರ್ಶನವಾಯಿತು; ಅವರ ಬಳಿ ನಾನು ನನ್ನ ಪೂರ್ವ ವೃತ್ತಾಂತವನ್ನೆಲ್ಲ ಹೇಳಿಕೊಂಡು ನನ್ನ ಆಸೆ ನೆರವೇರುತ್ತದೆಯೋ ಇಲ್ಲವೋ ಎಂಬುದನ್ನು ಬೆಸಸಲು ಕೇಳಿಕೊಂಡೆ; ಆಗ ಅವರೆಂದರು: "ನಿನ್ನಾಸೆ ಖಂಡಿತವಾಗಿ ಈಡೇರುತ್ತದೆ; ಅವನ ವಂಶಾಗತವಾದ ಕತ್ತಿಯಿಂದ ವಂಶಚ್ಛೇದ ಮಾಡಿದವನೇ ಖರವಂಶಚ್ಛೇದವನ್ನೂ ಮಾಡುತ್ತಾನೆ" ಎಂದು ತಿಳಿಸಿದರು; ಅಂದಿನಿಂದ ನಿಮ್ಮ ಬರವಿಗಾಗಿಯೇ ನಾನು ಕಾಯುತ್ತಿದ್ದೆ; ನನ್ನ ಪುಣ್ಯಬಲದಿಂದ ನೀವು ಬಂದು ನನ್ನ ಹಗೆಯನ್ನೂ ಬಗೆಯನ್ನೂ ತೀರಿಸಿದಿರಿ ಎಂದ. "ನಾನೀಗ ಮಾಡಬೇಕಾದ ಆಳುಬೆಸನವನ್ನು ತಾವು ಅಪ್ಪಣೆ ಮಾಡಬೇಕು; ನನ್ನನ್ನು ಚರಿತಾರ್ಥನನ್ನಾಗಿ ಮಾಡಬೇಕು" ಎಂದು ವಿನಯದಿಂದ ಬಿನ್ನವಿಸಿಕೊಂಡ.

ರಾಮಸೇವಾಲಾಭವನ್ನು ಪಡೆದ ವಿರಾಧಿತನಿಗೆ ಲಕ್ಷ್ಮೀಧರನು ಹೀಗೆಂದ: "ನಮ್ಮ ಕದನವನ್ನು ನೋಡುವ ಕುತೂಹಲದಿಂದ ಅಣ್ಣನು ನಾನಿದ್ದ ಕಡೆಗೆ ಬಂದಾಗ ಯಾವನೋ ಮಾಯಾವಿ ಜಗನ್ಮಾತೆಯಾದ ಸೀತಾದೇವಿಯನ್ನು ಕದ್ದೊಯ್ದಿದ್ದಾನೆ. ಆ ಕಾರಣದಿಂದ ಅಣ್ಣನು ವ್ಯಗ್ರನಾಗಿದ್ದಾನೆ. ಅವನಾರೆಂದು ತಿಳಿಯಲು ನಿನ್ನ ಜನರನ್ನು ಕಳಿಸು." ಇದರಿಂದ ಕೆರಳಿದ ವಿರಾಧಿತನು ಕಾರ್ಯಧುರಂಧರರಾದ ವಿದ್ಯಾಧರರನ್ನು ಈ ಕಾರ್ಯಕ್ಕೆ ನೇಮಿಸಿದ. ಅವರು ತಕ್ಷಣ ಕಾರ್ಯತತ್ಪರರಾದರು. ಬಳ್ಳಿಮನೆಗಳಲ್ಲಿ, ಗುಹೆಗಳಲ್ಲಿ, ಘೋರಾರಣ್ಯಗಳಲ್ಲಿ, ಪರ್ವತ ತಪ್ಪಲಿನ ಉದ್ಯಾನಪ್ರದೇಶಗಳಲ್ಲಿ, ನಿರ್ಝರಗಳ ಧಾರೆಯ ಹಿಂದಿನ ಜಾಗಗಳಲ್ಲಿ, ಕೊಳಗಳ ತಟಗಳಲ್ಲಿ, ಹೂಗೊಳದ ದಂಡೆಗಳಲ್ಲಿ ಸೀತೆಗಾಗಿ ಹುಡುಕಾಡಿದರು; ಆದರೆ ಎಲ್ಲಿಯೂ ಆಕೆಯ ಸುಳಿವಿರಲಿಲ್ಲ. ಮನೋವೇಗದಿಂದ ವಾಪಸಾದ ಅವರು ಈ ವಿಷಯವನ್ನು ವಿರಾಧಿತನಿಗೆ ತಿಳಿಸಿದರು. ಅದನ್ನು ಕೇಳಿ ರಾಮ ಮತ್ತಷ್ಟು ಖಿನ್ನನಾದ. ಆಗ ವಿರಾಧಿತನು, "ನಮ್ಮ ವಂಶಾಗತವಾದ ನಿಸರ್ಗದುರ್ಗವೂ ಆದ ಪಾತಾಳಲಂಕೆಗೆ ಹೋಗಿ, ಸೀತಾದೇವಿಯರ ಹಿರಿಯಣ್ಣನಾದ ಪ್ರಭಾಮಂಡಲನನ್ನು ಅಲ್ಲಿಗೆ ಬರಮಾಡಿಕೊಂಡು ಚರ್ಚಿಸಿ ಸೂಕ್ತ ಕ್ರಮಗಳನ್ನು ಕೈಗೊಳ್ಳುತ್ತೇನೆ. ಆ ಕೆಲಸ ಮಾಡಲು ನಾನೇ ಸಾಕು. ತಾವು ಅಲ್ಲಿಗೇ ಬಿಜಯಗೈಯಿರಿ" ಎಂದು ರಾಮಲಕ್ಷ್ಮಣರನ್ನು ಕೇಳಿಕೊಂಡ. ಅವರು ಒಪ್ಪಿದರು.

ರಥವನ್ನೇರಿಕೊಂಡು ಬಲಸಹಿತ ಅವರೆಲ್ಲ ನಿತ್ಯಾಲಂಕಾರೋದಯವಾದ ಪಾತಾಳಲಂಕೆಯನ್ನು ತಲುಪುವ ಹೊತ್ತಿಗೆ ಖರನ ಮಗನಾದ ಸುಂದರನೆಂಬುವವನು ತನ್ನ ಸೇನೆಯೊಡನೆ ಬಂದು ಇವರನ್ನು ತಡೆದ. ಆದರೇನು ವಿರಾಧಿತನು ಅವನನ್ನು ಆವೇಶದಿಂದ ಎದುರಿಸಿದ. ದಿಕ್ಕುಗಳನ್ನೆಲ್ಲ ಮುಸುಕುವ ಹಾಗೆ, ಸೂರ್ಯನಿಗೇ ಅಡ್ಡಕಟ್ಟುವಂತೆ ವಿರಾಧಿತನು ಬಾಣಗಳ ಮಳೆಗರೆದ; ಸುಂದರನ ಮೇಲೆ ಭಯವರ್ಷ ಸುರಿದಂತಾಯಿತು. ಖರದೂಷಣರಂತೆ ಯಮಪುರಿಗೆ ಹೋಗಲು ಸುಂದರನೇನು ಗಾಂಪನೇ? ಜಿಂಕೆಗೆ ಗರಿ ಮೂಡಿದ ಹಾಗೆ ಭರದಿಂದ ಲಂಕಾಪುರದ ಕಡೆ ಓಟ ಕಿತ್ತ! ಸೇರಿಕೊಂಡ! ಆನಂತರ ಅವರೆಲ್ಲ ಮಹಾ ವೈಭವದಿಂದ ಊರನ್ನು ಪ್ರವೇಶಿಸಿದರು.

ಇತ್ತ ಅಸುರನು ಮನೋವೇಗದಿಂದ ಆಗಸದಲ್ಲಿ ಹಾರಿ ಹೋದ. ಅದೇ ವೇಳೆಯಲ್ಲಿ "ಪರಾಂಗನೆಯಾದ ನನ್ನನ್ನು ಈ ಖೂಳನು ಕದ್ದೊಯ್ಯುತ್ತಿದ್ದಾನೆ" ಎಂದು ಖೇದಭರಿತಳಾದ ವೈದೇಹಿಯು ಹುಯ್ಯಲಿಟ್ಟಳು. ಕಣ್ಣೀರು ಮತ್ತು ಬೆವರುಗಳಿಂದ ಕರಗಿ ಹೋಗುವಳೆನೋ ಎಂಬುವಂತೆ ಹೊಟ್ಟೆ ಹೊಸೆದುಕೊಳ್ಳುತ್ತ ಮಾಡಿದ ಅವಳ ಹಾಹಾರವವು ದಿಕ್ಕುಗಳಲ್ಲೆಲ್ಲ ಮಾರ್ದನಿಸಿತು. ಅನ್ಯಾಂಗನಾವಿವಶನಾಗಿ ದಾಶರಥಿ ಪ್ರಿಯಪ್ರಮದೆಯನ್ನು ಕೊಂಡೊಯ್ಯುತ್ತಿರುವ ಈ ದುರಾಚರಿತನನ್ನು ತಡೆಯಬೇಕೆಂದು ಬುವಿಯ ನಿವಾಸಿಗಳಿಗೂ, ವನನಿವಾಸಿಗಳಿಗೂ, ನವಗ್ರಹಾದಿ ಜ್ಯೋತಿಕಾಯರಿಗೂ, ಇಂದ್ರಾದಿ ಸಕಲ ಕಲ್ಪ ವಿಮಾನಸ್ಥಿತರಿಗೂ ಮನವಿ ಮಾಡಿಕೊಂಡಳು. ಧರಣೀರಕ್ಷಣ ದಕ್ಷ ದಕ್ಷಿಣಭುಜನಾದ ಲಕ್ಷ್ಮೀಧರನು ಮೈದುನ, ಹರಿವಂಶದ ಜನಕನೇ ತಂದೆ, ವೀರನಾದ ಪ್ರಭಾಮಂಡಲನು ಅಣ್ಣ, ರಘುರಾಮನು ಪ್ರಾಣವಲ್ಲಭ – ಇಂತಹ ಸೀತೆಯಾದ ತನ್ನನ್ನು ಈ ಮಾಯಾವಿಯು ಒಯ್ಯುತ್ತಿರುವನಲ್ಲ ಎಂದು ಅವಳು ಹಾಕ್ರಂದನವನ್ನು ಮಾಡಿದಳು.

ಮತ್ತೆ ಮತ್ತೆ ಕಿವಿಗೆ ಬಿದ್ದ ಈ ದನಿಯು ಅರ್ಕಜಟಿಯ ಮಗನಾದ ರತ್ನಜಟಿಯ ಕಿವಿಗೆ ಬಿತ್ತು. ರಘೂದ್ವಹನ ಕುಲಸ್ತ್ರೀಯಾದ ಸೀತೆ ಹುಯ್ಯಲಿಡುತ್ತಿದ್ದಾಳೆ; ಪೆಣ್ಬುಯ್ಯಲನ್ನು ಕೇಳಿಕೊಂಡೂ ಸುಮ್ಮನಿದ್ದರೆ ಈಗಿನ ವಿಖ್ಯಾತಿಗೆ ಮುಕ್ಕು ಬರುತ್ತದೆ; ಆದ್ದರಿಂದ ಸೆರೆಗೊಂಡವನನ್ನು ಕದನದಲ್ಲಿ ಎದುರಿಸಿ ತನ್ನ ಬಾಹಾಬಲವನ್ನು ತೋರಿಸಬೇಕೆಂದು ಅವನು ನಿರ್ಧರಿಸಿದ. ಕೋಪದಿಂದ ರತ್ನಜಟಿಯು ದಶಾನನನ ವಿಮಾನಕ್ಕಡ್ಡ ಬಂದ. "ವ್ರತವನ್ನು ಮೀರಿ ಪರವಧುಗೆ ಅಳುಪುವುದು ಖೇಚರ ಚಕ್ರವರ್ತಿಯಾದ ನಿನಗೆ ತಕ್ಕುದೇ? ನಿನಗೆ ಪರವು ಅಳಿಯುವುದಿಲ್ಲವೇ?" ಎಂದು ಮರ್ಮೋದ್ಘಾಟನೆ ಮಾಡಿದ. ಅರ್ಕಜಟಿಯ ಜೊತೆ ತನಗಿದ್ದ ನಂಟುತನದಿಂದಾಗಿ ಮೇಲೇರಿಬಂದ ರತ್ನಜಟಿಯನ್ನು ಕೊಲ್ಲದೆ ಕರುಣಿಸಿದ ನಿರಂಕುಶನಾದ ರಾವಣನು ಅವನ ವಿದ್ಯಾಚ್ಛೇದವನ್ನು ಮಾಡಿದ. ವಿದ್ಯಾಡಂಬರವು ಅಡಗಲು ಅವನು ಅಂಬರದಿಂದ ಕೆಳಗಿದ್ದ ಕಂಬುದ್ವೀಪದಲ್ಲಿ ಬಿದ್ದು ಮೂರ್ಛೆ ಹೋದ. ರೆಕ್ಕೆ ಕತ್ತರಿಸಿದ ಹಕ್ಕಿಯ ಹಾಗಿತ್ತು ಅವನ ಸ್ಥಿತಿ.

ಈ ಕಡೆ ಲಂಕೆಗೆ ಅಭಿಮುಖನಾಗಿ ಸಾಗುತ್ತಿದ್ದ ರಾವಣನ ಮನಸ್ಸು ಸಂಭೋಗಸುಖಕ್ಕೆ ಕಾತರಿಸುತ್ತಿತ್ತು; ಅವನ ನೋಟವು ಸೀತೆಯ ಸರ್ವಾಂಗಗಳನ್ನೂ ಆಲಂಗಿಸುವಂತೆ ನೋಡುತ್ತಿತ್ತು; ಮಾತುಗಳು ಮದನರಾಗೋನ್ಮಾದವನ್ನು ಬೀರುತ್ತಿದ್ದವು; ಬಾಹುಗಳು ಆಲಿಂಗನಕ್ಕಾಗಿ ಹಾತೊರೆಯುತ್ತಿದ್ದವು. ಇದರಿಂದಾಗಿ ಮನಗೆಟ್ಟ ಅವನು ಚೇಷ್ಟೆಗೆ ತೊಡಗಿದ. ದರ್ಪಕನ ದಂಡನೆ ಯಾರನ್ನು ತಾನೇ ಬಿಟ್ಟೀತು! ಇದನ್ನು ಸೈರಿಸದ ಸೀತೆ ತನ್ನನ್ನು ಮುಟ್ಟಿದರೆ ನಾಲಗೆ ಕಿತ್ತುಕೊಂಡು ಸಾಯುವುದಾಗಿ ನಿರ್ಧಾರದ ಮಾತನ್ನಾಡಿದಳು; ಬೆದರಿದ ರಾವಣನು ದೂರ ಸರಿದ. ಅವಳ ಪಾತಿವ್ರತ್ಯದ ಆಳವನ್ನು ಅರಿಯದುದರಿಂದಲೂ, ಅನಂತವೀರ್ಯ ಕೇವಲಿಗಳಿತ್ತ ಪರಾಂಗನಾ ವಿರತಿ ವ್ರತ ಪಾಲನೆಯು ತನಗೆ ಕಷ್ಟವಾದುದರಿಂದಲೂ, ನಿಸರ್ಗ ರಾಗಿಗಳಾದ ಹೆಣ್ಣುಗಳ ನಿರಾಕರಣೆ ಎಷ್ಟು ಕಾಲ ನಡೆದೀತೆಂಬ ಭಾವನೆಯಿಂದಲೂ ಸೀತೆಯನ್ನು ಒಡಂಬಡಿಸುವುದು ಯಾವ ಮಹಾ ಎಂದು ತನಗೆ ತಾನೇ ಸಾಂತ್ವನ ಹೇಳಿಕೊಂಡ. ಆ ಹೊತ್ತಿಗೆ ಯುದ್ಧದಲ್ಲಿ ಪಲಾಯನ ಮಾಡಿ ವೇಗವಾಗಿ ಹಾರಿ ಹೋಗುತ್ತಿದ್ದ ಹಸ್ತಪ್ರಹಸ್ತರು ದಶಕಂಠನನ್ನು ಕಂಡು

ಜಯಜಯಕಾರ ಮಾಡುತ್ತ ಬಂದು ತಲೆಬಾಗಿ ನಮಸ್ಕರಿಸಿ ಹೋದರು. ಇದರಿಂದ ತನ್ನನ್ನು ಒಯ್ಯುತ್ತಿದ್ದವನು ರಾವಣನೆಂಬುದು ಸೀತೆಗೆ ತಿಳಿಯಿತು. ತನ್ನ ಪತಿಯ ಕುಶಲ ವಾರ್ತೆಯನ್ನು ಕೇಳುವವರೆಗೂ ತಾನು ಊಟಮಾಡುವುದಿಲ್ಲವೆಂದು ಮನಸ್ಸಿನಲ್ಲಿಯೇ ನಿರ್ಧರಿಸಿದಳು. ರಾವಣನು ಲಂಕೆಯನ್ನು ಹೊಕ್ಕವನೇ ಗೀರ್ವಾಣರಮಣ ಎಂಬ ಹೆಸರಿನ ತನ್ನ ವಿನೋದಬನದ ಬಳಿ ಬಂದ. "ವನವನ್ನು ಪ್ರವೇಶಿಸಬೇಡ; ಇಲ್ಲಿ ಈ ಮೃಗಾಕ್ಷಿಯನ್ನಿಟ್ಟರೆ ರಾಮದೂತನಿಂದ ನಮಗೆ ಕೇಡಾಗದಿರದು" ಎಂದು ಕೈಸನ್ನೆ ಮಾಡುವಂತೆ ಮರಗಳ ಚಿಗುರ ತೊಂಗಲುಗಳು ಅಲುಗಾಡಿದವು. ಒಳ ಹೊಕ್ಕ ರಾವಣನು ಅಲ್ಲಿನ ಮಣಿಮಯ ಗೃಹವೊಂದರಲ್ಲಿ ವೈದೇಹಿಯನ್ನಿರಿಸಿ ತನ್ನರಮನೆಯ ಕರುಮಾಡವನ್ನು ಸೇರಿಕೊಂಡ.

ಆ ಸಮಯದಲ್ಲಿ ಖರದೂಷಣರ ಮರಣವಾರ್ತೆಯು ಚರರಿಂದ ಚಂದ್ರನಖಿಗೆ ತಿಳಿಯಿತು. ಮಗನನ್ನು ಕೊಂದವನನ್ನು ಕೊಲ್ಲ ಹೋಗಿ ಗಂಡನೂ ಮೈದುನನೂ ಸತ್ತುದರಿಂದ ಅವಳ ಮನಸ್ಸು ವಿಹ್ವಲಕ್ಕೊಳಗಾಯಿತು. ಕಡಗಗಳ ಝಣತ್ಕಾರವು ಅಳುವಿನ ಸದ್ದಿನೊಡನೆ ಸೇರಲು, ಚಿಗುರಿನಂತಹ ಕೈಗಳಿಂದ ಹೊಟ್ಟೆ ಹೊಸೆದುಕೊಳ್ಳುತ್ತ, ಕಣ್ಣುಗಳಲ್ಲಿ ನೀರು ತುಂಬಿಕೊಂಡು ಬಂದ ಅವಳು ಅಣ್ಣನ ಪಾದಮೂಲದಲ್ಲಿ ಕೆಡೆದಳು. ಅವಳೊಡನೆ ಮಂಡೋದರಿ ಸಮೇತ ಅಂತಃಪುರಸ್ತ್ರೀಯರೆಲ್ಲ ಬಂದಿದ್ದರು. ಅವಳನ್ನು ಸಮಾಧಾನ ಮಾಡಿದ ರಾವಣನು ಖರದೂಷಣರನ್ನು ಕೊಂದವರನ್ನು ತಾನು ಕೊಲ್ಲುತ್ತೇನೆ ಎಂದು ಪ್ರತಿಜ್ಞೆಗೈದ. ಜಿನಭವನಗಳಲ್ಲಿ ಮಹಾಪೂಜೆಗಳನ್ನು ಏರ್ಪಡಿಸಿ ರಾಜಭವನಕ್ಕೆ ಬಂದು ಶಯ್ಯಾಗೃಹವನ್ನು ಹೊಕ್ಕ. ಖರದೂಷಣಹಂತಕರನ್ನು ಹೇಗೆ ಕೊಲ್ಲಬೇಕೆಂಬ ಯೋಚನೆಗಿಂತಲೂ ಅವನ ಮನಸ್ಸನ್ನಾವರಿಸಿದ ವಿಷಯವೆಂದರೆ ಸೀತೆಯನ್ನು ಯಾವರೀತಿಯಿಂದ ಗೆಲ್ಲಬೇಕೆಂಬ ವಿಚಾರ, ತನ್ನ ಮನೋಜ ಸಂತಾಪವನ್ನು ಹೇಗೆ ಪರಿಹರಿಸಬೇಕೆಂಬ ಚಿಂತೆ. ಅವನ ಇಂದ್ರಿಯಗಳು ಇತರ ವಸ್ತುಗಳಲ್ಲಿ ರುಚಿಯನ್ನು ಕಳೆದುಕೊಂಡವು; ಮನವನ್ನು ಹೃಜ್ಜಾತನ ಮಾಯೆ ಆವರಿಸಿತು. ಅವನು ಮರವಾನಸನಂತೆ ಆಗಿಬಿಟ್ಟ.

ಖರನ ಸಾವಿನಿಂದ ತನ್ನ ಮನೋವಲ್ಲಭನು ಹೀಗಾಗಿರುವನೆಂದು ಭಾವಿಸಿದ ಮಂಡೋದರಿಯು, "ಹೀಗೇಕೆ ಹೆಂಗಸರಂತೆ ದುಃಖಿಸುತ್ತಿರುವಿರಿ? ಹೀಗಿದ್ದರೆ ನಿಮ್ಮ ಗಂಡಗುಣಕ್ಕೆ ಹಾನಿಯಾಗದೇ?" ಎಂದಳು. ಗಗನೇಚರ ಚಕ್ರವರ್ತಿಯನ್ನು ಆವರಿಸಿರುವುದು ಜಾನಕೀವಿರಹವೆಂಬ ಬೆಂಕಿ ಎಂಬುದು ಅವಳಿಗೆಂತು ತಿಳಿಯಬೇಕು! ಅವಳ ಮಾತನ್ನು ಕೇಳಿದ ದಶಗ್ರೀವನು, "ನನ್ನ ಬೇವಸಕ್ಕೆ ನೀನು ಹೇಳಿದ್ದು ಕಾರಣವಲ್ಲ; ನಿನಗೆ ನನ್ನ ಬಗೆ ಅರ್ಥವಾಗುವುದಿಲ್ಲ" ಎಂದ. ಆನಂತರ ಮನಸ್ಸು ಬೆಂಡಾಗಿ ಮೌನವಹಿಸಿದ. ಗಂಡನ ಮನಸ್ಸನ್ನು ತಿಳಿಯುವ ನಿರ್ಧಾರದಿಂದ ಮಂಡೋದರಿಯು "ಇದೆಂಥ ಮಾತು? ನಿಮ್ಮ ಶೋಕಕ್ಕೆ ಕಾರಣವಾದರೂ ಯಾವುದು?" ಎಂದು ಬೆಸಗೊಂಡಳು. ಆದರೆ ಲಜ್ಜಾರಸದಲ್ಲಿ ಮುಳುಗಿಹೋದ ದಶಾನನನು ಉತ್ತರಿಸದೆ ಸುಮ್ಮನಿದ್ದ. ಗಂಡುಡುಗೆಯುಟ್ಟು ಕೈದು ಹಿಡಿದು ದಶಕಂಧರನಿಗೆ ನೋವನ್ನುಂಟುಮಾಡಬಲ್ಲ ಗಂಡರು ದೇವ ಮಾನವ ವಿಯಚ್ಚರರಲ್ಲಿ ಯಾರೂ ಇಲ್ಲ. ಅವನ ದೋರ್ಮಂಡಲವು ಮೂರೂ ಖಂಡಗಳನ್ನು ಆವರಿಸಿದೆ.

ಆದ್ದರಿಂದ ಇದು ಪುಷ್ಪಕೋದಂಡನ ಚೇಷ್ಟೆಯಿರಬೇಕು; ಅವನನ್ನು ಹೂಬಾಣಗಳು ನಾಟಿರುವಂತಿದೆ. ಮೋಹಕ್ಕೊಳಗಾಗದ ಅವನಿಗೆ ನೋವುಂಟುಮಾಡಬಲ್ಲವಳು ಮೇಣದಿಂದಾದ ಅಥವಾ ಚಿತ್ರದ ಹೆಣ್ಣಾಗಿರಬೇಕು ಎಂದುಕೊಂಡಳು. ತನಗನಿಸಿದ್ದನ್ನು ನವಿರಾದ ಮಾತುಗಳಲ್ಲಿ ವ್ಯಕ್ತಪಡಿಸಿದಳು.

ಆಗ ರಾವಣನು, "ನನಗಾಗಿರುವುದು ನಿನಗೆ ಹೇಳಬಹುದಾದ ವಿಷಯವಲ್ಲ. ಆದರೆ ನಿನಗೆ ಅದು ತಿಳಿದುಹೋಗಿದೆ, ಆದ್ದರಿಂದ ನಿನಗೆ ವಂಚಿಸಲು ಸಾಧ್ಯವಿಲ್ಲ. ಏನು ಮಾಡಬೇಕೆಂದು ತಿಳಿಯದೆ ಮದನನ ದೂಸರಿಂದ ಸೀತೆಯನ್ನು ಕದ್ದು ತಂದಿದ್ದೇನೆ" ಎಂದ. ಒಂದು ಕ್ಷಣದ ನಂತರ, ಪುಷ್ಪಕ ವಿಮಾಣದಲ್ಲಿ ಅವಳನ್ನು ಸೆರೆವಿಡಿದು ಕರೆತರುವಾಗ ಅವಳ ಕುಂದಿಲ್ಲದ ಚೆಲುವನ್ನು ಕಂಡು ತಾಳಲಾರದೆ ಹಿಡಿಯಲು ಹೋದುದನ್ನೂ, ಅದಕ್ಕೆ ಸೀತೆ ನಾಲಗೆ ಕಿತ್ತು ಸಾಯುವ ಬೆದರಿಕೆಯೊಡ್ಡಿದುದನ್ನೂ ತಿಳಿಸಿ, ಅವಳನ್ನು ಈಗ ಗೀರ್ವಾಣರಮಣೋದ್ಯಾನದಲ್ಲಿ ಇರಿಸಿರುವುದನ್ನು ಅರುಹಿದ. ಆ ಕುಂದದಳ ಧವಳಲೋಚನೆಯ ಲಾವಣ್ಯಸುಧೆಯನ್ನು ಸೇವಿಸದೆ ಹೋದರೆ ತನಗೆ ಸಾವು ಸಮನಿಸುವುದು ಖಂಡಿತ ಎಂದು ಮುಖ ಕೆಳಕ್ಕೆ ಹಾಕಿದ. ಅವನ ದಶಾವಸ್ಥೆಯನ್ನು ಕಂಡ ಮಂಡೋದರಿಗೆ ಭಯವಾಯಿತು. "ಮಿಂಚಿನ ಬೆಳಕೂ ಹೆಣ್ಣಿನ ಶುಚಿತ್ವವೂ ಕ್ಷಣಿಕವಾದದ್ದು, ನಿನ್ನ ರೂಪನ್ನು ಕಂಡು ಸೋಲದೆ ಇರುವವರಿದ್ದಾರೆಯೇ?" ಎಂದು ಅವನಿಗೆ ಸಂತಸವಾಗುವ ಮಾತನ್ನಾಡಿದಳು. ಅವಳನ್ನು ಒಪ್ಪಿಸಲು ತಾನೇ ಸಾಕು ಎಂದು ಸಮಾಧಾನ ಮಾಡಿದಳು.

ಬಳಿಕ ಮಂಡೋದರಿ ಸಮಸ್ತ ಅಂತಃಪುರ ಸ್ತ್ರೀಯರ ಸಮೇತ ಸೀತೆಯಿದ್ದ ಜಾಗಕ್ಕೆ ಬಂದಳು. ಹೆಣ್ಣಿಗೆ ಸಹಜವಾದ ಕಣ್ಣ ಕಾಂತಿ, ದೇಹದೀಪ್ತಿ, ರತ್ನಭೂಷಣಗಳ ಹೊಳಪು ಇವುಗಳಿಂದ ದಿನಲಕ್ಷ್ಮಿಗೆ ಹೆಚ್ಚು ಸೊಗರುಂಟಾದಂತೆ ಅವಳು ವಿಲಾಸದಿಂದ ಕುಳಿತಳು. ಆದರೆ ಸೀತೆಯ ಎದುರಲ್ಲಿ ಅಲ್ಲಿದ್ದ ಯಾರ ರೂಪವೂ ಸೊಗಸದಾಯಿತು; ದಿನಲಕ್ಷ್ಮಿಯೊಡನೆ ನಕ್ಷತ್ರವು ಸ್ಪರ್ಧಿಸಬಲ್ಲುದೇ? ಸ್ವಲ್ಪ ಕಾಲಾನಂತರ ಆ ಖಚರಕಾಂತೆಯು ಜಾನಕಿಯ ಮೊಗವನ್ನು ನೋಡಿ, "ನಿನಗೆ ಸಾಟಿಯಲ್ಲದ ರಾಮನಿಗೆ ಆ ಬ್ರಹ್ಮ ನಿನ್ನನ್ನು ಕೊಟ್ಟಿದ್ದಾನೆ. ಇದನ್ನು ಸೈರಿಸದ ಚಿತ್ತಭವನು ಈಗ ನಿನ್ನನ್ನು ದಶಕಂಧರನಿಗೆ ಕೊಟ್ಟಿದ್ದಾನೆ. ನಿನಗೆ ಅನುರೂಪನಾದ ಅವನನ್ನು ವರಿಸಿ ನಿನ್ನ ಹಣೆಯಲ್ಲಿ ಲಂಕೆಯ ಅರಸಿ ಪಟ್ಟವನ್ನು ಕಟ್ಟಿಕೋ. ನಿನ್ನ ನವಯೌವನೋದಯವನ್ನೂ, ಕಂಗಳಿಗೆ ಹಬ್ಬವೆನಿಸುವ ಚೆಲುವನ್ನೂ, ದೇಹ ಕಾಂತಿಯನ್ನೂ ಎಷ್ಟು ಹೊಗಳಿದರೂ ಸಾಲದು. ಮೇನಕೆಯೇ ಮನಸೋತು ಬಂದಾಗ ಅವಳನ್ನೊಲ್ಲದ ದಶಾನನನು ನಿನಗೆ ವಶವಾದನೆಂದ ಮೇಲೆ ನಿನ್ನ ರೂಪನ್ನು ಹೊಗಳಲು ಸಾಧ್ಯವೇ? ಆದ್ದರಿಂದ ನೀನು ಖಚರೇಂದ್ರನ ವಕ್ಷದಲ್ಲಿ ಲಕ್ಷ್ಮಿಯಂತೆ ವಾಸಿಸು" ಎಂದಳು.

ಈ ಮಾತು ಕೇಳಿದ ಸೀತೆ ಕನಲಿದಳು. "ಇದು ಮದದಿಂದ ಕೂಡಿದವಳ ಕಾಡು ಮಾತೇ ಹೊರತು ಕುಲವಧು ಆಡುವ ಮಾತಲ್ಲ. ವಂಶದ ಕೇಡನ್ನು ಬಗೆಯದೆ, ಒಳಿತನ್ನು ಆಲೋಚಿಸದೆ, ಅಪಕೀರ್ತಿ ಪಾಪಗಳಿಗೆ ಹೆದರದೆ ಇಂತಹ ಅಸಂಬದ್ಧವನ್ನು ನಿಮ್ಮಂತಹವರನ್ನು ಬಿಟ್ಟು ಬೇರಾರೂ ನುಡಿಯರು. ನನ್ನ ಒಡೆಯ ರಾಮ, ಉಳಿದವರೆಲ್ಲ

ನನಗೆ ಹೊರಗು. ಪಾತಿವ್ರತ್ಯವಿಲ್ಲದವಳು ಕುಲಸ್ತ್ರೀಯಾಗುವಳೇ? ಹರಿವಂಶದ ವನಿತೆಯ ಬಳಿ ತಪ್ಪು ಒಪ್ಪುಗಳನ್ನು ಅರಿಯದೆ ಇಂತಹ ಅನುಚಿತವನ್ನು ನಿಮ್ಮಂತಹವರನ್ನು ಬಿಟ್ಟು ಬೇರಾರೂ ಆಡುವುದಿಲ್ಲ" ಎಂದು ಬಿಡೆನುಡಿದಳು. ಆ ಹೊತ್ತಿಗೆ, ವಜ್ರಾಭರಣಗಳ ಕಾಂತಿಯು ಕುಡುಮಿಂಚಿನಂತೆ ಹೊಳೆಯುತ್ತಿರಲು, ಇಂದ್ರನಿಗಿಂತಲೂ ನೂರ್ಮಡಿ ಸೌಂದರ್ಯವನ್ನುಳ್ಳ ದಾನವೇಂದ್ರನು ಸುರಪುಷ್ಪವನ್ನು ಕಿವಿಯಲ್ಲಿ ಧರಿಸಿ ಜನಕಸುತೆಯನ್ನು ನೋಡುವ ಆತುರದಿಂದ ಚಂದ್ರಹಾಸವೆಂಬ ಖಡ್ಗವನ್ನು ಝಳಪಿಸುತ್ತ ಅಲ್ಲಿಗೆ ಅನಿರೀಕ್ಷಿತವಾಗಿ ನಡೆದುಬಂದ. ಅವನನ್ನು ನೋಡಿ ಸೀತೆಯು ಹರಿಯುವ ನೀರಿನಲ್ಲಿನ ಪ್ರತಿಬಿಂಬದಂತೆ ನಡುಗಿದಳು. "ಅಂಜದಿರು" ಎಂದು ಅವಳಿಗೆ ಹೇಳಿದ ರಾವಣನು ಅಲ್ಲಿಂದ ಹೊರಟು ಹೋಗಲು ಅಂತಃಪುರಸ್ತ್ರೀಯರಿಗೆ ಕಣ್ಸನ್ನೆ ಮಾಡಿದ.

ಕಮಲಿನಿಗೆ ಆಸೆಪಡುವ ಚಂದ್ರಕಾಂತಿಯಂತೆ ದಂತಚ್ಛವಿಯು ಹೊಮ್ಮಲು ಜಾನಕಿಯ ಮೊಗವನ್ನು ನೋಡಿ ಪೌಲಸ್ತ್ಯನು ಹೀಗೆಂದ: "ನಿನ್ನ ಪಾದಗಳಿಗೆ ನೂಪುರವನ್ನೂ, ಸೊಂಟಕ್ಕೆ ಮಣಿಮೇಖಲೆಯನ್ನೂ, ಕುಚಗಳಿಗೆ ಕುಂಕುಮಾಲೇಪನವನ್ನೂ, ನಳಿದೋಳುಗಳಿಗೆ ಹಸುರು ಅಂಕಣವನ್ನೂ, ಕಪೋಲಕ್ಕೆ ಪತ್ರಲೇಖೆಯನ್ನೂ ತೊಡಿಸಲು ನನ್ನ ಮನಸ್ಸು ಆತುರಿಸುತ್ತದೆ. ಪೆಂಡವಾಸದ ಲಲನೆಯರು ನಿನ್ನ ಸುತ್ತ ಬರುತ್ತಿರಲು, ನಿನ್ನ ನಗೆಗಣ್ಣು ಸಂತುಷ್ಟಿಯನ್ನು ಸೂಸುತ್ತಿರಲು, ಆನೆಯ ಮೇಲೆ ಬೆಳ್ಗೊಡೆಯ ತಣ್ಣೆಳಲಲ್ಲಿ ಕುಳಿತು, ಲಂಕಾನಗರಿಯ ಬಹಿರುದ್ಯಾನದತ್ತ ಸಾಗಿ ಬಾ. ಆಗಸವಿಲಾಸಿನೀ ತಿಲಕವೆನಿಸುವ ಪುಷ್ಪಕ ವಿಮಾನದಲ್ಲಿ ನನ್ನೊಡನೆ ಕುಳಿತು ಕುಲನದಿಗಳು, ಕುಲಾದ್ರಿಶಿಖರಗಳು, ದಿವ್ಯ ಸರೋವರಗಳು, ಮಲಯ ಗಿರಿಯ ತಪ್ಪಲು, ಲವಣಸಾಗರ ವಜ್ರವೇದಿಕೆಗಳನ್ನು ನಿನ್ನ ಕಣ್ಣುಗಳಿಗೆ ಹಾದಿಯ ಅತಿಥಿಗಳನ್ನಾಗಿ ಮಾಡಿಕೊಂಡು ಹಾರು. ನನ್ನ ಜೊತೆಯ ಹೋರಾಟದಲ್ಲಿ ಮುರಿದ ಇಂದ್ರನ ಐರಾವತದ ದಂತಗಳಿಂದ ಮಾಡಿದ ಮಂಚದ ಮೇಲೆ ಬ್ರಹ್ಮನ ಹಂಸದ ತುಪ್ಪುಳನ್ನು ತರಿದು ತುಂಬಿದ ಪಲ್ಯಂಕದಲ್ಲಿ, ದಿಕ್ಪಾಲಕರು ಸಿದ್ಧಪಡಿಸಿದ ದಿಂಬುಗಳುಳ್ಳ ಕೇಳಿತಲ್ಪದಲ್ಲಿ, ಅಮರಿಯರ ಮಂಗಳ ಗೀತಸ್ವನವು ನಿನ್ನನ್ನು ಎಚ್ಚರಿಸುವವರೆಗೂ ನಿದ್ದೆಮಾಡು. ಖಡ್ಗರತ್ನ, ಚಕ್ರರತ್ನ, ನವನಿಧಿ, ಹಲವು ಬಗೆಯ ವಿದ್ಯೆಗಳು – ಇವುಗಳನ್ನು ಪಡೆದ ನಾನು ದಿಕ್ಪಾಲರನ್ನು ಅಂಜಿಸಿದೆ; ಎದುರಾದ ಇಂದ್ರನನ್ನು ಕಟ್ಟಿಹಾಕಿದೆ; ಕೈಲಾಸವನ್ನು ಲೀಲೆಯಿಂದ ಅಲುಗಾಡಿಸಿದೆ; ದಕ್ಷಿಣ ಭರತಭೂಮಿಯನ್ನು ಚಕ್ರದಿಂದ ಗೆದ್ದೆ. ಮೀನಲೋಚನೆಯೇ, ಇಂಥ ಪೌಲಸ್ತ್ಯನನ್ನು ಮಾನವರು ಕದನದಲ್ಲಿ ಗೆಲ್ಲಲು ಸಾಧ್ಯವೇ? ಕಾಡಿನಲ್ಲಿ ತೊಳಲಾಡಿಸುತ್ತ, ಅರಣ್ಯಸೌಖ್ಯವನ್ನು ನೀಡುವ ರಾಘವನ ಗೊಡವೆ ಇನ್ನೇಕೆ? ಅಂಗರಾಗ ವಸ್ತ್ರ ಪರಿಮಳದ್ರವ್ಯಗಳನ್ನು ಧರಿಸಿ ವಿದ್ಯಾಧರ ಕ್ರೀಡಾಸದನದಲ್ಲಿ ನಾನಾ ಬಗೆಯ ಮನ್ಮಥಕ್ರೀಡಾಸೌಖ್ಯಗಳನ್ನು ಅನುಭವಿಸುತ್ತ ವೈಭವದಿಂದ ಬಾಳು." ಈ ರೀತಿಯ ಪರನಿಂದೆ ಮತ್ತು ಆತ್ಮಸ್ತುತಿಗಳಲ್ಲಿ ರಾವಣನು ತತ್ಪರನಾದ. ನೂರಾರು ಬಗೆಯ ಅನುನಯದ ನುಡಿಗಳನ್ನಾಡಿದರೂ ವಿಯಚ್ಚರೇಂದ್ರನಿಗೆ ಅವಳನ್ನು ಅನುವಶೆಯನ್ನಾಗಿಸಿಕೊಳ್ಳಲು ಶಕ್ಯವಾಗಲಿಲ್ಲ. ಗಗನಕ್ಕೆ ಮೆತ್ತಿದರೆ ಅದಕ್ಕೆ ಮಸಿ ಹತ್ತುವುದೇ! ತನ್ನ ಸಿರಿ ಸೌಂದರ್ಯಗಳಿಂದ ಆ ಸತಿಯನ್ನು ಒಲಿಸಿಕೊಳ್ಳಲು ಮಾಡಿದ ಅವನ ಪ್ರಯತ್ನ ವ್ಯರ್ಥವಾಯಿತು. ನಿಧಿಯಿರುವೆಡೆ ಸಾಮಾನ್ಯ ದೀಪದಂತೆ ಮಾಣಿಕ್ಯದ ದೀಪ್ತಿ ಬಾಗುವುದೇ!

ಆ ದುರಾತ್ಮನ ದುರುಕ್ತಿಯಿಂದ ಸೀತೆಗೆ ಅಸಾಧ್ಯ ಕೋಪ ಬಂತು. ಆದರೂ ಅದನ್ನು ತೋರಗೊಡದೆ, "ಕ್ರಮದಪ್ಪಿದ ಇಂಥ ನುಡಿಗಳನ್ನು ನೀನು ಆಡಬಹುದೇ? ಛೀ, ಅನ್ಯಸ್ತ್ರೀ ಶಯನಸ್ಥಾನ, ಇತರರು ಸ್ನಾನಮಾಡಿದ ನೀರು, ಬೇರೆಯವರು ಮುಡಿದ ಕದಂಬಪುಷ್ಪ ಕಾಶ್ಮೀರಾಂಗರಾಗಾದಿಗಳು, ಎಂಜಲು ಅನ್ನ, ಅನ್ಯರ ಬಾಯ್ದಂಬುಲ - ಇವುಗಳು ಅಸ್ಪೃಶ್ಯಗಳಲ್ಲವೇ? ಗುಣಹಾನಿಯಿಂದ ಅಧೋಗತಿಯುಂಟಾದರೆ, ಗುಣಯುಕ್ತತೆಯಿಂದ ಸ್ವರ್ಗಾಪವರ್ಗ ಸುಖವುಂಟಾಗುತ್ತದೆ; ಹೀಗಾಗಿ ಗುಣಹೀನನ ಸಿರಿಗಿಂತಲೂ ಗುಣಿಗಳ ಬಡತನವೇ ಲೇಸಲ್ಲವೇ? ಬತ್ತಿ ಹೋದ ಸಮುದ್ರವನ್ನು ನೀರಿನಿಂದ ತುಂಬಿಸಲೂ, ತ್ರಿಕೂಟಗಿರಿಯನ್ನು ಹಿಡಿದು ತಿರಿಕಲ್ಲಾಡಲೂ, ಸೂರ್ಯಹಾಸ ಖಡ್ಗವನ್ನು ಹಿಡಿದು ದ್ವಿಷನ್ನೃಪರನ್ನೂ ಅಕ್ಷೌಹಿಣೀ ಸೈನ್ಯವನ್ನೂ ತರಿದು ಹಾಕಲು ಸಮರ್ಥವಾದುದು ರಾಮಾನುಜನಾದ ಲಕ್ಷ್ಮಣನ ದೋರ್ಬಲ. ಇನ್ನು, ಅನಂತವೀರ್ಯನಾದ ರಾಮನು ಭುವನತ್ರಯವೇ ನಿಂತರೂ ತನ್ನ ಬಾಹುಬಲದಿಂದಲೇ ಗೆಲ್ಲಬಲ್ಲ ಅಮೋಘನಾದವನು; ಉದಾತ್ತನೂ ಉದ್ದಾಮಶಿಲೀಮುಖನೂ ಆದ ರಾಘವನ ಸಮಕ್ಕೆ ಅನ್ಯಸಹಾಯವನ್ನು ಅಪೇಕ್ಷಿಸುವ ಪೀಡ್ಯಮಾನರಾದ ಅಧಿರಾಜರು ಬರುವರೇ? ಯುದ್ಧ ಮಾಡಲಾರದೆ ನೀನು ನನ್ನನ್ನು ವಲ್ಲಭನಿಂದ ಅಗಲಿಸಿದೆ; ಆದರೇನು ರಾಮನು ಬಿಟ್ಟ ಬಾಣಗಳು ಲಯಕಾಲದ ಮುಗಿಲಿನಂತೆ ಆಗಸವನ್ನೆಲ್ಲ ಆವರಿಸಿಬಿಡುವುದಿಲ್ಲವೇ?" ಎಂದು ಸೀತೆಯು ಮರುಮಾತಿಗೆ ಆಸ್ಪದವಿಲ್ಲದಂತೆ ಬಿಡೆನುಡಿದಳು. ಇದನ್ನು ಕೇಳಿ ಮುಳಿಸುಗೊಳ್ಳುವುದಂತಿರಲಿ, ರಾವಣನಿಗೆ ಅವಳ ಬಗೆಗಿನ ಒಲವು ಹತ್ತುಮಡಿಯಾಯಿತು. ವಿಷಯಸುಖದಲ್ಲಿ ಕೈಗೆಟುಕದ್ದು ಹೆಚ್ಚು ರಸವತ್ತೆನಿಸುವುದು ವಿಸ್ಮಯವೇ! ಆ ಬಗೆಯಲ್ಲಿ ಆ ಕಂಬುಕಂಠಿಯ ಕೋಪದ ನುಡಿಗಳು ದಶಕಂಠನಿಗೆ ಸುಗ್ಗಿಯ ಕೋಗಿಲೆಯ ಗಾನದಂತೆ ಇನಿದಾಗಿ ಕೇಳಿಸಿ ಅವನ ಮದನರಾಗವನ್ನು ಹೆಚ್ಚಿಸಿತು. ಅನುನಯದ ಮಾತುಗಳಿಂದ ಈ ಸರೋರುಹನಯನೆಯನ್ನು ಒಡಂಬಡಿಸಲಾಗದ್ದರಿಂದ ಭಯಗೊಳಿಸಿ ಅವಳನ್ನು ಒಲಿಸಿಕೊಳ್ಳಲು ನಿರ್ಧರಿಸಿದ. ನಾನಾ ವಿದ್ಯೆಗಳನ್ನು ಬಲ್ಲ ಅವನು ವಿಕಾರವಾದ ಆಕಾರವನ್ನು ಧರಿಸಿದ. ಅಷ್ಟು ಹೊತ್ತಿಗೆ ರಾಗಾವಿಷ್ಟರು ಆಪತ್ತಿಗೆ ಒಳಗಾಗುವುದನ್ನು ಸೂಚಿಸುವಂತೆ ಆಗಸದಿಂದ ಸಂಧ್ಯಾರಾಗಾವಿಲನಾದ ಸೂರ್ಯನು ಅಪರವಾರಿಧಿಗಿಳಿದ.

ಕತ್ತಲಾದ ಮೇಲೆ ರಾವಣನು ಭಯಾನಕವಾದ ಸನ್ನಿವೇಶವನ್ನು ಸೃಷ್ಟಿಸಿದ: ತೋರವಾದ ಹೆಣಗಳನ್ನು ಹೊತ್ತು ಕುಣಿದಾಡುವ ಭೂತಗಣ, ನುಂಗಲು ಹವಣಿಸುತ್ತ ಗರ್ಜಿಸಿ ಮುನ್ನುಗ್ಗುವ ಕ್ರೂರ ಮೃಗಗಳು, ಭೋರೆಂದು ಕರೆಯುವ ರಕ್ತದ ಮಳೆ, ಭಯಂಕರವಾದ ಸಿಡಿಲು, ಸುತ್ತಲೂ ಕವಿದುಕೊಂಡು ಬರುವ ಮೇರೆದಪ್ಪಿದ ಸಮುದ್ರ ಇವುಗಳು. ಇದನ್ನು ಕಂಡ ಸೀತೆಯು ನಿರಂತರವಾಗಿ ಮನಸ್ಸಿನಲ್ಲಿ ಜಿನಪಾದಗಳನ್ನು ನೆನೆದಳು, ನಾಲಗೆಯ ಮೇಲೆ ಪಂಚಪದಗಳ ಹೆಸರನ್ನುಚ್ಚರಿಸಿದಳು. ಇದರಿಂದ ರತ್ನದ ದೀವಿಗೆಯು ಬಿರುಗಾಳಿಯಿಂದಲೂ ಅಲುಗಾಡದ ಹಾಗೆ ಭಯಂಕರ ದೃಶ್ಯವನನ್ನೆದುರಿಸಲು ಅವಳಿಗೆ ಶಕ್ಯವಾಯಿತು. ಕೆಲಕಾಲದ ನಂತರ, ಸವಿತೃಮಂಡಲವು ಮೂಡುಬೆಟ್ಟದಲ್ಲಿ ಮಾಣಿಕ್ಯದಂತೆ ಹೊಳೆಯುವ ಹಾಗೆ ಊರಿನ ಮುಖ್ಯಪುರುಷರ ಜೊತೆಯಲ್ಲಿ ವಿಭೀಷಣ ರಾವಣನಲ್ಲಿಗೆ ಬಂದ. ಖರದೂಷಣರ ಮರಣದಿಂದಾದ ಶೋಕವು ಅವರನ್ನಾವರಿಸಿತ್ತು. ಕನ್ನೆಮಾಡದ

ಮರೆಯಲ್ಲಿ ಶೋಕಾಕುಲೆಯಾದ ಸೀತೆಯ ಅಳುವ ಸದ್ದು ವಿಭೀಷಣನಿಗೆ ಕೇಳಿಸಿತು. ಹೀಗೆ ಪುರುಷವಿರಹದಿಂದ ಪ್ರಲಪಿಸುತ್ತಿರುವವರು ಯಾರು ಎಂದು ವಿಚಾರಿಸಿದ. ಆ ಮಾತು ಕೇಳಿದ ಸೀತೆಯು, ತನ್ನ ವಿಷಯವನ್ನು ಹೇಳಿಕೊಂಡಳು: ಯುದ್ಧದಲ್ಲಿ ತೊಡಗಿದ್ದ ಲಕ್ಷ್ಮಣನನ್ನು ಕಾಣಲು ರಾಮ ಹೋದುದು, ಆಗ ಕಳ್ಳತನದಿಂದ ದಶಾನನನು ಬಂದು ಜನಕನಂದನೆಯಾದ ತನ್ನನ್ನು ಅಪಹರಿಸಿಕೊಂಡು ಬಂದುದು, ಪತಿವಿಯೋಗವೆಂಬ ಬೆಂಕಿ ತನ್ನನ್ನು ಸುಡುತ್ತಿರುವುದು – ಎಲ್ಲವನ್ನೂ ಸಾದ್ಯಂತವಾಗಿ ವಿವರಿಸಿದಳು. ಆಗ ಆದ ಅಪಶಕುನಗಳಿಂದ ವಿಭಿಷಣನ ಮನಸ್ಸು ಭಯಗೊಂಡಿತು. "ಪರಸ್ತ್ರೀಯನ್ನು ಗಂಡಸು ಅವಮಾನಿಸಿದರೆ ಅದರಿಂದ ಪುರುಷಧರ್ಮವೇ ನಾಶವಾಗುತ್ತದೆ; ಧರೆ ಪತನಗೊಳ್ಳುತ್ತದೆ; ದುರ್ಗತಿಯುಂಟಾಗುತ್ತದೆ: ಆದ್ದರಿಂದ ಇಂತಹುದನ್ನು ಯಾರೂ ಮಾಡಬಾರದು" ಎಂದ ಅವನ ಮಾತಿಗೆ ಮಾರೀಚನು ದನಿಗೂಡಿಸಿದ. ಇದನ್ನು ಕೇಳಿ ಕೆರಳಿದ ಅವಿಚಾರಿ ದಶಗ್ರೀವನು, "ಸ್ತ್ರೀರತ್ನಕ್ಕೆ ನಾನಲ್ಲದೆ ಬೇರಾರು ಒಡೆಯರಾಗಬಲ್ಲರು? ನನ್ನ ದುರ್ವಾರ ಭುಜಬಲವನ್ನು ಮೀರುವವರಾರು" ಎಂದು ಗರ್ಜಿಸಿದ. ಆನಂತರ ತಾನೊಂದು ಗಜವನ್ನೇರಿ, ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ, ನಿಖಿಲ ಸಾಮಂತರೂ ಸೇನೆಯೂ ಮುಂದೆ ನಡೆಯಲು ಮೆರವಣಿಗೆಯಲ್ಲಿ ಹೊರಟ. ದಾರಿಯಲ್ಲಿ ಊರಿನ ಗೋಪುರಗಳು, ಬಹಿರೋದ್ಯಾನ ಮುಂತಾದವನ್ನು ಸೀತೆಗೆ ತೋರಿಸುತ್ತ ವಿವರಿಸಿದ. ಆದರೆ ಅವಳು ಇವಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳದಷ್ಟು ದುಃಖಿತೆಯಾಗಿದ್ದಳು. ಹಾಗೆ ಕರೆತಂದ ಆ ಮದಿರಾಪ್ರಮತ್ತನು ಆಕೆಯನ್ನು ಪ್ರಮದವನದಲ್ಲಿ ಸೆರೆಯಲ್ಲಿಟ್ಟು ತಾನು ವಿರಹದಲ್ಲಿ ಕುದಿಯುತ್ತಿದ್ದ.

ಅಣ್ಣನ ಕೇಡಿಗತನವನ್ನು ನೋಡಿದ ವಿಭೀಷಣ ಖಿನ್ನನೂ ಭಯಗ್ರಸ್ತನೂ ಆದ. ಆಗ ಮಂತ್ರಿಮುಖ್ಯನಾದ ಸಂಭಿನ್ನ ಎಂಬುವವನು ರಾಮಲಕ್ಷ್ಮಣರ ವಿಷಯವನ್ನು ಈ ರೀತಿ ತಿಳಿಸಿದ: "ರಾವಣನ ನಚ್ಚಿನವರಾದ ಖರದೂಷಣರನ್ನು ಕೊಂದು, ಅವನ ಮಗನಾದ ಸುಂದರನನ್ನು ಪಾತಾಳಲಂಕೆಯಿಂದ ಓಡಿಸಿ, ಅವನ ವಿರೋಧಿಯಾದ ವಿರಾಧಿತನಿಗೆ ರಾಜ್ಯದ ಒಡೆತನವನ್ನು ವಹಿಸಿಕೊಟ್ಟರು; ಆದರೆ ಅವರಿಗೆ ವೈದೇಹಿಯು ಹೋಗಿರುವ ಜಾಗವು ತಿಳಿಯದೆ ಸುಮ್ಮನಿದ್ದಾರೆ; ಅಲ್ಲದೆ, ಯುದ್ಧಚತುರನಾದ ಸುಗ್ರೀವನು ನಮ್ಮ ಬಾಂಧವ್ಯವನ್ನು ತೊರೆದು ರಾಮನ ಜೊತೆ ಸೇರಿದ್ದಾನೆ; ಹೀಗಾಗಿ ಅವನೊಡನಿರುವ ಹನುಮನೂ ನಮ್ಮ ವಿರೋಧಿಯಾಗಿದ್ದಾನೆ." ಈ ಮಾತನ್ನು ಕೇಳಿದ ದಶಮುಖನ ಮುಖದ ಮೇಲೆ ಮುಗುಳ್ನಗೆ ಮೂಡಿತು. "ಒಂದೆರಡು ಹನಿ ನೀರು ಗಾಳಿಯ ಕಾರಣದಿಂದ ನಷ್ಟಗೊಂಡರೆ ಕಡಲಿನ ಜಲರಾಶಿಗೆ ಕುಂದೆ? ಖರದೂಷಣರು ಅಳಿದರೆ ದಿಕ್ಕುಗಳಾಚೆಗೂ ಹಬ್ಬಿದ ನಮ್ಮ ಸೈನ್ಯವು ಕುಂದುವುದೇ? ಕಪಿಚಿಹ್ನರಿಲ್ಲದಿದ್ದರೇನಂತೆ, ಖೇಚರ ಚಕ್ರವರ್ತಿಯನ್ನು ಮಾನವರು ಯುದ್ಧದಲ್ಲಿ ಎದುರಿಸಲಾಪರೇ?" ಎಂದು ಗರ್ವದಿಂದ ನುಡಿದ. ಅದನ್ನು ಕೇಳಿದ ಸಹಸ್ರಮತಿ ಎಂಬುವವನು, "ವಿದ್ಯಾಬಲದಲ್ಲಿಯೂ, ಭುಜಬಲದಲ್ಲಿಯೂ ಷಡಂಗಬಲದಲ್ಲಿಯೂ ಅಧಿಕನೆನಿಸಿದ್ದ ಅಶ್ವಗ್ರೀವ ಖೇಚರನನ್ನು ಭೂಚರನಾದ ತ್ರಿಪಿಷ್ಟನು ಅನಾಯಾಸವಾಗಿ ಕೊಂದದ್ದೂ, ಇದರಿಂದ ಅಸಂಖ್ಯಾತ ಖೇಚರರು ಭೂಚರರಿಗೆ ಸೆರೆಸಿಕ್ಕಿ ಅವರ ಗುಲಾಮರಾದದ್ದೂ ಎಲ್ಲರಿಗೂ ಗೊತ್ತಿರುವ

ವಿಚಾರವೇ. ಹಾಗಾಗಿ ಮಾನವರನ್ನು ಹೀಗಳೆಯುವುದು ಸರಿಯಲ್ಲ. ಸುಗ್ರೀವಾದಿಗಳನ್ನು ದಾನಸನ್ಮಾನಗಳಿಂದ ನಮ್ಮವರನ್ನಾಗಿ ಮಾಡಿಕೊಳ್ಳಬೇಕು. ಲಂಕೆಯು ಅಭೇದ್ಯವೆನಿಸುವಂತೆ ವಿದ್ಯಾಪ್ರಾಕಾರವನ್ನು ನಿರ್ಮಿಸಬೇಕು. ಹೀಗೆ ನಾವು ಬಲಗೊಂಡರೆ ವೈದೇಹಿಯ ವಿರಹ ವೇದನೆಯಿಂದ ರಾಮನು ಸಾಯುತ್ತಾನೆ; ಲಕ್ಷ್ಮಣನೂ ಉಳಿಯುವುದಿಲ್ಲ" ಎಂದು ನಿಶ್ಚಯದಿಂದ ನುಡಿದ. ಅದರಂತೆ ವಿಭೀಷಣನು ಪ್ರಯತ್ನಗಳನ್ನು ಮಾಡಲು ತೊಡಗಿದ.

ಅಷ್ಟರಲ್ಲಿ ಈ ಕಡೆ, ಖರದೂಷಣರಿಂದ ಹಗೆಯೂ ಸೋಲೂ ಕೊನೆಗೊಳ್ಳುತ್ತವೆ. ಅವರಿಗೆ ಹೋಗಿ ಹೇಳುತ್ತೇನೆ ಎಂದು ಕಾನನದಲ್ಲಿ ಬರುತ್ತಿದ್ದ ವಾನರಚಿಹ್ನನಾದ ಹನುಮನಿಗೆ ಇದ್ದಕ್ಕಿದ್ದಂತೆ ರಣಮಂಡಲವು ಕಾಣಿಸಿತು. ಚತುರಂಗ ಸೈನ್ಯ, ಯಮನು ಆತುರದಿಂದ ಉಂಡು ವಾಂತಿ ಮಾಡಿಕೊಂಡಂತಿದ್ದ ಯುದ್ಧಕಣಗಳನ್ನು ಸತೀವಿಯೋಗದಿಂದ ಬೆಂದಿದ್ದ ಸುಗ್ರೀವನು ಕಂಡ. ಅದೇನೆಂದು ವಿಚಾರಿಸಿದಾಗ, ಬಲಾಚ್ಯುತರೆಂಬುವರು ಶಂಭುಕನನ್ನು ಕೊಂದು ಖಡ್ಗರತ್ನವನ್ನು ಪಡೆದುದೂ, ಅವನ ತಾಯಿ ಚಂದ್ರನಖಿಯ ಹುಯ್ಯಲನ್ನು ಕೇಳಿ ಏರಿ ಬಂದ ಖೇಚರಸೇನೆಯನ್ನು ಧ್ವಂಸಮಾಡಿದುದೂ, ಖರದೂಷಣರನ್ನು ಕೊಂದು ವಿರಾಧಿತನಿಗೆ ರಾಜ್ಯವನ್ನಿತ್ತುದೂ, ಇಂತಹ ಅಸೀಮ ಕಾರಣಪುರುಷರು ಪಾತಾಳಲಂಕೆಗೆ ಬಂದಿರುವುದೂ ಅವರಲ್ಲಿ ಲಕ್ಷ್ಮಣನು ತಮ್ಮ, ಅಣ್ಣ ಅಸೀಮಬಲನಾದ ರಾಮ ಎಂಬುದೂ ತಿಳಿಯಿತು. ಅಂತಹವರ ಪಾದಸೇವೆಯಿಂದ ಎಂಥವರ ಹಗೆಯೂ ಮನೋರಥವೂ ತೀರುತ್ತದೆ ಎಂದೆನ್ನಿಸಿತು.

* * * * *

# ೧೦. ರಾವಣ ವಂಶವಿವರ

ಅಂತೆಯೇ ಸುಗ್ರೀವನು ತಾನು ಬಂದ ಸುದ್ದಿಯನ್ನು ರಾಮಲಕ್ಷ್ಮಣರಿಗೆ ಅರಿಕೆ ಮಾಡುವಂತೆ ವಿರಾಧಿತನ ಬಳಿ ದೂತನನ್ನು ಕಳಿಸಿದ. ಆ ಬಳಿಕ ತಾನೂ ಬಂದ. ಅವರಾರೆಂದು ಲಕ್ಷ್ಮಣನು ಕೇಳಲು, ಕಿಷ್ಕಿಂಧ ನಗರಕ್ಕೆ ಒಡೆಯನೂ ಕಪಿಧ್ವಜ ಕುಲಧ್ವಜನೂ ಸೂರ್ಯಂಜಯನ ಪ್ರಿಯಪುತ್ರನೂ ವಾಲಿ ಭಟ್ಟಾರಕರ ಸ್ವಂತ ತಮ್ಮನೂ ಅಂಗದಜನಕನೂ ಆದ ಸುಗ್ರೀವನ ವಿಷಯವನ್ನು ವಿರಾಧಿತನು ವಿವರವಾಗಿ ತಿಳಿಸಿದ. ಅಷ್ಟು ಹೊತ್ತಿಗೆ ಅವಿಚಲಿತ ಧೈರ್ಯ, ಉತ್ತುಂಗವಂಶ, ಅಪ್ರತಿಮ ಸಹಜಸತ್ವ ಹಾಗೂ ಉದಾತ್ತನಾದ ಕಪಿಕೇತು ಸುಗ್ರೀವನು ನಡೆಯುವ ವರ್ಷಧರಶೈಲದಂತೆ ನಡೆತಂದು ರಾಮಲಕ್ಷ್ಮಣರ ಪದತಲದಲ್ಲಿ ತಲೆಯಿಟ್ಟ; ವಿರಾಧಿತನೂ ಅಂತೆಯೇ ಮಾಡಿದ. ಅವರನ್ನೆಲ್ಲ ಹರಸಿದ ರಾಘವನು ಅವರ ಯೋಗಕ್ಷೇಮ ವಿಚಾರಿಸಿದ. ಬಲವಾಸುದೇವರಿಗೆ ಎರಗುವ ಸೈಪು ದೊರೆಕೊಂಡ ಮೇಲೆ ತಮಗೆ ಕುಶಲ ಖಚಿತ ಎಂದು ಅವರೆಂದರು. ಸುಗ್ರೀವನು ಬಂದ ಕಾರಣವನ್ನು ಲಕ್ಷ್ಮೀಧರನು ವಿಚಾರಿಸಲಾಗಿ, ಜಾಂಬವನು ಮುಕುಳಿತಹಸ್ತನಾಗಿ ಈ ರೀತಿ ಹೇಳಿದ: ಸುಗ್ರೀವನ ಕುಲವಧು ಕಂಬುಗ್ರೀವೆಯಾದ ಸುತಾರೆ ಎಂಬುವಳು; ಮಾಯಾವಿಯಾದ ಖಳನೊಬ್ಬ ಸುಗ್ರೀವನ ರೂಪವನ್ನೇ ಹೊತ್ತು ಅರಮನೆಯನ್ನು ಹೊಕ್ಕ; ಸುಗ್ರೀವನೆಂದೇ ಭಾವಿಸಿದ ಅವನನ್ನು ಕಾಪಿನ ಭಟರಾಗಲೀ ಪಡಿಯರರಾಗಲೀ ಕುಲವೃದ್ಧರಾಗಲೀ ತಡೆಯಲಿಲ್ಲ; ರೂಪು ಸುಗ್ರೀವನದೇ ಆದರೂ, ನಡವಳಿಕೆಯಲ್ಲಿನ ವ್ಯತ್ಯಾಸವನ್ನು ಗಮನಿಸಿದ ಸುತಾರೆಯು ಅವನು ಮಾಯಾವಿ ಎಂಬುದನ್ನು ಪತ್ತೆಹಚ್ಚಿದಳು. ತನ್ನಾಣ್ಮನ ಕುರುಹುಗಳನ್ನು ಇವನಲ್ಲಿ ಕಾಣದೆ ಇವನು ಬೇರೆಯವನೆಂಬುದು ಅವಳಿಗೆ ಗೊತ್ತಾಗಿಹೋಯಿತು. ಇದರಿಂದ ಹೆದರಿದ ಸುತಾರೆಯು ಕೋಣೆಯಲ್ಲಿ ಅಡಗಿಕೊಂಡಳು. ಇದರಿಂದ ಆ ಖಳನು ಪೊರೆ ಕಳಚಿದ ಹಾವಿನಂತಾದ. ಅಷ್ಟು ಹೊತ್ತಿಗೆ ಸರಿಯಾಗಿ ಉದ್ಯಾನದಿಂದ ನಿಜವಾದ ಸುಗ್ರೀವನು ಬಂದ. ಇಬ್ಬರೂ ಹೋರಾಟಕ್ಕೆ ಸಿದ್ಧರಾದರು. ಆದರೆ ನಿಜವಾದ ಮತ್ತು ಸುಳ್ಳಾದ ಸುಗ್ರೀವರ ನಡುವೆ ವ್ಯತ್ಯಾಸ ಗೊತ್ತಾಗದ ಕಾರಣದಿಂದ ಆಪ್ತರಾದ ಪ್ರಧಾನ ಸೇನಾಮುಖ್ಯರು ಕದನವನ್ನು ತಪ್ಪಿಸಿದರು. ವಾಲಿಕುಮಾರನು ಮೂವತ್ತು ಅಕ್ಷೌಹಿಣಿ ಸೈನ್ಯಸಮೇತನಾಗಿ ಸುತಾರೆಯ ರಕ್ಷಣೆಗೆಂದು ಅರಮನೆಯಲ್ಲಿ ಬೀಡುಬಿಟ್ಟ. ಆ ಹೊತ್ತಿನಲ್ಲಿ ಒಂದು ಅಕ್ಷೌಹಿಣೀ ಬಲದೊಡನೆ ಅಲ್ಲಿಗೆ ಬಂದ ಅಂಗದಕುಮಾರನು ಮಾಯಾ ಸುಗ್ರೀವನನ್ನೇ ತನ್ನ ತಂದೆಯೆಂದು ಬಗೆದು ನಿಜ

ಸುಗ್ರೀವನನ್ನು ಸೆರೆಗೈದು ಊರ ಹೊರಗೆ ಇರಿಸಲು ಅಪ್ಪಣೆ ಮಾಡಿದ. ಆಗ ಅವನು ಹೇಗೋ ಪಾರಾಗಿ ಓಡಿಹೋಗಿ ಹನುಮನ ಬಳಿ ತನ್ನ ವೃತ್ತಾಂತವನ್ನು ನಿವೇದಿಸಿಕೊಂಡ. ಅದನ್ನು ಕೇಳಿ ಮಾಯಾ ಸುಗ್ರೀವನನ್ನು ಕೊಲ್ಲುವೆನೆಂದು ಅರಮನೆಗೆ ಬಂದ ಹನುಮನು ಮಾಯಾವಿಯನ್ನು ಕಂಡಾಗ ಅವನಿಗೂ ಇವರಿಬ್ಬರಲ್ಲಿ ನಿಜವಾದವನು ಯಾರು ಎಂಬ ಸಂದೇಹ ಬಂತು. ಹಾಗಾಗಿ ಮಾಯಾವಿಯನ್ನು ಕೊಲ್ಲದೆ ಕೋಪದಿಂದ ಮರಳಿದ. ಆದರಿಂದ ರಾಮಲಕ್ಷ್ಮಣರ ದೋರ್ವಲದ ಬಗ್ಗೆಯೂ ಪರಹಿತವ್ಯಸನದ ಬಗ್ಗೆಯೂ ಕೇಳಿದ ಸುತಾರಾವಿರಹದಿಂದ ನರಳುತ್ತಿರುವ ನಿಜ ಸುಗ್ರೀವನು ಸೂರ್ಯಕಿರಣಕ್ಕಾಗಿ ಹಪಹಪಿಸುವ ಇರುಳ ಚಕ್ರವಾಕದಂತೆ ಅವರ ಬಳಿ ಸಹಾಯಕ್ಕಾಗಿ ಬಂದಿರುವನೆಂದು ತಿಳಿಸಿದ. ಇವನೂ ತನ್ನಂತೆಯೇ ಸತೀವಿರಹಿಯೆಂದು ತಿಳಿದ ರಾಮನು ಅವನ ಮನದುಮ್ಮಳವನ್ನು ಕಳೆಯಲು ನಿರ್ಧರಿಸಿದ. ಇಂತಹವನ್ನೂ ಕಾಡಿದ, ಹನುಮನಂತಹವನೂ ಅಳುಕಿನಿಂದ ಕಾದದೆ ವಾಪಸಾಗುವಂತೆ ಮಾಡಿದ ಆ ಖೂಳನನ್ನು ಕೊಲ್ಲಲು ರಾಮನು ನಿರ್ಧರಿಸಿದ.

ರಾಮಚಂದ್ರನು ಮಾಡಿದ ಅನುಗ್ರಹದಿಂದ ಸುಗ್ರೀವನು ಸಮಾಹಿತಚಿತ್ತನಾದ. ವಿರಾಧಿತನ ಮುಖವನ್ನು ನೋಡಿ, "ದೇವರು ವಿರಹವ್ಯಾಕುಲರಂತೆ ಮಾತನಾಡಿದರಲ್ಲ, ಏನು ವಿಷಯ?" ಎಂದು ಕೇಳಿ ತಿಳಿದುಕೊಂಡ: ಕಾಂತಾರದಲ್ಲಿ ವಂಚನೆಯಿಂದ ಜಾನಕೀಹರಣವಾದದ್ದು, ಸಂಗ್ರಾಮದಲ್ಲಿ ಖರದೂಷಣರು ಮರಣ ಹೊಂದಿದ್ದು, ಎಲ್ಲ. "ಜಾನಕಿಯನ್ನು ಯಾರು ಕದ್ದೊಯ್ದಿದ್ದಾರೆ ಎಂಬುದು ಅವರಿಗೆ ತಿಳಿಯದು; ತಿಳಿದಿದ್ದರೆ ಒಯ್ದವನ ಕರುಳನ್ನು ಬಗೆದು ವೀರಶ್ರೀಗೆ ಭುಜವೆಂಬ ಖಡ್ಗದ ಮೊನೆಯ ಮನೆಗೆ ತೋರಣಗಟ್ಟುತ್ತಿದ್ದರು" ಎಂದ. ಇದನ್ನು ಕೇಳಿದ ಸುಗ್ರೀವನು ಏಳು ದಿನಗಳೊಳಗಾಗಿ ಸೀತೆಯು ಎಲ್ಲಿರುವಳೆಂಬ ಸುದ್ದಿಯನ್ನು ತರುವುದಾಗಿ ಪ್ರತಿಜ್ಞೆ ಮಾಡಿ ಬಲಾಚ್ಯುತರು ಹಾಗೂ ವಿರಾಧಿತನೊಡನೆ ಕಿಷ್ಕಂಧಪುರವನ್ನು ಬಂದು ಸೇರಿದ. ತಕ್ಷಣವೇ ಒಬ್ಬ ದೂತನನ್ನು ಕೃತಕ ಸುಗ್ರೀವನಾದ ಸಾಹಸಗತಿಯೆಡೆಗೆ ಕಳಿಸಿದ.

ಅವನು ಯಮದೂತನಂತೆ ವೇಗದಿಂದ ಬಂದು ಸಾಹಸಗತಿಯನ್ನು ಕಂಡು, "ದೇವರೇ ಬಂದರೂ ಸರಿಯೇ, ಸುಗ್ರೀವನ ಹಗೆಯನ್ನು ಕೊಲ್ಲುವೆನೆಂದು ರಾಮನು ಭರವಸೆಯಿತ್ತಿದ್ದಾನೆ. ಆದ್ದರಿಂದ ನೀನು ಈ ಕ್ಷಣವೇ ಬಂದು ನಮ್ಮ ಒಡೆಯರನ್ನು ಕಾಣು; ಇಲ್ಲದಿದ್ದರೆ ರಾಮನ ಭಯಂಕರ ಬಾಣಗಳು ನಿನ್ನನ್ನು ಸೀಳಿಹಾಕುತ್ತವೆ" ಎಂದು ಗದರಿ ಉಸುರಿದ. ಸಾಹಸಗತಿ ಕೋಪದಿಂದ ಕೆಂಡಾಮಂಡಲವಾದ. ಆ ಕೃತಕ ಸುಗ್ರೀವನು ಕೇಸರಿಯಂತೆ ಗರ್ಜಿಸುತ್ತ ಊರಿಂದ ಹೊರಟು ನಿಜ ಸುಗ್ರೀವನೆಡೆ ಬಂದ. ಅವನನ್ನು ನೋಡಿದ ವಾನರಚಿಹ್ನನು ಕಾಳ್ಗಿಚ್ಚಿನಿಂದ ಕೂಡಿದ ಬೆಟ್ಟದಂತಾದ. ಒಬ್ಬರನ್ನೊಬ್ಬರು ನೋಡಿದಾಗ ಅವರ ಮುಳಿಸು ಮೇರೆ ಮೀರಿತು. ಗದೆಯನ್ನು ತಳೆದು ಇಬ್ಬರೂ ಭಯಂಕರವಾಗಿ ಹೋರಾಡಿದರು. ತಮ್ಮ ನಡೆ, ಹೊಡೆಯುವ ಗದೆ, ಬೀಸುವ ಹೊಯ್ಲುಗಳಿಂದ ಆ ಇಬ್ಬರು ಭೂಮಿ–ಆಕಾಶಗಳಂತೆ ತಾಗಿದರು. ಅವರ ಗದೆಗಳು ತಾಗಿ ಕಿಡಿಗಳನ್ನು ಸೂಸಿದವು; ಆಗ ಕೆಂಡದ ಮಳೆ ಸುರಿದಂತಾಗುತ್ತಿತ್ತು. ಅವರಿಬ್ಬರೂ ನೋಡಲು ಮಾತ್ರವೇ ಅಲ್ಲ, ಸತ್ವಸಾಹಸಗಳಲ್ಲಿಯೂ ಅನುರೂಪಿಗಳು. ಒಂದು ಸನ್ನಿವೇಶದಲ್ಲಿ ಕಣ್ಣುಗಳಲ್ಲಿ ಕೆಂಡವನ್ನು ಸೂಸುತ್ತ ಮಾಯಾ ಸುಗ್ರೀವನು ಕಾಲದಂಡದಂತಿದ್ದ ತನ್ನ

ಘನಗದೆಯನ್ನು ಸಿಡಿಲು ಬಡಿಯುವ ಹಾಗೆ ಬೀಸಿದ; ನಿಜ ಸುಗ್ರೀವ ಮೂರ್ಛೆಯಿಂದ ಕೆಳಗೆ ಬಿದ್ದ. ಅವನು ಸತ್ತನೆಂದು ಭಾವಿಸಿ ಮಾಯಾವಿಯು ಹೊರಟು ಹೋದ. ಜಾಂಬವಾದಿಗಳು ಮಾಡಿದ ಶೀತಲೋಪಚಾರಗಳಿಂದ ಮೂರ್ಛೆಯಿಂದ ಎಚ್ಚೆತ್ತ ಸುಗ್ರೀವನನ್ನು ನೋಡಿ ರಾಮನು, "ನಿಮ್ಮಿಬ್ಬರದೂ ಒಂದೇ ರೂಪವಾದ್ದರಿಂದ ನಿನಗೆಲ್ಲಿ ಅಪಾಯವಾದೀತೋ ಎಂಬ ಹೆದರಿಕೆಯಿಂದ ಹೊಡೆಯಲಿಲ್ಲ. ಆದರೆ ನಾಳೆ ಖಂಡಿತವಾಗಿಯೂ ನಿನ್ನ ಹಗೆಯನ್ನು ತೀರಿಸುತ್ತೇನೆ" ಎಂದು ಭರವಸೆಯಿತ್ತ.

ಅದರಂತೆ ಮಾರನೆಯ ದಿನ ಇದಿರು ಬಂದ ಸಾಹಸಗತಿಯನ್ನು ಹಿಡಿಯುವಂತೆ ಲಕ್ಷ್ಮಣನಿಗೆ ರಾಮ ಹೇಳಿದ. ಅದರಂತೆ ಮಾಡಿದಾಗ ಅವನ ಎದುರಿಗೆ ರಾಮನು ಬಂದು ನಿಂತ; ಸಾಹಸಗತಿಯ ವಿದ್ಯಾರೂಪವು ಹಿಂಗಿ ಅವನ ತೇಜಸ್ಸು ಕಮರಿಹೊಯಿತು. ತನ್ನ ಮಾಯಾರೂಪವು ಹೋದರೂ ಖೇಚರಪತಿಯು ಪೊರೆಬಿಟ್ಟ ಕಾಳೋರಗದಂತಾದ. ಸುಗ್ರೀವನಿಗೆ ಶರಣಾಗುವಂತೆ ಲಕ್ಷ್ಮಣನು ಹೇಳಲು, ಸಾಹಸಗತಿಯು ಮುಳಿದು ರಾಮನ ಮೇಲೆ ಏರಿ ಹೋಗಿ ಬಾಣಪ್ರಯೋಗ ಮಾಡಿದ. ರಾಮ ನಸುನಗುತ್ತ ತನ್ನ ದೊಣೆಯಿಂದ ಅಂಬನ್ನು ತೆಗೆದು ಬಿಲ್ಲಿಗೆ ಹೂಡಿ ಕಿವಿಯವರೆಗೂ ಎಳೆದು ಬಿಟ್ಟಾಗ ಅದು ಸುಯ್ಯೆಂದು ಹೋಗಿ ಶತ್ರುವಿನ ತೋಳಿನಲ್ಲಿ ನೆಲೆಸಿದ್ದ ವಿಜಯಶ್ರೀಯನ್ನು ಕಿತ್ತೆಸೆದಿತು; ಅವನು ಗತಪ್ರಾಣನಾಗಿ ಬಿದ್ದ. ನೋಟದಿಂದಲೇ ಶತ್ರುವಿನ ಬಲವನ್ನು ಕುಂದಿಸುವ, ಒಂದೇ ಬಾಣದಿಂದ ಅಸುವನ್ನು ನಂದಿಸುವ ರಾಮನ ದೃಷ್ಟಿಪಾತ ಶರಪಾತ ಚಮತ್ಕೃತಿಯನ್ನು ಕಪಿಧ್ವಜನು ಮನಸಾರೆ ಹೊಗಳಿದ. ರಾಮಲಕ್ಷ್ಮಣರನ್ನು ಗೌರವದಿಂದ ಕಿಷ್ಕಿಂಧಪುರಕ್ಕೆ ಕರೆದೊಯ್ದ. ಅರಮನೆಯ ಕರುವಾಡದ ಮಣಿಮಂಟಪದಲ್ಲಿ ಅವರಿಬ್ಬರನ್ನೂ ಮಣಿಮಯಾಸನಗಳಲ್ಲಿ ಕುಳ್ಳಿರಿಸಿ ಮಧುಪರ್ಕಗಳಿಂದ ಸತ್ಕರಿಸಿ ಅಪೂರ್ವ ವಸ್ತುವಾಹನಗಳನ್ನು ಉಡುಗೊರೆಯಾಗಿತ್ತ. ಸೂರ್ಯನಿಗಲ್ಲದೆ ಬೇರೊಂದರೆಡೆಗೆ ಮೊಗವರಳಿಸದ ಪದ್ಮಿನಿಗಳಂತೆ ರಾಮನ ಹೊರತು ಬೇರೊಬ್ಬನನ್ನೊಲ್ಲದ ತನ್ನ ಹನ್ನೆರಡು ಮಂದಿ ತನುಜೆಯರನ್ನು ಶುಭದಿನ ಶುಭಮುಹೂರ್ತದಲ್ಲಿ, ಕುಲಪರ್ವತವು ಸಮುದ್ರಕ್ಕೆ ನಿರ್ಝರಿಗಳನ್ನು ಕೊಡುವಂತೆ ರಾಮನಿಗಿತ್ತು ಮದುವೆ ಮಾಡಿದ.

ನಸು ಸೋಂಕಿನಿಂದಲೇ ಆ ಬಾಲೆಯರನ್ನು ತನ್ನ ವಶ ಮಾಡಿಕೊಂಡ ರಾಘವನು ಸೀತೆಯನ್ನು ನೆನೆಸಿಕೊಂಡು ಅವರನ್ನು ದೂರಸರಿಸಿದ; ಚಂದ್ರಿಕೆಯನ್ನು ಸೇವಿಸಿದ ಚಕೋರಕ್ಕೆ ಹಿಮಕಣವು ಸಂತೋಷ ನೀಡಬಲ್ಲುದೇ? ಜನಕಸುತೆಯ ವಿರಹದಿಂದ ರಘುಪ್ರವರನಿಗೆ ಆ ಕೋಮಲೆಯರ ತನುಲತೆಗಳಾಗಲೀ, ಮರಾಳಗತಿಯಾಗಲೀ, ಪಿಕನಿಸ್ವನವಾಗಲೀ, ಲೋಚನೋತ್ಪಲಗಳಾಗಲೀ, ಆನನಹೇಮಸರೋಜಗಳಾಗಲೀ, ಘನಸ್ತನಯುಗಕೋಕಗಳಾಗಲೀ ಮನಸ್ಸಿಗೆ ಮುದ ತಾರದೆ ಖೇದವನ್ನೇ ತಂದುವು. ಜನಕ ತನೂಜೆಯ ಘನಕಚ ಘನಕುಚ ಘನಜಘನಭರದಿಂದ ಬಳುಕುವ ರಾಮನ ಚಿತ್ತವು ಇತರ ವನಿತಾಜನದತ್ತ ಗಮನ ಹರಿಸದಿದ್ದುದರಲ್ಲಿ ಅಚ್ಚರಿಯೇನಿದೆ? ಖೇಚರಿಯರಿಂದ ಅನುರಾಗವು ಉದಿಸದಿದ್ದಾಗ ರಾಮನು ಕೋಗಿಲೆಯು ಮಾವಿನ ಚಿಗುರಿಗಾಗಿ ಹಂಬಲಿಸುವಂತೆ ಸೀತೆಯನ್ನು ನೆನದು ಉತ್ಕಂಠಿತನಾದ. ಆದರೆ ಅಂಬರಚರನಾದ ಸುಗ್ರೀವನು ತಾರಾಬಿಂಬದ ಅಧರ ಮಧುರ ರಸವನ್ನಾಸ್ವಾದಿಸಿ ಚಿತ್ತವು ಬೆಂಡಿನಂತೆ

ನೆಗೆಯಲು ರಾಗ ರಸಾಂಬುಧಿಯಲ್ಲಿ ಮುಳುಗಿ ತೇಲುತ್ತಿದ್ದ. ನಲ್ಲಳಿಗಾಗಿ ಹಲುಬುತ್ತಿದ್ದ ಅವನು ಸಮರತ ಸಂಜನಿತ ಸುಖಕ್ಕೆ ಬೆಳಗಿನ ಅರಳಿದ ಪದ್ಮಿನಿಗೆ ಎಳಸುವ ಮಧುಕರನಂತೆ ಕಿಂಕರನಾದ.

ಹಿಮಕಿರಣನು ಸಂಧ್ಯಾರಾಗವನ್ನು ಬಿಡುವಂತೆ ಸುಗ್ರೀವನು ತನ್ನ ರಾಗವನ್ನು ಬಿಟ್ಟು ರಘುಜನ ಉಪಕಾರವನ್ನು ಸ್ಮರಿಸಿದ. ತಡಮಾಡಿದರೆ ತಾನು ಕೃತಘ್ನನಾಗುತ್ತೇನೆ; ಜೊತೆಗೆ ದಶರಥತನಯನೂ ಮುಳಿಯುತ್ತಾನೆ; ಆಗ ಯಮನೂ ಮುಳಿಯುತ್ತಾನೆ ಎಂಬುದನ್ನು ನೆನೆದ. ತಕ್ಷಣವೇ ಸೀತೆಯ ಸುದ್ದಿಯನ್ನು ಪ್ರಭಾಮಂಡಲನಿಗೆ ಹೇಳಿಕಳಿಸಿದ; ಅವಳ ಬಗ್ಗೆ ಸಮಾಚಾರ ತರಲು ನಾನಾ ತಂಡಗಳಲ್ಲಿ ಗುಪ್ತಚರರನ್ನು ನೇಮಿಸಿದ; ಗದಾಯುಧ ಹಲಾಯುಧರನ್ನು ಬೀಳ್ಕೊಂಡು ಕೆಲವೇ ಮಂದಿ ಅನುಚರರೊಡನೆ ತಾನೂ ಮೂಡುದಿಕ್ಕಿಗೆ ಹೊರಟ.

ಹೀಗೆ ಸುಗ್ರೀವನು ಮನಃಪವನವೇಗದಿಂದ ಹೋಗುತ್ತಿರಲು, ಅನುಕೂಲಕರ ಗಾಳಿಯ ಬೀಸುವಿಕೆಯಿಂದ ಕೈಸನ್ನೆ ಮಾಡುವಂತೆ ಗಿರಿಶಿಖರವೊಂದರ ಮೇಲೆ ಅಶೋಕವೃಕ್ಷದ ಚಿಗುರುಗಳ ನಡುವೆ ಧ್ವಜವೊಂದು ಅಲುಗಾಡುವುದು ಕಾಣಿಸಿತು. ಈ ಗಿರಿಪ್ರದೇಶವು ಮನುಷ್ಯರಿಗೆ ಕಾಣಿಸದು; ಆದರೆ ಇಲ್ಲಿ ಬಾವುಟವನ್ನಾರು ಕಟ್ಟಿದ್ದಾರು ಎಂದು ಅಚ್ಚರಿವಟ್ಟ ಸುಗ್ರೀವನು ಕುತೂಹಲದಿಂದ ಅದರೆಡೆಗೆ ಸಾಗಿದ. ಆ ಕಪಿಧ್ವಜನು ತನ್ನಡೆಗೆ ಬರುವುದನ್ನು ಚಕಿತ ದೃಷ್ಟಿಯಿಂದ ನೋಡಿದ ಭಯಾಕುಲಚಿತ್ತನಾದ ರತ್ನಜಟಿಯು ತನ್ನನ್ನು ಕೊಲ್ಲಲು ರಾವಣನೇ ಅವನನ್ನು ಕಳಿಸಿರಬೇಕೆಂದು ಬಗೆದ. ಹತ್ತಿರ ಬಂದ ಸುಗ್ರೀವನು ಅವನಿಗೆ ಉಂಟಾದ ಅವಸ್ಥೆಗೆ ಕಾರಣರಾರೆಂದು ಬೆಸಗೊಂಡ. ರತ್ನಜಟಿ ಸವಿಸ್ತರವಾಗಿ ಉತ್ತರಿಸಿದ. ದಶವದನನು ಸೀತೆಯನ್ನು ಲಂಕೆಗೆ ಒಯ್ದ ವಿಷಯವನ್ನು ಕೇಳಿದ ಸುಗ್ರೀವನಿಗೆ ತನ್ನ ಪ್ರತಿಜ್ಞೆ ನೆರವೇರುವುದು ಖಚಿತವಾಯಿತು. ದಾಶರಥಿಯ ಮನಸ್ಸನ್ನು ಆವರಿಸಿದ್ದ ಸೀತಾವಿರಹವೆಂಬ ಕತ್ತಲೆಯನ್ನು ಕೆಡಿಸುವ ಉದ್ದೇಶದಿಂದ ರತ್ನದ ಸೊಡರಿನಂತೆ ರತ್ನಜಟಿಯನ್ನೂ ತನ್ನೊಡನೆ ಕರೆದೊಯ್ದು ರಾಮನಿಗೆ ಭೇಟಿಮಾಡಿಸಿದ. ಅವನು ಅರ್ಕಜಟಿ ಎಂಬ ಹೆಸರಿನ ಖೇಚರನ ಮಗನಾದ ರತ್ನಜಟಿಯೆಂದೂ, ಅವನಿಗೆ ಸೀತೆಯನ್ನು ಮೋಸದಿಂದ ಒಯ್ದವರು ಯಾರೆಂಬ ವಿಷಯ ತಿಳಿದಿದೆಯೆಂದೂ ಅರುಹಿದ. ಕೋಪೋದ್ರಿಕ್ತನಾದ ಲಕ್ಷ್ಮಣನು ಬಿದಿಯ ಮೇಲೆ ಕಣ್ಣಿಟ್ಟವನೂ, ಕಾಲು ತೊಳೆಯಲು ತನ್ನ ಪ್ರಾಣವನ್ನೇ ಕಳಚಿದವನೂ ಯಮಪಾಶದಲ್ಲಿ ಸಿಕ್ಕಿಹಾಕಿಕೊಂಡವನೂ ಆದ ಅವನು ಯಾರೆಂದು ಕೇಳಿದ. ಒಮ್ಮೆ ತಾನು ಆಗಸದಲ್ಲಿ ಸುತ್ತಾಡುತ್ತಿರಲು ಯಾರದೋ ಹಾಹಾರವ ಕೇಳಿಸಿತು; ಅದರಿಂದ ಉರಿಯ ಮೇಲೆ ಎಣ್ಣೆ ಹೊಯಿದಂತೆ ತನ್ನ ಮನಸ್ಸಿನಲ್ಲಿ ಕರುಣರಸವು ಉಕ್ಕಿತು; 'ತನ್ನನ್ನು ಕಾಮಾಂಧನು ಒಯ್ಯುತ್ತಿದ್ದಾನೆ, ಇವನೊಡನೆ ಹೋರಾಡಿ ಕಾಪಾಡಿ, ಹಾ ರಾಮಾ ಹಾ ಲಕ್ಷ್ಮಣಾ' ಎಂಬ ಹಾಹಾನುಡಿಯನ್ನು ಕೇಳಿ ತಾನು ರಾವಣನೊಡನೆ ಕದನಕ್ಕೆಂದು ಹೋದಾಗ, ತನ್ನ ತಂದೆಯೊಡನೆ ತನಗಿದ್ದ ಸಂಬಂಧ ಕಾರಣವಾಗಿ ರಾವಣನು ತನ್ನನ್ನು ಕೊಲ್ಲದೆ ವಿದ್ಯಾಚ್ಛೇದವನ್ನು ಮಾಡಿ ಸೀತೆಯನ್ನು ಲಂಕೆಗುಯ್ದ ಎಂಬುದನ್ನು ರತ್ನಜಟಿ ವಿವರಿಸಿದ. ಸೀತೆಯ ವಿಷಯವನ್ನು ತಿಳಿಸಿದ ಆ ಖೇಚರನ ಮಲಸೋದರರನ್ನು ಓಡಿಸಿ ರಾಮನು ವಂಶಪಾರಂಪರ್ಯವಾಗಿ ಬಂದ ದೇವೋಪನೀತಪುರಕ್ಕೆ ಅವನನ್ನು ಅರಸುಗೈದು ಮರಳಿ ಕಿಷ್ಕಿಂಧೆಗೆ ಬಂದ.

ನಳ ನೀಲ ಅಂಗದ ಜಾಂಬವನೇ ಮೊದಲಾದ ಪ್ರಮುಖ ಸೇನಾ ಮುಖ್ಯಸ್ಥರು, ಮಂತ್ರಿಮಂಡಲ, ಬಂಧುಜನಗಳೊಡನೆ ಸೇರಿ ಸುಗ್ರೀವನು ತನ್ನ ಆಸ್ಥಾನದಲ್ಲಿ ಕಿಂಕರಭಾವದಿಂದಿದ್ದರೆ, ಬಲನಾರಾಯಣರು ಸಿಂಹವಿಷ್ಟರಗಳಲ್ಲಿ ಕುಳಿತು ಚಂದ್ರಸೂರ್ಯರಂತೆ ಕಂಗೊಳಿಸುತ್ತಿದ್ದರು. ಆ ಸಮಯದಲ್ಲಿ ಸೌಮಿತ್ರಿಯು ಸುಗ್ರೀವನ ಮುಖವನ್ನು ನೋಡಿ, "ಅರಸಿಯ ಸುದ್ದಿಯನ್ನು ಕೇಳಿಯೂ ಹೇಳದಿರುವುದು ಸರಿಯೇ? ವಿರೋಧಿಬಲವನ್ನು ಸಂಹರಿಸಲು ನನ್ನ ತೋಳ್ವಲವೇ ಸಾಕು; ಸಮುದ್ರವು ದಡದವರೆಗೂ ಬತ್ತುವಂತೆ ಮಾಡಲು ನನ್ನ ಬಾಣಪ್ರಯೋಗವೇ ಸಾಕು. ಲೆಂಕೆ(ಸೇವಕಿ)ಯನ್ನು ಒಕ್ಕಲಿಕ್ಕುವಂತೆ ಲಂಕೆಯನ್ನು ಸದೆಬಡಿಯುತ್ತೇನೆ; ತ್ರಿಕೂಟಗಿರಿಯನ್ನು ಕಿತ್ತು ಬಿಸುಡುತ್ತೇನೆ; ದಶಕಂಠನ ಕಂಠನಾಳವನ್ನು ನನ್ನ ಬಾಣದಿಂದ ಸೀಳಿ ಬಸಿಯುವ ಬಿಸುನೆತ್ತರಿನಿಂದ ನನ್ನ ತೋಳ ತೀಟೆಯನ್ನು ತೀರಿಸಿಕೊಳ್ಳುತ್ತೇನೆ. ತಡಮಾಡಿದರೆ ನನ್ನ ಕೀರ್ತಿಗೆ ಧಕ್ಕೆಯಲ್ಲವೇ?" ಎಂದು ಗರ್ಜಿಸಿದ. ಲಕ್ಷ್ಮಣನ ರಣಲಂಪಟತೆ ಅಂಥದು! ಕೆಂಪು ಸಂಜೆಯನ್ನು ಹಿಂದೆ ಸರಿಸಿ ಹರಡುವ ಬೆಳುದಿಂಗಳಿನಂತೆ ರಾಮಚಂದ್ರನು ತನ್ನ ನಯನಪ್ರಭೆಯನ್ನು ಚೆಲ್ಲಿ ಜಾಂಬೂನದನ ಮುಖವನ್ನು ನೋಡಿದ; ರಾವಣನ ವಂಶವಿಷಯವನ್ನೂ ಲಂಕಾನಗರದ ಸ್ವರೂಪವನ್ನೂ ತಿಳಿಸುವಂತೆ ಜೈನಾಗಮ ಕೋವಿದನಾದ ಅವನನ್ನು ಬೆಸಗೊಂಡ. ಆಗ ಸಕಲವಿದ್ಯಾನಿಪುಣನಾದ ಜಾಂಬೂನದನು ಮುಕುಳಿತಾಂಜಲಿಯಾಗಿ ಗಣಧರ ನಿರೂಪಿತ ಕ್ರಮದಿಂದ ದೈತ್ಯಪತಿಯ ವಿಚಾರವನ್ನೆಲ್ಲ ಹೇಳಲು ತೊಡಗಿದ:

ಮೂಜಗಗಳಿಗೊಡೆಯನಾದ ಪುರುಪರಮೇಶ್ವರನ ಧರ್ಮತೀರ್ಥಪ್ರವರ್ತನದ ನಂತರ ಕೆಲಕಾಲ ಕಳೆಯಿತು. ಆ ಕುಲದಲ್ಲಿ ಕೇಯೂರದಂತೆ ರಂಜಿಸುವ ತ್ರಿದಶಂಜಯನು ತನ್ನ ಬಾಹುಮಂಡಲದಲ್ಲಿ ಭೂಮಂಡಲವನ್ನು ತಳೆದ. ಅವನ ಪಟ್ಟಮಹಿಷಿ ಚಂದ್ರಲೇಖೆ; ಗುಣಸಾಗರದಿಂದ ಹೆಚ್ಚುವಡೆದವಳು. ಅವರಿಗೆ ಚಂದ್ರಾದಿತ್ಯರಂತೆ ಹುಟ್ಟಿದ ಮಕ್ಕಳು ಜಿತಶತ್ರು ಮತ್ತು ವಿಜಯಸಾಗರ ಎನ್ನುವವರು, ಅಪ್ರತಿಮಪ್ರಭರು. ಅವರಿಗೆ ಕ್ರಮವಾಗಿ ಪೌದನಪುರವರೇಶ್ವರನಾದ ತನ್ನ ಭುಜಸಖ ನಂದ ಮಹೀಪತಿಗೂ ಅಂಭೋಜಮಾಲೆಗೂ ಹುಟ್ಟಿದ ವಿಜಯೆ ಸುಮಂಗಲೆ ಎಂಬುವವರು ಅರಸಿಯರಾದರು. ಕೆಲಕಾಲ ಅರಸುಗೈದು ತ್ರಿದಶಂಜಯನು ವಿಷಯವೈರಾಗ್ಯದಿಂದ ತನ್ನ ಮಕ್ಕಳಿಗೆ ಸಾಮ್ರಾಜ್ಯವನ್ನು ವಹಿಸಿಕೊಟ್ಟು ತಪೋರಾಜ್ಯವನ್ನು ಸೇರಿಕೊಂಡ; ಕರ್ಮಗಳೆಂಬ ಶತ್ರುಗಳನ್ನು ಅಟ್ಟಿಕೊಂಡು ಹೋಗಿ ಕುಬೇರಗಿರಿಯನ್ನು ಸೇರಿದ; ಮುಕ್ತ್ಯಂಗನೆಯ ಆಕರ್ಷಣೆಗೊಳಗಾಗಿ ಅವಳ ವಕ್ತ್ರಪೀಯೂಷವನ್ನು ಹೀರಿದ. ಇತ್ತ ತನ್ನ ಹೆಸರು ಅನ್ವರ್ಥವಾಗುವಂತೆ ಉದ್ವೃತ್ತರಾದ ಶತ್ರುಗಳನ್ನು ಸೋಲಿಸಿ ಕಪ್ಪವನ್ನು ಪಡೆದು ಜಿತಶತ್ರುವು ಕೈಚಾಚಿದವರಿಗೆ ಬೇಡಿದುದನ್ನು ಕೊಡುತ್ತ ತನ್ನ ಭುಜದಿಂದ ಸುರಿಯುವ ಅಸಿಧಾರೆಯಿಂದ ಶ್ರೀವಧು ಮತ್ತು ಜಯಪ್ರಮದೆಯರನ್ನು ಜಲವಾಸಿನಿಯರನ್ನಾಗಿ ಮಾಡಿದ. ಆ ಭೂಭುಜನ ವಲ್ಲಭೆಯಾದ ವಿಜಯಾಂಬಿಕೆಯು ಮೇರುಲಕ್ಷ್ಮಿಯು ದೇವತರುವನ್ನು ಪಡೆದಂತೆ ಅಜಿತ ಭಟ್ಟಾರಕರಿಗೆ ಜನ್ಮವಿತ್ತಳು. ಅವಳ ತಂಗಿ ರೂಪಕಲಾವಿಭವಖ್ಯಾತೆ, ವಿಜಯಸಾಗರನ ಮಹಾದೇವಿ ಸುಮಂಗಲೆಯು ಇಳಾವಲ್ಲಭನಾದ ಸಗರ ಚವಕ್ರವರ್ತಿಯನ್ನು ಮಗನಾಗಿ ಪಡೆದಳು. ಹೀಗೆ ಒಬ್ಬಳು ಜಿನಪತಿಯ ತಾಯಿಯಾದರೆ, ಮತ್ತೊಬ್ಬಳು ಜನಪತಿಯ ಜನನಿಯಾದಳು.

ಇಂತಹ ಮಕ್ಕಳನ್ನು ಪಡೆದ ಆ ಜಿತಶತ್ರು ಮತ್ತು ವಿಜಯಸಾಗರ ಮಹಾರಾಜರು ಚತುಸ್ಸಾಗರಪರ್ಯಂತವಾದ ಭೂಮಂಡಲವನ್ನು ತಮ್ಮ ಭುಜಪರಾಕ್ರಮದಿಂದ ಆಳುತ್ತಿದ್ದರು.

ಆ ಕಾಲದಲ್ಲಿಯೇ ಅಖಿಲ ಪುಣ್ಯ ದಶಾವತಾರದಂತೆ ಅಜಿತನಾಥ ತೀರ್ಥಂಕರನ ಅವತಾರವಾದುದು. ಆ ಸಮಯದಲ್ಲಿ ವಿಜಯಾರ್ಧದ ರಥನೂಪುರ ಚಕ್ರವಾಳಪುರದ ಪೂರ್ಣಘನ ವಿಯಚ್ಚರನಿಗೆ ತೋಯದವಾಹನನೆಂಬ ಮಗ ಹುಟ್ಟಿದ. ಆ ಕಡೆ ಉತ್ತರ ಶ್ರೇಣಿಯಲ್ಲಿ ಅಂಬರತಿಲಕವೆಂಬ ಪುರದ ಸುಲೋಚನನಿಗೆ ಸಹಸ್ರಲೋಚನನೆಂಬ ಮಗನೂ, ಉತ್ಪಲನೇತ್ರೆ ಎಂಬ ಮಗಳೂ ಹುಟ್ಟಿದರು. ಆ ಹುಡುಗಿಯನ್ನು ತನ್ನ ಮಗ ತೋಯದವಾಹನನಿಗೆ ಕೊಟ್ಟು ಮದುವೆ ಮಾಡಿಕೊಡಲು ಬೇಡಿ ಪೂರ್ಣಘನನು ಸುಲೋಚನನ ಬಳಿಗೆ ದೂತರನ್ನು ಕಳಿಸಿದ. ಆದರೆ ತನ್ನ ಮಗಳು ಚಕ್ರವರ್ತಿಯಾದ ಸಗರನ ಅಗ್ರಮಹಿಷಿಯಾಗುವಳೆಂಬ ಜ್ಯೋತಿಷಿಗಳ ಮಾತಿನಿಂದಾಗಿ ತೋಯದವಾಹನನಿಗೆ ಮಗಳನ್ನು ಕೊಡಲು ಅವನು ಒಪ್ಪಲಿಲ್ಲ. ಇದರಿಂದ ಕಡು ಮುಳಿದ ಪೂರ್ಣಘನನು ಲಯಸಮಯದ ಮೋಡಗಳ ರಾಶಿಯಂತಿದ್ದ ಸೈನ್ಯದೊಡನೆ ದಂಡೆತ್ತಿ ಬಂದು ಅಂಬರತಿಲಕವನ್ನು ಮುತ್ತಿದ. ಆಗ ಸುಲೋಚನನು ತನ್ನ ಮಗ ಹಾಗೂ ಮಗಳನ್ನು ವಿದ್ಯೆಯಿಂದ ಹಕ್ಕಿಗಳನ್ನಾಗಿ ಪರಿವರ್ತಿಸಿ ಅಲ್ಲಿಂದ ಹಾರಿ ಹೋಗುವಂತೆ ಮಾಡಿ ಹೋರಾಡಿದ; ಆದರೆ ಅವನು ಆ ಯುದ್ಧದಲ್ಲಿ ಮಡಿದ. ಆಗ ಪೂರ್ಣಘನನು ಅಂಬರತಿಲಕಪುರವನ್ನು ಹೊಕ್ಕು ಕನ್ಯೆಗಾಗಿ ಹುಡುಕಾಡಿ ಕಾಣದಿರಲು ತನ್ನೂರಿಗೆ ಮರಳಿದ. ಇತ್ತ ಸಹಸ್ರಲೋಚನನೂ ಉತ್ಪಲನೇತ್ರೆಯೂ ಶರಭಾಟವಿಯನ್ನು ಹೊಕ್ಕು ವೇತ್ರಾವತೀ ನದಿಯ ತೀರದಲ್ಲಿ ಉಳಿದುಕೊಂಡರು.

ಅಷ್ಟರಲ್ಲಿ ದುಷ್ಟಾಶ್ವವೊಂದು ಸಗರನನ್ನು ಎಳೆದು ತಂದು ಆ ಕಾಡಿನ ನಡುವೆ ಎಸೆದು ಹೋಯಿತು. ಅವನು ಅಲ್ಲಿ ತೊಳಲುತ್ತ ಸಾಗುವಾಗ ಸಿಂಹಕ್ಕೆ ಹೆದರಿ ಓಡುವ, ಮದ್ದಾನೆಯೆಂದು ಬಗೆದು ಕಾರ್ಮುಗಿಲಿನೊಡನೆ ಹೋರಾಡುವ ಆನೆಗಳನ್ನೂ, ಶರಭಗಳನ್ನು ಅಟ್ಟಿಕೊಂಡು ಹೋಗುವ ಭೇರುಂಡಪಕ್ಷಿಗಳನ್ನೂ ಕಂಡು ಅವನ ಬೇಸರು ಹೋಯಿತು. ಅಷ್ಟರಲ್ಲಿ ವೇತ್ರಾವತೀ ತೀರದಲ್ಲಿ ಅಣ್ಣತಂಗಿಯರು ಅವನ ಕಣ್ಣಿಗೆ ಬಿದ್ದರು. ಚಂದ್ರಸೂರ್ಯರು ರಾಹುವಿಗೆ ಹೆದರಿ ಓಡಿ ಬಂದರೇನೋ ಎಂಬಂತೆ ಕಾಣುತ್ತಿದ್ದ ಅವರು ಅವನ ಗಮನವನ್ನು ಸೆಳೆದರು. ಅದರಲ್ಲೂ ಕುವಲಯಮಾಲೆಯಂತೆ ನಗುವ ತನ್ನ ಲೋಲಲೋಚನಾಂಶುಗಳಿಂದ ಬಾಲೆಯು ಚಿತ್ತಾಕರ್ಷಕವಾದಳು. ಗಾಳಿ ಸುಳಿಯದಂತೆ, ಸೂರ್ಯಕಿರಣಗಳು ಒಳನುಗ್ಗದೆ ಕತ್ತಲಿಸಿಕೊಂಡಿದ್ದ ನಿಬಿಡವಾದ ಕಾನನಾಂತರದಲ್ಲಿ ಅಂಗಜ ಜಂಗಮ ದೀಪಮಾಲೆಯಂತೆ ಜಲಜಲಿಸುತ್ತಿದ್ದ ಖಚರೇಶ್ವರ ಕನ್ಯೆಯನ್ನು ತನ್ನ ನೋಟಗಳಿಂದಲೇ ಅಮರ್ದಪ್ಪಿಕೊಳ್ಳುವಂತೆ ಸಗರನು ಅವಳನ್ನು ನೆಟ್ಟ ನೋಟದಿಂದ ನೋಡಿದನು. ಈ ಮೊಗವನ್ನು ರೂಪುಗೈದು ಬ್ರಹ್ಮನು ತಾವರೆಯ ಸೌಂದರ್ಯವನ್ನೇಕೆ ಹಾಳುಮಾಡಿದ; ಈ ಹೊಳೆಯುವ ಕಣ್ಮಲರುಗಳನ್ನು ಮಾಡಿ ನೆಯ್ದಿಲನ್ನೇಕೆ ಇಳಿಕೆಗೈದ; ಈ ವಿನೀಲ ಕುಟಿಲಕುಟ್ಮಲವನ್ನು ಸೃಷ್ಟಿಸಿ ತುಂಬಿಯ ಬಣ್ಣವನ್ನೇಕೆ ಕೆಡಿಸಿದ; ಈಕೆಯನ್ನು ಕಡೆದಿಟ್ಟು ಜಂಗಮಲತಾವಿಲಾಸವನ್ನೇಕೆ ಮಂಕುಗೊಳಿಸಿದ ಎಂಬ ಯೋಚನೆಯಿಂದ ಅವಳನ್ನು ಸಗರ ನಿಡುಗಾಲ ದೃಷ್ಟಿಸಿದ.

ಎಳಲತೆಯನ್ನು ಬಿಟ್ಟು ತಾವರೆಗೆ ಎಳಸುವ ಮರಿದುಂಬಿಯಂತೆ ಅವನ ನೋಟವು ಆ ಚಳನಯನೆಯ ತನುಲತೆಯಿಂದ ಕುಮಾರನ ಮುಖಸರಸಿಜದ ಕಡೆ ಸುಳಿಯಿತು. "ಈ ಬಾಲೆಯು ಶಿರೀಷಮಾಲೆಯಂತೆ ತುಂಬ ಸುಕುಮಾರೆ; ನೀನಾದರೋ ಇನ್ನೂ ಬಾಲಕನೇ; ಈ ಕಾಡು ಮನುಷ್ಯ ಖೇಚರರಿಗೂ ಗೋಚರವಲ್ಲ; ಅಲ್ಲದೆ, ಭಯಂಕರವಾದ ಶಾರ್ದೂಲಸಿಂಹಶರಭಕುಲದ ನೆಲೆವನೆ. ನೀವು ಇಲ್ಲಿಗೆ ಬರುವಂತಹ ಪಾಡು ಏಕೆ ಉಂಟಾಯಿತು?" ಎಂದು ನೃಪನು ಸಹಸ್ರಲೋಚನನನ್ನು ಕೇಳಿದ. ಆಗ ಅವನು ತಮ್ಮ ವೃತ್ತಾಂತವನ್ನೆಲ್ಲ ನಿರೂಪಿಸಿದ. "ನಿನ್ನ ಆಕೃತಿ, ದುಂದುಭಿ ಗಭೀರಧ್ವಾನ, ನೇತ್ರಾನಂದಕರವಾದ ಮಂಗಳಲಕ್ಷಣಗಳು ನೀನು ರಾಜನಲ್ಲದೆ ಇರಲು ಸಾಧ್ಯವಿಲ್ಲ ಎಂದು ಸೂಚಿಸುತ್ತಿವೆ. ನೀನೇಕೆ ಈ ದುರ್ಗಮವಾದ ಅಡವಿಯಲ್ಲಿ ತೊಳಲುತ್ತಿದ್ದೀಯೇ?" ಎಂದು ನೃಪನನ್ನು ವಿಚಾರಿಸಿದ. ಆಗ ಸಗರನು ತಾನು ಅಯೋಧ್ಯಾಪತಿಯೆಂಬುದನ್ನೂ, ಅಲ್ಲಿಗೆ ಬಂದ ಕಾರಣವನ್ನೂ ವಿಶದವಾಗಿ ತಿಳಿಸಿದ. 'ಹಗೆ ಬಗೆಗಳನ್ನು ತೀರಿಸಲು ಸಗರನನ್ನು ಆಶ್ರಯಿಸಿ' ಎಂದು ತನ್ನ ತಂದೆ ಹೇಳಿದ್ದ ಮಾತು ನೆನಪಿಗೆ ಬಂದು ಸಹಸ್ರಲೋಚನನು ವಿಸ್ಮಯಗೊಂಡು ಅದನ್ನು ಸಗರನ ಮುಂದೆ ಹೇಳಿದ. ಖೇದವು ಹೋಗಿ ಶುಭೋದಯವುಂಟಾಗುವುದು; ಸಂಸಾರಿಗಳಿಗೆ ಹೀಗಾಗುವುದು ಚೋದ್ಯವೇನಲ್ಲ ಎಂದು ಅವರನ್ನು ಸಮಾಧಾನಪಡಿಸಿ, ಸುಲೋಚನನು ಹೇಳಿದಂತೆ ತಾನು ಮಾಡುವುದಾಗಿ ಅವನು ಆಶ್ವಾಸನೆಯಿತ್ತ. ಆನಂತರ ತನ್ನನ್ನು ಹೊತ್ತು ತಂದ ದುಷ್ಟಾಶ್ವದ ಹೆಜ್ಜೆಗುರುತುಗಳನ್ನು ಹಿಡಿದು ಅವರಿಬ್ಬರ ಜೊತೆಯಲ್ಲಿ ಹಿಂದುಹಿಂದಕ್ಕೆ ಪಯಣ ಬೆಳೆಸಿದ. ಅಂತು ಬರುತ್ತಿರಲು ಒಂದೆಡೆ, ತನ್ನನ್ನು ಕರೆಯುವಂತೆ ಚತುರಂಗದಳದ ಕಳಕಳಧ್ವನಿಯು ಕೇಳಿಸಿತು, ರಾಜನಿರುವ ಜಾಗವನ್ನು ತಿಳಿಸುವಂತೆ ಧೂಳೀಜಾಲವು ಮೇಲೆದ್ದಿತು. ಸ್ವಲ್ಪ ಹೊತ್ತಿನಲ್ಲಿ ತನ್ನ ಚತುರ್ಬಲವು ಬಂದಿತು.

ವಿಜಯವಾರಣದ ಮಣಿಮಯ ಶಾರಿಕೆಯ ಎರಡೂ ಕಡೆಗಳಲ್ಲಿ ಸಹಸ್ರಲೋಚನ ಮತ್ತು ಉತ್ಪಲನೇತ್ರೆಯರನ್ನು ಏರಿಸಿಕೊಂಡು ಸಗರನು ಅಯೋಧ್ಯೆಯ ಕಡೆ ಹೊರಟ. ಪುರವನಿತೆಯರು ನೀಡುವ ಹೂಮಾಲೆಯನ್ನೂ, ಅವರ ಕಟಾಕ್ಷಮಾಲೆಯನ್ನೂ ಪಡೆದು, ದುಕೂಲಪಟೀಪತಾಕೆಗಳಿಂದಲೂ ಮರಕತ ತೋರಣಗಳಿಂದಲೂ ಒಪ್ಪುವ ಊರನ್ನು ದಿವಿಜನಾಯಕನಂತೆ ಪುಗುತಂದ. ಅನತಿಕಾಲದಲ್ಲಿಯೇ ಉತ್ಪಲನೇತ್ರೆಯನ್ನು ಮದುವೆ ನಿಂದ. ವಕ್ಷದಲ್ಲಿ ಉತ್ಪಲನೇತ್ರೆಯನ್ನೂ ಭುಜಗಳಲ್ಲಿ ಭೂವಧುವನ್ನೂ ಇರಿಸಿಕೊಂಡ ಸಗರನು ತನ್ನ ಕೀರ್ತಿಧ್ವಜವನ್ನು ದಿಗ್ದಂತಿಗಳ ದಂತಗಳಲ್ಲಿ ಸಿಕ್ಕಿಸಿದ. ನಿರಸ್ತ ದಿನಕರ ಸಹಸ್ರಕರಚಕ್ರದಂತೆ ಕಾಂತಿಯುಕ್ತವಾದ ಚಕ್ರರತ್ನವು ಸಗರನ ಶಸ್ತ್ರಾಗಾರದಲ್ಲಿ ಪರಚಕ್ರಗಳಿಗೆ ಕಾಲಚಕ್ರದಂತೆ ಉದಯಿಸಿತು. ಜೊತೆಯಲ್ಲಿ ಆರು ಬಲ, ನವನಿಧಿ, ಹಲವು ಚಿಹ್ನಗಳು ಮತ್ತು ಚತುರ್ದಶ ರತ್ನಾವಳಿಯು ಜನಿಸಲು ಸಗರನು ಭರತ ಷಟ್ಖಂಡವನ್ನು ಸಾಧಿಸಿದ. ಆನಂತರ ಸಹಸ್ರಲೋಚನನಿಗೆ ವಿದ್ಯಾಧರಲೋಕದ ಒಡೆತನವನ್ನು ನೀಡಿದ.

ತನ್ನ ತಂದೆಯನ್ನು ಕೊಂದವನನ್ನು ಕೊಂದಲ್ಲದೆ ಮಾಣೆನೆಂದು ಸಹಸ್ರಲೋಚನನು ಅಸಂಖ್ಯಾತ ಬಲಸಮೇತನಾಗಿ ಬಂದು ರಥನೂಪುರ ಚಕ್ರವಾಳಪುರವನ್ನು ಮೂವಳಸಾಗಿ ಸುತ್ತುವರಿದ. ಅವನು ಸಮರಸಾಧ್ಯನಲ್ಲವೆಂಬುದನ್ನು ಅರಿತ ಪೂರ್ಣಘನನು ತನ್ನ

ಮಗನಾದ ತೋಯದವಾಹನನನ್ನು ವಿದ್ಯೆಯಿಂದ ಹಂಸನಾಗಿ ಮಾಡಿ ಕಳಿಸಿ ತಾನು ಮಹಾಯುದ್ಧ ಮಾಡಿ ಸಾವಿಗೀಡಾದ. ಆದರೆ ಸಹಸ್ರಲೋಚನನು ತೆಕ್ಕೆ ಹಾಕಿಕೊಂಡ ಹಾವಿನ ಹಾಗೆ ತೋಯದವಾಹನನನ್ನು ಅಟ್ಟಿಸಿಕೊಂಡು ಬಂದ. ಸಮವಸರಣದ ಬಳಿ ಬಂದಾಗ ಅಟ್ಟಿಸಿಕೊಂಡು ಬಂದವನ ಮುಳಿಸು, ಓಡುವವನ ದಟ್ಟವಾದ ಭಯ ಇವುಗಳು ಆಶ್ಚರ್ಯಕರವಾಗಿ ಕಣ್ಮರೆಯಾದವು. ಹೀಗೆ ಅವರಿಬ್ಬರೂ ಅಜಿತ ಭಟ್ಟಾರಕರ ಸಮವಸರಣ ಭೂಮಿಯನ್ನು ಹೊಕ್ಕು ವಸ್ತುಸ್ತವ ರೂಪಸ್ತವ ಗುಣಸ್ತವಗಳನ್ನು ಮಾಡಿ ಮಾನವ ಸಭಾಸದನಾಗಿದ್ದ ಸಗರ ಚಕ್ರವರ್ತಿಯ ಬಳಿ ಬಂದರು. ಆಗ ಸಹಸ್ರಲೋಚನನು ಗಣಧರರ ಮುಖಕಮಲದಲ್ಲಿ ತನ್ನ ಕಣ್ಣುಗಳನ್ನು ನೆಟ್ಟು, ತನ್ನ ತಂದೆಗೂ ತೋಯದವಾಹನನ ತಂದೆಗೂ ಇರುವ ದ್ವೇಷವು ಈ ಜನ್ಮದ್ದೋ, ಹಿಂದಿನ ಜನ್ಮಗಳದ್ದೋ ತಿಳಿಸಬೇಕೆಂದು ಕೇಳಿಕೊಂಡ. ಆಗ ಗಣಧರಾಚಾರ್ಯರು ಹೀಗೆಂದು ತಿಳಿಸಿದರು:

ಈ ಭರತ ಖಂಡದ ಷಡರ್ತುಕವೆಂಬ ಪುರದಲ್ಲಿ ಭಾವನನೆಂಬ ವ್ಯಾಪಾರಿಯಿದ್ದ. ಅವನು ಹರಿದಾಸನೆಂಬ ತನ್ನ ಮಗನಿಗೆ ನಾಲ್ಕು ಕೋಟಿ ವರಹಗಳನ್ನು ಕೊಟ್ಟು ತಾನು ಪರದೇಶಕ್ಕೆ ವ್ಯಾಪಾರಕ್ಕೆಂದು ತೆರಳಿದ. ಹರಿದಾಸನು ಆ ಹಣವನ್ನು ಕಳೆದುಕೊಂಡು, ತನ್ನ ಮನೆಯಿಂದ ಅರಮನೆಗೆ ಕನ್ನವೊಂದನ್ನು ಕೊರೆದು ಅಲ್ಲಿಂದ ಕದ್ದ ಹಣದ ಮೇಲೆ ಬದುಕುತ್ತಿದ್ದ. ಸ್ವಲ್ಪ ಕಾಲಾನಂತರ ಅಪಾರ ಹಣವನ್ನು ಗಳಿಸಿ ಭಾವನನು ಊರಿಗೆ ಮರಳಿದ. ಆಗ ರಾತ್ರಿಯಾಗಿತ್ತು. ಮನೆಗೆ ಮರಳಿದಾಗ ಅವನಿಗೆ ಮಗನ ವಿಷಯ ತಿಳಿಯಿತು. ಮಗನನ್ನು ಕರೆತರಲೆಂದು ಅವನು ಕನ್ನವನ್ನು ಹೊಕ್ಕ. ಆ ಸಮಯದಲ್ಲಿ, ಬಂದವನು ತನ್ನನ್ನು ಕೊಲ್ಲಲು ಅರಸನಟ್ಟಿದ ಪುರುಷನೆಂದು ಹರಿದಾಸನು ಬಗೆದು ಅವನೊಡನೆ ಹೋರಾಟಕ್ಕಿಳಿದ. ಇಬ್ಬರೂ ಆಯುಧಗಳಿಂದ ಹೊಡೆದಾಡಿ ಪರಸ್ಪರರನ್ನು ಕೊಂದುಕೊಂಡರು. ಮರುಜನ್ಮದಲ್ಲಿ ಪರಸ್ಪರ ವಿರೋಧಿಗಳಾದ ಪ್ರಾಣಿಜನ್ಮಗಳನ್ನು ತಾಳಿದರು. ಆಗಲೂ ಪರಸ್ಪರರನ್ನು ಕೊಂದು ತಿಂದು ದುಃಖಪರಂಪರೆಯನ್ನ ನುಭವಿಸಿದರು. ಮುಂದಿನ ಜನ್ಮದಲ್ಲಿ ಪೂರ್ವ ವಿದೇಹದ ಪುಂಡರೀಕಿಣೀಪುರದಲ್ಲಿ ಉತ್ತರ ಅನುತ್ತರ ಎಂಬ ಸಹೋದರರಾಗಿ ಹುಟ್ಟಿದರು. ಇಬ್ಬರೂ ತಪಸ್ಸು ಮಾಡಿ ಶತಾರಕಲ್ಪದಲ್ಲಿ ಜನಿಸಿ ಬಂದು ಭಾವನನು ಪೂರ್ಣಘನನಾಗಿಯೂ ಹರಿದಾಸನು ಸುಲೋಚನನಾಗಿಯೂ ಹುಟ್ಟಿದ್ದಾರೆ. ಆದರೆ ಹಿಂದಣ ಜನ್ಮದ ವಿರೋಧದಿಂದಾಗಿ ಪೂರ್ಣಘನನು ಸುಲೋಚನನಿಂದ ಹತನಾದ ಎಂದು ಪೂರ್ವಭವಗಳ ವಿಚಾರವನ್ನು ತಿಳಿಸಿದರು. ಆನಂತರ, "ಮುಳಿಸೆಂಬುದು ಹೊಲೆ; ಅದು ಹುಟ್ಟಿದ ಹೊತ್ತಿನಲ್ಲಿ ಯಾವನಾದರೂ ಹೊಲೆಯನಾಗುತ್ತಾನೆ; ಪಾಪಕ್ಕೆ ಕಾರಣ ಮುಳಿಸಲ್ಲದೆ ಬೇರಲ್ಲ. ಕೋಪದಿಂದ ಕೊಲೆಯಾಗುತ್ತದೆ; ಅದರಿಂದ ಪಾಪಸಂಚಯವಾಗುತ್ತದೆ; ಪುಣ್ಯವೆಂದರೆ ಹೊಲೆಕೊಲೆಗಳಿಂದ ದೂರವಿರುವುದೇ ಆಗಿದೆ. ಆದ್ದರಿಂದ ನೀವು ವಿರೋಧವನ್ನು ತೊರೆಯಿರಿ" ಎಂದು ಉಪದೇಶಿಸಿದರು.

ಆಮೇಲೆ, ತನಗೆ ಸಹಸ್ರಲೋಚನನಲ್ಲಿ ಇಷ್ಟೊಂದು ಒಲವೇಕಾಯಿತೆಂಬುದನ್ನು ತಿಳಿಯಲು ಚಕ್ರಿಲಲಾಮನಾದ ಸಗರನು ಬಯಸಿದ. ಆಗ ಅಜಿತ ಭಟ್ಟಾರಕರು ದಿವ್ಯಭಾಷೆಯಲ್ಲಿ ಹೀಗೆಂದರು: ಈ ಭರತವಿಷಯದ ಪದ್ಮಪುರದಲ್ಲಿ ಆರಂಭಿಕ ಎಂಬ ಒಬ್ಬ

ಬ್ರಾಹ್ಮಣನಿದ್ದ; ಅವನಿಗೆ ಬಲಿ ಶಿಖಿಗಳೆಂಬ ಹೆಸರಿನ ಇಬ್ಬರು ಶಿಷ್ಯರಿದ್ದರು. ಅವರಿಬ್ಬರಲ್ಲಿ ವಿದ್ಯಾಮಾತ್ಸರ್ಯದಿಂದ ವೈರವುಂಟಾಯಿತು. ಒಂದು ದಿನ ಹಸುವಿನ ವಿಕ್ರಯಕಾಲದಲ್ಲಿ ಅದು ಉಲ್ಬಣಗೊಂಡು ಒಬ್ಬರನ್ನೊಬ್ಬರು ಇರಿದುಕೊಂಡು ಸತ್ತರು. ಮರುಜನ್ಮದಲ್ಲಿ ಬಲಿ ಒಬ್ಬ ಬೇಡನಾಗಿ ಹುಟ್ಟಿದ; ಶಿಖಿ ಎತ್ತಾದ. ಆ ಎತ್ತನ್ನು ಬೇಡನು ಕೊಲ್ಲಲು ಅದು ಇಲಿಯಾಗಿ ಹುಟ್ಟಿತು. ಸತ್ತ ಬೇಡನು ಬೆಕ್ಕಾದ. ಹೀಗೆ ಪರಸ್ಪರ ದ್ವೇಷವನ್ನನುಭವಿಸಿ ಕೊನೆಗೆ ಜಿನದೇವದಿತನಿಗೆ ಮಕ್ಕಳಾಗಿ ವಾರಣಾಸಿಯಲ್ಲಿ ಜನಿಸಿದರು. ಆನಂತರ ವ್ಯಂತರಗತಿಯಲ್ಲಿ ಸುರೂಪ ಸುಂದರ ಎಂಬ ಹೆಸರಿನಿಂದ ಬಾಳಿದರು. ಆ ಮುಂದೆ ಸೋಮಪುರದಲ್ಲಿ ಕುಲಂಧರ ಪುಷ್ಯಭೂತಿಗಳಾಗಿ ಹುಟ್ಟಿ ಹೆಂಡತಿಯ ನಿಮಿತ್ತ ವೈರಮನಸ್ಕರಾದರು. ಆದರೆ ಪುಣ್ಯವಶಾತ್ ಅವರಿಬ್ಬರೂ ತಪೋಧನರೊಬ್ಬರನ್ನು ಕಂಡು ತಮ್ಮ ದ್ವೇಷವನ್ನು ಹಿಂಗಿಸಿಕೊಂಡರು. ಮುಂದಿನ ಜನ್ಮದಲ್ಲಿ ಸನತ್ಕುಮಾರಕಲ್ಪದ ಉಪಪಾತ ಕಲ್ಪದಲ್ಲಿ ಹುಟ್ಟಿ ನಾಕಲೋಕ ಸುಖವನ್ನನುಭವಿಸಿ ಬಂದು ಧಾತಕೀಷಂಡದ ಅಪರ ವಿದೇಹದ ವಿಜಯಾವತೀ ವಿಷಯದಲ್ಲಿನ ವಿಜಯಪುರದಲ್ಲಿ ಕ್ರೂರಧರ ಅಮರಧರ ಎಂಬ ಹೆಸರಿನ ಒಡವುಟ್ಟಿದವರಾಗಿ ಜನಿಸಿದರು. ಆ ಪುರದರಸು ಸಹಸ್ರಶೀರ್ಷನು ಒಂದು ದಿನ ಆನೆಬೇಟೆಗೆಂದು ಅಡವಿಗೆ ಹೋದ. ಅಲ್ಲಿ ನೋಡಿದರೆ ಪರಸ್ಪರ ಶತ್ರುತ್ವವುಳ್ಳ ಕ್ರೂರಪ್ರಾಣಿಗಳು ಉಪಶಮಭಾವದಿಂದಿರುವುದನ್ನು ಕಂಡು ಅಚ್ಚರಿಗೊಂಡ. ಹಾಗೇ ಹೋಗುತ್ತಿರುವಾಗ ಒಂದೆಡೆ ವಿನಯಧರ ಕೇವಲಿಗಳ ದರ್ಶನವಾಯಿತು. ಅವರ ಬಳಿ ದೀಕ್ಷೆಯನ್ನು ಕೈಗೊಂಡು ಮೋಕ್ಷವನ್ನು ಪಡೆದ. ಇತ್ತ, ಕ್ರೂರಧರ ಅಮರಧರರೂ ಆ ಕೇವಲಿಗಳ ಅಡಿಗಳಲ್ಲಿ ತಪಸ್ಸು ಮಾಡಿ ಶರೀರವನ್ನು ತೊರೆದು ಶತಾರಕಲ್ಪದಲ್ಲಿ ಸ್ವಲ್ಪಕಾಲ ಸುಖವನ್ನನುಭವಿಸಿದರು. ಆ ಮುಂದಿನ ಜನ್ಮದಲ್ಲಿ ಬಲಿಯು ಸಹಸ್ರಲೋಚನನಾಗಿಯೂ ಶಿಖಿಯು ತೋಯದವಾಹನನಾಗಿಯೂ ಜನಿಸಿದರು – ಎಂದು ವಿವರಿಸಿದರು.

ಸಭಾಸದರ ಹೃದಯ ಕೈರವಗಳು ಅರಳುವ ಹಾಗೆ ತಮ್ಮ ದಿವ್ಯವಚನವೆಂಬ ಪರಿಪೂರ್ಣ ಚಂದ್ರನ ಬೆಳುದಿಂಗಳು ಎಲ್ಲಡೆ ಪಸರಿಸುವಂತೆ ಮತ್ತೆ ಅಜಿತ ತೀರ್ಥಂಕರರು ನರೇಶ್ವರನಿಗೆ ಈ ರೀತಿ ಹೇಳಿದರು: ಆ ಜನ್ಮದ ಆರಂಭಿಕನು ಋಷಿಗಳಿಗೆ ಆಹಾರದಾನವನ್ನಿತ್ತು ಭೋಗಭೂಮಿಯಲ್ಲಿ ಹುಟ್ಟಿ ಆನಂತರ ಸ್ವರ್ಗಕ್ಕೆ ಸಂದು ದಿವ್ಯಸುಖವನ್ನನುಭವಿಸಿ, ಧಾತಕೀಷಂಡದ ಅಪರ ವಿದೇಹದ ವಿಜಯಾವತೀ ವಿಷಯದಲ್ಲಿ ಚಕ್ರಪುರವನ್ನಾಳುತ್ತಿದ್ದ ಹರಿವರ್ಮ–ಗಾಂಧಾರಿ ದಂಪತಿಗಳಿಗೆ ಶ್ರುತಕೀರ್ತಿ ಎಂಬ ಹೆಸರಿನ ಮಗನಾಗಿ ಹುಟ್ಟಿದ. ತಪಸ್ಸು ಮಾಡಿ ಸತ್ತನಂತರ ಸ್ವರ್ಗದಲ್ಲಿ ಹುಟ್ಟಿ ಬಂದು ಪೂರ್ವವಿದೇಹದ ರತ್ನಸಂಚಯಪುರವನ್ನಾಳುತ್ತಿದ್ದ ಅಭಯಘೋಷನಿಗೂ ಮತ್ತವನ ಹೆಂಡತಿ ಚಂದ್ರಾಯಣಿಗೂ ಪಯೋಬಲನೆಂಬ ಮಗನಾಗಿ ಜನ್ಮಿಸಿದ. ಪವಿತ್ರ ಚಾರಿತ್ರವಿದ್ದ ಅವನು ಸತ್ತನಂತರ ಮತ್ತೆ ಪೃಥ್ವೀಧರಪುರದ ಅರಸು ಜಯಂಧರ ಮತ್ತು ರಾಣಿ ವಿಜಯಿಗೆ ಜಯಕೀರ್ತಿ ಎಂಬ ಹೆಸರಿನ ಮಗನಾಗಿ ಹುಟ್ಟಿದ. ಸ್ವಲ್ಪಕಾಲ ರಾಜ್ಯಭಾರ ಮಾಡಿ ಜನಕಸೂರಿ ಎಂಬ ತಪೋಧನರ ಬಳಿ ಪರಿವ್ರಾಜಕವೃತ್ತಿಯನ್ನು ಪಡೆದು ಸಮಾಧಿಮರಣದಿಂದ ಸತ್ತು ಮತ್ತೀಗ ಎರಡನೆಯ ಚಕ್ರವರ್ತಿ ಸಗರನಾಗಿ ಹುಟ್ಟಿದ್ದೀಯೆ. ಆರಂಭಿಕನಾಗಿದ್ದ ಜನ್ಮದ ನಂಟಿನ ಕಾರಣದಿಂದ ನಿನಗೆ ಸಹಸ್ರಲೋಚನನಲ್ಲಿ ಗಾಢವಾದ ಪ್ರೀತಿಯುಂಟಾಯಿತು ಎಂದು ನಿರೂಪಿಸಿದರು.

ಅವರ ಮಾತುಗಳನ್ನು ಕೇಳಿ ಭೀಮನೆಂಬ ರಾಕ್ಷಸಕುಲದೊಡೆಯನು ತೋಯದವಾಹನನಿಗೆ ಹಿಂದಿನ ಜನ್ಮದಲ್ಲಿ ತಂದೆಯಾಗಿದ್ದ ಅನುಬಂಧ ಕಾರಣವಾಗಿ ಪ್ರೀತಿಯಿಂದ ಇಂತೆಂದ: "ಮಗನೆ, ವಿಜಯಾರ್ಧನಗರದಲ್ಲಿ ನಮ್ಮ ಶತ್ರುಗಳು ಬಹಳ ಪ್ರಬಲರು. ಅವರ ಜೊತೆಯಿದ್ದರೆ ನಿನಗೆ ತೊಂದರೆಯುಂಟಾಗುತ್ತದೆ. ಹಗೆಗಳ ಜೊತೆ ಬಾಳುವುದೆಂದರೆ ಹಾವಿನೊಡನೆ ಬದುಕಿದಂತಲ್ಲವೇ?" ಎಂದು ಹೇಳಿ ಈ ವಿವರಗಳನ್ನಿತ್ತ: ದಕ್ಷಿಣ ಜಲಧಿಯಲ್ಲಿ ಹಲವಾರು ದ್ವೀಪಗಳಿವೆ. ಆ ಕೆಲವುಗಳಲ್ಲಿ ಕಿನ್ನರ ಮೊದಲಾದ ಅಷ್ಟ ಮರುತ್ಕುಲ ನಿಲಯಗಳಿವೆ. ಆ ದ್ವೀಪಗಳಲ್ಲಿ ರಾಕ್ಷಸ ಎಂಬ ಹೆಸರಿನದು ಏಳುನೂರು ಯೋಜನ ವಿಸ್ತೀರ್ಣವುಳ್ಳದ್ದು. ಅದರ ನಡುವೆ ಗೋಪುರ ಬುರುಜುಗಳುಳ್ಳ ಏಳು ಕನಕ ಪ್ರಾಕಾರಗಳ ಮಧ್ಯೆ ಏಳು ಸುಂದರ ನಂದನಗಳಿವೆ. ಅದರಲ್ಲಿನ ಒಂದು ಸಾರ್ವರ್ತುಕೋದ್ಯಾನವು ಒಂಬತ್ತು ಯೋಜನ ಉದ್ದ ಮತ್ತು ಐವತ್ತು ಯೋಜನ ಅಗಲವುಳ್ಳದು. ಅದರಲ್ಲಿ ಶಿರೋಭೂಷಣದಂತೆ ಒಂದು ಜಿನಮಂದಿರವಿದೆ; ಅದಕ್ಕೆ ಪ್ರಕಾಶಮಾನವಾದ ತ್ರಿಕೂಟವು ಶೋಭಾಯಮಾನವಾಗಿದೆ. ಅದರ ಶಿಖರಮಂಡಲದಲ್ಲಿ ಮೂವತ್ತು ಯೋಜನ ವಿಸ್ತಾರದ ಲಂಕಾನಗರ. ಆನಂತರ ಭೀಮರಾಕ್ಷಸನು ಭವಾಂತರಸ್ನೇಹದಿಂದ ತೋಯದವಾಹನನನ್ನು ತನ್ನೊಡನೆ ಲಂಕೆಗೆ ಕರೆದುಕೊಂಡು ಹೋಗಿ "ಸುಖವಾಗಿ ಅರಸುಗೈ" ಎಂದು ರಾಜ್ಯಾಭಿಷೇಕ ಮಾಡಿದ. ಅವನಿಗೆ ರಾಕ್ಷಸವಿದ್ಯೆ ಮೊದಲಾದ ಹಲವು ವಿದ್ಯೆಗಳನ್ನೂ, ಮುಖಾಭರಣವೇ ಮುಂತಾದ ದಿವ್ಯಾಭರಣಗಳನ್ನೂ, ನವನಿಧಿ ಸಮೇತವಾದ ಪಾತಾಳಲಂಕೆಯನ್ನೂ ಇತ್ತ. "ನಿನ್ನದು ರಾಕ್ಷಸ ಕುಲವಾಗಲಿ" ಎಂದು ನಿಯಮಿಸಿ ದ್ವೀಪಾಂತರಕ್ಕೆ ಹೋದ.

ಇತ್ತ ತೋಯದವಾಹನನು ಪರಿಜನಸಮೇತನಾಗಿ ಅರಸುಗೈಯುತ್ತಿದ್ದು ಕೆಲಕಾಲದ ಬಳಿಕ ವಿಜಯಾರ್ಧದ ಕಿನ್ನರಪುರವನ್ನಾಳುವ ರತಿಮಯೂಖ-ಅನುಮತಿಯರ ಮಗಳಾದ ಸುಪ್ರಭೆಯನ್ನು ಮದುವೆಯಾದ. ಸ್ವಲ್ಪಕಾಲಕ್ಕೇ ಅವನಿಗೆ ವೈರಾಗ್ಯವುಂಟಾಯಿತು. ತನ್ನ ಹಿರಿಯ ಮಗ ಮಹಾರಾಕ್ಷಸನಿಗೆ ರಾಜ್ಯವನ್ನಿತ್ತು ದೀಕ್ಷೆಗೊಂಡು ಮೋಕ್ಷಕ್ಕೆ ಸಂದ. ಆನಂತರ ಮಹಾರಾಕ್ಷಸನು ತನ್ನ ಸಾಮ್ರಾಜ್ಯವನ್ನು ರಕ್ಷಿಸುತ್ತ, ಪರಾಕ್ರಮ ವೈಭವಗಳಿಂದ ಕೂಡಿ ಲಂಕೆಯಲ್ಲಿ ಅಧಿರಾಜನೆನಿಸಿಕೊಂಡ. ಅವನಿಗೆ ಅಮರರಾಕ್ಷಸ ಮತ್ತು ಭಾನುರಾಕ್ಷಸ ಎಂಬ ಮಕ್ಕಳಾದರು. ಒಂದು ದಿನ ಮಹಾರಾಕ್ಷಸನು ಕ್ರೀಡಾವನಕ್ಕೆ ಬಂದ. ಅಲ್ಲಿ ಅವನಿಗೆ ಮಕರಂದ ಲೋಭದಿಂದ ರಾತ್ರಿಯೆಲ್ಲ ಮುಚ್ಚಿಕೊಂಡ ಕಮಲದ ನಡುವೆ ಸಿಕ್ಕಿಹಾಕಿಕೊಂಡು ಉಸಿರುಗಟ್ಟಿ ಸತ್ತಿದ್ದ ಒಂದು ದುಂಬಿ ಕಾಣಿಸಿತು. ವಾಸನೆಯಿಂದ ಈ ದುಂಬಿಯು ಸತ್ತಿತು ಎನ್ನಬೇಕಾದರೆ ಐದು ಇಂದ್ರಿಯಗಳಿಂದ ಕೂಡಿದ ಈ ಸಂಸಾರವು ವಿಪತ್ಕಾರಿಯಾಗುವುದು ಏನಚ್ಚರಿ ಎಂಬ ಯೋಚನೆಯಿಂದ ಅವನು ವೈರಾಗ್ಯಪರನಾದ. ಶ್ರುತಸಾಗರರೆಂಬ ಚಾರಣ ಋಷಿಗಳನ್ನು ಕಂಡು ತನ್ನ ಹಿಂದಿನ ಜನ್ಮಗಳ ವಿವರಗಳನ್ನು ತಿಳಿಯಬಯಸಿದ. ಅವರೆಂದರು: ಪೌದನಪುರದ ಒಡೆಯ ಕನಕರಥನು ಜಿನಪೂಜೆಯನ್ನು ಮಾಡಲು, ಅದನ್ನು ನೋಡಿ ನಲಿದ ಕಾರಣದಿಂದ ಪರವಿದೇಹದ ಕಾಂಚನಪುರದಲ್ಲಿ ಯಕ್ಷನಾಗಿ ಸಾಧುಸಂಗಕ್ಕೆ ಉಂಟಾದ ಕಷ್ಟಗಳನ್ನು ನಿವಾರಿಸಿದ; ಆನಂತರ ತಟಲ್ಲಂಘ ಎಂಬ ಖೇಚರನಿಗೂ ಶ್ರೀಪ್ರಭೆಗೂ ಉದಿತನೆಂಬ ಮಗನಾದ; ವೈರಾಗ್ಯದಿಂದ ಸಕಲವನ್ನೂ,

ತೊರೆದು ಜಿನಚರಣವಂದನೆಗೆಂದು ಬಂದ ವಿಕ್ರಮನೆಂಬ ವಿದ್ಯಾಧರನ ವೈಭವವನ್ನು ನೋಡಿ ಅದರಿಂದ ಆಕರ್ಷಿತನಾದ. "ಜೀವಿತಾನಂತರ ಈಶಾನಕಲ್ಪಕ್ಕೆ ಹೋಗಿ ಬಂದು ರಾಕ್ಷಸನಾದ ಮೇಲೆ ನಿನಗೆ ಈ ಮಹಿಮೆಯುಂಟಾಗಿದೆ" ಎಂದರು. ಅದನ್ನು ಕೇಳಿ ಮಹಾರಾಕ್ಷಸನು ತನ್ನ ಮಗನಾದ ಅಮರರಾಕ್ಷಸನಿಗೆ ಲಂಕೆಯನ್ನಿತ್ತು ವಿದ್ಯೆಗಳನ್ನು ವಿಸರ್ಜಿಸಿ ತಪಸ್ಸಿಗೆ ನಿಂತು ಮೋಕ್ಷವನ್ನು ಪಡೆದ.

ಇತ್ತ, ಅಮರರಾಕ್ಷಸನು ತನ್ನ ಕೂರಸಿಯಿಂದ ತನಗೆದುರಾದ ಖೇಚರರನ್ನು ನಿಯಂತ್ರಿಸಿ ಲಂಕೆಯನ್ನು ನಿಶ್ಶಂಕೆಯಿಂದ ಆಳುತ್ತಿದ್ದ. ಅವನಿಗೂ ಅವನ ಸೋದರ ಭಾನುರಾಕ್ಷಸನಿಗೂ ಒಟ್ಟು ಹದಿನಾರು ಮಂದಿ ಮಕ್ಕಳಾದರು. ಅವರನ್ನೆಲ್ಲ ಬೇರೆ ಬೇರೆ ನಗರಗಳಿಗೆ ಅರಸುಗಳನ್ನಾಗಿ ಮಾಡಿ ನಿಸರ್ಗ ವೈರಾಗ್ಯದಿಂದ ಇಬ್ಬರೂ ನಿರ್ವಾಣಕ್ಕೆ ಸಂದರು. ಆ ಮಕ್ಕಳಲ್ಲಿ ಘನಪ್ರಭನು ಅನ್ಯರಾಜರುಗಳು ಬೆಚ್ಚುವ ಹಾಗೆ ತೇಜಸ್ಸಿನಿಂದ ಲಂಕೆಯನ್ನು ಆಳುತ್ತಿದ್ದ. ಅವನ ಮಗ ಸಕಲ ದಿಕ್ಕುಗಳನ್ನೂ ತನ್ನ ಕೀರ್ತಿಯಿಂದ ಧವಳಿಸಿದ ಧವಳಕೀರ್ತಿ. ಅವನು ಲಂಕೆಯನ್ನಾಳುತ್ತಿದ್ದ ಕಾಲದಲ್ಲಿ ಇತ್ತ ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯಲ್ಲಿದ್ದ ಮೇಘಪುರಕ್ಕೆ ಒಡೆಯನಾಗಿದ್ದವನು ಅತೀಂದ್ರ ಎಂಬ ವಿಯಚ್ಚರ. ಅವನಿಗೆ ಶ್ರೀಕಂಠ ಎಂಬ ಮಗ, ದೇವಿಲೆ ಎಂಬ ಮಗಳು ಇದ್ದರು. ರತ್ನಪುರದ ಪೂರ್ವೋತ್ತರನು ತನ್ನ ಮಗ ಪುಷ್ಪೋತ್ತರನಿಗೆ ದೇವಿಲೆಯನ್ನು ಕೊಡುವಂತೆ ಕೇಳಿದ; ಅದಕ್ಕೆ ಅತೀಂದ್ರ ಒಪ್ಪಲಿಲ್ಲ. ಅವನು ಲಾವಣ್ಯ ರಸಾವಿಲೆಯಾದ ದೇವಿಲೆಯನ್ನು ಧವಳಕೀರ್ತಿಗಿತ್ತು ಮದುವೆ ಮಾಡಿದ. ಅತೀಂದ್ರನ ಮಗ ಶ್ರೀಕಂಠ ಒಮ್ಮೆ ಮಂದರಪರ್ವತದ ಜಿನಮಂದಿರಕ್ಕೆ ಹೋಗಿ ರತ್ನಪುರದ ಮೇಲುಗಡೆಯಿಂದ ಮೇಘಪುರಕ್ಕೆ ಬರುತ್ತಿದ್ದ. ಆ ಸಮಯದಲ್ಲಿ ಪುಷ್ಪೋತ್ತರನ ತಂಗಿಯಾದ ಪದ್ಮೋತ್ತರೆಯು ತನ್ನ ಕನ್ನೆವಾಡದಲ್ಲಿ ಇಂಪಾಗಿ ಹಾಡಿಕೊಳ್ಳುತ್ತಿದ್ದಳು. ಭೃಂಗದ ಝುಂಕೃತದಂತೆ, ಮದನ ಧನುರ್ಜ್ಯಾಲತೆಯ ಟಂಕಾರದಂತೆ, ವೀಣಾ ನಿನಾದದಂತೆ, ರತಿಯ ರತ್ನಕಾಂತೀ ಪ್ರನಾದದಂತೆ ಗಾಯನವು ಅವನ ಕಿವಿಗೆ ಬಿತ್ತು. ಅವನು ಪುಲಕಗೊಂಡ; ಸ್ತಬ್ದನಾಗಿ ನಿಂತ. ಕನ್ಯೆಯ ಕಲಕಂಠರವವು ಸ್ವರಮಂತ್ರದೇವತೆಯ ನೂಪುರರವದಂತೆ ಕೇಳಿಸಲು ಶ್ರೀಕಂಠನು ರಸೋತ್ಕಂಠಿತನಾದ. ಗೋರಿಗೊಳಗಾದ ಮೃಗದಂತೆ ಗಾನವನ್ನನುಸರಿಸಿ ಬಂದವನ ಚೆಲುವನ್ನು ನೋಡಿದ ಆ ಕನ್ನಿಕೆಯ ಮನಸ್ಸನ್ನು ಮದನನು ಅಲುಗಾಡಿಸಿದ. ಹೀಗೆ ತನ್ನನ್ನೊಲಿದ ಕನ್ನೆಯನ್ನು ಶ್ರೀಕಂಠನು ಲಂಕೆಗೊಯ್ದು ಧವಳಕೀರ್ತಿಯ ಜೊತೆ ಇದ್ದ.

ಈ ವಿಷಯ ಪುಷ್ಪೋತ್ತರನಿಗೆ ತಿಳಿಯಿತು. ತಾನು ಬೇಡಿದಾಗ ಕನ್ಯೆಯನ್ನು ಕೊಡದೆ, ಕುಲಾಚಾರವಾವುದನ್ನೂ ಲೆಕ್ಕಿಸದೆ ಈಗ ತನ್ನನ್ನು ಕಡೆಗಣಿಸಿ ತನ್ನ ತಂಗಿಯನ್ನು ಹಾರಿಸಿಕೊಂಡು ಹೋದನೆಂದು ಅವನ ಮೇಲೆ ಕೋಪ ಇಮ್ಮಡಿಸಿತು. ಲಂಕೆಯ ಮೇಲೆ ಬಲಸಮೇತ ಏರಿ ಹೋದ. ಅದನ್ನು ತಿಳಿದ ನಯಾನುವರ್ತಿಯಾದ ಧವಳಕೀರ್ತಿ ಯಾವುದಕ್ಕೂ ಮೊದಲು ಸಾಮವನ್ನನುಸರಿಸಿ ಎಂದು ತನ್ನ ಮಹತ್ತರರನ್ನು ಪುಷ್ಪೋತ್ತರನಲ್ಲಿಗಟ್ಟಿದ. ಅವರು ಬಂದು ಕಾಣಿಕೆಗಳನ್ನಿತ್ತು, 'ನಿಮ್ಮ ತಂಗಿಗೆ ಈತ ಅನುರೂಪನಾದ ವರ; ಭುಜಬಲ ವಿದ್ಯಾಬಲಗಳುಳ್ಳವನು. ಆದ್ದರಿಂದ ಪರಸ್ಪರ ಪ್ರೀತಿಸುತ್ತಿರುವ ಅವರಿಗೆ ಮದುವೆಯಾಗಲು ಅವಕಾಶ ಮಾಡಿಕೊಡಿ' ಎಂದು ನಮ್ಮ

ಬಳಿ ವಿದ್ಯಾಧರೇಂದ್ರರು ಹೇಳಿಕಳಿಸಿದ್ದಾರೆ" ಎಂದು ವಿನಂತಿಸಿಕೊಂಡರು. ಅದೂ ಸರಿಯೆನಿಸಿ ಪುಷ್ಪೋತ್ತರನು ಇದಕ್ಕೆ ಸಮ್ಮತಿಸಿ ವಾಪಸು ಹೋಗಿ, ಒಂದು ಶುಭದಿನ ಶುಭ ಮುಹೂರ್ತದಲ್ಲಿ ಪದ್ಮೋತ್ತರೆ-ಶ್ರೀಕಂಠರ ಮದುವೆಯನ್ನು ನೆರವೇರಿಸಿದ. ಮತ್ತೊಂದು ದಿನ ಅವನು, ಅಪಿತರೊಡನೆ ವಿಜಯಾರ್ಧ ವಿಷಯದಲ್ಲಿರುವುದು ಸರಿಯಲ್ಲವೆಂದೂ ವಾನರ ದ್ವೀಪದಲ್ಲಿ ನನ್ನೊಡನೆಯೇ ಇರು ಎಂದು ಶ್ರೀಕಂಠನಿಗೆ ತಿಳಿಯ ಹೇಳಿದ. ಅದನ್ನು ಒಪ್ಪಿದ ಶ್ರೀಕಂಠನು ಆ ದ್ವೀಪವನ್ನು ನೋಡಲೆಂದು ಬಂದ. ಬಂದೆಡೆ ಅವನಿಗೆ ವಾನರರು ಕಾಣಿಸಿದರು. ಅವರ ಸಹಾಯದಿಂದ ಕಿಷ್ಕಿಂಧಗಿರಿಯ ಮೇಲೆ ಹದಿನಾಲ್ಕು ಯೋಜನ ವಿಸ್ತೀರ್ಣದ ಒಂದು ನಗರವನ್ನು ನಿರ್ಮಿಸಿ ಅದಕ್ಕೆ ಕಿಷ್ಕಿಂಧಾಪುರವೆಂದು ಹೆಸರಿಟ್ಟು ಅರಸುಗೈಯ್ಯುತ್ತಿದ್ದ. ಕೆಲಕಾಲದ ಬಳಿಕ ಒಂದು ದಿನ, ನಂದೀಶ್ವರನ ಪೂಜೆಗೆಂದು ಅಚ್ಯುತೇಂದ್ರನೊಡನೆ ಹೋಗುತ್ತಿರಲು, ಮಾನುಷೋತ್ತರ ದ್ವೀಪದಿಂದಾಚೆಗೆ ಮನುಷ್ಯರಿಗೆ ಹೋಗಲವಕಾಶವಿಲ್ಲದ್ದರಿಂದ ಅವನ ವಿಮಾನ ಮುಂದೆ ಸರಿಯದಾಯಿತು. ಸರಿ ವಾಪಸೇನೋ ಬಂದ. ಆದರೆ ಅದೇ ಅವನ ವೈರಾಗ್ಯಕ್ಕೆ ನಿಮಿತ್ತವಾಯಿತು. ತನ್ನ ಮಗ ವಜ್ರಕಂಠನಿಗೆ ರಾಜ್ಯವನ್ನಿತ್ತು ಶ್ರೀಕಂಠನು ತಪಸ್ಸಿಗೆ ನಡೆದ; ಮುಂದೆ ಮುಕ್ತಿಯನ್ನು ಹೊಂದಿದ.

ಅವನ ಮಗ ವಜ್ರಕಂಠನು ವಾನರಪುರವನ್ನು ದೀರ್ಘಕಾಲ ಪರಿಪಾಲಿಸಿದ. ಅವನು ಒಮ್ಮೆ ತ್ರಿಕಾಲದರ್ಶಿಯರಾದ ಮಹರ್ಷಿಯೊಬ್ಬರನ್ನು ಕಂಡು ಪೂಜಿಸಿ ಧರ್ಮಶ್ರವಣಾನಂತರ, "ನಮ್ಮ ತಂದೆಗೆ ಅಚ್ಯುತೇಂದ್ರನಲ್ಲಿ ತುಂಬ ಪ್ರೀತಿಯುಂಟಾಗಲು ಕಾರಣವೇನು" ಎಂದು ಕೇಳಿದ. ಆಗ ಆ ಮುನೀಂದ್ರರು ಹೀಗೆಂದರು: ವೀತಶೋಕಪುರದಲ್ಲಿ ಅರ್ಹದ್ದತ್ತ ಎಂಬ ವ್ಯಾಪಾರಿಯಿದ್ದ. ಅವನಿಗೆ ಧನದತ್ತ ವಸುದತ್ತ ಎಂಬ ಮಕ್ಕಳು. ತಮ್ಮ ತಂದೆ ತಪಸ್ಸಿನಲ್ಲಿ ತೊಡಗಲು ಅವರು ಸ್ತ್ರೀನಿಮಿತ್ತ ಪರಸ್ಪರ ದ್ವೇಷಿಸತೊಡಗಿದರು. ಆದರೆ ಗುರೂಪದೇಶದಿಂದ ತಮ್ಮ ಮುಳಿಸನ್ನು ಬಿಟ್ಟು ತಪಸ್ಸುಗೈದರು. ಅಣ್ಣ ಅಚ್ಯುತೇಂದ್ರನಾದ; ತಮ್ಮ ಸ್ವಲ್ಪಕಾಲ ಸ್ವರ್ಗದಲ್ಲಿದ್ದು ಶ್ರೀಕಂಠನಾಗಿ ಹುಟ್ಟಿದ. ಅಚ್ಯುತೇಂದ್ರನನ್ನು ಕಂಡೊಡನೆ ಅವನಿಗೆ ಜಾತಿಸ್ಮರಣೆಯುಂಟಾಯಿತು. ಮನುಷ್ಯಕ್ಷೇತ್ರದಿಂದ ಅತ್ತ ತನಗೆ ಪ್ರವೇಶ ದೊರೆಯದ್ದರಿಂದ ವೈರಾಗ್ಯ ಹೊಂದಿ ತಪಸ್ಸು ಮಾಡಿದ. ಅದನ್ನು ಕೇಳಿ ವಜ್ರಕಂಠನೂ ವೈರಾಗ್ಯಪರಾಯಣನಾದ; ತನ್ನ ಮಗ ಇಂದ್ರಾಯುಧನಿಗೆ ರಾಜ್ಯವೊಪ್ಪಿಸಿ ಸುಗತಿಪ್ರಾಪ್ತನಾದ. ವೃಷಭಜಿನನಾಥನ ಸಮವಸರಣದವರೆಗಿನ ಭೂಭಾಗದಲ್ಲಿ ಅಪರಿಮಿತ ಭುಜಬಲರಾದ ರಾಜಕುಮಾರರು ಅವನ ವಂಶದಲ್ಲಿ ಹುಟ್ಟಿದರು.

ಕಾಲಾನುಕ್ರಮದಲ್ಲಿ, ಆ ಕುಲದಲ್ಲಿ ಅಪ್ರತಿಹತವೀರನಾದ ಅಮರಪ್ರಭನೆಂಬ ಕುಮಾರನು ಹುಟ್ಟಿದನು. ಅತ್ತ, ಲಂಕೆಯಲ್ಲಿ ಧವಳಕೀರ್ತಿಯ ಕುಲದಲ್ಲಿಯೂ ಹಲವರು ಅವಿಶ್ರಾಂತವಿಕ್ರಮರು ಅತಿಕ್ರಾಂತರಾಗಿ ಬೆಳಗಿದರು. ಅವರಲ್ಲಿ ಒಬ್ಬ ತ್ರಿಕೂಟ ಎಂಬುವವನು, ತನ್ನ ಮಗಳು ಗುಣವತಿಯನ್ನು ಅಮರಪ್ರಭನಿಗಿತ್ತು ಮದುವೆಮಾಡಲೆಂದು ಅವಳನ್ನು ಕಿಷ್ಕಂಧನಗರಕ್ಕೆ ಕರೆತಂದ. ವಿವಾಹವೇದಿಕೆಯಲ್ಲಿ ಪಂಚರತ್ನದ ಬಣ್ಣದ ಪುಡಿಗಳಿಂದ ರಚಿಸಿದ ಲತೆಗಳಲ್ಲಿ ವಾನರರ ರೂಪುಗಳನ್ನು ಕಂಡು ಆಕೆ ಬೆಚ್ಚಿದಳು. ಆಗ ಅಮರಪ್ರಭನು ಅವುಗಳನ್ನು ರಚಿಸಿದವರಾರೆಂದು ಕೋಪದಿಂದ ತನ್ನ ಗೃಹಮಹತ್ತರನನ್ನು ಕೇಳಿದ. "ನಿಮ್ಮ

ಪೂರ್ವಜನಾದ ಶ್ರೀಕಂಠನು ವಾನರಗಳನ್ನು ಮೆಚ್ಚಿದವನು; ಹೀಗಾಗಿ ನಿಮ್ಮ ಕುಲದವರು ಆಚರಿಸುವ ಉತ್ಸವಗಳಲ್ಲಿ ಹೀಗೆ ಬರೆಯುವುದು ರೂಢಿಯಾಗಿದೆ" ಎಂದು ಉತ್ತರಿಸಿದ. ಆಗ ಅಮರಪ್ರಭನ ಮುನಿಸು ಹೋಯಿತು. "ಎಲ್ಲರೂ ತುಳಿಯುವ ಜಾಗದಲ್ಲಿ ಇದನ್ನೇಕೆ ಬರೆಯಬೇಕು?" ಎಂದು ಪ್ರಶ್ನಿಸಿ, ಆ ಪದ್ಧತಿಯನ್ನು ರದ್ದುಮಾಡಿ, ವಾನರನ ಚಿತ್ರವನ್ನು ಬಾವುಟಗಳ ಮೇಲೂ ಕಿರೀಟಗಳ ಮೇಲೂ ಮಣಿಕನಕಗಳಿಂದ ರಚಿಸುವ ಪದ್ಧತಿಯನ್ನು ಆರಂಭಿಸಿದ. ಅಂದಿನಿಂದ ಆ ಕುಲದವರಿಗೆ ವಾನರಧ್ವಜರೆಂದೂ ವಾನರಕುಲದವರೆಂದೂ ಹೆಸರಾಯಿತು. ಕೆಲಕಾಲಾನಂತರ ಅಮರಪ್ರಭನು ರಾಜ್ಯವನ್ನು ತನ್ನ ಮಗನಾದ ಕಪಿಕೇತುವಿಗೆ ಕೊಟ್ಟು ತಾನು ಸನ್ಯಾಸವನ್ನು ಸ್ವೀಕರಿಸಿ ಮುಕ್ತಾಂಗನೆಯ ಪ್ರೇಮಕ್ಕೊಳಗಾದ.

ಹೀಗೆಯೇ ಖೇಚರಕುಲದ ಹಲವರು ಕಾಲಾನುಕಾಲಕ್ಕೆ ದೀಕ್ಷೆಯನ್ನು ಪಡೆದು ತಪಸ್ಸುಗೈದು ಮುಕ್ತಿಶ್ರೀಯನ್ನು ಸಂಪಾದಿಸಿದರು. ಅವರಲ್ಲಿ ವಿದ್ಯುತ್ಕೇಶನೆಂಬುವವನು ಲಂಕೆಗೆ ಅಧಿಪತಿಯಾದ; ಅವನ ಮಹಾದೇವಿ ಶ್ರೀಚಂದ್ರೆ ಎಂಬುವವಳು. ಅವರ ಮಗನೇ ಸುಕೇಶ. ಅತ್ತ ವಾನರಧ್ವಜರಲ್ಲಿ ಆ ಹೊತ್ತಿಗೆ ಮಹೋದಧಿ ಎಂಬುವವನು ರಾಜನಾಗಿದ್ದ. ಅವನಿಗೆ ವಿದ್ಯುತ್ಕೇಶನ ಬಗ್ಗೆ ಅಪಾರ ಪ್ರೀತಿ. ವಿದ್ಯುತ್ಕೇಶನು ಒಮ್ಮೆ ವನಕೇಳಿಯಲ್ಲಿ ನಿರತನಾಗಿದ್ದ. ಆಗ ಒಬ್ಬ ವಾನರನು ಶ್ರೀಚಂದ್ರೆಗೆ ಅಂಗಭಂಗವನ್ನು ಮಾಡಿದ ಕಾರಣದಿಂದ ವಿದ್ಯುತ್ಕೇಶನು ಅವನಿಗೆ ತಕ್ಕ ಶಾಸ್ತಿ ಮಾಡಿದ. ವಾನರನು ಆಗ ಚಾರಣಋಷಿಯೊಬ್ಬರ ಚರಣೋಪಾಂತವನ್ನು ಸಾರಿ ಸನ್ಯಸನವಿಧಿಯಿಂದ ದೇಹವನ್ನು ತೊರೆದು ದೇವಗತಿಯನ್ನು ಪಡೆದ. ಆಗ ಅವಧಿಯನ್ನು ಪ್ರಯೋಗಿಸಿ ಉಳಿದ ಕಪಿಕುಲಕ್ಕೆ ವಿದ್ಯುತ್ಕೇಶನು ಅಪಾಯವನ್ನು ಮಾಡುವನೆಂದು ಬಗೆದು ಪರ್ವತಾಕಾರದ ವಾನರಗಳನ್ನು ಸೃಷ್ಟಿಸಿದ. ಅವುಗಳು ಮರಗಳನ್ನು ಕಿತ್ತು, ಬೆಟ್ಟಗಳನ್ನೇ ಎತ್ತಿ ರೌದ್ರಾಕಾರರಾಗಿ ತನ್ನತ್ತ ಬರುವುದನ್ನು ಕಂಡ ವಿದ್ಯುತ್ಕೇಶನು ಓಡಿದ. ತನ್ನ ಕಾಂತಾಜನರೊಡನೆ ಸೇರಿ ದಿವ್ಯಮುನಿಗಳ ಮೊರೆ ಹೊಕ್ಕ. ಅಷ್ಟರಲ್ಲಿ 'ದುರಾತ್ಮನನ್ನು ಸಂಹರಿಸುತ್ತೇನೆ' ಎಂದು ಕೋಪಾವಿಷ್ಟನಾಗಿ ಬೆನ್ನಟ್ಟಿ ಬಂದ ವಾನರಚರನನ್ನು ಕಂಡು ಆ ಮುನಿಯು ಅವನ ಮುನಿಸು ಇಳಿಯುವಂತೆ ಧರ್ಮೋಪದೇಶವನ್ನು ಮಾಡಿ, ವಿದ್ಯುತ್ಕೇಶನನ್ನು ಕುರಿತು ಹೀಗೆಂದ: "ನೀವಿಬ್ಬರೂ ಒಬ್ಬರನ್ನೊಬ್ಬರು ಎಷ್ಟೋ ಜನ್ಮಗಳಲ್ಲಿ ಕೊಂದುಕೊಳ್ಳುತ್ತ ಕೊನೆಗೆ ಮನುಷ್ಯ ಜನ್ಮವನ್ನು ಪಡೆದಾಗ, ನೀನು ಶ್ರಾವಸ್ತಿಪುರದಲ್ಲಿ ಯಶೋದತ್ತನಾಗಿ ಹುಟ್ಟಿ ಕರ್ಮೋಪಶಮದಿಂದ ಜಿನದೀಕ್ಷೆಯನ್ನು ಪಡೆದು ಉಗ್ರ ತಪಗೈಯ್ಯುತ್ತ ಕಾಶೀವಿಷಯದಲ್ಲಿನ ಧರಣೀಭೂಷಣವೆಂಬ ಪರ್ವತದ ಮೇಲೆ ಪ್ರತಿಮಾಯೋಗದಲ್ಲಿದ್ದ. ಆ ಜನ್ಮದಲ್ಲಿ ಬೇಡನಾಗಿ ಹುಟ್ಟಿದ್ದ ಈ ವಾನರನು ಬೇಟೆಯ ಕಾರಣದಿಂದ ತಿರುಗಾಡುತ್ತ ಬಂದು ನಿನ್ನನ್ನು ನೋಡಿ ಬೈಗುಳದ ಮಾತನ್ನಾಡಿದ. ಆಗ ನೀನು ಮನಃಕಷಾಯವನ್ನು ಹೊಂದಿದೆ; ಕೆಲಕಾಲದ ಮೇಲೆ ಸತ್ತು ಜ್ಯೋತಿರಮರಗತಿಯನ್ನು ಪಡೆದೆ. ಅನಂತರ ವಿದ್ಯುತ್ಕೇಶನಾಗಿ ಹುಟ್ಟಿದ್ದೀಯೆ. ಆ ಜನ್ಮದ ಬೇಡನೂ ಸತ್ತು ಕೋಡಗನಾಗಿ ಹುಟ್ಟಿ, ಮುನಿಯ ಆಶೀರ್ವಾದದಿಂದ ಮಹೋದಧಿಯೆಂಬ ದೇವನಾಗಿ ಹುಟ್ಟಿದ" ಎಂದು ಅವರಿಬ್ಬರ ಪೂರ್ವ ವೃತ್ತಾಂತವನ್ನು ಆ ದೇಶಿಕೇಂದ್ರನು ತಿಳಿಸಿದ. ಮುನಿಗಳ ಈ ಮಾತುಗಳನ್ನು ಕೇಳಿ ಅವರಿಬ್ಬರೂ ತಮ್ಮ ಮನಃಕ್ಲೇಶವನ್ನು ತೊರೆದರು.

ವಿದ್ಯುತ್ಕೇಶನು ತನ್ನ ಮಗನಾದ ಸುಕೇಶನಿಗೆ ಅರಸುತನವನ್ನೊಪ್ಪಿಸಿ ದೀಕ್ಷೆ ಪಡೆದು ತಪಗೈದು ದಿವಕ್ಕೆ ಸಂದ. ಇತ್ತ, ವಾನರದ್ವೀಪಾಧಿಪತಿಯಾದ ಮಹೋದಧಿಯೂ ಅನಂತಕಾಲ ಅರಸುಗೈದು, ಕೊನೆಗೆ ತನ್ನ ಸುತನಾದ ಪ್ರತಿಬಿಂದುವಿಗೆ ಅವನಿಯನ್ನಿತ್ತು ಭವಸಾಗರವನ್ನು ದಾಟಿದ. ಪ್ರತಿಬಿಂದುವೂ ಕಾಲಾನುಕಾಲಕ್ಕೆ ತನ್ನ ಮಕ್ಕಳಾದ ಕಿಷ್ಕಂಧನಿಗೂ ಅಂಧ್ರಕನಿಗೂ ರಾಜ್ಯವನ್ನಿತ್ತು ಸಂಸಾರದಿಂದ ಪಾರಾದರು.

ಇತ್ತ, ವಿಜಯಾರ್ಧನಗೋಪತ್ಯಕದ ಆದಿತ್ಯನಗರದ ದೊರೆ ಮಂದರಮಾಲಿಯ ಮಗಳಾದ ಶ್ರೀಮಾಲೆಯು ಶಚೀದೇವಿ-ರತಿದೇವಿಯರನ್ನು ಮೀರಿಸುವ ಚೆಲುವಿನಿಂದ ಬೆಳೆದಳು. ಅವಳ ಸ್ವಯಂವರಕ್ಕೆಂದು ದಕ್ಷಣೋತ್ತರ ಶ್ರೇಣಿಗಳ ಖಚರಕುಮಾರರೆಲ್ಲರೂ, ವಿದ್ಯಾಧರಚಕ್ರವರ್ತಿಯಾದ ಅಶನಿವೇಗನ ಮಗ ವಿಜಯಸಿಂಹನೂ, ಕಪಿಧ್ವಜರಾದ ಕಿಷ್ಕಿಂಧೆ ಆಂಧ್ರಕರೂ, ಲಂಕಾಧೀಶನಾದ ಸುಕೇಶನೂ ಇನ್ನೂ ಅನೇಕ ಖಚರಾಧೀಶ್ವರರೂ ಬಂದರು. ಅವರೆಲ್ಲ ಸ್ವಯಂವರ ಮಂಟಪದ ಪಂಚರತ್ನಖಚಿತವಾದ ಕಾಂಚನಪೀಠದಲ್ಲಿ ಮಂಡಿತರಾದರು. ಮಾಲೆಯನ್ನು ಹಿಡಿದ ಶ್ರೀಮಾಲೆಯು ಮನ್ಮಥರೂಪನಾದ ಕಿಷ್ಕಿಂಧ ಖೇಚರನಿಗೆ ಮಾಲೆಯನ್ನು ಹಾಕಿದಳು. ಮಿಕ್ಕವರು ಸುಮ್ಮನಿದ್ದರೂ ಅದರಿಂದ ಕೋಪಗೊಂಡ ವಿಜಯಸಿಂಹನು ಹರಿಣಾಕ್ಷಿಯನ್ನು ತಾನು ವಶಮಾಡಿಕೊಳ್ಳುವೆನೆಂದು ಬಗೆದು ಕಾಳಗಕ್ಕುದ್ಯುಕ್ತನಾದ. ಆಗ ಅಂಧ್ರಕ ಸುಕೇಶರು ಕಿಷ್ಕಿಂಧ-ಶ್ರೀಮಾಲೆಯರನ್ನು ಕಿಷ್ಕಿಂಧಪುರಕ್ಕೆ ಕಳಿಸಿ ತಾವು ವಿಜಯಸಿಂಹನೊಡನೆ ಯಮನೋಪಾದಿಯಲ್ಲಿ ಕಾದಲು ತೊಡಗಿದರು. ಕೊನೆಗೆ ಅಂಧ್ರಕನು ವಿಜಯಸಿಂಹನನ್ನು ದೇವತಾಸ್ತ್ರೀಯರೆಡೆಗೆ ಕಳಿಸಿದನು. ಆನಂತರ ಅಂಧ್ರಕ-ಸುಕೇಶರು ಕಿಷ್ಕಿಂಧಪುರವನ್ನು ಸೇರಿ ಸಮರಸನ್ನದ್ಧರಾದರು. ಇತ್ತ ಅಶನಿವೇಗನು ತನ್ನ ಮಗನ ಸಾವಿನ ವಿಷಯ ತಿಳಿದು ಶೋಕಕ್ರೋಧಗಳಿಂದ ಕೂಡಿ ಸೈನ್ಯಸಮೇತ ಗಗನವೀಧಿಯಲ್ಲಿ ಬಂದು ಕಿಷ್ಕಿಂಧಪುರವನ್ನು ಮೂವಳಸಾಗಿ ಮುತ್ತಿ ಅಂಧ್ರಕನನ್ನು ಯಮಪುರಿಗಟ್ಟಿದ. ಇದರಿಂದ ಗಾಬರಿಗೊಂಡ ಸುಕೇಶ-ಕಿಷ್ಕಿಂಧರು ಓಡಿ ಹೋಗಿ ಪಾತಾಳಲಂಕೆಯನ್ನು ಸೇರಿಕೊಂಡರು. ಅಶನಿವೇಗನು ಸುಕೇಶನ ರಾಜಧಾನಿಯಾದ ಲಂಕೆಯನ್ನು ನಿರ್ಘಾತ ಎಂಬುವವನಿಗಿತ್ತು ತನ್ನ ರಾಜಧಾನಿಗೆ ಹೋದ. ಸ್ವಲ್ಪ ದಿವಸಗಳ ನಂತರ, ಒಮ್ಮೆ ಅವನು ಹರ್ಮ್ಯದ ಮೇಲೆ ನಿಂತಿರಲು ಆಗಸದಲ್ಲಿ ಹರಡಿಕೊಂಡಿದ್ದ ಮುಗಿಲನ್ನು ನೋಡುತ್ತ ನಿಂತ. ಅನತಿಕಾಲದಲ್ಲಿಯೇ ಮೋಡವೆಲ್ಲ ಚದುರಿ ಹೋದದ್ದನ್ನು ಕಂಡು ಅವನ ಸಾಮ್ರಾಜ್ಯತೃಷ್ಣೆಯು ಆಲಿಕಲ್ಲಿನಂತೆ ಕರಗಿ ಹೋಯಿತು; ವೈರಾಗ್ಯ ಮಡುಗಟ್ಟಿತು. ತನ್ನ ಮಗನಾದ ಸಹಸ್ರಾರನಿಗೆ ರಾಜ್ಯವನ್ನಿತ್ತು ಅಶನಿವೇಗನು ದೀಕ್ಷೆಯನ್ನು ಪಡೆದ.

ಈ ಕಡೆ ಕಿಷ್ಕಿಂಧನು ಮಧುಪರ್ವತದ ಮೇಲೆ ಊರೊಂದನ್ನು ನಿರ್ಮಿಸಿ ಶ್ರೀಮಾಲೆಯೊಡಗೂಡಿ ಸುಖದಿಂದ ಬಾಳುವೆ ಮಾಡುತ್ತಿದ್ದ. ಅವರು ಕಾಲಕ್ರಮದಲ್ಲಿ ಋಕ್ಷಜ ಸೂರ್ಯಜರೆಂಬ ಗಂಡುಮಕ್ಕಳನ್ನೂ ಸೂರ್ಯಮಾಲೆಯೆಂಬ ಹೆಣ್ಣುಮಗುವನ್ನೂ ಪಡೆದರು. ಕಿಷ್ಕಿಂಧನು ತನ್ನ ಮಗಳನ್ನು ಮೇಘಪುರದರಸು ಮೇರುವಿನ ಮಗನಾದ ಸಿಂಹಮರ್ದನನಿಗಿತ್ತು ಮದುವೆ ಮಾಡಿದ. ಅವನು ಕರ್ಣಪರ್ವತದ ಮೇಲೆ ಕರ್ಣಕುಂಡಲವೆಂಬ ಊರನ್ನು ನಿರ್ಮಿಸಿ ಸಂತೋಷದಿಂದ ಬಾಳುತ್ತಿದ್ದ.

ಇತ್ತ ಖೇಚರಕೈರವಕುಲಚಂದ್ರನೆನಿಸಿದ ಸುಕೇಶನಿಗೆ ಮಾಲಿ ಸುಮಾಲಿ ಮಾಲ್ಯವಂತರೆಂಬ ಮಕ್ಕಳಾದರು. ಅವರಿಗೆ ನವಯೌವನ ಪ್ರಾಪ್ತವಾಯಿತು, ಅವರು ಸಕಲ ವಿದ್ಯೆಗಳನ್ನೂ ಕಲಿತರು, ಅನಿವಾರ್ಯವೀರ್ಯರಂತೆ ಬೆಳೆದರು. ತಮಗೆ ಬೇಕಾದೆಡೆಗಳಲ್ಲಿ ಓಡಾಡಿಕೊಂಡು ಮನಬಂದಂತೆ ಇರುತ್ತಿದ್ದರು. ಆಗ ಸುಕೇಶನು ಅವರನ್ನು ಕರೆದು, ದಕ್ಷಿಣಸಮುದ್ರಕ್ಕೆ ಮಾತ್ರ ಹೋಗದಿರಿ ಎಂದು ಎಚ್ಚರಿಕೆಯನ್ನಿತ್ತ. ಅದಕ್ಕೇನು ಕಾರಣವೆಂದು ಅವರು ಸಹಜವಾಗಿ ಕೇಳಿದರು. ತಮಗೆ ತೋಯದವಾಹನನಿಂದ ವಂಶಪಾರಂಪರ್ಯವಾಗಿ ಬಂದ ಲಂಕಾಪುರವನ್ನು ಅಶನಿವೇಗನು ನಿರ್ಘಾತನಿಗೆ ಕೊಟ್ಟಿದ್ದಾನೆ, ಅವನಾದರೋ ಆ ನಗರವನ್ನು ತನಗೆ ಗೊತ್ತಿರುವ ಅನೇಕ ವಿದ್ಯೆಗಳ ಬಲದಿಂದ ಇತರರಿಗೆ ಪ್ರವೇಶಿಸಲು ಕಷ್ಟಕರವಾಗುವಂತೆ ಮಾಡಿ ಕಾಯ್ದುಕೊಂಡಿದ್ದಾನೆ; ಅವನೇನಾದರೂ ಇವರನ್ನು ಕಂಡರೆ ಕೊಲ್ಲಬಹುದು ಎಂಬ ತನ್ನ ಭಯವನ್ನು ಮಕ್ಕಳಲ್ಲಿ ತೋಡಿಕೊಂಡ. ಅವರಿಗೆ ಒಳಗೊಳಗೇ ಕೋಪವುಕ್ಕಿ ಬಂತು. ಇಲ್ಲಿಯವರೆಗೂ ತಮಗೆ ಈ ವಿಷಯ ತಿಳಿದಿರಲಿಲ್ಲ, ಅದು ಗೊತ್ತಾದ ಬಳಿಕವೂ ಸುಮ್ಮನಿರುವುದು ತಮ್ಮ ಗೌರವಕ್ಕೆ ಕೇಡು ಎಂದು ಬಗೆದು ಅವರು ಅಸಂಖ್ಯಾತಬಲಸಮೇತರಾಗಿ ಪಾತಾಳಲಂಕೆಯಿಂದ ಹೊರಟು ಮರುನ್ಮಾರ್ಗದಿಂದ ಬಂದು ಲಂಕೆಯನ್ನು ಮುತ್ತಿದರು. ಸೆರಗುಬೆರಗನ್ನು ಬಗೆಯದ ನಿರ್ಘಾತನು ಹೊರಬಂದು ಇವರೊಡನೆ ಯುದ್ಧಕ್ಕೆ ನಿಂತ. ಆದರೆ ಕೊನೆಗೆ ಮಾಲಿಯ ನಿಶಿತಾಸ್ತ್ರಗಳಿಗೆ ಆಹುತಿಯಾದ. ಹೀಗೆ ಆ ಅಣ್ಣತಮ್ಮಂದಿರು ಕುಲಪರಿಭವವನ್ನು ನೀಗಿ, ತಮ್ಮ ತಾಯ್ತಂದೆಯರನ್ನು ಲಂಕೆಗೆ ಬರಮಾಡಿಕೊಂಡು ಅಲ್ಲಿಯೇ ಸುಖವಾಗಿ ಬಾಳಲು ತೊಡಗಿದರು. ಉಭಯಶ್ರೇಣಿಯ ಖೇಚರರೆಲ್ಲ ಅವರಿಗೆ ಕಪ್ಪಕಾಣಿಕೆಗಳನ್ನೊಪ್ಪಿಸಿದರು. ಹೀಗೇ ಕೆಲ ಕಾಲ ಸರಿಯಿತು. ಸುಕೇಶನು ತನ್ನ ಮಕ್ಕಳಿಗೆ ಅಧಿರಾಜ-ಯುವರಾಜಪಟ್ಟಗಳನ್ನು ಕಟ್ಟಿ ಕಿಷ್ಕಿಂಧನೊಡಗೂಡಿ ತಪಸ್ಸಿಗೆ ಹೋದ.

ಇತ್ತ, ರಥನೂಪುರಚಕ್ರವಾಳಪುರವನ್ನಾಳುತ್ತಿದ್ದ ಸಹಸ್ರಾರನ ಮಡದಿಗೆ ಎಳವಸಿರಲ್ಲಿ ಇಂದ್ರನ ವೈಭವವನ್ನು ಕಾಣಬೇಕೆಂಬ ಬಯಕೆಯುಂಟಾಯಿತು. ತನ್ನ ವಿದ್ಯೆಯಿಂದ ಸಹಸ್ರಾರನು ಅವಳ ಆಸೆಯನ್ನು ಪೂರೈಸಿದ. ನವಮಾಸ ಕಳೆಯಿತು; ಗಂಡುಮಗುವಾಯಿತು. ಗರ್ಭಿಣಿಯಗಿ ಇಂದ್ರನ ವೈಭವವನ್ನು ಕಾಣಲು ಆಸೆಪಟ್ಟದ್ದರಿಂದ ಅಧಕ್ಕೆ ಇಂದ್ರನೆಂದೇ ಹೆಸರಿಟ್ಟರು. ಅವನು ಬೆಳೆದು ಎಲ್ಲ ವಿದ್ಯೆಗಳನ್ನೂ ಕಲಿತ. ಉಭಯಶ್ರೇಣಿಯ ಖೇಚರರನ್ನೆಲ್ಲ ಅಧೀನಗೊಳಿಸಿಕೊಂಡು ಚಕ್ರವರ್ತಿ ಪದವಿಯನ್ನು ಪಡೆದ. ಈ ಇಂದ್ರನಿಗೆ ವಿಜಯಾರ್ಧಪರ್ವತವೇ ಸ್ವರ್ಗ, ಖಚರಕಾಂತೆಯರೇ ರಂಭೆ, ಊರ್ವಶಿ, ಸುಕೇಶಿಯರೆಂಬ ದೇವಕಾಂತೆಯರು, ತನ್ನ ಆನೆಯೇ ಐರಾವಣ, ತನ್ನ ಕುದುರೆಯೇ ಉಚ್ಚೈಶ್ರವಸ್ಸು, ತನ್ನ ಅನುಚರನೇ ಹರಿಣಕೇಸರಿ ಹೆಸರಿನ ಸೇನಾಧಿಪತಿ, ತನ್ನ ಗಾಯಕರೇ ತುಂಬುರುನಾರದರು, ತನ್ನ ಮುಖ್ಯಪುರುಷರೇ ಲೋಕಪಾಲಕರು, ತನ್ನ ಸಭೆಯೇ ಸುಧರ್ಮ, ತನ್ನ ಸೇನೆಯೇ ದೇವಸೇನೆ, ತನ್ನ ಸಾಮಾನ್ಯವಾದ ಆಯುಧವೇ ವಜ್ರಾಯುಧ, ತನ್ನ ವಿಮಾನವೇ ಋತುವಿಮಾನ, ತನ್ನ ಪುರೋಹಿತರೇ ಅಶ್ವಿನೀ ಮುಂತಾದ ಅಷ್ಟವಸುಗಳು, ತನ್ನ ಕಿನ್ನರಪುರದವರೇ ಕಿನ್ನರರು, ತನ್ನ ಗಂಧರ್ವಪುರದವರೇ ಗಂಧರ್ವರು, ತನ್ನ ಮಂತ್ರಿಮುಖ್ಯನೇ ಬೃಹಸ್ಪತಿ ಎಂದುಕೊಂಡು

ತಾನು ಇಂದ್ರ ಹೆಸರಿನವನಾದರೂ ತಾನೇ ನಿಜವಾದ ಇಂದ್ರನೆಂದು ಬಗೆದು, ತನ್ನ ಪುರಾಕೃತ ಪುಣ್ಯಬಲದಿಂದ ನಲವತ್ತೆಂಟು ಸಾವಿರ ವರ್ಷಗಳ ಕಾಲ ವೈಭವದಿಂದ ರಾಜ್ಯವಾಳಿದ.

ಇತ್ತ, ತನಗೆ ಕಪ್ಪವೀಯುತ್ತಿದ್ದ ಖಚರರು ಇಂದ್ರನನ್ನು ಸೇರಿ ತನ್ನ ಆಜ್ಞೆಯನ್ನು ಪಾಲಿಸದೆ ತಿರಸ್ಕಾರದ ಮಾತುಗಳನ್ನಾಡಿದುದನ್ನು ಚರರಿಂದ ತಿಳಿದು ಮಾಲಿಯ ಕೋಪೋದ್ರಿಕ್ತನಾಗಿ ಮೇರೆಯಿಲ್ಲದಷ್ಟು ಸೇನೆಯಿಂದೊಡಗೂಡಿ ನಡೆದು ವಿಜಯಾರ್ಧಶೈಲವನ್ನು ಸೇರಿದ. ಅವನೊಡನೆ ಅವನ ಒಡಹುಟ್ಟಿದ ಸುಮಾಲಿ ಮಾಲ್ಯವಂತರೂ, ಕಿಷ್ಕಿಂಧನ ಮಕ್ಕಳದ ಋಕ್ಷಜ ಸೂರ್ಯಜರೂ ಇನ್ನೂ ಅನೇಕ ಮಂದಿ ಹಿರಿಯ ನಾಯಕರೂ ಸೇರಿದರು. ಈ ವಿಷಯ ತಿಳಿದ ಇಂದ್ರನು ರಥನೂಪುರಚಕ್ರವಾಳಪುರದಿಂದ ತನ್ನ ಐರಾವತವನ್ನೇರಿ ಬಂದು ಮಹಾಯುದ್ಧದಲ್ಲಿ ತೊಡಗಿದ. ಮಾಲಿಯು ಇಂದ್ರನ ಮೇಲೆ ಹರಿತವಾದ ಬಾಣಗಳ ಮಳೆಯನ್ನೇ ಸುರಿಸಿದ. ಆದರೇನು, ಇಂದ್ರನು ಅವನನ್ನು ತನ್ನ ದಿವ್ಯಾಸ್ತ್ರದಿಂದ ಹೊಡೆದು ಯಮಸದನಕ್ಕೆ ಕಳಿಸಿದ. ಅದನ್ನು ಕಂಡ ಸುಮಾಲಿ ಮಾಲ್ಯವಂತರೂ ಋಕ್ಷಜ ಸೂರ್ಯಜರೂ ಹಿರಿಯ ನಾಯಕರೂ ಓಡಿಹೋಗಿ ಪಾತಾಳಲಂಕೆಯನ್ನು ಸೇರಿಕೊಂಡರು. ಆಗ ಇಂದ್ರನು ಅಪಹಾರತೂರ್ಯವನ್ನು ಹೊಯಿಸಿ ಊರಿಗೆ ಮರಳಿದ. ಜನರೆಲ್ಲ ಅವನನ್ನು ಸಂಭ್ರಮದಿಂದ ಸ್ವಾಗತಿಸಿದರು. ಹೀಗೆ ಗೆಲುವು ಸಾಧಿಸಿದ ಇಂದ್ರನು ಯಕ್ಷಪುರದ ವಿಶ್ವಾವಸು–ರೋಹಿಣಿಯರ ಮಗನಾದ ವೈಶ್ರವಣನಿಗೆ ಲೋಕಪಾಲ ಎಂಬ ಪಟ್ಟವನ್ನು ಕಟ್ಟಿ ಲಂಕೆಯನ್ನು ಅವನ ಕೈಗೊಪ್ಪಿಸಿದ. ಹಾಗೆಯೇ ಯಮಧರ ಎಂಬ ವಿದ್ಯಾಧರನೊಬ್ಬನಿಗೆ ಲೋಕಪಾಲ ಎಂಬ ಹೆಸರಿನೊಡನೆ ಕಿಷ್ಕಿಂಧಪುರದ ಯಾಜಮಾನ್ಯವನ್ನು ವಹಿಸಿ ಸುಖವಾಗಿದ್ದ.

ಈ ಕಡೆ ಪಾತಾಳಲಂಕೆಯಲ್ಲಿ ಸುಮಾಲಿಗೂ ಪ್ರೀತಿಮತಿಗೂ ರತ್ನಶ್ರವನು ಮಗನಾಗಿ ಹುಟ್ಟಿದ. ಅವನು ಬೆಳೆದು ಪುಷ್ಪೋತ್ತರ ಎಂಬ ಮಹಾ ಅರಣ್ಯದಲ್ಲಿ ಅನೇಕ ವಿದ್ಯೆಗಳನ್ನು ಕಲಿತು ಸಿದ್ಧಪರಮೇಷ್ಠಿಗಳನ್ನು ಸ್ತುತಿಸುವ ಸಮಯದಲ್ಲಿ ಕೌತುಕಮಂಗಳಪುರವನ್ನಾಳುತ್ತಿದ್ದ ವ್ಯೋಮಭಾನುವೆಂಬ ವ್ಯೋಮಚರನೊಬ್ಬ ತನ್ನ ಮಗಳಾದ ಕೈಕಸಿಯನ್ನು ಅನೇಕ ಮಂದಿ ಮುನಿಮುಖ್ಯರ ಆದೇಶದಂತೆ ತಂದು ಅವನಿಗೆ ಒಪ್ಪಿಸಿದ. ಆಗ ರತ್ನಶ್ರವನು ಅಲ್ಲಿಯೇ ಪುಷ್ಪೋತ್ತರವೆಂಬ ಪಟ್ಟಣವನ್ನು ಕಟ್ಟಿಸಿ ತನ್ನ ತಾಯ್ತಂದೆಯರನ್ನು ಅಲ್ಲಿಗೇ ಕರೆಸಿಕೊಂಡು ಶುಭದಿನಮುಹೂರ್ತದಲ್ಲಿ ಕೈಕಸಿಯನ್ನು ಮದುವೆಯಾದ.

ಒಮ್ಮೆ ಕೈಕಸಿಯು ಚತುರ್ಥಸ್ನಾನಾನಂತರ ಗಂಡನ ಬಳಿ ಬಂದು ಮಲಗಿದಾಗ ಒಂದು ಕನಸು ಕಂಡಳು: ಬೆಳಗಿನ ಜಾವದ ಕನಸು; ಅದರಲ್ಲಿ ಸಿಂಹವನ್ನೂ ಬಾಲಸೂರ್ಯನನ್ನೂ ಚಂದ್ರನನ್ನೂ ಕಂಡು ಎಚ್ಚರಗೊಂಡಳು. ತನ್ನ ಗಂಡನಿಗೆ ಅದರ ವಿಷಯವನ್ನರುಹಿದಳು. ಅವನಿಗೆ ಸಂತಸವಾಯಿತು. ಸಿಂಹವನ್ನು ಕಂಡದ್ದರಿಂದ ಅವಳಿಗೆ ಭರತಾರ್ಧಕ್ಕೆ ಅಧಿರಾಜನಾಗುವ ಒಂದು ಮಗುವು ಹುಟ್ಟುವುದಾಗಿಯೂ, ಸೂರ್ಯಚಂದ್ರರನ್ನು ಕಂಡದ್ದರಿಂದ ಅವಳು ಕಲಾಕುಶಲನೂ ತತ್ವಜ್ಞನೂ ಆದ ಮತ್ತೊಬ್ಬ ಮಗನನ್ನೂ ಪಡೆಯುತ್ತಾಳೆ ಎಂದೂ ರತ್ನಶ್ರವನು ಸ್ವಪ್ನಫಲಗಳನ್ನು ವಿವರಿಸಿದ. ಅದರಂತೆಯೇ ಆಕೆ ಕಾಲಕ್ರಮಕ್ಕೆ ಗರ್ಭ ಧರಿಸಿದಳು. ಮಹಾ ಪರಾಕ್ರಮಿಯೊಬ್ಬ

ಅವಳ ಬಸಿರಲ್ಲಿ ಬೆಳೆಯುತ್ತಿದ್ದುದರಿಂದ ಅವಳಿಗೆ ಜಡತ್ವವಾಗಲೀ ಆಕಳಿಕೆಯಾಗಲೀ ಇರಲಿಲ್ಲ, ಬಳಲಿಕೆಯಿರಲಿಲ್ಲ, ಆಕೆ ಸಣ್ಣಗಾಗಲಿಲ್ಲ. ಆಗಾಗ ಅವಳು ಹೂಂಕಾರದೊಡನೆ ಕಣ್ಣು ಕೆಂಪಗೆ ಮಾಡಿಕೊಂಡು ದಿಕ್ಕುಗಳನ್ನು ನೋಡುತ್ತಿದ್ದಳು, ಕತ್ತಿಯ ಹೊಳೆಯುವ ಅಲಗಿನಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಿದ್ದಳು. ಹೊಟ್ಟೆಯಲ್ಲಿದ್ದವನು ಭರತಖಂಡವನ್ನೆಲ್ಲ ಪರಿರಕ್ಷಿಸುವವನೆಂಬುದನ್ನು ಸೂಚಿಸುವಂತೆ ಊರಿನಲ್ಲಿ ಪ್ರತಿದಿನವೂ ಸ್ವಲ್ಪ ಮಳೆಯಾಗುತ್ತಿತ್ತು. ರಣರಸಿಕನೂ ಜಗದ್ವಿಜಯಿಯೂ ಆದ ಮಹಾವೀರನೊಬ್ಬ ಖೇಚರಕಾಂತೆಯ ಗರ್ಭದಲ್ಲಿ ಬೇಳೆಯುತ್ತಿದ್ದಾನೆ; ಅವನು ಹುಟ್ಟಿ ಬೆಳೆದ ಮೇಲೆ ಅನೇಕ ಮಂದಿ ವೈರಿರಾಜರನ್ನು ಕೊಂದು ತಮಗೆ ಅವರ ಮಾಂಸದ ಊಟವನ್ನು ಒದಗಿಸುತ್ತಾನೆ ಎಂದು ಭೂತಕೋಟಿಯೆಲ್ಲ ಖೇಚರ ರಾಜಧಾನಿಯಲ್ಲಿ ಹರೆ ಕುಟ್ಟಿ ಕುಣಿದಾಡಿದವು.

ಈ ಪರಿಯ ಸೂಚನೆಗಳಿಂದ ಗರ್ಭಸ್ಥ ಮಗುವಿನ ಅದಟು ಅಳುರ್ಕೆಗಳ ಬಗ್ಗೆ ವದಂತಿಯು ಜನಜನಿತವಾಯಿತು. ಕೈಕಸಿಯ ಬಸಿರು ಬೆಳೆದು ಒಂಬತ್ತು ತಿಂಗಳುಗಳಾದವು; ಆನಂತರ ಹತ್ತನೆಯ ದಿವಸದಂದು ಕೂಸನ್ನು ಹೆತ್ತಳು. ಆ ಮಗುವಿನ ಮುಖವು ಭೀಮನೆಂಬ ರಾಕ್ಷಸನೊಬ್ಬನು ಕೊಟ್ಟಿದ್ದ ನವಮುಖ ರತ್ನಭೂಷಣದ ಮಾಣಿಕ್ಯಗಳಲ್ಲಿ ಪ್ರತಿಬಿಂಬಿತವಾಯಿತು. ಅದಕ್ಕೇ ಮಗುವಿಗೆ ದಶಮುಖನೆಂಬ ಹೆಸರನ್ನಿಟ್ಟರು. ಆನಂತರ ಕೈಕಸಿಯ ಗರ್ಭದಲ್ಲಿ ಅನುಕ್ರಮವಾಗಿ ಭಾನುಕರ್ಣ, ಚಂದ್ರನಖಿ ಮತ್ತು ವಿಭೀಷಣ ಎಂಬ ಮಕ್ಕಳಾದವು. ಎಲ್ಲ ಬೆಳೆದರು; ಮೂವರೂ ಗಂಡುಮಕ್ಕಳು ಪ್ರಭು ಮಂತ್ರೋತ್ಸಾಹ ಶಕ್ತಿತ್ರಯವೇ ಮೂರ್ತಗೊಂಡಂತೆ ಎಲ್ಲ ಶಾಸ್ತ್ರಗಳಲ್ಲಿಯೂ ಪಾರಂಗತರೆನಿಸಿರು.

ಈ ಮಕ್ಕಳೆಲ್ಲ ಒಂದು ದಿನ ನಾಯಕರತ್ನಗಳಂತೆ ಆಸ್ಥಾನದಲ್ಲಿ ಕುಳಿತಿರುವಾಗ ನಿಸ್ವನದಿಂದ ಕಿವಿಗೆ ಸಂತಸವನ್ನುಂಟುಮಾಡುವ ಮಣಿಗಂಟೆಗಳು, ಕೇತು ಪಲ್ಲವ ಹಸ್ತಾಭಿನಯವನ್ನು ಮಾಡುವ ಮಣಿ ವಿಮಾನಶ್ರೇಣಿಗಳು, ಕಾಮನಬಿಲ್ಲುಗಳನ್ನು ಸೃಷ್ಟಿಸುವ ತನ್ನ ಪಂಚರತ್ನಾಭರಣಗಳು ಇವುಗಳಿಂದ ಕೂಡಿ ವೈಶ್ರವಣನು ದಿವಿಜೇಂದ್ರನು ಖಚರೇಂದ್ರನಲ್ಲ ಎಂಬಂತೆ ಆಗಸಬೀದಿಯಲ್ಲಿ ಹಾರಿಹೋಗುತ್ತಿದ್ದ. ಆಗ ದಶಗ್ರೀವನು ತನ್ನ ಕೊರಳೆತ್ತಿ ನೋಡಿ, ಅವನಾರೆಂದು ತಾಯಿಯನ್ನು ಬೆಸಗೊಂಡ. ಅವನು ತಮ್ಮಕ್ಕನ ಮಗನಾದ ವೈಶ್ರವಣ; ಉಭಯಶ್ರೇಣಿಗೆ ಅರಸನಾದ ಇಂದ್ರನೆಂಬ ವಿದ್ಯಾಧರಚಕ್ರವರ್ತಿಯು ಇವನ ತಾತನಾದ ಮಾಲಿಯನ್ನು ಕೊಂದು ತಮಗೆ ವಂಶಾನುಗತವಾಗಿ ಬಂದಿದ್ದ ಲಂಕೆಯನ್ನು ಇವನಿಗೆ ಕೊಟ್ಟದ್ದರಿಂದ ಅವನೀಗ ಅದನ್ನಾಳುತ್ತಿದ್ದಾನೆ; ತಮಗೆ ಇವನನ್ನು ಕಂಡರೆ ಭಯವೆಂದೂ ದುಃಖದಿಂದ ಹೇಳಿಕೊಂಡಳು. ಆ ಹಗೆಯನ್ನು ಕೊಂದು ತಾಯಿಗೆ ಸಂತಸವುಂಟುಮಾಡಲು ದಶವದನನಿಗೆ ಸಾಧ್ಯವಾಗುತ್ತದೆ, ಅಲ್ಲಿಯವರೆಗೆ ಕುಲಕ್ಕೆ ತಕ್ಕ ವಿದ್ಯೆಗಳನ್ನು ತಾವು ಕಲಿಯುವೆವೆಂದೂ ಹೇಳಿ ವಿಭೀಷಣನು ಅವಳನ್ನು ಸಮಾಧಾನಪಡಿಸಿದ. ಆನಂತರ ಅಚಲಿತ ಧೈರ್ಯರಾದ ಆ ಮೂವರೂ ಒಂದು ಶುಭದಿನಮುಹೂರ್ತದಲ್ಲಿ ತಾಯಿತಂದೆತಾತರಿಗೆ ನಮಸ್ಕರಿಸಿ ಪಿಶಾಚಭೂತಕೋಟಿಯಿಂದ ಕೂಡಿ ಬಂದು ಅತ್ಯದ್ಭುತವಾಗಿದ್ದ ಅರಣ್ಯವನ್ನು ಸೇರಿದರು. ತತ್ವಾಭ್ಯಾಸವನ್ನು ಮಾಡುವ ಮುನಿಗಳ ಹಾಗೆ ಅವರು ದಶಕೋಟಿ ಮಂತ್ರದಿಂದ ಕೂಡಿದ ಷೋಡಶಾಕ್ಷರ ಮಹಾವಿದ್ಯೆಯ ಸಾಧನೆಯಲ್ಲಿ ತೊಡಗಿದರು.

ಒಮ್ಮೆ ಜಂಬೂದ್ವೀಪದ ಅಧಿಪತಿಯಾದ ಅನಾದೃತನೆಂಬ ದೇವನು ಭೌಮವಿಹಾರದ ಕಾರಣದಿಂದ ಅಲ್ಲಿಗೆ ಬಂದವನು ಆ ಸೋದರರನ್ನು ನೋಡಿ ವಿದ್ಯಾಸಾಧನೆಗೆ ವಿಘ್ನಕಾರಕಗಳಾದ ಅನೇಕ ಬಗೆಯ ತೊಂದರೆಗಳನ್ನು ಕೊಟ್ಟರೂ ಮಂದರದಂತೆ ಅಚಲಿತ ಧೈರ್ಯರಾದ ಅವರು ಪಟ್ಟು ಹಿಡಿದು ವಿದ್ಯೆಗಳನ್ನು ಸಾಧಿಸಿದರು; ಪಂಚಪರಮೇಷ್ಠಿಗಳನ್ನು ಪೂಜಿಸಿದರು. ಆನಂತರ ರಾವಣನು ಮೂರು ದಿನಗಳಲ್ಲಿ ಶತ್ರುಗಳ ಜೀವವನ್ನು ಸೆಳೆಯುವ ಚಂದ್ರಹಾಸವೆಂಬ ಖಡ್ಗರತ್ನವನ್ನು ಸಾಧಿಸಿದ. ಅದರ ನೆರವಿನಿಂದ ಸ್ವಯಂಪ್ರಭವೆಂಬ ನಗರವೊಂದನ್ನು ನಿರ್ಮಿಸಿ ತನ್ನ ಪರಿವಾರದವರನ್ನೂ ಬಂಧುಜನಗಳನ್ನೂ ಬರಮಾಡಿಕೊಂಡು, ನಾನಾ ಬಗೆಯ ವಿದ್ಯೆಗಳಲ್ಲಿಯೂ ಭುಜಬಲದಲ್ಲಿಯೂ ತನಗೆ ಸಮನಾದವರು ಯಾರೂ ಇಲ್ಲವೆಂಬಂತೆ ಸ್ನೇಹಿತರನ್ನು ಗಳಿಸುತ್ತ ಅಹಿತರನ್ನು ಸದೆಬಡಿಯುತ್ತ ಸುಖದಿಂದಿದ್ದ.

ಇತ್ತ ಸುರಸಂಗೀತಕಪುರದ ಪ್ರಧಾನನಾದ ಮಯನು ತನ್ನ ಮಗಳಾದ ಮಂಡೋದರಿಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಚರರು ಹೇಳಿದ ಸ್ವಯಂಪ್ರಭ ನಗರಕ್ಕೆ ಬಂದು ಮಹಾ ವೈಭವದಿಂದ ನೈಮಿತ್ತಿಕರ ಆದೇಶದಂತೆ ರಾವಣನಿಗೆ ಅವಳನ್ನಿತ್ತು ಮದುವೆ ಮಾಡಿದ. ಆನಂತರ ದಶವದನನು ಮಯ ಮಾರೀಚಾದಿಗಳಿಗೆ ಮನ್ನಣೆಯನ್ನು ಮಾಡಿ ಕಳಿಸಿಕೊಟ್ಟು, ಭೌಮವಿಹಾರಕ್ಕೆಂದು ಹೊರಟ. ದಾರಿಯಲ್ಲಿ ಮೇಘಶೃಂಗವೆಂಬ ಪರ್ವತವೊಂದರ ತಪ್ಪಲಿನಲ್ಲಿದ್ದ ಸರೋವರದಲ್ಲಿ ವಿದ್ಯುತ್ಪ್ರಭೆಯು ಅಶೋಕಲತೆ ಮುಂತಾದ ಐನೂರು ಮಂದಿ ತಂಗಿಯರ ಜೊತೆ ನೀರಾಟವಾಡುತ್ತಿದ್ದುದು ಅವನಿಗೆ ಕಾಣಿಸಿತು. ಅವರ ಮೇಲೆ ಮನಸ್ಸಾಯಿತು; ಅವರನ್ನು ಗಾಂಧರ್ವವಿಧಿಯಿಂದ ಮದುವೆಯಾಗಲು ನಿಶ್ಚೈಸಿದ. ಈ ವಿಷಯವು ಅವರ ತಂದೆಯಾದ ಸುರಸುಂದರನಿಗೆ ತಿಳಿಯಿತು; ಕನಕಮಾಲನೊಡಗೂಡಿ ಅವನು ರಾವಣನ ಮೇಲೇರಿ ಬಂದ. ರಾವಣನು ನಾಗಪಾಶದಿಂದ ಸುರಸುಂದರನನ್ನು ಕಟ್ಟಿ, ಕೊಲ್ಲಲಿಷ್ಟಪಡದೆ ಕಟ್ಟನ್ನು ಬಿಚ್ಚಿದ. ಇದರಿಂದ ಅವನಿಗೆ ರಾವಣನ ಬಗ್ಗೆ ಮೆಚ್ಚಿಕೆಯುಂಟಾಯಿತು. ತನ್ನ ಮಗಳಂದಿರನ್ನೆಲ್ಲ ರಾವಣನಿಗಿತ್ತು ವೈಭವದಿಂದ ಮದುವೆ ಮಾಡಿ ಕೊಟ್ಟ. ಆನಂತರ ತನ್ನ ಹೊಸ ಹೆಂಡತಿಯರೊಡನೆ ರಾವಣ ಉತ್ಸಾಹದಿಂದ ಸ್ವಯಂಪ್ರಭ ನಗರಕ್ಕೆ ಮರಳಿದ. ಕೆಲಕಾಲಾನಂತರ ಕುಂಭಪುರದ ಮಹೋದರ–ಸುರೂಪೆಯರ ಮಗಳಾದ ವಿದ್ಯದ್ವೇಗೆಯನ್ನು ಭಾನುಕರ್ಣನಿಗೆ ತಂದು ಮದುವೆ ಮಾಡಿದ. ಭಾನುಕರ್ಣನು ಅವಳ ಜೊತೆ ಸಲ್ಲಾಪ ಮಾಡುತ್ತ ಸದಾ ಕುಂಭಪುರದ ಬಗ್ಗೆ ಕೇಳುತ್ತಿದ್ದುದರಿಂದ ಅವನಿಗೆ ಕುಂಭಕರ್ಣ ಎಂಬ ಹೆಸರೇ ನಿಂತುಬಿಟ್ಟಿತು. ಆಮೇಲೆ ಜ್ಯೋತಿಃಪ್ರಭ ಪುರದ ಅರಸು ಶುದ್ಧಕಮಲ ಮತ್ತು ಆನಂದಮಾಲೆಯರ ಮಗಳು ರಾಜೀವಸರಸೆಯೆಂಬ ಕನ್ಯೆಯನ್ನು ತಂದು ವಿಭೀಷಣನಿಗೆ ಮದುವೆ ಮಾಡಿಸಿದ. ಹೀಗೆ ಎಲ್ಲರೂ ಸುಖದಿಂದಿದ್ದರು.

ಕಾಲಾನುಕ್ರಮದಲ್ಲಿ ಮಂಡೋದರಿಯ ಬಸಿರಲ್ಲಿ ಮೊದಲು ಇಂದಗಿಯೂ ಆನಂತರ ಮೇಘವಾಹನ, ಶತ್ರುಂದಮನ ಎಂಬ ಅಮಿತಬಲರಾದ ಮಕ್ಕಳು ಹುಟ್ಟಿದರು. ಅವರು ಬೆಳೆದು ದಿಕ್ಕರಿಗಳಿಗೆ ದಂತಗಳು ಮೂಡಿದ ಹಾಗೆ ತನಗೆ ಬಲವನ್ನು ನೀಡಲು ತನ್ನ ಕುಲಪರಿಭವವನ್ನು ಇನ್ನು ನೀಗಿಸಬಹುದೆಂದು ದಶವದನನಿಗೆ ತುಂಬ

ಸಂತಸವುಂಟಾಯಿತು. ತಮ್ಮ ತಾತನಾದ ಮಾಲಿಯನ್ನು ಕೊಂದು ವಂಶಪರಂಪರೆಯಿಂದ ಬಂದಿದ್ದ ಲಂಕೆಯನ್ನು ತಮ್ಮ ವಶಮಾಡಿಕೊಂಡವರನ್ನು ಸದೆಬಡಿದಾಗ ತನ್ನ ಬಾಹುವೀರ್ಯಕ್ಕೆ ಸಾರ್ಥಕ್ಯವುಂಟಾಗುತ್ತದೆ ಎಂದು ಕಡುಕೋಪದಿಂದ ತನ್ನೆಲ್ಲ ಬಲಸಮೇತ ದಶಾನನನು ಲಂಕೆಯ ಮೇಲೆ ದಾಳಿಯಿಕ್ಕಿದ. ಇದನ್ನು ತಿಳಿದ ವೈಶ್ರವಣನು ಮಲೆತು ಎದುರಾಗಿ ಬಂದು, "ನೀನು ನನ್ನ ತಾಯಿಯ ಸೋದರಿಯ ಮಗನಾದ್ದರಿಂದ ನಿನ್ನೊಡನೆ ಯುದ್ಧಮಾಡಲು ನನ್ನ ಮನಸ್ಸೊಪ್ಪುತ್ತಿಲ್ಲ; ಹೀಗಾಗಿ ಸುಮ್ಮನೆ ಹೊರಟು ಹೋಗು" ಎಂದು ಹೇಳಿದ. ಈ ಮಾತುಗಳನ್ನು ಕೇಳಿ ರಾವಣನು ನಸುನಕ್ಕು, "ಯುದ್ಧಕ್ಕೆಂದು ಬಂದು ಹೀಗೆ ನಂಟಸ್ತಿಕೆಯ ಮಾತನ್ನಾಡುವುದು ಸರಿಯಲ್ಲ; ಸುಮ್ಮನೆ ನನ್ನೊಡನೆ ಕಾದಲು ಸಿದ್ಧನಾಗು" ಎಂದು ನಿರ್ಧಾರದಿಂದ ನುಡಿದ. ಕದನ ಮೊದಲಾಯಿತು. ವೈಶ್ರವಣನು ಮುಳಿಸಿನಿಂದ ನಿಶಿತಾಸ್ತ್ರವನ್ನು ತೆಗೆದು ರಾವಣನ ಮೇಲೆ ಪ್ರಯೋಗಿಸಿದ. ಅದಕ್ಕೆದುರಾಗಿ ದಶವದನನು ಅವನ ತಲೆ ಹೋಳಾಗುವಂತೆ ಬಿರುಸಿನಿಂದ ಹರಿತವಾದ ಬಾಣವನ್ನು ಬಿಡಲು ವೈಶ್ರವಣನು ಮೂರ್ಚೆವೋದ. ಅನುಚರರು ಅವನನ್ನು ವಿಮಾನದಲ್ಲಿ ಮಲಗಿಸಿಕೊಂಡು ವಿಜಯಾರ್ಧಪರ್ವತದೆಡೆಗೊಯ್ದರು. ರಾವಣನು ಜಯಪತಾಕೆಯನ್ನು ಹಾರಿಸಿ ಪುಷ್ಪಕವಿಮಾನವನ್ನೇರಿ ಸ್ವಯಂಪ್ರಭನಗರಕ್ಕೆ ಮರುಳಿದ. ಈ ಕಡೆ, ಮೂರ್ಚೆ ತಿಳಿದೆದ್ದ ಸ್ವಾಭಿಮಾನಿಯಾದ ವೈಶ್ರವಣನು ತನ್ನೆಲ್ಲ ಸೈನ್ಯದೆದುರಿಗೆ ಅವಮಾನಗೊಂಡುದನ್ನು ನೆನೆಸಿಕೊಂಡು ವೈರಾಗ್ಯಗೊಂಡು ಜೈನದೀಕ್ಷೆಯನ್ನು ಕೈಕೊಂಡ. ವಿನಯಂಧರರೆಂಬ ಚಾರಣರ ಪಾದಸನ್ನಿಧಿಯಲ್ಲಿ ತಪಸ್ಸು ಮಾಡಿದ ಅವನು ಕೊನೆಗೆ ಅಪವರ್ಗಲಕ್ಷ್ಮಿಯನ್ನು ಸೇರಿದ.

ಇತ್ತ, ದಕ್ಷಿಣಸಮುದ್ರತೀರದಲ್ಲಿ ವಾಸಿಸುತ್ತಿದ್ದ ಇಂದ್ರನ ಸಾಮಂತರನ್ನೆಲ್ಲ ತನ್ನ ಅಧೀನರನ್ನಾಗಿಸಿಕೊಂಡ ರಾವಣನು ಮತ್ತೊಮ್ಮೆ ಹಸ್ತ ಪ್ರಹಸ್ತ ಸುಮಾಲಿ ಮಾಲ್ಯವಂತ ಮುಂತಾದ ಪ್ರಮುಖರೊಡಗೂಡಿ ಪುಷ್ಪಕವಿಮಾನವನ್ನೇರಿ ಗಗನಮಾರ್ಗದಲ್ಲಿ ಬಂದು ಉತ್ತರಭಾಗವನ್ನು ಸಾಧಿಸಲು ಮುಂದಾದ. ಭೂಚರ ವಿಯಚ್ಚರರನ್ನೆಲ್ಲ ಅಡಿಗೆರಗಿಸಿಕೊಂಡು ತನ್ನ ಕೀರ್ತಿ ಮಣಿಕಂಠಿಕೆಯನ್ನು ದೆಸೆವೆಣ್ಣಿಗೆ ತೊಡಿಸಿದ. ಹೀಗೆ ಎಲ್ಲ ರಾಜರಿಂದಲೂ ಕಪ್ಪವನ್ನು ಕೈಕೊಂಡು ಕೈಲಾಸಪರ್ವತದ ಬಳಿಯ ಸಮ್ಮೇದಗಿರಿಯ ಮಧ್ಯದಲ್ಲಿದ್ದ ದೇವದಾರು ತೋಪಿನಲ್ಲಿ ಬೀಡುಬಿಟ್ಟ. ಅಲ್ಲಿ, ದಿಕ್ಕುಗಳಿಗೆ ಕಿವುಡಾಗುವಂತೆ, ಸಮುದ್ರದ ಅಲೆಗಳ ಭೋರ್ಗರೆತವನ್ನೂ ಮೀರಿ, ಕಾರ್ಮುಗಿಲ ಮೊರೆತವನ್ನೂ ಅಲ್ಪವೆನ್ನಿಸುವ ಆನೆಯ ಘೀಳಿಡುವ ಸದ್ದು ರಾವಣನಿಗೆ ಕೇಳಿಸಿತು. ಅದನ್ನು ಕೇಳಿದ ಅವನು ಕಾಡೊಳಗೆ ಹೊಕ್ಕು ನೋಡಲು ದೊಡ್ಡ ಮದ್ದಾನೆಗಳ ಹಿಂಡೊಂದು ಕಾಣಿಸಿತು. ಮದ್ದಾನೆಗಳ ನಡುವೆ ಇಂದ್ರನನ್ನು ಎದುರಿಸಿದ ನೀಲಪರ್ವತದಂತೆ, ಶುಭಲಕ್ಷಣಗಳಿಂದ ಕೂಡಿದ ಮಹಾಕಾಯದ ಒಂದು ಭದ್ರಗಜವಿದ್ದುದು ಕಾಣಿಸಿತು. ನೋಡಿದಾಕ್ಷಣ ಅದು ತನ್ನ ಪಟ್ಟದಾನೆಯಾಗಲು ಯೋಗ್ಯವಾದುದೆಂದು ಅವನಿಗನ್ನಿಸಿತು. ಹಿಂದೆ ಇಂದ್ರನಿಗೂ ಹಿಡಿಯಲಶಕ್ಯವೆನಿಸಿದ್ದ ಆ ಆನೆಯನ್ನು ರಾವಣನು ತನ್ನ ವಿದ್ಯಾಬಲದಿಂದ ಅನಾಯಾಸವಾಗಿ ಹಿಡಿದ. ಅದಕ್ಕೆ ತ್ರಿಜದ್ಭೂಷಣ ಎಂಬ ಹೆಸರನ್ನಿಟ್ಟು ಅದರೊಡನೆ ಊರಿಗೆ ವಾಪಸಾದ.

ಆ ಸಮಯದಲ್ಲಿಯೇ, ಮೈಯೆಲ್ಲ ರಕ್ತದ ಕಲೆಗಳಿಂದ ಕೂಡಿದ ಹಾಗೂ ಕಂಪಿಸುತ್ತಿದ್ದ

ಒಬ್ಬ ದೂತನು ವೇಗದಿಂದ ಬಂದು ವಿನಯದಿಂದ ರಾವಣನಿಗೆರಗಿ ನಿಂತು, "ದೇವ, ನನ್ನ ಹೆಸರು ಶಾಖಾಬಲಿ ಎಂದು; ನಾನು ವಾನರಧ್ವಜನ ಸೇವಕ. ಸೂರ್ಯಜ ಋಕ್ಷಜರು ನಿನ್ನ ಆಣತಿಯನ್ನು ಪಡೆದು ಪಾತಾಳಲಂಕೆಯಿಂದ ದಂಡೆತ್ತಿ ನಡೆದು ತಮ್ಮ ವಂಶಾನುಗತವಾದ ಕಿಷ್ಕಿಂಧಪುರವನ್ನು ವಶಪಡಿಸಿಕೊಳ್ಳಲು ಹೋದಾಗ, ಯಮರಾಜನು ಋಕ್ಷಜನನ್ನು ಸೆರೆವಿಡಿದು ಸೂರ್ಯಜನನ್ನು ಗಾಯಗೊಳಿಸಿದ. ನಮ್ಮ ಕಡೆಯವರು ಸೂರ್ಯಜನನ್ನು ಮತ್ತೆ ನಮ್ಮ ನಗರಕ್ಕೇ ಕರೆದೊಯ್ದರು. ನಾನು ತಮಗೆ ಈ ವಿಷಯವನ್ನು ಅರುಹಲು ಓಡಿಬಂದೆ" ಎಂದು ಬಿನ್ನವಿಸಿದ. ಆ ನುಡಿಗೇಳಿ ರಾವಣನು ಸೈರಿಸದಾದ. ಕಾಲಿಡಲು ಆಗಸದಲ್ಲಿ ಜಾಗವೇ ಇಲ್ಲ ಎನ್ನುವಷ್ಟು ಹಿರಿದಾದ ತನ್ನ ಸೈನ್ಯದೊಡನೆ, ಯಮನೇ ಜವಗೆಡುವಂತೆ ಕ್ಷಣಾರ್ಧದಲ್ಲಿ ಬಂದು ಕಿಷ್ಕಿಂಧೆಯನ್ನು ಸುತ್ತಿದ. ಅದನ್ನು ನೋಡಿ ಯಮನ ಸೇನಾನಾಯಕನಾದ ಸಾಟೋಪ ಎಂಬುವವನು ಹೊರ ಬಂದು ಸೇನೆಯೆದುರು ನಿಂತ. ಖರದೂಷಣರು ಅವನಿಗೆ ತಕ್ಕ ಶಾಸ್ತಿ ಮಾಡಿದರು. ಹೀಗಾಗಿ ಯಮನೇ ಸನ್ನದ್ಧನಾಗಿ ಬಂದು ಎದುರಿಸಿದ; ಆದರೆ ಸ್ವಲ್ಪ ಹೊತ್ತಲ್ಲೇ ಅವನೂ ದಶಮುಖನ ಶರಗಳನ್ನೆದುರಿಸಲಾರದೇ ಸಮರದಿಂದ ಪಲಾಯನಗೈದ. ಜಂಘಾಬಲವುಡುಗಿದ ಅವನು ನಡುಗುತ್ತ ಓಡಿಬಂದು ತನ್ನೊಡೆಯನಾದ ಇಂದ್ರನನ್ನು ಕಂಡು ರಾವಣನ ಸಮರಾಟೋಪವನ್ನು ನಿವೇದಿಸಿದ.

ಇದನ್ನು ಕೇಳಿದ ಇಂದ್ರನು ರಾವಣನ ಮೇಲಿನ ಸಿಟ್ಟಿನಿಂದ ದಾಳಿಗೈಯಲು ಮೇಲೆದ್ದ. ಆಗ ಅವನ ಮಂತ್ರಿಮುಖ್ಯರು ದಶಾನನೊಡನೆ ಅವನು ಕಾದುವುದು ತರವಲ್ಲ ಎಂದು ಸಲಹೆ ಮಾಡಿದರು. ಇಂದ್ರ ಅವರ ಮಾತಿನಂತೆ ಯಮನ ಅಧೀನಕ್ಕೆ ಸುರಸಂಗೀತಕಪುರವನ್ನೊಪ್ಪಿಸಿ ತಾನು ವಿಷಯಾಸಕ್ತಚಿತ್ತನಾಗಿ ಅಂತಃಪುರವನ್ನು ಹೊಕ್ಕು ಮೈಗರೆದಿದ್ದ. ಇತ್ತ ದಶಾನನನು ಋಕ್ಷಜಸೂರ್ಯಜರಿಗೆ ಕಿಷ್ಕಿಂಧಪುರವನ್ನು ಕೊಟ್ಟು, ತನ್ನ ವಂಶಗತವಾದ ಲಂಕೆಯನ್ನು ವಶಪಡಿಸಿಕೊಂಡ. ಆನಂತರ ತಾಯಿತಂದೆತಾತಂದಿರನ್ನು ಕರೆಸಿಕೊಂಡು ಸುಖವಾಗಿದ್ದ. ಸ್ವಲ್ಪಕಾಲಾನಂತರ ಸೂರ್ಯಜನ ಹೆಂಡತಿಯಾದ ಇಂದುಮಾಲೆಯು ಲೋಕೋತ್ತರರೆಸಿದ ವಾಲಿಸುಗ್ರೀವಶ್ರೀಪ್ರಭೆಯರನ್ನು ಯಥಾಕ್ರಮದಲ್ಲಿ ಹೆತ್ತಳು. ಋಕ್ಷಜನ ಕುಲವಧುವು ಕ್ರಮವಾಗಿ ನಳನೀಳರೆಂಬ ಸುತರನ್ನು ಪಡೆದಳು. ಕಾಲಾನುಕ್ರಮದಲ್ಲಿ ವಾಲಿಸುಗ್ರೀವರಿಗೆ ಅಧಿರಾಜ ಹಾಗೂ ಯುವರಾಜ ಪದವಿಗಳನ್ನಿತ್ತು ಸೂರ್ಯಜನು ವಿಹಿತಾಸ್ರವ ಭಟ್ಟಾರಕರ ಸಮಕ್ಷದಲ್ಲಿ ದೀಕ್ಷೆಯನ್ನು ಕೈಗೊಂಡು ಮೋಕ್ಷಕ್ಕೆ ಹೋದ.

ಈ ಕಡೆ, ರಾವಣನು ಯಾವುದೋ ಮದುವೆಗೆಂದು ಹೋಗಿದ್ದ ಸಮಯದಲ್ಲಿ ಖರನು ಚಂದ್ರನಖಿಯನ್ನು ಲಂಕೆಯಿಂದ ಕಳ್ಳತನದಿಂದ ಒಯ್ದ; ಅಲ್ಲದೆ, ರಾವಣನಿಗೆ ವಿಧೇಯನಾಗಿರದಿದ್ದ ಚಂದ್ರೋದರನನ್ನು ಕೊಂದು ತಾನು ಪಾತಾಳಲಂಕೆಯನ್ನು ವಶಪಡಿಸಿಕೊಂಡು ಸುಖದಿಂದಿದ್ದ. ರಾವಣನು ವಾಪಸು ಬಂದು ತನ್ನನ್ನು ಲೆಕ್ಕಿಸದೆ ತನ್ನ ತಂಗಿಯನ್ನು ಕದ್ದೊಯ್ದಿದ್ದ ಖರನಿಗೆ ತಕ್ಕುದನ್ನು ಮಾಡುವೆನೆಂದು ಕೂಗಾಡಿದ. ಆಗ ಹೆಂಡತಿಯಾದ ಮಂಡೋದರಿಯು, ಖರನು ಚಂದ್ರನಖಿಯಲ್ಲಿ ಅನುರಕ್ತನಾಗಿದ್ದಾನೆ ಹಾಗೂ ಅನುರೂಪನಾಗಿದ್ದಾನೆ; ಆದ್ದರಿಂದ ಅವನ ಮೇಲೆ ಮುಳಿಸುಗೊಳ್ಳುವುದು ಸರಿಯಲ್ಲ, ಅಲ್ಲದೆ ಅವನು ನಿನಗೆ ಅವಿಧೇಯನಾಗಿದ್ದ ಚಂದ್ರೋದರನನ್ನು ಕೊಂದು

ನಿಷ್ಕಂಟಕವಾಗಿಸಿದ್ದಾನೆ; ಹೀಗಾಗಿ ಅವನ ಮೇಲೆ ಕೋಪಗೊಂಡು ನಿನ್ನ ತಂಗಿಗೆ ವೈಧವ್ಯವನ್ನುಂಟುಮಾಡುವುದು ತರವಲ್ಲವೆಂದು ಅವನನ್ನು ಸಮಾಧಾನಪಡಿಸಿದಳು. ಇತ್ತ, ಗರ್ಭಿಣಿಯಾಗಿದ್ದ ಚಂದ್ರೋದರನ ಹೆಂಡತಿಯಾದ ಅನುರಾಧೆಯು ಒಂದು ಗಂಡುಮಗುವನ್ನು ಹೆತ್ತು ಅದಕ್ಕೆ, ಗರ್ಭದ್ಲಿದ್ದಾಗಲೇ ಶತ್ರುಗಳಿಂದ ತೊಂದರೆಗೀಡಾದಾನೆಂದು, ವಿರಾಧಿತ ಎಂಬ ಹೆಸರನ್ನಿಟ್ಟಳು. ಕಾಲಕ್ರಮದಲ್ಲಿ ಬೆಳೆದ ಅವನು ಹಗೆಯ ಮೇಲೆ ಸೇಡು ತೀರಿಸಕೊಳ್ಳಲು ತಕ್ಕ ಸಮಯಕ್ಕಾಗಿ ಕಾಯುತ್ತಿದ್ದ.

ಇತ್ತ ಮಾನನಿಧಿಯಾದ ವಾಲಿಯು ವಿವೇಕನಿಧಿಯಾದ, ಜಿನಾಗಮಕೋವಿದನಾದ; ಜೈನಮುನಿಗೂ ಜೈನಪದಕ್ಕೂ ಅಲ್ಲದೆ ಉಳಿದವಕ್ಕೆ ಕೈಮುಗಿಯುವುದಿಲ್ಲವೆಂದು ಧರ್ಮಾಚರಣೆಯಲ್ಲಿ ತೊಡಗಿದ್ದ. ಅನಂತವೀರ್ಯನೂ, ಚರಮದೇಹಧಾರಿಯೂ, ಅವಕ್ರವಿಕ್ರಮನೂ ಆದ ವಾಲಿಯು ನಿಯಮಪಾಲನೆ ಮಾಡುತ್ತ ಸುಖದಿಂದಿದ್ದ. ಒಂದು ದಿನ ತನ್ನ ತಂಗಿಯಾದ ಶ್ರೀಪ್ರಭೆಯನ್ನು ಮದುವೆಯಾಗ ಬಯಸಿ ರಾವಣನು ಕಳಿಸಿದ್ದ ಓಲೆಯು ಅವನನ್ನು ತಲುಪಿತು. ಈ ವಿಚಾರದ ಬಗ್ಗೆ ಚರ್ಚಿಸಲೆಂದು ವಾಲಿಯು ಮಂತ್ರಿಮುಖ್ಯರು ಹಾಗೂ ಆಪ್ತ ಪರಿಜನರನ್ನು ಕರೆಸಿ ಸುಗ್ರೀವನೊಡನೆ ಸಭೆಗೆ ಹೋದ. ಮದಾಂಧನೂ, ಧರ್ಮಾನುಗನಲ್ಲದವನೂ ಆದ ದಶಕಂಧರನಿಗೆ ತಂಗಿಯನ್ನಿತ್ತರೆ ತನಗೆ ಇಹಪರವೆರಡೂ ದೊರೆಯದು, ಉದ್ಧತನಾದ ಅವನಿಗೆ ತಂಗಿಯನ್ನಿತ್ತು ಮದುವೆಮಾಡಿಕೊಟ್ಟು ಬಾಗಿದರೆ ತನ್ನ ಚರಿತ್ರವೇ ಕೆಡುವುದು; ವ್ರತವನ್ನು ಹಿಡಿದು ಮಧ್ಯದಲ್ಲಿಯೇ ಅದನ್ನು ಭಂಗ ಮಾಡಿದರೆ ಪಾಪಕರವಲ್ಲವೇ; ಆದರೆ ರಾವಣನೊಡನೆ ವೈರ ಕಟ್ಟಿಕೊಂಡರೆ ನೀಳ್ಗಾಲದಿಂದ ಬೆಳೆದು ಬಂದ ರಾಕ್ಷಸ–ವಾನರ ವಂಶಗಳ ಗೆಳೆತನ ಹಾಳಾಗುತ್ತದೆ; ರಾಜ್ಯದ ಆಸೆಯಿಂದ ತನ್ನ ಮನಸ್ಸಿಗೆ ವಿರುದ್ಧವಾದವರನ್ನೆಲ್ಲ ಎದುರಿಸಿ ಕೊಲ್ಲುವುದರಿಂದ ಪಾತಕವೊದಗುತ್ತದೆ; ಎಷ್ಟಾದರೂ ಸಿರಿ ಎಂಬುದು ನೀರ ಮೇಲಿನ ಗುಳ್ಳೆಯ ಹಾಗಲ್ಲವೇ ಎಂದು ಅವರಿಗೆ ತನ್ನ ಮನಸ್ಸಿನಲ್ಲಾದ ಸಂದಿಗ್ಧವನ್ನು ವಿವರಿಸಿ ಹೇಳಿದ. ಆದ್ದರಿಂದ ಪಾಪ–ಅಪಕೀರ್ತಿಗಳಿಗೆ ಪಕ್ಕಾಗದಂತೆ, ಕುಲಚಲವ್ರತಗಳು ಕೆಡಲವಕಾಶವೀಯದಂತೆ ತಾನು ತಪಸ್ಸನ್ನು ಕೈಗೊಳ್ಳಬೇಕೆಂದಿರುವ ನಿರ್ಧಾರವನ್ನು ಪ್ರಕಟಿಸಿದ. ಅದರಂತೆ ಸುಗ್ರೀವನಿಗೆ ರಾಜ್ಯವನ್ನಿತ್ತು ಸದ್ದರ್ಶನಗಗನಚಂದ್ರರೆಂಬ ಚಾರಣರ ಸನ್ನಿಧಿಯಲ್ಲಿ ದೀಕ್ಷೆ ಪಡೆದು ತಪಸ್ಸು ಮಾಡಿ ಋದ್ಧಿಪ್ರಾಪ್ತನಾದ. ಆದರೆ ನಯೋಪಾಯನಾದ ಸುಗ್ರೀವನು ತನ್ನ ಅನುಜೆಯನ್ನು ದಶಗ್ರೀವನಿಗಿತ್ತು ಮದುವೆ ಮಾಡಿ ತಾನು ಸುಖವಾಗಿದ್ದ.

ಹೀಗೆ ಶ್ರೀಪ್ರಭೆ ಮತ್ತು ರಾವಣರ ಮದುವೆ ನಡೆಯಿತು. ಮುಂದೆ ಅವನು ನಿತ್ಯಾಲೋಕಪುರದರಸು ನಿತ್ಯಾಲೋಕನೆಂಬ ವಿದ್ಯಾಧರನಿಗೂ ಅವನ ಹೆಂಡತಿ ಶ್ರೀದೇವಿಗೂ ಹುಟ್ಟಿದ ರತ್ನಾವಳಿಯನ್ನು ಲಗ್ನವಾದ. ಅದಾದ ಮೇಲೆ ವಾಪಸು ಮರಳುತ್ತಿರುವಾಗ ಕೈಲಾಸಪರ್ವತದ ತಪ್ಪಲಿನಲ್ಲಿ ತಪಸ್ಸು ಮಾಡುತ್ತಿದ್ದ ಮಹಾಮುನಿಯ ಮೇಲೆ ಅವನ ವಿಮಾನವು ಮುಂದೆ ಸರಿಯದೆ ನಿಂತುಬಿಟ್ಟಿತು. ರಾವಣನಿಗೆ ಅಚ್ಚರಿಯಾಯಿತು; ಅವಲೋಕಿನೀವಿದ್ಯೆಯ ನೆರವಿನಿಂದ ಆ ಮುನಿಯು ವಾಲಿದೇವ ಎಂಬುದು ತಿಳಿಯಿತು. ತನ್ನ ಮೇಲೆ ಅವನ ಮುನಿಸು ಇನ್ನೂ ಹೋಗದೆ ಅವನೇನಾದರೂ ವಿಮಾನವನ್ನು ಸ್ತಂಭಿಸಿದ್ದರೆ, ಪರ್ವತದ ಜೊತೆಯಲ್ಲಿಯೇ ಅವನನ್ನು ಕಿತ್ತು ಸಮುದ್ರದಲ್ಲಿ

ಎಸೆದುಬಿಡುವೆನೆಂದು ನಿರ್ಧರಿಸಿ ಪುಷ್ಪಕವಿಮಾನದಿಂದ ನೆಲಕ್ಕಿಳಿದ. ಅಲ್ಲಿಂದ ರಸಾತಳಕ್ಕಿಳಿದು ಕುಬೇರಪರ್ವತದ ಬುಡಕ್ಕೆ ಬಂದ; ಬೆಳ್ಮುಗಿಲನ್ನೆತ್ತುವ ಬಿರುಗಾಳಿಯಂತೆ ತನಗೆ ತಿಳಿದ ಸಾವಿರ ವಿದ್ಯೆಗಳ ಸಹಾಯದಿಂದಲೂ ತನ್ನ ಬಹು ತೋಳುಗಳಿಂದಲೂ ಕೈಲಾಸವನ್ನೆತ್ತಲು, ಅದರ ಮೇಲಿದ್ದ ನಾನಾ ರತ್ನಮಯ ಜಿನಾಲಯಗಳನ್ನು ಉಳಿಸಲೆಂದು ವಾಲಿ ಅದನ್ನು ತನ್ನ ಉಂಗುಟದಿಂದ ಕೆಳಕ್ಕೆ ಒತ್ತಿದ. ನರಳುವ ಧ್ವನಿಯನ್ನು ಕೇಳಿದ ಮಂಡೋದರಿಯು ಪರಿಜರೊಡನೆ ಅಲ್ಲಿಗೆ ಬಂದು, ತನ್ನ ಗಂಡನನ್ನು ಕಾಪಾಡಬೇಕೆಂದು ವಾಲಿಯ ಕಾಲಿಗೆ ಬಿದ್ದು ಬೇಡಿಕೊಂಡಳು. ಕರುಣರಸಸಹಿತನಾದ ಅವನು ತನ್ನ ಕಾಲ್ಬೆರಳನ್ನು ಮೇಲೆತ್ತಿದ. ನರಳುವ ಧ್ವನಿ ಮಾಡಿದ ಕಾರಣದಿಂದ ದಶಮುಖನಿಗೆ ಅಂದಿನಿಂದ ರಾವಣ ಎಂಬ ಹೆಸರೂ ಬಂತು. ಆನಂತರ ಅವನು ರಸಾತಳದಿಂದ ಮೇಲೆ ಬಂದು ವಾಲಿಭಟ್ಟಾರಕರನ್ನು ಪೂಜಿಸಿ ಕ್ಷಮೆ ಯಾಚಿಸಿದ. ಆನಂತರ ಪಕ್ಕದಲ್ಲಿದ್ದ ಜಿನೇಶ್ವರ ಮಂದಿರಕ್ಕೆ ಹೋಗಿ ನಾನಾ ರತ್ನಗಳಿಂದ ಪೂಜೆಗೈದ; ನಿರ್ಭರಭಕ್ತಿಯಿಂದ ಜಿಸ್ತವನವನ್ನು ರಾವಣಹಸ್ತದ ಬಾಜನೆಯೊಡನೆ ಹಾಡಿದ. ಅದರಿಂದ ಆಸನಕಂಪವಾಗಲು ಫಣೀಂದ್ರನು ನಾಗಲೋಕದಿಂದ ಬಂದು ಸಮಸ್ತ ದೇವಾಸುರನಾಯಕರಿಗೆ ಜೀವವಿಮುಕ್ತಿಯನ್ನೀವ ಶಕ್ತಿಯನ್ನು ಅವನಿಗೆ ದಯಪಾಲಿಸಿದ. ವಾಲಿಮುನಿಯು ಶುಕ್ಲಧ್ಯಾನದಲ್ಲಿ ತೊಡಗಿ ಮುಕ್ತಿಶ್ರೀಯನ್ನು ಸೇರಿದ.

ಇತ್ತ ರಾವಣನು ನಂದ್ಯಕಾ ಸುಮೇಲ ಮುಂತಾದ ದ್ವೀಪಗಳನ್ನಾಳುತ್ತಿದ್ದ ಮಹಾಧರ ಮತ್ತು ವಿಜ್ಞಾನಧರರನ್ನು ತನ್ನ ಅಧೀನರನ್ನಾಗಿಸಿಕೊಂಡು, ಕುಂಭಕರ್ಣ ವಿಭೀಷಣ ಇಂದಗಿಯರು ಹಾಗೂ ಮೇಘವಾಹನ ಖರ ಮರೀಚ ಸುಗ್ರೀವ ಅಂಗದ ಮುಂತಾದ ಕೆಲವು ಮರ್ಕಟಧ್ವಜರೊಡನೆಯೂ ನಿಖಿಲ ವಿದ್ಯಾಧರರೊಡನೆಯೂ ತನ್ನ ಬೆಳ್ಗೊಡೆ ಬಾವುಟಗಳಿಂದ ಕೂಡಿ ಇಂದ್ರನ ಮೇಲೆ ದಾಳಿ ಮಾಡಲು ಉತ್ತರಮುಖವಾಗಿ ಹೊರಟ. ದಾರಿಯಲ್ಲಿ ರೈವತ ನದೀತೀರದಲ್ಲಿ ಬೀಡುಬಿಟ್ಟು, ಮರಳಿನ ಮೇಲೆ ರತ್ನಮಂಟಪವನ್ನು ನಿರ್ಮಿಸಿ ಅದರಲ್ಲಿ ಮಣಿಮಯಪೀಠದ ಮೇಲೆ ಜಿನಪ್ರತಿಮೆಯನ್ನು ಸ್ಥಾಪಿಸಿ ಪೂಜಿಸಲು ತೊಡಗಿದ. ಇದ್ದಕ್ಕಿದ್ದಂತೆ ನದಿಯಲ್ಲಿ ಪ್ರವಾಹ ಬರಲು ರಾವಣನಿಗೆ ಆಶ್ಚರ್ಯವಾಗಿ ನಭಕ್ಕೆ ನೆಗೆದ; ಅಕಾಲದಲ್ಲಿ ಪ್ರವಾಹವುಂಟಾಗಲು ಕಾರಣವನ್ನು ತಿಳಿಯಲು ದೂತನೊಬ್ಬನನ್ನು ಕಳಿಸಿದ. ಅವನು ಮರಳಿ ಬಂದು, ಮಾಹಿಷ್ಮತೀಪುರದೊಡೆಯನಾದ ಸಹಸ್ರಬಾಹು ಎನ್ನುವವನು ಜಂತ್ರಗಳಿಂದ ತೊರೆಯನ್ನು ಕಟ್ಟಿ ಹಾಕಿ ತನ್ನ ಅಂತಃಪುರವನಿತೆಯರ ಜೊತೆ ನೀರಾಟವಾಡಿದ ಮೇಲೆ ಆ ಕಟ್ಟುಗಳನ್ನು ಬಿಚ್ಚಲು ಈ ಆಕಸ್ಮಿಕ ಪ್ರವಾಹ ಉಂಟಾಯಿತೆಂದು ಕಾರಣವನ್ನರುಹಿದ. ಇದನ್ನು ಕೇಳಿ ಕೋಪಾವಿಷ್ಟನಾದ ರಾವಣನು ಸಹಸ್ರಬಾಹುವನ್ನು ಸೆರೆ ಹಿಡಿದು ತನ್ನ ಶಿಬಿರಕ್ಕೆ ಕರೆತಂದ. ಈ ವಿಷಯ ತಿಳಿದ ಸಹಸ್ರಬಾಹುವಿನ ತಂದೆಯಾದ ಶತಬಾಹುಗಳೆಂಬ ಜಂಘಚಾರಣರು ಧರ್ಮವಾತ್ಸಲ್ಯದಿಂದ ಅಲ್ಲಿಗೆ ಬಂದರು. ದಶವದನನು ಅವರಿಗೆ ವಂದಿಸಿ ಮಣಿಮಯಾಸನದಲ್ಲಿ ಕುಳ್ಳಿರಿಸಿ ಕೈಮುಗಿದು ಅವರ ಬರವಿಗೆ ಕಾರಣವನ್ನು ಕೇಳಿದ. ಸಹಸ್ರಬಾಹುವನ್ನು ಬಿಡುಗಡೆಗೊಳಿಸಲು ಅವರು ಹೇಳಿದರು; ಅದರಂತೆ ರಾವಣ ಅವನನ್ನು ಮುಕ್ತನನ್ನಾಗಿಸಿದ. ಅವನು ಬಂದು ಮುನಿಗೆ ವಂದಿಸಿ ಅವರ ಪಕ್ಕದಲ್ಲಿ ಕುಳಿತುಕೊಂಡ. ರಾವಣನು ಅವನ ಕೈಗಳನ್ನು

ಹಿಡಿದುಕೊಂಡು ವಿನಯ ಪುರಸ್ಸರವಾದ ಮಾತುಗಳನ್ನಾಡಿ ಅವನು ಮತ್ತೆ ತನ್ನ ರಾಜ್ಯದ ಅಧಿಕಾರವನ್ನು ವಹಿಸಿಕೊಳ್ಳುವಂತೆ ಕೇಳಿಕೊಂಡ. ಆದರೆ ಅವನು ಮತ್ತೆ ರಾಜ್ಯಕ್ಕೆ ಮರಳಲು ಇಷ್ಟವಿಲ್ಲದೆ, ತನ್ನ ಮಗನಾದ ಸುಬಾಹುವಿಗೆ ರಾಜ್ಯಾಧಿಕಾರವನ್ನು ವಹಿಸಿಕೊಟ್ಟು ತನ್ನ ತಂದೆಯ ಬಳಿಯೇ ದೀಕ್ಷೆಯನ್ನು ಪಡೆದುಕೊಂಡು ತಪಸ್ಸಿನಲ್ಲಿ ತೊಡಗಿ, ಕೊನೆಗೆ ಮೋಕ್ಷಪದವನ್ನೈದಿದ.

ಈ ಕಡೆ ರಾವಣನು ಮೊದಲು ಭೂಚರರಾಜರನ್ನು ಗೆದ್ದು ಆನಂತರ ಖೇಚರರಾಜರನ್ನು ಅಧೀನಗೊಳಿಸಿಕೊಳ್ಳಲು ತೀರ್ಮಾನಿಸಿ ವಿಜಯಯಾತ್ರೆಯನ್ನು ಮುಂದುವರೆಸಿದ. ತಾನು ಹೋದ ಕಡೆಯಲ್ಲೆಲ್ಲ ಆಯಾ ರಾಜರನ್ನು ಮಣಿಸಿ ಅವರಿಂದ ಕಪ್ಪಕಾಣಿಕೆಗಳನ್ನು ಪಡೆದು ಧರ್ಮಪ್ರತಿಪಾಲನೆ ಮಾಡುತ್ತ ರಾಜಪುರಕ್ಕೆ ಬಂದ. ಅಲ್ಲಿನ ರಾಜನಾದ ಮರುತ್ತು ಜೀವವಧೆಸಹಿತ ಯಜ್ಞಗಳನ್ನು ಮಾಡುತ್ತ, ಬೇರಾರಿಗೂ ತಲೆಬಾಗದೆ ನಾನಾ ಬಗೆಯ ಪ್ರಾಣಿಹಿಂಸೆಯನ್ನು ಮಾಡುತ್ತಿರುವನೆಂಬುದನ್ನು ಕೇಳಿ, ಯಜ್ಞಶಾಲೆಗೆ ನೇರವಾಗಿ ಬಂದ. ಯಾಗನಿಮಿತ್ತವಾಗಿ ಅಲ್ಲಿ ಬಲಿ ಕೊಡಲೆಂದು ಯೂಪಸ್ತಂಭಗಳಿಗೆ ಕಟ್ಟಿದ್ದ ಪಶುಗಳನ್ನೆಲ್ಲ ಬಿಡಿಸಿ, ಕಳಶಗಳನ್ನೊಡೆದು, ಯಜ್ಞಮಂಟಪಗಳನ್ನು ಕೆಡವಿ, ಬಲಿಗಂಬಗಳನ್ನು ಕಡಿದು, ಅಲ್ಲಿದ್ದ ಸಂವರ್ತಕ ಮುಂತಾದ ಋತ್ವಿಜರನ್ನು ಇನ್ನೇನು ಬಡಿದು ಕೊಲ್ಲಬೇಕೆಂದುಕೊಳ್ಳುವಷ್ಟರಲ್ಲಿ ಮರುತ್ತು ಗಾಬರಿಯಿಂದ ಓಡಿ ಬಂದು ರಾವಣನ ಕಾಲ ಮೇಲೆ ಬಿದ್ದು ಕ್ಷಮೆ ಯಾಚಿಸಿದ. ಮುಂದೆಂದೂ ಯಜ್ಞಗಳನ್ನು ಮಾಡೆನೆಂದು ಆಶ್ವಾಸನೆಯಿತ್ತು, ತನ್ನ ಮಗಳಾದ ಕನಕಪ್ರಭೆಯನ್ನು ರಾವಣನಿಗಿತ್ತು ಮದುವೆ ಮಾಡಿದ. ಅವಳಿಂದ ತನಗೆ ಹುಟ್ಟಿದ ಸ್ವೀಕೃತಚಿತ್ತೆಯೆಂಬ ಮಗಳನ್ನು ಕಾಲಾನುಕ್ರಮದಲ್ಲಿ ರಾವಣನು ಹರಿವಂಶನ ಮಗನಾದ ಮಧುವಿಗಿತ್ತು ಮದುವೆ ಮಾಡಿದ. ಮುಂದೆ ತನ್ನ ಅಪ್ರತಿಮಸೇನೆಯೊಡನೆ ಹೊರಟು ಹದಿನೆಂಟು ವರ್ಷಗಳ ಕಾಲ ವಿಜಯಯಾತ್ರೆಯನ್ನು ನಡೆಸಿ ಎದುರಾದವರನ್ನೆಲ್ಲ ತನ್ನ ಅಧೀನರನ್ನಾಗಿಸಿಕೊಂಡು, ಕೊನೆಗೆ ಕೈಲಾಸಪರ್ವತವನ್ನು ಸೇರಿದ; ವಾಲಿದೇವರ ಸಾಮರ್ಥ್ಯವನ್ನು ನೆನೆಸಿಕೊಂಡು ಹೊಗಳುತ್ತ ಆ ಪರ್ವತದ ತಪ್ಪಲಿನಲ್ಲಿಯೇ ಬೀಡುಬಿಟ್ಟ.

ಆ ಸ್ಥಳದ ಬಳಿಯೇ ಇದ್ದ ದುರ್ಲಂಘ್ಯಪುರವನ್ನು ನಳಕೂಬರನೆಂಬ ರಾಜನು ಆಳುತ್ತಿದ್ದ. ಅವನಾದರೋ ಇಂದ್ರನ ಆಯುಧಗಳ ರಕ್ಷಣೆಯನ್ನು ಹೊತ್ತು, ದಿಕ್ಪತಿಗಳಿಗೂ ಅಸಾಧ್ಯನೆನಿಸಿದ ಪರಾಕ್ರಮಿಯಾಗಿದ್ದ. ಇಂದ್ರನ ಮೇಲೆ ದಾಳಿ ನಡೆಸಲು ರಾವಣನು ಬರುತ್ತಿರುವುದನ್ನು ತಿಳಿಸಲು ಅವನು ದೂತನೊಬ್ಬನನ್ನು ಇಂದ್ರಭೂಪತಿಯ ಬಳಿಗಟ್ಟಿದ. ಈ ವಿಷಯವನ್ನು ಕೇಳಿದ ಇಂದ್ರನು, "ರಾವಣನು ನಮ್ಮ ಮೇಲೆ ದಾಳಿ ಮಾಡಿ ಏನು ತಾನೇ ಮಾಡಬಲ್ಲ? ಆದ್ದರಿಂದ ಆ ಬಗ್ಗೆ ಯೋಚಿಸದೆ, ವಿದ್ಯಾವಷ್ಟಂಭದಿಂದಲೇ ಆಯುಧಗಳನ್ನು ಕಾಪಾಡುತ್ತಿರಲಿ" ಎಂದು ತಿಳಿಸಿ, ರಾವಣನ ಬಗ್ಗೆ ತಿರಸ್ಕಾರದಿಂದ ಕೂಡಿ ತನ್ನ ಪಾಡಿಗೆ ತಾನು ಜಿನಪೂಜೆಗೆಂದು ಮಂದರಪರ್ವತದೆಡೆಗೆ ನಡೆದ. ಈ ಕಡೆ ಚರನು ಅರುಹಿದಂತೆಯೇ ನಳಕೂಬರನು ತನ್ನ ಊರಿನ ಸುತ್ತ ನಾನಾ ಬಗೆಯ ಯಂತ್ರಗಳನ್ನು ಸ್ಥಾಪಿಸಿದ: ಒಂದು ಯೋಜನ ದೂರದಲ್ಲಿದ್ದವರನ್ನು ನುಂಗಬಲ್ಲ ಬೇತಾಳಯಂತ್ರಗಳು, ದೂರದಲ್ಲಿ ನಿಂತಿದ್ದವರನ್ನು ಘೂತ್ಕಾರಮಾಡುತ್ತ ಅಟ್ಟಿಸಿಕೊಂಡು ಹೋಗಿ ಕಚ್ಚುವ

ಮಹಾ ಉರಗಗಳು, ದೂರದಲ್ಲಿದ್ದುವನ್ನೂ ಅಟ್ಟಿ ಸುಡುವ ಕೆಂಜುರಿಯ ಪ್ರಾಕಾರಗಳು, ನಾನಾ ಬಗೆಯಲ್ಲಿ ಉಪದ್ರವವನ್ನೀಯಬಲ್ಲ ರೌದ್ರಮೃಗಗಳು – ಇವುಗಳನ್ನೊಳಗೊಂಡ ವಜ್ರಸಾಲ ಎಂಬ ಕೋಟೆಯನ್ನು ನಿರ್ಮಿಸಿದ. ದುರ್ಲಂಘ್ಯಪುರವೆಂಬ ಹೆಸರು ಆ ನಗರಕ್ಕೆ ಅನ್ವರ್ಥವೆನಿಸಿತು. ಆ ನಗರದ ಸ್ವರೂಪವನ್ನು ತಿಳಿದು ಬರುವಂತೆ ರಾವಣನು ತನ್ನ ಸೇನಾಧಿಪತಿಯಾದ ಪ್ರಹಸ್ತನನ್ನು ಕಳಿಸಿದ. ಅವನು ಹೋಗಿ ನಗರದ ರಕ್ಷಣಾವಿಧಾನಗಳ ಆದ್ಯಂತಗಳನ್ನು ತಿಳಿದು ಬಂದು ತನ್ನ ಒಡೆಯನಿಗೆ ವಿವರಿಸಿದ; ಅಲ್ಲಿರುವ ಯಂತ್ರಗಳಿಂದ ತಮ್ಮನ್ನು ಕಾಪಾಡಿಕೊಳ್ಳಬೇಕಾದ ಬಗೆಯನ್ನು ಕುರಿತು ಆಲೋಚನೆ ಮಾಡಬೇಕೆಂದು ನಿವೇದಿಸಿದ. ರಾವಣನು ಆ ಕುರಿತೇ ಆಲೋಚಿಸತೊಡಗಿದ.

ಇತ್ತ, ನಳಕೂಬರನ ಕುಲಾಂಗನೆಯಾದ ಉಪರಂಭೆಯು ನಿಡುಗಾಲದಿಂದ ರಾವಣನ ಬಗ್ಗೆ ಮೋಹಗೊಂಡಿದ್ದವಳು; ಅವನು ಸಮೀಪಕ್ಕೆ ಬಂದಿರುವುದನ್ನು ತಿಳಿದು, ಕಾಮಕಾತರೆಯಾಗಿ ಅವನಿಗೆ ತನ್ನ ಕೆಳದಿಯ ಮೂಲಕ ಸಂದೇಶವೊದನ್ನು ಕಳಿಸಲುದ್ಯುಕ್ತಳಾದಳು. ಅದರಂತೆ ಚಿತ್ರಮಾಲೆ ಎಂಬುವವಳಿಗೆ ತನ್ನ ಮನದಿಂಗಿತವನ್ನು ತಿಳಿಸಿ ಅವನು ತನಗೊಲಿಯುವಂತೆ ಮಾಡಲು ಕಳಿಸಿದಳು. ಕಪ್ಪು ಬಟ್ಟೆಯನ್ನು ಧರಿಸಿದ ಚಿತ್ರಮಾಲೆಯು ನಡುರಾತ್ರಿಯಲ್ಲಿ ಗಗನಮಾರ್ಗದಿಂದ ಬಂದು ರಾವಣನ ಬಿಡಾರವನ್ನು ಗುಟ್ಟಾಗಿ ಪ್ರವೇಶಿಸಿದಳು. ತಮ್ಮರಸಿಯಾದ ಉಪರಂಭೆಯು ರಂಭೆಗಿಂತಲೂ ಮಿಗಿಲಾದ ಚೆಲುವೆ, ಅವಳೊಡನೆ ಯಾರನ್ನೂ ಹೋಲಿಸಲಾಗದು. ತಾನು ಇವನ ಬಗ್ಗೆ ಇರಿಸಿಕೊಂಡಿರುವ ಕಟ್ಟೊಲವಿನಿಂದಾಗಿ ಸದಾ ಹಂಬಲಿಸುತ್ತಿದ್ದಾಳೆ; ಚಿತ್ತೋದ್ಭವನ ಅಲರಂಬುಗಳು ನಾಟಿಕೊಂಡು ವೇದನೆಯನ್ನನುಭವಿಸುತ್ತಿದ್ದಾಳೆ. ಅವಳನ್ನು ಏನೆಂದು ಹೊಗಳಬೇಕು; ರೂಪದಲ್ಲಿ ಸಾಕ್ಷಾತ್ ರತಿ, ವಿದ್ಯೆಯಲ್ಲಿ ಸರಸ್ವತಿ, ತನ್ನ ಒಲವನ್ನು ನಿವೇದಿಸಲು ತನ್ನನ್ನು ಕಳಿಸಿದ್ದಾಳೆ. ಅವಳೊಡನೆ ಸೇರಿದರೆ ತಮಗೆ ಸಮಾನರು ಯಾರೂ ಇರಲು ಸಾಧ್ಯವಿಲ್ಲ ಎಂದು ನಿವೇದಿಸಿದಳು.

ರಾವಣನ ಮನಸ್ಸು ಇಕ್ಕಟ್ಟಿನಲ್ಲಿ ಸಿಲುಕಿತು; ದುಶ್ಚರಿತದ ಈ ವಿಷಯದ ಬಗ್ಗೆ ತಾನೇನು ಮಾಡಲಿ ಎಂದು ನಿರ್ಧರಿಸಲಾರದೆ ವಿಭೀಷಣನಿಗೆ ಹೇಳಿಕಳಿಸಿ ಈ ವಿಚಾರವನ್ನವನಿಗೆ ಗುಟ್ಟಾಗಿ ವಿವರಿಸಿದ. ಅದಕ್ಕೆ ಅವನು, "ಅವಳ ಬಗ್ಗೆ ನಿನಗೂ ಮೋಹವಿದೆಯೆಂದು ನಟಿಸಿ ಅವಳಿಂದ ದುರ್ಲಂಘ್ಯಪುರದ ಸುತ್ತಲಿನ ವಿದ್ಯಾಪ್ರಾಕಾರವನ್ನು ಹೋಗಲಾಡಿಸುವ ಪ್ರತಿವಿದ್ಯೆಯನ್ನು ಕಲಿತುಕೋ" ಎಂದು ಸೂಚಿಸಿದ. ಆನಂತರ ರಾವಣನು ಆ ದೂತಿಯ ಬಳಿ ಹೋಗಿ, "ನಿನ್ನ ಮಾತಿನಂತೆಯೇ ಆಗಲಿ; ಆಕೆಯನ್ನು ತಾಯೆ"ಂದು ದ್ವಂದ್ವಾರ್ಥದಲ್ಲಿ ಹೇಳಿದ. ಅವಳು ಹೋಗಿ ಬಹು ಬೇಗನೆ ಉಪರಂಭೆಯನ್ನು ಸಂಕೇತಸ್ಥಳಕ್ಕೆ ಕರೆತಂದಳು. ಅವಳಾದರೋ ರಾಣನ ಬಗೆಗಿನ ಅತೀವ ಮೋಹದಿಂದ, ತನ್ನ ಕುಲಕ್ಷಯದ ಬಗ್ಗೆ ಆಲೋಚಿಸದೆ, ತನ್ನ ಗಂಡನಿಗೆ ಉಂಟಾಗಬಹುದಾದ ಹಾನಿಯನ್ನು ಲೆಕ್ಕಿಸದೆ, ಸಾಲವಿದ್ಯಾಭಂಜಿನಿ ಎಂಬ ಪ್ರತಿವಿದ್ಯೆಯನ್ನು ಅವನಿಗೆ ಹೇಳಿಕೊಟ್ಟಳು. ಮದನೋನ್ಮಾದವು ಎಂಥವರನ್ನೇ ಆಗಲಿ ಮತಿಗಿಡಿಸುವುದರಲ್ಲಿ ಆಶ್ಚರ್ಯಕರವಾದದ್ದೇನಿದೆ! ಅವಳಿಂದ ವಿದ್ಯೆಯನ್ನು ಕಲಿತ ರಾವಣನು ಅವಳನ್ನು ಕಳಿಸಿಕೊಟ್ಟ.

ಮಾರನೆಯ ದಿವಸ ಸಾಲವಿದ್ಯೆಯನ್ನು ಪ್ರತಿವಿದ್ಯೆಯಿಂದ ಕೆಡಿಸಿ ದುರ್ಲಂಘ್ಯಪುರದ ಮೇಲೆ ದಾಳಿ ಮಾಡಿದ. ಘೋರ ಯುದ್ಧ ನಡೆಯಿತು; ಮದಕರಿಯನ್ನು ಸಿಂಹವು

ಹಿಡಿಯುವಂತೆ ವಿಭಿಷಣನು ನಳಕೂಬರನನ್ನು ಸೆರೆಗೈದ. ಅದೇ ಹೊತ್ತಿಗೆ ದಶಕಂಧರನ ಆಯುಧಗಾರದಲ್ಲಿ, ಅವನ ಪುರಾತನ ಪುಣ್ಯದ ಫಲವೆಂಬಂತೆ, ಶತ್ರುರಾಜರಿಗೆ ಪ್ರಳಯಕಾಲದ ಚಕ್ರದಂತಿದ್ದ ಸುದರ್ಶನಚಕ್ರವು ಹುಟ್ಟಿತು. ರಾವಣನು ಅತ್ಯುತ್ಸಾಹದಿಂದ ಚಕ್ರಪೂಜೆಯನ್ನು ಮಾಡಿ, ರಹಸ್ಯವಾಗಿ ಉಪರಂಭೆಯನ್ನು ಕರೆಸಿ ಈ ಮಾತುಗಳನ್ನು ಹೇಳಿದ: "ನೀನು ವಿಶುದ್ಧ ಕುಲದ ಕುಶಧ್ವಜ ಹಾಗೂ ಮಧುಕಾಂತೆಯರ ಮಗಳು; ನಿಮ್ಮ ಕುಲಾಚಾರದಂತೆ ಶೀಲಪರಿಪಾಲನೆ ಮಾಡುವುದು ನಿನ್ನ ಕರ್ತವ್ಯ. ಅಲ್ಲದೆ, ನನಗೆ ವಿದ್ಯೋಪದೇಶವನ್ನು ಮಾಡಿದ್ದರಿಂದ ನೀನು ಗುರುಸಮಾನಳು. ಮತ್ತೇನನ್ನೂ ಆಲೋಚಿಸದೆ ನಳಕೂಬರನ ಜೊತೆ ಸುಖವಾಗಿ ಸಂಸಾರವನ್ನು ಮಾಡಿಕೊಂಡಿರು." ರಾವಣನ ಮಾತುಗಳಿಂದ ಅವಳ ಮನಸ್ಸಿನ ಕಿಲ್ಬಿಷ ಕಳೆಯಿತು. ಆಮೇಲೆ ದಶಮುಖನು ನಳಕೂಬರನನ್ನೂ ಕರೆಸಿ, ತನ್ನ ಹಿರಿಮಗನಾದ ಇಂದಗಿಗಿಂತಲೂ ಹೆಚ್ಚಿನದೆಂಬಂತಹ ವಾತ್ಸಲ್ಯವನ್ನು ತೋರಿ, ಭಯವನ್ನು ನಿವಾರಿಸಿ, ಅವನಿಗೆ ಅಧೀನರಾಜಪದವಿಯನ್ನು ದಯಪಾಲಿಸಿದ. ಆನಂತರ ಅವನ ಜೊತೆಯಲ್ಲಿ ಹೊರಟು ಇಂದ್ರನ ಮೇಲೆ ದಾಳಿಗೈಯಲು ರಜತಗಿರಿಯ ತಪ್ಪಲಿಗೆ ಬಂದು ಬೀಡುಬಿಟ್ಟ.

ಈ ವಿಚಾರ ಇಂದ್ರಭೂಪತಿಗೆ ತಿಳಿಯಿತು. ರಣಭೇರೀನಿನಾದ ದಿಕ್ಕರಿಯ ಘೀಳಿನ ಸದ್ದು ದಿಗ್ವಲಯವನ್ನು ಆವರಿಸಿದಂತೆಯೂ, ಆಗಸವನ್ನೆಲ್ಲ ವ್ಯಾಪಿಸಿದ ಮೋಡಗಳಿಂದ ಹೊರಟ ಭಾರಿ ಗುಡುಗಿನಂತೆಯೂ ಎಲ್ಲೆಡೆ ತುಂಬಿತು. ಖೇಚರರ ಒಡ್ಡಣವು ನಿಲ್ಲಲು ಭೂಮಂಡಲವು ಸಾಲದೆಂಬಂತೆ, ಧ್ವಜಗಳ ಹಾರುವಿಕೆಗೆ ಗಗನವೇ ಕಿರಿದಾಯಿತೆಂಬಂತೆ, ನೆರೆದಿದ್ದ ರಾಜರ ಕಿರೀಟಗಳಲ್ಲಿನ ರತ್ನಕಾಂತಿಯು ದಶದಿಕ್ಕುಗಳಲ್ಲಿ ಹರಡುವಂತೆ ಇಂದ್ರನ ರುಂದ್ರಸೇನೆಯು ಸೇರಿತು. ಅದರ ಮೇಲೆ ರಾವಣನ ಬಲ ಬಂದು ತಾಗಿತು. ಈ ಘೋರ ಹೋರಾಟದಲ್ಲಿ ರಾಕ್ಷಸಬಲವು ಹಿಮ್ಮೆಟ್ಟಿತು. ಅದರ ಮುಖ್ಯನಾಯಕರಾದ ವಜ್ರವೇಗ, ಹಸ್ತ, ಪ್ರಹಸ್ತ, ಮಾರೀಚ, ಉದ್ಭಟ, ಉಜ್ವಳ, ವಜ್ರ, ಮಹಾಜಲಧರ, ಸಂಧ್ಯಾಭ್ರ, ಕ್ರೂರ ಮೊದಲಾದ ಮಹಾಬಲಪರಾಕ್ರಮರು ತಮ್ಮ ತಮ್ಮ ಬೆಂಬಲಿಗರನ್ನು ದೂರ ನಿಲ್ಲಿಸಿ, ದಿವಿಜಬಲವನ್ನು ಗೆಲ್ಲುವಂತೆ ತಾವೇ ಹೋರಾಡಲು ತೊಡಗಿದರು. ಇದನ್ನು ನೋಡಿದ ಮೇಘಬಲಿ, ತಟಿತ್ತುಂಗ, ಅದ್ರಿ, ಸಂಜ್ವಲ, ಪಾವಕ ಮೊದಲಾದ ಸುರಬಲದ ನಾಯಕರು ರಾವಣನ ಕಡೆಯ ಕೆಲವು ನಾಯಕರನ್ನು ಕೊಂದು ಹಾಕಿದರು. ಇದರಿಂದ ಕಪಿಧ್ವಜರು ಕಾಲಾಗ್ನಿರುದ್ರರ ಹಾಗೆ ಉರಿದೆದ್ದರು. ಪ್ರಸನ್ನಕೀರ್ತಿ–ಶ್ರೀಮಾಲಿಯರು ನಡುವೆ ಬಂದು ದಿವಿಜಬಲದಲ್ಲಿ ಹತತವಿತತ ಕೋಲಾಹಲವನ್ನುಂಟುಮಾಡಿ ಕಾದುತ್ತಿರುವುದನ್ನು ನೋಡಿದ ದಂಡಾಗ್ರ, ಶಿಖಂಡವ್ಯಾಲಿ, ಶಿಖಂಡಿ, ಶಿಖಿ, ಕೇಸರಿ, ಕನಕ, ಮೃಗಚಿಹ್ನ ಎಂಬ ಇಂದ್ರನ ಅಳಿಯಂದಿರು ಮೂದಲಿಸುತ್ತ ಯುದ್ಧದಲ್ಲಿ ತೊಡಗಿದರು. ಶ್ರೀಮಾಲಿಯು ಅರಿರಾಜರ ತಲೆಗಳನ್ನು ಕತ್ತರಿಸುತ್ತ ಯುದ್ಧಮಾಡಲು ಆಗಸದಲ್ಲಿದ್ದ ದೇವತೆಗಳೂ ಅವನ ಪರಾಕ್ರಮವನ್ನು ಕಂಡು ತಲೆದೂಗಿದರು. ಅದನ್ನು ಕಂಡು ಇಂದ್ರನ ಮಗನಾದ ಜಯಂತನು ರಣೋತ್ಸವದಿಂದ ಅವನ ಮೇಲೆ ತಾಗಿ ಬಂದು ಶ್ರೀಮಾಲಿಯನ್ನು ಕೊಂದುಹಾಕಿ ವಿಜಯಪತಾಕೆಯನ್ನೆತ್ತಿಸಿದ. ಆಗ ಇಂದ್ರಜಿತುವು ಕುಪಿತನಾಗಿ ಬಂದು ಜಯಂತನ ಜೊತೆ ಹೋರಾಟಕ್ಕೆ ನಿಂತ. ಇದನ್ನು ಕಂಡ ಇಂದ್ರನು ತನ್ನ ಐರಾವಣವೆಂಬ ಆನೆಯನ್ನೇರಿ ಆಗಸಕ್ಕೆ ನೆಗೆದ.

ಇದನ್ನೆಲ್ಲ ನೋಡುತಿದ್ದ ರಾವಣನ ಸಾರಥಿಯಾದ ಸನ್ಮತಿಯು ತನ್ನ ಒಡೆಯನಿಗೆ ಹೀಗೆಂದ: "ಯುದ್ಧದಲ್ಲಿ ಇಂದ್ರ ನೀನು ಸಮಾನರು; ಅವನನ್ನೆದುರಿಸಲು ಇತರರಿಂದ ಆಗದು. ಯುದ್ಧಯೋಗ್ಯನಾದರೂ ಇಂದಗಿ ಇನ್ನೂ ಬಾಲಕ; ಹಾಗಾಗಿ ನೀನೇ ಕದನಕ್ಕೆ ನಿಲ್ಲು" ಎಂದು ರಥವನ್ನು ಐರಾವಣದೆಡೆಗೆ ಮನೋವೇಗದಿಂದ ಚೋದಿಸಿದ. ಹೀಗೆ ಶುರುವಾದ ಇಂದ್ರ-ರಾವಣರ ಯುದ್ಧದಿಂದಾಗಿ ಆಗಸವೆಲ್ಲ ಬಾಣಗಳಿಂದ ತುಂಬಿಹೋಯಿತು. ಸಾಧಾರಣವಾದ ಬಾಣದಿಂದ ದಶಾಸ್ಯನನ್ನು ಗೆಲ್ಲುವುದು ಅಸಾಧ್ಯವೆಂದು ತಿಳಿದ ಇಂದ್ರನು ಕತ್ತಲೆಯ ಬಾಣವನ್ನು ಬಿಟ್ಟ; ಪ್ರತಿಯಾಗಿ ಬೆಳಕಿನ ಬಾಣವನ್ನು ಪ್ರಯೋಗಿಸಿ ರಾವಣ ಅದನ್ನು ತುಂಡರಿಸಿದ. ಅನಂತರ ಇಂದ್ರನು ನಾನಾ ಬಗೆಯ ದಿವ್ಯಶರಗಳನ್ನು ಪ್ರಯೋಗಿಸಿದಾಗ, ಅವೆಲ್ಲವನ್ನೂ ದಶಕಂಧರನು ಪ್ರತಿಶರಗಳಿಂದ ಕತ್ತರಿಸಿದ. 'ಯಾವ ದೇವರೂ ಇವನನ್ನು ಕಾಪಾಡಲಾರರು; ಇವನನ್ನು ಸಾವಿಗೆ ದೂಡುತ್ತೇನೆ' ಎಂದು ಕೋಪಾವಿಷ್ಟನಾದ ಇಂದ್ರನು ತನ್ನ ವಾರಣವನ್ನು ರಾವಣನೆಡೆಗೆ ದೂಡಿದ. ಶ್ರೀಮಾಲಿಯು ಸತ್ತ ಬೇಸರ ಮತ್ತು ಹಿಂದೆ ತನ್ನ ವಂಶದ ಪ್ರಭುವಾದ ಮಾಲಿಯನ್ನು ಕೊಂದ ಕೋಪಗಳು ಕೋಪಾಗ್ನಿಯನ್ನು ಭುಗಿಲೇಳಿಸಲು ರಾವಣನು 'ದ್ರೋಹಿ ಈಗ ಸಿಕ್ಕಿದ' ಎಂದು ರಿಪುಚಮೂವಿದ್ರಾವಣನಾದ ತನ್ನ ತ್ರಿಜಗದ್ಭೂಷಣವೆಂಬ ಆನೆಯನ್ನೇರಿ ಯುದ್ಧಕ್ಕೆ ಸಿದ್ಧನಾದ. ಹೀಗೆ ಅವರಿಬ್ಬರೂ ತಮ್ಮ ತಮ್ಮ ಆನೆಗಳ ಮೇಲೆ ಕುಳಿತು ಮಹಾಕದನದಲ್ಲಿ ತೊಡಗಿರುವಾಗ, ದಶವದನನು ತನ್ನ ಆನೆಯ ಮೇಲಿನಿಂದ ಹಾರಿ ಇಂದ್ರನ ಐರಾವಣದ ಮೇಲೆ ದುಮುಕಿ, ಅದರ ಮಾವತಿಗನನ್ನು ನೆಲಕ್ಕೆ ಕೆಡವಿ, ಇಂದ್ರನ ಮೇಲೆ ಹಾಯ್ದ. "ನಿನ್ನನ್ನು ಕೊಲ್ಲುವುದಿಲ್ಲ, ಹೆದರಬೇಡ" ಎಂದು ಹೇಳುತ್ತ ಅವನನ್ನು ತನ್ನ ಮೇಲುದದಿಂದ ಕಟ್ಟಿ, ಆನೆಯನ್ನು ಸಿಂಹ, ಅದನ್ನು ಶರಭ, ಅದನ್ನು ಭೇರುಂಡ ಆವರಿಸಿದಂತೆ ತನ್ನ ಶಿಬಿರಕ್ಕೆ ಕರೆದುಯ್ದ. ಆ ಸಮಯದಲ್ಲಿ ಇಂದ್ರನ ಮಗನಾದ ಜಯಂತನನ್ನು ಇಂದ್ರಜಿತು ಸೆರೆವಿಡಿದು ತರಲು, ಅವರಿಗೆ ಅಭಯವನ್ನಿತ್ತು ರಾವಣನು ಮಹಾವಿಭವದಿಂದ ಲಂಕೆಯನ್ನು ಹೊಕ್ಕು ಸುಖದಿಂದಿದ್ದ.

ಪರಿಜನ ಮತ್ತು ಉಪಾಯನಗಳಿಂದೊಡಗೂಡಿ ಸಹಸ್ರಾರನು ತನ್ನ ಮಗನ ಮೇಲಿನ ಮೋಹದಿಂದ ರಾವಣನಲ್ಲಿಗೆ ಬಂದ. ಉಚಿತ ಮರ್ಯಾದೆಗಳಿಂದ ಬರಮಾಡಿಕೊಂಡ ದಶಶಿರನು ಅವನನ್ನು ತನ್ನ ಮಗನಿಗಿಂತ ಹೆಚ್ಚಿನ ರೀತಿಯಲ್ಲಿ ವಾತ್ಸಲ್ಯದಿಂದ ಕಂಡು ಮಣಿಮಯಾಸನದಲ್ಲಿ ಕುಳ್ಳಿರಿಸಿ ವಿನಯದಿಂದ ಬಂದ ವಿಚಾರವೇನೆಂದು ಕೇಳಿದ. ಅದಕ್ಕೆ ಸಹಸ್ರಾರನು ಹೀಗೆಂದ: "ಇಂದ್ರನನ್ನು ಗೆದ್ದು ನೀನು ನಿನ್ನ ಭುಜಬಲವನ್ನು ತೋರಿಸಿದ್ದೀಯೆ. ಈಗ ಅವನನ್ನು ಸೆರೆಯಿಂದ ಬಿಡಿಸಿ ನಿನ್ನ ದೊಡ್ಡಸ್ತಿಕೆಯನ್ನು ಮೆರೆಯಬೇಕು" ಎಂದು ಹೇಳಿದ. 'ಮಹಾಪ್ರಸಾದ' ಎಂದು ರಾವಣನು ಇಂದ್ರನನನ್ನು ಕರೆಸಿ, "ಯಾವುದೇ ಮನಃಕಷಾಯವಿಲ್ಲದೆ ನಿನ್ನ ರಾಜ್ಯದಲ್ಲಿ ಸುಖವಾಗಿರು" ಎಂದು ಕಳಿಸಿದ. ಹಾಗೆ ಬಂದ ಇಂದ್ರನು ರಾವಣನ ಮೇಲಿನ ಬೇಸರವನ್ನು ತೊರೆದು, ತನ್ನ ಹಿರಿಯ ಮಗನಾದ ಇಂದುವಿಗೆ ಪಟ್ಟ ಕಟ್ಟಿ, ಮತ್ತೊಬ್ಬ ಮಗನಾದ ಜಯಂತ ಮತ್ತು ಲೋಕಪಾಲರೊಡನೆ ದೀಕ್ಷೆ ಪಡೆದು ಮೋಕ್ಷಕ್ಕೆ ಸಂದ.

ಹೀಗೆ ಇಂದ್ರನನ್ನು ಗೆದ್ದ ದಶಾನನನು ವರುಣನ ಮೇಲೆ ದಾಳಿಗೈಯಲೆಂದು

ಸಮಸ್ತ ಸಾಮಂತರನ್ನು ಬರಿಸಿ ಹನುಮರ ದ್ವೀಪಕ್ಕೆ ದೂತನನ್ನು ಕಳಿಸಿದ. ಅವನು ಬಂದು ಪ್ರತಿಸೂರ್ಯ ಮತ್ತು ಪವನಂಜಯರನ್ನು ಕಂಡು ತಾನು ಬಂದ ಉದ್ದೇಶವನ್ನು ಅರುಹಿದ. ಆಗ ಪವನಂಜಯನು ಆಂಜನೇಯನನ್ನು ಬರಮಾಡಿಕೊಂಡು, "ವರುಣನು ತನ್ನ ಅಧೀನನಾಗಲು ಒಪ್ಪುವುದಿಲ್ಲ ಎಂಬ ಅನುಮಾನದಿಂದ ರಾವಣನು ನಮಗೆ ಹೇಳಿಕಳಿಸಿದ್ದಾನೆ. ತಡಮಾಡುವುದು ತರವಲ್ಲ; ನೀನು ರಾಜ್ಯರಕ್ಷಣೆಯ ಹೊಣೆಯನ್ನು ಹೊರಬೇಕು" ಎಂದು ಹೇಳಿದ. ಮಾರುತಿಯು ಕೈಗಳನ್ನು ಮುಗಿದುಕೊಂಡು ಅವನಾಜ್ಞೆಯನ್ನು ಅಂಗೀಕರಿಸಿದ. ತಂದೆಯ ಆಣತಿಯಂತೆ ವಿಮಾನಾರೂಢನಾಗಿ ಅಸಂಖ್ಯಾತ ಬಲಸಮೇತ ಹೊರಟು, ಸಮುದ್ರಮಧ್ಯದ ದ್ವೀಪಗಳನ್ನೂ ನಗರಗಳನ್ನೂ ನೋಡಿಕೊಂಡು ಬರುತ್ತಿರುವ ಸಮಯದಲ್ಲಿ, ಗಗನಮಂಡಲದಲ್ಲಿದ್ದ ರಾವಣನು ಹನುಮನ ಬರವನ್ನು ಕಂಡ; ಉತ್ಸುಕತೆಯಿಂದ ಇದಿರುಗೊಂಡಾಗ, ಮರುತ್ಸುತನು ಅವನ ಪಾದಗಳಿಗೆರಗಿದ. ಅವನನ್ನು ತಕ್ಕೈಸಿದ ರಾವಣನು ಶತ್ರುಗಳನ್ನು ಗೆಲ್ಲುವುದು ತನಗಿನ್ನು ಸುಲಭವಾಯಿತೆಂದು ಹರ್ಷಗೊಂಡ.

ಆಗಸ ಭೂಮಿ ದಿಕ್ಕುಗಳನ್ನೆಲ್ಲ ಆವರಿಸುವಂತಹ ಬಲದಿಂದೊಡಗೂಡಿ ರಾವಣನು ಹೊರಟು ಪಾತಾಳಪುಂಡರೀಕಪುರವನ್ನು ಮೂವಳಸಾಗಿ ಆವರಿಸಿದ. ಇದರಿಂದ ಕುಪಿತನಾದ ವರುಣನು, ಇರುವುದು ಒಬ್ಬ ಯಮನಲ್ಲ ನೂರು ಮಂದಿ ಎನಿಸುವ ತನ್ನ ನೂರು ಮಂದಿ ಮಕ್ಕಳೊಡನೆ, ಕದನರಂಗಕ್ಕೆ ಹೊರಟ. ಸಂಗ್ರಾಮಲಂಪಟರಾದ ಆ ಮಕ್ಕಳು ಸಿಂಹಗಳ ಜಂಗುಳಿಯಂತೆ ಹೋರಾಡಲು ದಶಮುಖನ ಚತುರಂಗಬಲವು ಹಿಮ್ಮೆಟ್ಟಿತು. ಆಗ ಹನುಮನು ಸೈನ್ಯಸಮೇತನಾಗಿ ಬಂದು ರಿಪುಸೇನೆಯನ್ನು ಸುತ್ತುವರಿದ; ವಾನರವಿದ್ಯೆಯನ್ನು ತಾಳಿ, ವಾನರ ರೂಪನ್ನು ಪಡೆದು ಮರಗಳನ್ನು ಕಿತ್ತು ರಿಪುಸೇನೆಯ ಆನೆ ಕುದುರೆ ರಥಗಳನ್ನು ಹೊಡೆಯುತ್ತ, ಗುಂಡುಕಲ್ಲುಗಳಿಂದ ಜಜ್ಜಿಹಾಕಿ ನಾಶಮಾಡಿದ. ಮರುತ್ಸೂನುವನ್ನು ಆಜಿರಂಗದಲ್ಲಿ ಎದುರಿಸಿ ಬದುಕುವವನಿದ್ದಾನೆಯೇ! ಹಾಗೆ ಸೇನೆಯನ್ನು ನುಚ್ಚುನುರಿಮಾಡಿದ ಹನುಮನು ವರುಣನ ನೂರು ಮಂದಿ ಮಕ್ಕಳನ್ನು ಕಟ್ಟಿ ಹಾಕಿದ. ಇದರಿಂದ ಕುಪಿತನಾದ ವರುಣನು ನಾನಾ ವಿದ್ಯೆಗಳ ಬಲದಿಂದ ಹೋರಾಡಲು, ಕೊನೆಗೆ ರಾವಣನು ಅವನನ್ನು ಹಿಡಿದುಬಿಟ್ಟ. ಅವನನ್ನು ಕುಂಭಕರ್ಣನ ವಶದಲ್ಲಿ ಬಿಟ್ಟು ಭುವನೋನ್ಮಾದವೆಂಬ ಉದ್ಯಾನವನದಲ್ಲಿ ಬೀಡುಬಿಟ್ಟು, ರಾಜಸಭೆಯನ್ನು ಸೇರಿಸಿ ವರುಣನ್ನು ಅಲ್ಲಿಗೆ ಕರೆಸಿದ. ಅವನನ್ನು ಮನ್ನಿಸಿ, ಕಲಿಯಾದವನು ಯುದ್ಧದಲ್ಲಿ ಸೋಲುಸಾವುಗಳನ್ನು ಪಡೆಯುವುದು ಸಹಜವಾದ್ದರಿಂದ, ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳದೆ ಮೊದಲಿನಂತೆಯೇ ತನ್ನ ರಾಜ್ಯದಲ್ಲಿರಲು ಒಪ್ಪಿಸಿದ. ಅವನ ಕೈಗಳನ್ನು ಹಿಡಿದುಕೊಂಡು ಪ್ರೀತಿಯನ್ನು ತೋರಿಸಿದ. ವರುಣನು ಹನುಮನ ಅಸೀಮವಾದ ಬಲ್ಲಾಳ್ತನವನ್ನು ಹೊಗಳಿದ; ತನ್ನ ಮಗಳಾದ ಸತ್ಯವತಿಯನ್ನು ರಾವಣನಿಗಿತ್ತು ಮಹಾವೈಭವದಿಂದ ಮದುವೆ ಮಾಡಿದ. ಆನಂತರ ತನ್ನೂರಿಗೆ ವಾಪಸು ಹೋದ.

ಈ ಕಡೆ ರಾವಣನು ಲಂಕೆಗೆ ಬಂದು ಚಂದ್ರನಖಿಯ ಮಗಳಾದ ಅನಂಗಪುಷ್ಪೆಯನ್ನು ಹನುಮನಿಗೆ (ಅವನಿಗೆ ಶ್ರೀಶೈಲನೆಂದೂ ಹೆಸರುಂಟು) ಕೊಟ್ಟು ಮದುವೆಮಾಡಿ, ಕರ್ಣಕುಂಡಲಪುರದ ಆಧಿಪತ್ಯವನ್ನು ಅವನಿಗಿತ್ತು ರಾಜ್ಯಾಭಿಷೇಕಗೈದ. ಹನುಮನು

ಅಲ್ಲಿಗೆ ಹೋಗಿ ಸಹಸ್ರಮಂದಿಯಿದ್ದ ಅಂತಃಪುರಕ್ಕೆ ವಲ್ಲಭನಾಗಿ, ಸುಗ್ರೀವ–ಸುತಾರೆಯರ ಮಗಳಾದ ಪದ್ಮರಾಗೆಯನ್ನು ವಿವಾಹವಾಗಿ ಸುಖದಿಂದಿದ್ದ.

ಭರತತ್ರಿಖಂಡವನ್ನು ದಶಶಿರನು ಆಳಲು ತೊಡಗಿದ ಮೇಲೆ ಅವನಿಗೆ ಚಕ್ರರತ್ನ–ಖಡ್ಗರತ್ನಗಳು ದೊರೆತವು; ಅಖಿಲ ವಿದ್ಯಾಧರವಲ್ಲಭರು ಅವನಿಗೆ ಆನತರಾದರು. ಕೋಪ ಬಂದರೆ ಯಾರನ್ನಾದರೂ ಕೊಂದಿಕ್ಕಬಲ್ಲ ರಾವಣನೊಡನೆ ಕದನಕ್ಕಿಳಿಯಬಲ್ಲವರು ಇಲ್ಲ. ಅವನ ತ್ರಿಜಗದ್ಭೂಷಣ ಗಜವನ್ನು ಮಣಿಸಲು ಸಾಕ್ಷಾತ್ ಇಂದ್ರನಿಗೂ ಸಾಧ್ಯವಾಗದು; ಅವನ ಚಕ್ರರತ್ನಕ್ಕೆ ಎದುರಾಗಬಲ್ಲುದು ಭೂಮಂಡಲದಲ್ಲಿಯೇ ಇಲ್ಲ; ಅಚನ ಚಂದ್ರಹಾಸವೆಂಬ ಕತ್ತಿಗೆ ಎದುರಾಗಿ ನಿಂತು ಹೋರಾಡಬಲ್ಲವನಾರೂ ಇರಲಾರರು. ರಾವಣನ ಖಡ್ಗವು ಅವಿಧೇಯರಾದವರನ್ನೆಲ್ಲ ಕತ್ತರಿಸಿ ಪಿಶಾಚಿಗಳ ಬಾಯಿಗೆ ತುರುಕುವುದೆಂದರಿತು ಎಲ್ಲ ಕ್ಷತ್ರಿಯರಾಜರೂ ಖೇಚರರೂ ಯುದ್ಧವಿಮುಖರಾಗಿ ಅವನ ಆಜ್ಞಾವರ್ತಿಗಳಾದರು. ಅವನ ಬಳಿ ಇದ್ದುದೆಲ್ಲ ದಿವ್ಯಾಸ್ತ್ರಗಳೇ; ಭೀಷಣಬಲರೂ, ಅಸುಹೃದ್ಬಲಶೋಷಣರೂ, ಶರಣಾಗತಸಂತೋಷಕರರೂ ಆದ ಕುಂಭಕರ್ಣವಿಭೀಷಣರು ಅವನ ಒಡಹುಟ್ಟಿದವರು; ಸುರಾಸುರವಿಯಚ್ಚರಸೇನೆಗಳಲ್ಲಿ ಯಾವುದಕ್ಕೂ ಬಾಗದ ಇಂದಗಿ–ಮೇಘವಾಹನರು ಅವನ ಮಕ್ಕಳು. ಇನ್ನು ಅವನ ಖೇಚರ ಸೈನ್ಯದ ಹವಣನ್ನು ಏನೆಂದು ವರ್ಣಿಸಬೇಕು: ನಿರಾಯುಧವಾಗಿದ್ದರೂ ಅದನ್ನು ಮಣಿಸುವುದು ಅಸಾಧ್ಯ. ಹೀಗೆ ಬಲ, ಭುಜಬಲ, ವಿದ್ಯಾಬಲ, ಮನೋಬಲಗಳ ಬಲ್ಪಿನಿಂದ ಅಮರೇಂದ್ರನಿಗೂ ಅಸಾಧ್ಯನೆನಿಸಿದ ರಾವಣನು ಜಗದ್ವಿದ್ರಾವಣನೆನಿಸಿದ.

ಹೀಗೆ ರಾವಣನ ಚರಿತ್ರೆಯನ್ನು ಜಾಂಬೂನದನು ಹೇಳಿ ಮುಗಿಸಿದಾಗ ಲಕ್ಷ್ಮಣನು ಕೋಪದ ಮುಗುಳ್ನಗೆಯಿಂದ ಹಾಸ್ಯದಿಂದ ಕೂಡಿದ ಈ ಮಾತನ್ನಾಡಿದ: "ಅವನು ನಮ್ಮನ್ನೆದುರಿಸಲು ಹೆದರಿ ಅತ್ತಿಗೆಯನ್ನು ಕದ್ದೊಯ್ದುದೇ ಅವನೆಂತಹ ಪರಾಕ್ರಮಿ ಎಂಬುದನ್ನು ಸಾರಿ ಹೇಳುವುದಿಲ್ಲವೇ! ಅಂತಹ ಭಯಭೀತನು ಇಕ್ಷ್ವಾಕುವಂಶಜರನ್ನು ಗೆಲ್ಲಬಲ್ಲನೇ? ಯುದ್ಧದಲ್ಲಿ ರಾಮರಾವಣರ ನಡುವಣ ಮೆಲ್ಪುಬಲ್ಪುಗಳ ವ್ಯತ್ಯಾಸವು ತಿಳಿಯುತ್ತದೆ. ನಾಳೆಯೇ ಅವನ ಮೇಲೆ ಯುದ್ಧಕ್ಕೆ ಹೊರಡೋಣ. ರಾವಣನ ಅಟ್ಟೆಯು ಮರುಳುಗಳ ಹಿಂಡಿನಲ್ಲಿ ತಾಂಡವವಾಡುವುದನ್ನು ನೀವೇ ಕಾಣುವಿರಿ. ದನುಜೇಂದ್ರನು ಅಲ್ಪವೀರ್ಯ; ಮನುಜೇಂದ್ರನು ಅನಂತವೀರ್ಯ. ಆನೆಗಳನ್ನು ಗೆದ್ದುಬಿಟ್ಟಾಕ್ಷಣ ಸಿಂಹವು ಶರಭವನ್ನು ಗೆಲ್ಲಬಲ್ಲುದೆ? ಕತ್ತಲೆಯು ಹಿರಿದಾದರೇನು; ದಿನಕರನಿಗೆದುರಾಗಿ ನಿಲ್ಲಬಲ್ಲುದೇ?"

* * * * *

# ೧೧. ಲಂಕಾದಹನ

ಲಕ್ಷ್ಮಣನ ಮಾತನ್ನು ಕೇಳಿ ಜಾಂಬೂನದ ಮುಂತಾದ ಪ್ರಧಾನರು ಹೀಗೆಂದರು: "ನಮಗೆ ಅಧಿರಾಜನಾದ ಮತ್ತು ಭೂಮಂಡಲಕ್ಕೆಲ್ಲ ಒಡೆಯನಾದ, ಖೇಚರ ಪ್ರಮದೆಯರನ್ನು ಆಕರ್ಷಿಸಿ ರಾಜ್ಯವೈಭವದಿಂದ ಮೆರೆಯುತ್ತಿರುವವನನ್ನು ಕ್ರಮವಾಗಿ ಉಪಾಯದಿಂದ ಒಲಿಸಿ ದೇವಿಯನ್ನು ಕರೆತರಬೇಕು; ಮೊತ್ತ ಮೊದಲಲ್ಲಿಯೇ ದಂಡದ ಮಾತನ್ನಾಡಬಾರದು. ಯಾವ ರಾಜರು ರಾವಣನಿಗೆ ಭೀತಿಯಿಂದಲ್ಲದೆ ಸ್ವಯಮೇಚ್ಛೆಯಿಂದ ಅಧೀನರಾಗಿಲ್ಲವೋ ಅಂತಹವರನ್ನು ನಮ್ಮನ್ನು ಬೆಂಬಲಿಸಲು ಒಪ್ಪಿಸಿ ಅವರೆಲ್ಲರೊಡನೆ ಯುದ್ಧಕ್ಕೆ ಹೊರಡಬೇಕು; ಕಾಲವಿಳಂಬ ಎಂದು ಆತುರಪಡಬಾರದು." ಆಗ ರಘುವೀರನೆಂದ: "ಅವನನ್ನು ಎದುರಿಸಲಾಗದೆ ಭೀತಿಯಿಂದ ಅವನ ಅಧೀನರಾದವರ ನೆರವು ನಮಗೇಕೆ ಬೇಕು; ನಮ್ಮ ಸಹಜ ಭುಜಬಲವೇ ದನುಜನನ್ನು ಹೆದರಿಸಲು ಸಾಲದೇ? ರಘುಕುಲಕ್ಕೆ ಕುಲವ್ರತವು ಅನುಶಾಸನ; ಪರಸ್ತ್ರೀಯನ್ನು ಮೋಹಿಸಿದ ದುರಾತ್ಮನು ರಣದಲ್ಲಿ ಎದುರಿಸಿದರೆ ನನ್ನ ಅಮೋಘ ಬಾಣದಿಂದ ಅವನನ್ನು ದೆಸೆಬಲಿ ಕೊಡುತ್ತೇನೆ. ನಮಗೆ ಹೆದರಿ ಜಾನಕೀದೇವಿಯನ್ನು ಒಪ್ಪಿಸಿದರೆ ಅವನನ್ನು ಉಳಿಸುತ್ತೇನೆ. ಈ ಬಗ್ಗೆ ನಾವು ಸುಮ್ಮನೇಕೆ ಚರ್ಚಿಸಬೇಕು?"

ಈ ಮಾತನ್ನು ಕೇಳಿದ ಜಾಂಬೂನದನು ತನ್ನ ಮನಸ್ಸಿನಲ್ಲಿಯೇ, ರಾವಣನನ್ನು ತೃಣಪುರುಷನಂತೆ ಕಲ್ಪಿಸಿಕೊಂಡು ಈ ರಘುರಾಮನು ರಣರಭಸಿಯಾಗಿದ್ದಾನೆ ಎಂದು ಅಚ್ಚರಿಪಟ್ಟ. ದಿವ್ಯಮುನಿಗಳು ಹೇಳಿದ್ದ ಸಂಗತಿಯನ್ನು ಅವನಿಗೆ ಹೇಳಲನುವಾದ; ಕೈಗಳನ್ನು ಮುಗಿದುಕೊಂಡು, ಒಮ್ಮೆ ದಶಗ್ರೀವನು ಅನಂತವೀರ್ಯ ಕೇವಲಿಗಳನ್ನು ಕಂಡು ಅವರ ಚರಣೋಪಾಂತದಲ್ಲಿ ಧರ್ಮಶ್ರವಣ ಮಾಡಿ, ತನಗೆ ಯಾರಿಂದ ಮರಣವುಂಟಾಗುತ್ತದೆಂಬುದನ್ನು ಬೆಸೆಸಲು ಕೇಳಿಕೊಂಡನಂತೆ, ಅವರು ಸಿದ್ಧಶೈಲವನ್ನೆತ್ತಿದವನಿಂದ ಮಾತ್ರವೇ ರಾವಣನ ಮರಣವುಂಟಾಗುತ್ತದೆಂಬ ವಿಷಯವನ್ನು ತಿಳಿಸಿದರಂತೆ. ಅದನ್ನು ಕೇಳಿದ ದಶಗ್ರೀವನಿಗೆ ಸಿದ್ಧಶೈಲವನ್ನೆತ್ತುವ ಮಹಾಸತ್ವನಾವನೂ ಇಲ್ಲವಾದ್ದರಿಂದ ತನಗೆ ಮರಣವಿಲ್ಲವೆಂದು ಹರ್ಷಚಿತ್ತನಾದ ಸಂಗತಿಯನ್ನು ಅರುಹಿದ. ಆಗ ಲಕ್ಷ್ಮಣದೇವನು, ಕುಲನಗವನ್ನೇ ಎತ್ತಬಲ್ಲ ತನಗೆ ನಿರ್ವಾಣಶೈಲವನ್ನೆತ್ತುವುದು ಯಾವ ಮಹಾ! ತಾನು ಅಚಲವಚನ; ಜಳ್ಳು ಮಾತಾಡುವವನಲ್ಲ ಎಂದು ಹೇಳಿದ. ಇದರಿಂದ ನಂಬಿಕೆಯುಂಟಾಗಿ ಜಾಂಬೂನದನು ವಿಮಲಬುದ್ಧಿ, ಸುಗ್ರೀವ, ನಳ, ನೀಲ, ಅರ್ಕ, ಮಾಲಿ

ಇವರುಗಳೊಡನೆ ರಾಮಲಕ್ಷ್ಮಣರನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ನಿರ್ವಾಣಶೈಲದ ಬಳಿ ಗಗನಮಾರ್ಗದಲ್ಲಿ ಗುಟ್ಟಾಗಿ ಕರೆತಂದ. ಸೌಮಿತ್ರಿಯು ಶೈಲವನ್ನು ಬಲವಂದು ಸಿದ್ಧಗುಣಸ್ತವನ ಮಾಡಿ ಕಾಲಿನಿಂದ ನೆಲದ ಮೇಲೆ ಜಾಡಿಸಿದ; ಅದರಿಂದ ಭೂಮಿಯೇ ಬಾಯ್ದೆರೆಯಿತು. ಆನಂತರ ತನ್ನ ಬಾಹುದ್ವಯವನ್ನು ಚಾಚಿ, ಬಾಗಿ ಭೂಮಿಯ ಬಿರುಕಿನಲ್ಲಿ ಎಡಗೈಯಿಟ್ಟು, ದಶಕಂಧರನ ಗಂಟಲೆಂಬ ತಾವರೆಯ ಬೇರನ್ನೇ ಕೀಳುವ ಹಾಗೆ ಮೇಲೆತ್ತಿದ. ಅವನ ಬಾಹುಬಲದ ಏಕಛತ್ರವೆಂಬಂತೆ ಅದು ಕಾಣಿಸಿತು. ಮುಂದೆ ದಶವದನನ ವಧೆಯನಂತರ ಆಗುವ ರಾಜ್ಯಾಭಿಷೇಕವನ್ನು ಸೂಚಿಸುವಂತೆ ಬೆಟ್ಟದಿಂದ ನಿರ್ಝರಪ್ರವಾಹ ಸುರಿಯಿತು. ಲಕ್ಷ್ಮಣನ ಬಾಹುಬಲವನ್ನು ದೇವಾನುದೇವತೆಗಳು ಚೆನ್ನಾಗಿ ಕಾಣಲು ಕೈದೀವಿಗೆಗಳನ್ನು ಹಿಡಿಯುವಂತೆ ಬೆಟ್ಟದ ಮೇಲಿನ ಹುತ್ತಗಳಿಂದ ಹೆಡೆಯೆತ್ತಿ ಹೊರಬಂದ ಹಾವುಗಳ ಹಣೆಯ ಮಣಿಗಳು ಫಳಫಳ ಹೊಳೆದವು. ಅಲ್ಲಿನ ಮರಗಳು ಅಲುಗಾಡಿ ಹೂಮಳೆಯನ್ನು ಸುರಿಸುವಂತೆ ಅವುಗಳಿಂದ ಹೂಗಳುದುರಿದವು; ಹೂಮಳೆಯೊಡನೆ ಬಂದ ಗುಡುಗಿನ ಸದ್ದಿನಂತೆ ಸಿಂಹಗಳ ಗರ್ಜನೆ ಕೇಳಿಬಂತು. ಆಗ ದೇವದುಂದುಭಿಗಳು ಮೊಳಗಿದವು, ಹೂಮಳೆ ಸುರಿಯಿತು, ಜಯಜಯಸ್ವನ ಮೊಳಗಿತು; ವಾನರಧ್ವಜರೇ ಮುಂತಾದ ವಿಯಚ್ಚರರು ಲಕ್ಷ್ಮಣನ ಅಗುರ್ವನ್ನು ಕಂಡು ವಿಸ್ಮಿತರಾದರು. ಅವರೆಲ್ಲ ರಾಮಲಕ್ಷ್ಮಣರನ್ನು ಪೂಜಿಸಿ ಮತ್ತೆ ಕಿಷ್ಕಿಂಧೆಗೆ ಕರೆತಂದು ವಿಶ್ರಾಂತಿ ಪಡೆದರು.

ಮಾರನೆಯ ದಿನ ಈ ವಿಷಯದಲ್ಲಿ ಖೇಚರರಲ್ಲಿ ಜಿಜ್ಞಾಸೆ ನಡೆಯಿತು. ಕೆಲವರು ಅನಾಯಾಸವಾಗಿ ಸಿದ್ಧಶೈಲವನ್ನೆತ್ತಿದ ಲಕ್ಷ್ಮಣನ ಭುಜವೀರ್ಯವನ್ನು ಹೊಗಳಿದರು. ಮತ್ತೆ ಕೆಲವರು ರಾವಣನು ಈ ಮುಂಚೆ ಕೈಲಾಸವನ್ನೆತ್ತಿದ್ದ ಸಂಗತಿಯನ್ನು ಪ್ರಸ್ತಾಪಿಸಿ, ಅವರಿಬ್ಬರಲ್ಲಿ ಯಾರು ಹೆಚ್ಚು ಬಲಿಷ್ಠರೆಂಬುದನ್ನು ಯುದ್ಧದಲ್ಲಿ ಮಾತ್ರ ನಿರ್ಣಯಿಸಬಹುದೆಂದು ಅಭಿಪ್ರಾಯಪಟ್ಟರು. ಮತ್ತೆ ಕೆಲವರದು ಇನ್ನೊಂದು ದೃಷ್ಟಿಕೋನ: ರಾವಣ ಕೈಲಾಸವನ್ನೆತ್ತಿದ್ದು ದೇವತೆಗಳ ಬೆಂಬಲದಿಂದಲೇ ಹೊರತು, ಇವನ ಹಾಗೆ ತನ್ನ ಭುಜಬಲದಿಂದ ಅಲ್ಲ ಎಂಬುದೇ ಅದು. ವಾಸುದೇವನು ಯುದ್ಧದಲ್ಲಿ ದಶಗ್ರೀವನನ್ನು ಕೊಂದು ಭರತತ್ರಿಖಂಡವನ್ನು ಆಳುವುದರಲ್ಲಿ ಸಂದೇಹವೇ ಇಲ್ಲವೆಂಬುದು ಮತ್ತೆ ಕೆಲವರ ಅಭಿಪ್ರಾಯವಾಯಿತು. ಹೀಗೆ ಮಾತಾಡಿಕೊಳ್ಳುತ್ತ ಅವರೆಲ್ಲ ಸುಗ್ರೀವನೊಡನೆ ರಾಮಲಕ್ಷ್ಮಣರಿದ್ದೆಡೆಗೆ ಬಂದು ಅವರಿಗೆ ವಂದಿಸಿ ಕುಳಿತರು. ಅವರನ್ನು ನೋಡಿ ರಾಜೀವಾಕ್ಷನು, "ನಮ್ಮ ಸತ್ವವನ್ನು ತಿಳಿಯದೆ ಇದುವರೆಗೂ ತಡಮಾಡಿದ ಅನ್ಯಾಯವೇ ಸಾಕು. ಈಗ ತಡಮಾಡದೆ ಜಾನಕಿಯಿದ್ದ ಜಾಗವನ್ನು ಪತ್ತೆ ಹಚ್ಚಿ ಲಂಕೆಯ ಮೇಲೆ ದಾಳಿ ಮಾಡದಿದ್ದರೆ ಪರಾಕ್ರಮದ ಹಿರಿಮೆಗೆ ಕುಂದುಂಟಾಗುತ್ತದೆ" ಎಂದ.

ಅದಕ್ಕೆ ಜಾಂಬವನು, "ನಯವನ್ನು ಸರಿಯಾಗಿ ವಿವರಿಸಿದರೆ ಅನ್ಯಾಯವನ್ನು ಯಾರು ತಾನೇ ಬಿಡುವುದಿಲ್ಲ? ಕನ್ನಡಿಯನ್ನು ಬೆಳಗಿದರೆ ಕಿಲುಬು ಹೋಗುವುದಿಲ್ಲವೇ? ಕೋಪಗೊಂಡಾನೆಂದು ರಾವಣನಿಗೆ ತಕ್ಕ ಬುದ್ಧಿಮಾತುಗಳನ್ನು ಹೇಳುವವರು ಯಾರೂ ಇಲ್ಲ; ಆದರೆ ಯಾವ ಅಂಜಿಕೆಯಿಲ್ಲದೆ ಹೇಳಿ ಅಣ್ಣನನ್ನು ಸರಿದಾರಿಯಲ್ಲಿ ತರಲು ವಿಭೀಷಣನು ಮಾತ್ರವೇ ತಕ್ಕವನು. ಅವನು ಶುದ್ಧಾಚಾರಿ, ವಿಚಾರಪರ; ಪರಾಂಗನೆಯನ್ನು ಕದ್ದು ತರುವುದು ತರವಲ್ಲವೆಂದು ಅಣ್ಣನಿಗೆ ತಿಳಿಹೇಳಿದರೆ ಅವನು ಜನಕಸುತೆಯನ್ನು

ಖಂಡಿತ ವಾಪಸು ಕಳಿಸುತ್ತಾನೆ. ಆದ್ದರಿಂದ ವಿಭೀಷಣನಲ್ಲಿಗೆ ನಮ್ಮ ದೂತನನ್ನು ಕಳಿಸೋಣ; ದಶಕಂಠನು ಬಗ್ಗಬಹುದು. ಆಗ ಯುದ್ಧ ತಾನಾಗಿ ನಿವಾರಣೆಯಾಗುತ್ತದೆ. ಅಲ್ಲದೆ, ಸೀತಾದೇವಿಗೆ ತಮ್ಮ ಕುಶಲವು ತಿಳಿದು ದುಃಖದ ಆವೇಗವು ತಗ್ಗುವುದು" ಎಂದು ನಯವನ್ನು ನುಡಿದನು. ಅದನ್ನು ಕೇಳಿದ ಮಹೋದಧಿಯು, "ಬಿಸಿಲು-ಗಾಳಿಗಳೂ ಪ್ರವೇಶಿಸದ ಹಾಗೆ ರಾವಣನು ಲಂಕಾಪುರಿಯನ್ನು ವಿದ್ಯಾಪ್ರಾಕಾರದಿಂದ ಕಟ್ಟಿಹಾಕಿದ್ದಾನೆ. ಹೀಗಾಗಿ ವಿದ್ಯಾಧರರಲ್ಲಿ ಯಾವೊಬ್ಬನೂ ಆ ನಗರವನ್ನು ಪ್ರವೇಶಿಸಲು ಅಸಮರ್ಥರು; ಅಜೇಯಬಲನಾದ ಆಂಜನೇಯನು ಮಾತ್ರ ಅಲ್ಲಿಗೆ ಹೋಗಲೂ ಕಾರ್ಯವನ್ನು ಮುಗಿಸಿಕೊಂಡು ಬರಲೂ ಸಮರ್ಥ. ಅವನು ಸೀತಾದೇವಿಯನ್ನು ಬಿಡಿಸಿ ತರಲೂ ಬಲ್ಲ, ಹೋರಾಡಿ ಕರೆತರಬಲ್ಲ. ಆದ್ದರಿಂದ ಅವನನ್ನು ಕಳಿಸುವುದೊಳ್ಳೆಯದು" ಎಂದು ಸಲಹೆ ನೀಡಿದ.

ಆ ನುಡಿಯನ್ನು ಕೇಳಿ ಸಂತಸಪಟ್ಟ ಸುಗ್ರೀವನು ಮಹೋದಧಿಗೆ ಮೆಚ್ಚುಕೊಟ್ಟು, ಹನುಮನನ್ನು ಕರೆತರಲು ಗೃಹಭೂತಿಯೆಂಬ ದೂತನನ್ನು ಅಟ್ಟಿದ. ಅವನು ಗಗನಮಾರ್ಗದಿಂದ ಹನುಮನ ದ್ವೀಪಕ್ಕೆ ಹೋಗಿ, ಇಳಿದು ರಾಜಭವನವನ್ನು ಹೊಕ್ಕು, ಪವನಸುತನ ಪಾದಗಳಿಗೆ ಬಿದ್ದು ತಾನು ಬಂದ ಕಾರಣವನ್ನು ಹೇಳಿದ: ರಾಮಲಕ್ಷ್ಮಣರು ದಂಡಕಾರಣ್ಯಕ್ಕೆ ಬಂದು, ಶಂಭುಕನು ಸಾಧಿಸಿದ ಸೂರ್ಯಹಾಸವನ್ನು ಪಡೆದುಕೊಂಡು ಅವನನ್ನು ಕೊಂದುದಕ್ಕೆ ಪ್ರತಿಯಾಗಿ ಖರದೂಷಣರು ಸೇನೆವೆರಸಿ ಬಂದಾಗ ಅವರನ್ನು ಕೊಂದು ವಿರಾಧಿತನನ್ನು ಪಾತಾಳಲಂಕೆಯಲ್ಲಿ ನಿಲಿಸಿದರು; ಈ ವಿಷಯ ತಿಳಿದ ಸುಗ್ರೀವನು ಅವರಿಗೆ ಶರಣಾಗತನಾಗಲು ಮಾಯಾಸುಗ್ರೀವನಾದ ಸಾಹಸಗತಿಯನ್ನು ಕೊಂದು ಅವನ ಚಿಂತೆಯನ್ನು ಕಳೆದರು; ಈಗ ಸಿದ್ಧಶೈಲವನ್ನು ಒಂದೆ ಕೈಯಿಂದ ಮೇಲಿತ್ತಿ ವಾಸುದೇವನು ತನ್ನ ಅಸೀಮ ಪರಾಕ್ರಮವನ್ನು ತೋರಿಸಿದ ಎಂಬ ದೂತನ ಮಾತುಗಳನ್ನು ಕೇಳಿ, ತನಗೂ ಅಸಾಧ್ಯನಾದ ಮಾಯಾಸುಗ್ರೀವನನ್ನು ಕೊಂದ ಉಪಕಾರಕ್ಕಾಗಿ ತಾನು ರಾಮಲಕ್ಷ್ಮಣರಿಗೆ ತನ್ನನ್ನೇ ಒಪ್ಪಿಸಿಕೊಳ್ಳಲು ಆಂಜನೇಯನು ನಿಶ್ಚೈಸಿದ. ಮಾರನೆಯ ದಿನ ಮಂಗಳಾಭರಣಭೂಷಿತನಾಗಿ ಮಣಿಘಂಟಾವಿರಾಜಮಾನವಾದ ವಿಮಾನವನ್ನೇರಿ ಕಿಷ್ಕಿಂಧಾಪುರದೆಡೆಗೆ ಪಯಣ ಬೆಳೆಸಿದ.

ಊರನ್ನೆಲ್ಲ ಸಿಂಗರಿಸಿ ಸುಗ್ರೀವನು ಪರಿವಾರಜನರೊಡನೆ ಬಂದು ಆಂಜನೇಯನನ್ನು ಇದಿರುಗೊಂಡು ಯಥೋಚಿತ ಕಾಣಿಕೆಗಳನ್ನು ನೀಡಿದ. ಸ್ವಲ್ಪ ಕಾಲಾನಂತರ ಅವನನ್ನು ರಾಮಲಕ್ಷ್ಮಣರಿದ್ದ ರಾಜಮಂದಿರಕ್ಕೆ ಕರೆದೊಯ್ದ. ಭದ್ರಲಕ್ಷಣೋಪೇತನಾದ ಮಾರುತಿಯು ಕೈಗಳನ್ನು ಜೋಡಿಸಿ ಮೇಲೆತ್ತಿಕೊಂಡು ಬಂದು ರಾಮಲಕ್ಷ್ಮಣರ ಚರಣೋಪಾಂತಗಳಿಗೆರಗಿ ಉಪಾಯನಗಳನ್ನಿತ್ತ. ಅಲ್ಲಿದ್ದ ನಳ ನೀಲ ವಿರಾಧಿತ ಮುಂತಾದವರನ್ನು ಪ್ರೀತಿಯಿಂದ ಆಲಂಗಿಸಿಕೊಂಡು ಮಣಿಮಯಾಸನದಲ್ಲಿ ಕುಳಿತ. ಆಗ ಜಾಂಬವನು ಹೀಗೆಂದ: "ಸೂರ್ಯನಿಗೆ ಉರಿಕಿರಣಗಳೂ, ಸಿಂಹಕ್ಕೆ ಹರಿತವಾದ ಉಗುರುಗಳೂ, ಇಂದ್ರನಿಗೆ ವಜ್ರಾಯುಧವೂ, ಮೃಡನಿಗೆ ಉರಿಗಣ್ಣೂ, ದಿಗ್ದಂತಿಗಳಿಗೆ ದಂತಗಳೂ ಇರುವಂತೆ ರಾಮನ ಕದನಕೇಳೀಕರ್ಕಶ ಬಾಹುಪರಿಘಕ್ಕೆ ಪವನಾತ್ಮಜನ ನೆರವು ಸೇರಿದರೆ ಷಟ್ಖಂಡಭೂಮಂಡಲವೂ ಅವರನ್ನೆದುರಿಸಲು ಸಾಧ್ಯವಾಗುವುದೇ? ಈ ಬಲ್ಲಾಳ

ಹನುಮನ ಪರಾಕ್ರಮದಿಂದಾಗಿ ದಶಕಂಠನ ಬಿಂಕಬೀರಗಳು ಇಲ್ಲಿಯವರೆಗೂ ನಡೆದವು; ಇನ್ನು ಮುಂದೆ ಅವು ನಡೆಯಲಾರವು." ಆಗ ಸುಗ್ರೀವನು ಪವಮಾನಸೂನುವನ್ನು ಕುರಿತು, "ಈ ರಾಮಲಕ್ಷ್ಮಣರು ಜಗತ್ರಯವೇ ಎದುರಾದರೂ ಗೆಲ್ಲಬಲ್ಲವರು, ಯಾರ ಸಹಾಯವನ್ನೂ ಅಪೇಕ್ಷಿಸದ ಅಜೇಯರು, ಮಾನಧನರಾದ ಮಹಾಮಹಿಮರು. ಇವರು ಸೀತಾಸ್ವಯಂವರದಲ್ಲಿ ದೇವತಾಧಿಷ್ಠಿತವಾದ ವಜ್ರಾವರ್ತ-ಸಾಗರಾವರ್ತಗಳೆಂಬ ಚಾಪರತ್ನಗಳನ್ನೂ, ಹಲಾಯುಧ-ಗದಾಯುಧಗಳನ್ನೂ ನಾಗವಿದ್ಯಾಸಮೇತವಾಗಿ ಗೆದ್ದ ಕಾರಣಪುರುಷರು, ಸಾಹಸಗತಿಯನ್ನು ಕೊಂದು ನನ್ನ ಕಷ್ಟವನ್ನು ನಿವಾರಿಸಿದ ಅಸಾಧಾರಣ ರಣಮಲ್ಲರು" ಎಂದು ವಿವರಿಸಿದ. ಹರ್ಷಚಿತ್ತನಾದ ಮರುತ್ತನಯನು ಕೈಗಳನ್ನು ಜೋಡಿಸಿಕೊಂಡು, "ದೇವಾ, ತಮ್ಮ ಬದುಕು ಜಗದುಪಕಾರನಿಮಿತ್ತವಾದುದು. ತಮ್ಮಂತಹವರ ಸೇವೆ ಮಾಡುವುದು ನಮಗೆ ಶ್ರೇಯಸ್ಕರ. ತಾಯಿಯ ಮೊಲೆಹಾಲಿನ ಋಣವನ್ನು ತೀರಿಸಲೂ ಪಂಚಭೂತಗಳಿಗೂ ತಮ್ಮಂತಹವರಿಗೂ ಪ್ರತ್ಯುಪಕಾರ ಮಾಡಲೂ ಶಕ್ಯವೇ?" ಎಂದು ವಿನಯವನ್ನು ಮೆರೆದ.

ಅವನ ಧೀರಪ್ರಕೃತಿಗೂ ಸೌವಸ್ತ್ಯಾಕಾರಕ್ಕೂ, ಅವುಗಳಿಗನುಗುಣವಾದ ನಯವಿನಯಗಳಿಗೂ ಅದಕ್ಕೆ ತಕ್ಕ ಮಾತುಗಳನ್ನು ಕೇಳಿಯೂ ಅವನ ಮೇಲೆ ರಘುಕುಲವೀರನಿಗೆ ಪ್ರೀತಿಯುಂಟಾಯಿತು. ಅವನಿಗೆ ಅಪೂರ್ವವಾದ ರತ್ನಕರ್ಣಕುಂಡಲಗಳನ್ನು ಉಡುಗೊರೆಯಾಗಿತ್ತ. ಆನಂತರ ಮಹೋದಧಿ ಎಂಬ ವಿದ್ಯಾಧರನು, ಲಂಕಾನಗರಿಗೆ ಹೋಗಿ ದಶಕಂಧರನ ಜೊತೆ ಮಾತನಾಡಿ ಜಾನಕಿಯನ್ನು ಕರೆತರಲು ಅವನಿಲ್ಲದೆ ಹಿಂಜರಿದಿದ್ದರು ಎಂಬ ವಿಷಯವನ್ನರುಹಿದ. ಆಗ ಮಾರುತಿಯು ನಯದಿಂದಲೇ ಸೀತಾದೇವಿಯನ್ನು ಕರೆತರಲು ಪ್ರಯತ್ನಿಸುವುದಾಗಿಯೂ, ಅದಕ್ಕೆ ಒಪ್ಪದಿದ್ದರೆ ಬಲಪ್ರಯೋಗದಿಂದಲಾದರೂ ಆ ಕೆಲಸವನ್ನು ಮಾಡುವುದಾಗಿಯೂ, ಅಥವಾ ಸುಮ್ಮನೆ ನೋಡಿ ಬಾರೆಂದು ಕಳಿಸಿದರೆ ಮಾಯಾರೂಪದಿಂದ ಕೊಳದಲ್ಲಿ ದುಮುಕಿ ಮೇಲೆದ್ದು ಬರುವಂತೆ ಅಲ್ಲಿಗೆ ಹೋಗಿ ಸುದ್ದಿಯನ್ನು ತರುವುದಾಗಿಯೂ, ಬೇಕಾದರೆ ಲಂಕೆಯನ್ನೂ ಸೈನ್ಯವನ್ನೂ ಭಯಗೊಳಿಸಿ ಭೂದೇವಿಯನ್ನು ಪಾತಾಳಕ್ಕೊಯ್ದ ಹಿರಣ್ಯಕಶಿಪುವನ್ನು ಮುರರಿಪು ಕೊಂದು ರಕ್ಷಿಸಿ ತಂದಂತೆ ತಾನೂ ದೈತ್ಯನನ್ನು ಸಂಹರಿಸಿ ಜಾನಕಿಯನ್ನು ಕರೆತರುವುದಾಗಿಯೂ ಗಂಭೀರಧ್ವನಿಯಿಂದ ಆಶ್ವಾಸನೆಯಿತ್ತ. ಆಗ ಶ್ರೀರಾಮನು, ಜನಕಜೆಯ ಬಗೆಗಿನ ಸುದ್ದಿಯನ್ನು ತರುವ ಕೆಲಸವು ಮಾತ್ರ ಆಂಜನೇಯನದೆಂದೂ, ಯುದ್ಧ ಅನಿವಾರ್ಯವಾದರೆ ದಶಾಸ್ಯನನ್ನು ಕೊಲ್ಲುವ ಕಾರ್ಯ ಲಕ್ಷ್ಮಣನದೆಂದೂ ಆದೇಶಿಸಿದ. ಯಾವತ್ತೂ ತನ್ನಿಂದ ಬೇರಾಗದ ಸೀತೆ ಈಗ ಭಯಾಕುಲೆಯಾಗಿ ಪ್ರಾಣ ಕಳೆದುಕೊಳ್ಳುವಷ್ಟು ಬೇಸರವನ್ನು ಹೊಂದಿರಬಹುದು, ಅವಳು ಹಾಗೆ ಮಾಡದಂತೆ ತಡೆಯಬೇಕಾದ್ದಕ್ಕೆ ಈಗ ಮೊದಲ ಆದ್ಯತೆ; ಅವಳು ಸತ್ತ ಮೇಲೆ ರಾವಣನನ್ನು ಕೊಂದರೆಷ್ಟು ಬಿಟ್ಟರೆಷ್ಟು ಎಂದು ರಘುವೀರನು ನಿರ್ದೇಶನವಿತ್ತ. ಜಾನಕಿಯನ್ನು ಗುರುತಿಸಲು ಸಾಧ್ಯವಾಗುವ ಕುರುಹುಗಳನ್ನು ಹೇಳಿ, ಅವಳ ವಿರಹವೇದನೆ ಕಡಿಮೆಯಾಗಿ ಮುಖಕಮಲವು ಅರಳಲು ಅನುಕೂಲವಾಗುವಂತೆ ಅವಳಿಗೀಯಲು ಅಂಶುಮಾಲಿ ಎಂಬ ರವಿಮಂಡಲವನ್ನು ಕೊಟ್ಟ; ಜೊತೆಗೆ ಆಕೆಯ ಚೂಡಾಮಣಿಯನ್ನು ತನಗೆ ತಂದೀಯಬೇಕೆಂದು ಬೆಸಸಿದ.

ಮಹಾಪ್ರಸಾದವೆಂದು ಅಂಜನಾಸುತನು ಬಲಾಚ್ಯುತರಿಗೆರಗಿ ಆ ಕ್ಷಣವೇ ಅವರಿಂದ ಬೀಳ್ಕೊಂಡು ವಿಮಾನಾರೂಢನಾಗಿ ಗಗನಪಥಕ್ಕೇರಿದ. ಮಾರ್ಗಮಧ್ಯದಲ್ಲಿ ಮಹೇಂದ್ರಾಚಲದ ನಡುವೆ ಅತಿಶಯವಾದೊಂದು ನಗರ ಕಾಣಿಸಿತು. ಅದು ತನ್ನ ಹುಟ್ಟೂರು, ತಾನಿನ್ನೂ ತಾಯಗರ್ಭದಲ್ಲಿರುವಾಗ ಅತ್ತೆಮಾವಂದಿರು ಅಪವಾದ ಹೊರಿಸಿ ಅವಳನ್ನು ಹೊರದಬ್ಬಿದ್ದು, ಆಕೆ ರಕ್ಷಣೆಗೆಂದು ಮಹೇಂದ್ರಪುರವನ್ನಾಳುತ್ತಿದ್ದ ತನ್ನ ತಾತನ ಬಳಿ ಹೋದುದು, ಅವನೂ ಕರುಣೆಯಿಲ್ಲದೆ ಆಶ್ರಯ ನೀಡದಿದ್ದುದು, ಬೆಟ್ಟದ ತಪ್ಪಲಿನ ಆ ಊರಿನಲ್ಲಿಯೇ ತಾಯಿ ತನ್ನನ್ನು ಹಡೆದದ್ದು, ಅಮಿತಗತಿ ಎಂಬ ತಪಸ್ಸಂಪನ್ನ ಚಾರಣಋಷಿಗಳು ತನಗೆ ವಿದ್ಯೆ ಹೇಳಿಕೊಟ್ಟದ್ದು, ಕಾಲಾನಂತರದಲ್ಲಿ ಈ ಎಲ್ಲವನ್ನೂ ತಾಯಿ ತನಗೆ ತಿಳಿಸಿದ್ದು ನೆನಪಿಗೆ ಬಂದು ಅವನ ಕೋಪ ನೆತ್ತಿಗೇರಿತು. ಆ ಊರಿನ ಮೇಲೆ ಮೇಲೆ ದಾಳಿ ಮಾಡಲು ರಣಪಟಹವನ್ನು ಹೊಯ್ಸಿದ. ಅದನ್ನು ಕೇಳಿದ ಮಹೇಂದ್ರನು ಗುಡುಗಿನ ಸದ್ದಿಗೆ ಮುಳಿದು ಗುಹೆಯಿಂದ ಹೊರಬರುವ ಸಿಂಹದಂತೆ ಸೇನೆಯೊಡನೆ ಮಾರುತಿಯ ವಾಹಿನಿಯ ಮೇಲೇರಿ ಬಂದ; ಆದರೆ ಬೇಸಗೆ ಕಾಲದ ತೊರೆಯಂತೆ ಅವನ ಸೇನೆ ಬಹು ಬೇಗ ಸೋರಿಹೋಯಿತು. ಅದನ್ನು ನೋಡಿ ಪ್ರಸನ್ನಕೀರ್ತಿಯು ಬಂದು ತಾಗಿದ; ಆದರೆ ಕ್ಷಣಾರ್ಧದಲ್ಲಿ ಮಾರುತಿಯು ತನ್ನ ಬಾಣಗಳಿಂದ ಅವನ ತೇರು, ಕುದುರೆ, ಸಾರಥಿಗಳನ್ನೆಲ್ಲ ತರಿದುಹಾಕಿದ. ಆಗ ಪ್ರಸನ್ನಕೀರ್ತಿಯು ವಿಮಾನಾರೂಢನಾಗಿ ಬರಲು ಶ್ರೀಶೈಲನು ಅವನನ್ನು ಸೆರೆಗೈದ. ಪ್ರಸನ್ನಕೀರ್ತಿಯ ಗತಿಯನ್ನು ಕಂಡು ಮಹೇಂದ್ರವರ್ಮನೇ ಅಚಿಂತ್ಯಯುದ್ಧಕ್ಕೆ ನಿರ್ಧರಿಸಿ ಬರಲು ಅವನನ್ನೂ ಬಂದಿವಿಡಿದು ಶಿಬಿರಕ್ಕೆ ಕರೆದೊಯ್ದ. ಅಲ್ಲಿ ಹನುಮನು ಮಹೇಂದ್ರನಿಗೆ ಸಿಂಹವಿಷ್ಟರವನ್ನಿತ್ತು ಕುಳ್ಳಿರಿಸಿ ವಿನಯದಿಂದ ಅವನಿಗೆರಗಿ, ತಾನು ಅಂಜನಾದೇವಿ–ಪ್ರಭಂಜನರ ಮಗ, ಅವನ ಮೊಮ್ಮಗ ಎಂಬುದನ್ನು ನೆನಪಿಸಿದ. ಅದನ್ನು ಕೇಳಿದ ಮಹೇಂದ್ರನಿಗೆ ಇಂದ್ರಪದವಿ ದೊರಕಿದಂತೆ ಅತ್ಯಾನಂದವಾಯಿತು. ತಾನಿದುವರೆಗೂ ಕೇಳಿದ್ದ ಮಾರುತಿಯ ಸುಂದರರೂಪು ಅವಾರ್ಯವೀರ್ಯಗಳನ್ನು ಈಗ ಕಾಣಲು ಸಾಧ್ಯವಾದುದಕ್ಕಾಗಿ ಸಂತಸಪಟ್ಟ. ತಾತನಿಗೆ ನಮಸ್ಕರಿಸಿದ ಆಂಜನೇಯನು ಬಾಲ್ಯಚಾಪಲ್ಯದಿಂದ ಯುದ್ಧದಲ್ಲಿ ತೊಡಗಿದ ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡ. ಕಪಿಕುಲಕ್ಕೆ ಮಹೋಪಕಾರವನ್ನು ಮಾಡಿದ ರಘುವೀರನ ಕೈಂಕರ್ಯಕ್ಕಾಗಿ ಹೊರಟಿರುವುದನ್ನು ತಿಳಿಸಿ, ತಾನು ವಾಪಸಾಗುವವರೆಗೂ ಲಂಕೆಗೆ ಹೋಗಿ ರಾಮಲಕ್ಷ್ಮಣರ ಸೇವೆಯನ್ನು ಮಾಡುವಂತೆ ಅವನಿಗೆ ಸೂಚಿಸಿ ಮಾರುತಿಯು ಆಗಸದಾರಿಗೆ ನೆಗೆದು ತೆಂಕಮುಖವಾಗಿ ಪಯಣ ಬೆಳೆಸಿದ.

ಮಹೇಂದ್ರನು ಪ್ರಸನ್ನಕೀರ್ತಿಯೊಡನೆ ಹನುಮರ ದ್ವೀಪಕ್ಕೆ ಹೋಗಿ ಹನುಮನ ಅರಮನೆಯನ್ನು ಸೇರಿದ. ತಾಯಿತಂದೆ ಮುಂತಾದ ಬಂಧುಜನದರ್ಶನದಿಂದ ಅಂಜನೆಗೆ ಸಂತಸವುಂಟಾಯಿತು; ಹಾಗೆಯೇ ಇವಳನ್ನು ಕಂಡು ಅವರಿಗೂ ಹರ್ಷವೆನಿಸಿತು. ಪರಸ್ಪರ ಕುಶಲವನ್ನು ವಿಚಾರಿಸಿ ಸ್ವಲ್ಪ ಕಾಲ ಕಳೆದರು. ಅನಂತರ ಮಹೆಂದ್ರ ಪ್ರಸನ್ನಕೀರ್ತಿಗಳು ಕಿಷ್ಕಿಂಧಪುರಕ್ಕೆ ಹೋಗಿ ಬಲದೇವವಾಸುದೇವರನ್ನು ಕಂಡು ಅವರ ಸೇವೆಯಲ್ಲಿ ನಿರತರಾಗಿ ಕಪಿಧ್ವಜರೊಡನೆ ಸೇರಿ ಸುಖದಿಂದಿದ್ದರು.

ಈ ಕಡೆ, ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಆಂಜನೇಯನು ಮುಂದೆ

ಚಂದ್ರಸೂರ್ಯರನ್ನು ಮುಟ್ಟುವಂತಿದ್ದ ಕೂಟಗಳಿಂದ ಕೂಡಿದ ದಧಿಮುಖ ಪರ್ವತವನ್ನು ಕಂಡ. ಅದರಲ್ಲಿ ಪ್ರತಿಮಾಯೋಗದಲ್ಲಿ ಕೈ ಎತ್ತಿ ನಿಂತಿದ್ದ ಚಾರಣಋಷಿಗಳೂ, ದಿವ್ಯಮಂತ್ರಗಳನ್ನು ಜಪಿಸುತ್ತಿದ್ದ ಮೂವರು ಅಪ್ರತಿಮ ರೂಪಾನ್ವಿತರಾದ ಕನ್ನಿಕೆಯರೂ ಕಾಣಿಸಿದರು. ಅದೇ ಕಾಲದಲ್ಲಿ ಲಯಕಾಲದ ಬೆಂಕಿಯಂತೆ ತೋರುತ್ತಿದ್ದ ಭಯಂಕರ ಕಾಳ್ಗಿಚ್ಚು ಅವರನ್ನು ಸುಟ್ಟು ಬೂದಿಮಾಡುವಂತೆ ಆವರಿಸಿಬಿಟ್ಟಿತು. ಅದನ್ನು ಮಾರುತಿಯು ತನಗೆ ಗೊತ್ತಿದ್ದ ಜಲವರ್ಷವಿದ್ಯೆಯಿಂದ ಆರಿಸಿ ಅವರಿಗೆ ಬರಲಿದ್ದ ಕುತ್ತನ್ನು ನಿವಾರಿಸಿದ. ಚಾರಣಋಷಿಗಳನ್ನು ಭಕ್ತಿಯಿಂದ ಪೂಜಿಸಿದ. ಅವನ ಮುಖವನ್ನು ಕಂಡು ಕನ್ಯೆಯರು, "ಮಹಾಮಹಿಮನಾದ ನೀನು ಬಂದು ಈ ತಪೋಧನರನ್ನೂ ನಮ್ಮನ್ನೂ ಪಾರುಮಾಡಿ ಮಹೋಪಕಾರ ಮಾಡಿದ್ದೀ" ಎಂದು ಕೈಮುಗಿದರು. ಇವರನ್ನು ಕಂಡು ವಿಸ್ಮಿತನಾದ ಆತನು ಆ ಘೋರಾರಣ್ಯದಲ್ಲಿ ಆ ಚೆಲುವೆಯರು ಬಂದಿರಲು ಕಾರಣವೇನೆಂದು ವಿಚಾರಿಸಿದ. ಅವನು ಶುದ್ಧಾಂತಃಕರಣನೆಂದು ಅರಿತ ಅವರು ತಮ್ಮ ವೃತ್ತಾಂತವನ್ನು ಹೇಳಲು ತೊಡಗಿದರು.

ಆ ಕನ್ಯೆಯರ ತಂದೆ ದಧಿಮುಖನಗರದ ದೊರೆಯಾದ ಗಂಧರ್ವ ಎಂಬುವ ಖೇಚರ. ಅವರ ಹೆಸರುಗಳು ಕ್ರಮವಾಗಿ ಚಿತ್ರಲೇಖೆ, ವಿದ್ಯುತ್ಪ್ರಭೆ ಮತ್ತು ತರಂಗಮಾಲೆ ಎಂದು. ವಿಜಯಾರ್ಧಪರ್ವತನಿವಾಸಿಗಳಾದ ವಿದ್ಯಾಧರರೇ ಮೊದಲಾದವರು ತಮ್ಮನ್ನು ಮದುವೆಯಾಗಲು ಬಯಸಿ ಬಂದರೂ ತಂದೆಯು ಅದಕ್ಕೆ ಒಪ್ಪಲಿಲ್ಲ. ಆಗ ಅಂಗಾರವೇಗನೆಂಬ ವಿದ್ಯಾಧರನೊಬ್ಬನು ತುಂಬ ಬಲವಂತಮಾಡಿದ. ಆದರೆ ಅವನನ್ನೂ ನಿರಾಕರಿಸಿ ತಮ್ಮ ತಂದೆಯು ಜಿನಭವನಕ್ಕೆ ಹೋಗಿ, ಅಲ್ಲಿದ್ದ ಮಹಾಮುನಿಯನ್ನು ಕಂಡು ತನ್ನ ಮಗಳಂದಿರಿಗೆ ಅನುರೂಪನಾದ ವರನಾವನೆಂದು ಬೆಸಗೊಂಡ. ಅದಕ್ಕುತ್ತರವಾಗಿ, ಉತ್ತರಶ್ರೇಣಿಗೆ ಪ್ರಧಾನನಾದ ಸಾಹಸಗತಿಯನ್ನು ಕೊಂದಾತನೇ ನಿನ್ನ ಮಕ್ಕಳಿಗೆ ಗಂಡನಾಗುವವನು ಎಂದರು. ಅದರಿಂದ ಗಂಧರ್ವನಿಗೆ ಸಮಾಧಾನವಾಯಿತು. ತಾವು ಈ ವಿಪಿನದಲ್ಲಿದ್ದುಕೊಂಡು ಮನೋವೇಗವೆಂಬ ವಿದ್ಯೆಯೊಂದರ ಸಾಧನೆಯಲ್ಲಿ ತೊಡಗಿ ಹನ್ನೆರಡು ವರ್ಷಗಳಿಂದ ಇಲ್ಲಿದ್ದು ಈಗ ಆರು ವರ್ಷಗಳ ಹಿಂದೆ ಆ ವಿದ್ಯೆಯನ್ನು ಕೈವಶಮಾಡಿಕೊಂಡರು. ತಮ್ಮನ್ನು ಮದುವೆಯಾಗಬಯಸಿ ನಿರಾಶನಾದ ಅಂಗಾರವೇಗನೇ ಈ ಕಾಳ್ಗಿಚ್ಚನ್ನು ಸೃಷ್ಟಿಸಿ ಉಪಸರ್ಗವನ್ನುಂಟುಮಾಡಿದವನು ಎಂದರು. ಸಾಹಸಗತಿಯನ್ನು ಕೊಂದವನು ರಾಘವನೆಂಬ ಅತರ್ಕ್ಯಬಲ, ಆತನು ಕಿಷ್ಕಿಂಧನಗರದಲ್ಲಿರುವನೆಂಬುದನ್ನು ಅವರಿಗೆ ತಿಳಿಸಿ ಪವನತನಯನು ತನ್ನ ಪ್ರಯಾಣವನ್ನು ಮುಂದುವರೆಸಿದ.

ಈ ಕಡೆ, ತನ್ನ ಮಗಳಂದಿರು ವಿದ್ಯೆಯನ್ನು ಸಾಧಿಸಿದರೆಂಬ ವಿಷಯವನ್ನು ತಿಳಿದ ಗಂಧರ್ವನು ಸಂತಸಗೊಂಡ; ಅವರಿದ್ದೆಡೆಗೆ ಹೊರಟ. ತಂದೆಯನ್ನು ಕಂಡು ಆ ಮೂವರೂ ಸಂಭ್ರಮದಿಂದ ಎದುರುಗೊಂಡರು; ಭಕ್ತಿಭರದಿಂದ ನಮಸ್ಕರಿಸಿ ಉಪಚರಿಸಿದರು. ಮಾರುತಿ ಹೇಳಿದ್ದ ವಿಷಯವನ್ನವರು ತಂದೆಗೆ ತಿಳಿಸಲು, ತಡಮಾಡದೆ ಆತನು ತನ್ನ ಮಕ್ಕಳು ಮತ್ತು ಸೈನಿಕನೊಬ್ಬನ ಜೊತೆ ಹೊರಟು ಕಿಷ್ಕಿಂಧೆಗೆ ಬಂದು ಮೂವರನ್ನೂ ರಾಮನಿಗಿತ್ತು ಮದುವೆ ಮಾಡಿದ.

ಲಂಕಾಪುರದೆಡೆಗೆ ಪಯಣ ಬೆಳೆಸಿದ್ದ ಅಣುವನು ಊರ ಹೊರವಲಯವನ್ನು

ತಲುಪಿದ. ಮಾರನೆಯ ದಿನ ಊರಿನೊಳಗೆ ಹೋಗಬೇಕೆಂದುಕೊಳ್ಳುವಾಗ ಅವನಿಗೆ ಎದುರಾದದ್ದು ವಿಭೀಷಣಕೃತವಾದ ಲಂಕೆಯ ದುರ್ದಮ್ಯವಾದ ವಿದ್ಯಾತ್ಮಕ ಕೋಟೆ. ಅದರ ಮೇಲೆ ಕಾಳೋರಗಗಳೂ ಭೂತಾವಳಿಯೂ ರೌದ್ರಸತ್ವಗಳೂ ಸೇರಿಕೊಂಡು ಭಯಂಕರವಾಗಿತ್ತು. ಅದರ ಸ್ವರೂಪವನ್ನು ಪೃಥುಮತಿ ಎಂಬ ಹೆಸರಿನ ಮಂತ್ರಿಯು ವಿವರಿಸಿದ. ಅದನ್ನು ಕೇಳಿ ವಿಮಾನದಿಂದ ಕೆಳಗಿಳಿದ ಮಾರುತಿಯು ಈ ಕೋಟೆಯನ್ನು ಭೇದಿಸುವುದು ತನಗಾವ ಮಹಾ ಎಂದು ಕೋಪಾರುಣಲೋಚನನಾಗಿ ದಿವ್ಯ ವಜ್ರಕವಚವನ್ನು ತೊಟ್ಟ. ವಿಧಿಪೂರ್ವಕವಾಗಿ ತನ್ನ ದೈವಿಕ ಗದಾಯುಧವನ್ನೆತ್ತಿ, ದಿವಿಜೇಂದ್ರನು ತನ್ನ ವಜ್ರಾಯುಧದಿಂದ ಕುಲಧರಗಳನ್ನು ಹೊಡೆದಂತೆ ಹೊಡೆದ. ಆ ಏಟಿಗೆ ವಜ್ರಪ್ರಾಕಾರವು ಒಡೆಯಿತು. ತಕ್ಷಣ ಅದರ ದ್ವಾರಪಾಲಕನಾದ ವಜ್ರಮುಖನೆಂಬ ದನುಜ ಭಯಂಕರಸ್ವರೂಪನಾಗಿ ಎದುರಾದ; ಆದರೆ ಒಂದು ನಿಮಿಷಕ್ಕೆ ಅವನನ್ನು ಮಾರುತಿ ಇಲ್ಲವಾಗಿಸಿದ. ಅದನ್ನು ಕಂಡು ಲಂಕೆ ಎಂಬ ಹೆಸರಿನ ಕನ್ಯಾಸುಂದರಿಯು ತನ್ನ ತಂದೆಯ ಸಾವಿಗೆ ಕಾರಣನಾದವನನ್ನು ಮುಗಿಸಿಬಿಡುವೆನೆಂದು ರಭಸದಿಂದ ಬಂದಳು. ಆದರೆ ಪವನಸೂನುವನ್ನು ಕಂಡಾಕ್ಷಣ ಅವಳ ದುಃಖಕೋಪಗಳು ಮಾಯವಾದವು, ಅವನಲ್ಲಿ ಮೋಹ ಉಮ್ಮಳಿಸಿತು. ತನ್ನನ್ನು ಮದುವೆಯಾಗುವುದಾದರೆ ತಿಳಿದ ವಿದ್ಯೆಗಳನ್ನೆಲ್ಲ ಹೇಳಿಕೊಡಲು ಸಿದ್ಧವಾಗಿರುವುದಾಗಿ ಒಂದು ಬಟ್ಟೆಯ ಮೇಲೆ ಬರೆದು ಅವನೆಡೆಗೆ ಬಾವುಟದಂತೆ ಹಾರಿಸಿದಳು. ಅದನ್ನೋದಿಕೊಂಡು, ಈ ಆಮಿಷದೊಡನೆ ಆ ಕನ್ಯೆಯ ಸೌಮ್ಯಾಕಾರಕ್ಕೂ ಆಕರ್ಷಣೆಗೊಂಡ ಹನುಮನು ಅವಳನ್ನು ಮದುವೆ ನಿಂದ.

ಅವಳ ಸಹಾಯದಿಂದ ಹೊಳಲ ಸ್ವರೂಪವನ್ನು ತಿಳಿದು, ಆಗಸದಲ್ಲಿ ಒಂದೆಡೆ ತನ್ನ ಸೈನ್ಯವನ್ನೆಲ್ಲ ನಿಲ್ಲಿಸಿ, ಖೇಚರಪತಿಯನ್ನು ಕಾಣಲು ಸಿದ್ಧನಾದ. ಅವನ ಉದ್ದೇಶವೇನೆಂದು ತಿಳಿಯಬಯಸಿದ ಲಂಕಾಸುಂದರಿಗೆ ಸೀತಾದೇವಿಯ ಸುದ್ದಿಯನ್ನು ತಾನು ರಾಮನಿಗೆ ತಲುಪಿಸಬೇಕಾದ ಕರ್ತವ್ಯವನ್ನು ಪವನಸುತನು ಅರುಹಿದ. ಮೊದಲು ವಿಭೀಷಣನನ್ನು ಕಂಡು ಅವನ ಸಲಹೆಯಂತೆ ಮುಂದಿನ ಕ್ರಮಗಳನ್ನು ಕೈಗೊಳ್ಳಲು ಅವಳು ಸೂಚಿಸಿದಳು. ಅದು ಸರಿಯೆನಿಸಿತು. ಕೆಲವು ಮಂದಿ ವಿಯಚ್ಚರರೊಡನೆ ಲಂಕೆಯನ್ನು ಹೊಕ್ಕು ವಿಭೀಷಣನನ್ನು ಕಂಡು ಉಭಯಕುಶಲೋಪರಿ ನಡೆಸಿದ. ಕುಲ, ಸತ್ಯ, ಶೌಚ, ಅಗ್ಗಳಿಕೆಯ ಚಾರಿತ್ರ, ತ್ಯಾಗಬುದ್ಧಿ, ಚಲ, ಬಾಹುಬಲ, ಕಲಾವಿಭವ ಮುಂತಾದವುಗಳಿಗೆ ಹೆಸರಾದ ರಾವಣನು ಪರಾಂಗನಾಮೋಹದಿಂದ ಅನ್ಯಸ್ತ್ರೀಯನ್ನು ಅಪಹರಿಸಿದ್ದನ್ನು ಖಂಡಿಸದಿದ್ದರೆ ನಿಮಗೆ ಉಪೇಕ್ಷಾದೋಷವುಂಟಾಗದೇ ಎಂದು ಅವನನ್ನು ಪ್ರಶ್ನಿಸಿದ; ಇನ್ನಾದರೂ ಸೀತೆಯನ್ನು ಮರಳಿಸಿ ಕುಲಾಪವಾದವನ್ನು ಕಳೆಯುವಂತೆ ರಾವಣನಿಗೆ ತಿಳಿಹೇಳಬೇಕೆಂದು ಅವನನ್ನು ಬೇಡಿಕೊಂಡ. ಆ ಬಗ್ಗೆ ತಾನು ಉಪೇಕ್ಷೆ ಮಾಡಿಲ್ಲವೆಂದು ನುಡಿದ ವಿಭೀಷಣನು ಹಲವು ಬಾರಿ ಹೇಳಿದರೂ ಅಣ್ಣನು ತನ್ನ ಮಾತನ್ನು ಕೇಳುತ್ತಿಲ್ಲ; ಇತ್ತ ಸೀತಾದೇವಿಯು ಈ ಹನ್ನೊಂದು ದಿನಗಳಿಂದಲೂ ಅನ್ನತ್ಯಾಗಮಾಡಿದ್ದಾಳೆ; ಆದರೂ ಅವನಿಗಿನ್ನೂ ವೈರಾಗ್ಯವುಂಟಾಗಿಲ್ಲವೆಂದು ವಿಷಾದಿಸಿದ. ಪ್ರಮದವನದಲ್ಲಿ ಆಕೆಯನ್ನು ಸೆರೆಯಲ್ಲಿಟ್ಟು ಪದೇ ಪದೇ ದೂತರನ್ನು ಕಳಿಸುತ್ತಿದ್ದಾನೆ; ಕಾಮುಕರಿಗೆ ಉಚಿತವಾವುದೆಂದು ತಿಳಿದೀತೆ; ಸುಮನೋಬಾಣನ ಮೋಸಕ್ಕೊಳಗಾದವರ ಸ್ಥಿತಿಯೇ ಇಂಥದು ಎಂದು ಮರುಗಿದ.

ಆ ಮಾತುಗಳನ್ನು ಕೇಳಿದ ಮರುತ್ಸುತನು ಕರುಣಾರಸ ವಾಹಿನಿಯು ಎಳೆದೊಯ್ಯಲು ಅದೃಶ್ಯನಾಗಿ ಹೊರಟು ಸೀತಾದೇವಿಯಿದ್ದ ವನವನ್ನು ಸೇರಿದ. ಅಲ್ಲಿ ಮಂಡೋದರಿಯೇ ಮುಂತಾದ ಅನೇಕ ಮಾನಿನಿಯರು ದಿನಲಕ್ಷ್ಮಿಯನ್ನು ಸುತ್ತುವರಿದ ದೀಪಗಳಂತೆ ಮುತ್ತಿಕೊಂಡಿದ್ದರು. ವಿರಹದುರಿಯಲ್ಲಿ ಬೇಯುತ್ತಿದ್ದರೂ ಅಶೋಕಮರದ ಕೆಳಗೆ ಲಾವಣ್ಯ ರಸತರಂಗಿಣೀತರಂಗಲೇಖೆಯ ಹಾಗಿದ್ದ ಸೀತೆಯನ್ನು ಹನುಮನು ಗುರುತಿಸಿದ. ಹೊಗೆ ಸುತ್ತಿದ ಚಿತ್ರಲತೆಯಂತೆ, ದೂಳಿಗೊಂಡ ಚಿನ್ನದ ಪುತ್ಥಳಿಯಂತೆ, ಮಂಜು ಮುಸುಕಿದ ತಾವರೆಯಂತೆ, ಕಾರ್ಮುಗಿಲು ಸುತ್ತುವರಿದ ಎಳೆವೆರೆಯಂತೆ ಆಕೆ ಮಂಕುಗೊಂಡಿದ್ದಳು. ಲಕ್ಷ್ಮೀದೇವಿಯು ತನ್ನ ಪದ್ಮಾಲಯವನ್ನು ಬಿಟ್ಟು ಏಕೆ ಬಂದಳೋ, ಸರಸ್ವತಿಯು ಹಂಸವಾಹನದಿಂದ ಇಳಿದೇಕೆ ನಡೆತಂದಳೋ, ಬೆಳುದಿಂಗಳು ಚಂದ್ರನಿಂದ ದೂರವೇಕೆ ಬಂದಿದೆಯೋ ಎಂಬ ಸಂಶಯವನ್ನುಂಟುಮಾಡುವ ಆ ಪಾವನಿಯನ್ನು ಹನುಮನು ವಿಸ್ಮಯಸ್ಥಿಮಿತಲೋಚನಗಳಿಂದ ನೋಡಿದ. ಎಷ್ಟೇ ಸುಂದರಿಯರಿದ್ದರೂ ತನ್ನ ಚೆಲುವಿನಿಂದ ಎದ್ದು ಕಾಣುವ ಈಕೆಗೆ ರಾಘವನು ಚಿತ್ತಗೊಟ್ಟುದು ಅಚ್ಚರಿಯಲ್ಲವೆನಿಸಿತು.

ಜಾನಕಿಯು ಬೇರೆಯವರಿಂದ ದೂರಾದ ಸಂದರ್ಭದಲ್ಲಿ ಪವಮಾನಸುತನು ಬೇರಾರಿಗೂ ಕಾಣದಂತೆ, ಸುಕೃತವೇ ಮೂರ್ತಿಗೊಂಡಂತೆ, ಅವಳಿದ್ದೆಡೆಗೆ ಬಂದ; ರಾಮನು ಕೊಟ್ಟು ಕಳಿಸಿದ್ದ ಮುದ್ರಿಕೆಯನ್ನು ಆಕೆಗಿತ್ತು ತಲೆಬಾಗಿದ. ಸೀತೆ ಹರ್ಷಪುಲಕಗೊಂಡಳು, ಅವಳ ಕಣ್ಣುಗಳಲ್ಲಿ ಆನಂದರಸವುಕ್ಕಿತು; ಅವಳ ಮನಸ್ಸನ್ನು ಕನ್ನಡಿಸಿದಂತೆ ಆಕೆಯ ಮುಖಕಮಲವು ಅರಳಿತು. ರಾಮನ ಮುದ್ರಿಕೆ ಅವಳಲ್ಲಿ ಅನಂಗಮುದ್ರೆಯನ್ನೇ ಒತ್ತಿತು: ಮುಖಾರವಿಂದದ ಮಕರಂದದಂತೆ ಕಪೋಲದ ಮೇಲೆ ಬೆವರ ಹನಿಗಳೆದ್ದುವು, ಕುಡಿಮಿಂಚಿನ ಗೊಂಚಲಿನಿಂದ ಒಪ್ಪವಿಟ್ಟಂತೆ ದೇಹವು ಜಲಜಲಿಸಿತು. ಹೀಗೆ ಹರ್ಷರಸ ತರಂಗಿತಾಂತರಂಗೆಯಾದ ಜಾನಕಿಯನ್ನು ಕಂಡು ಮಂಡೋದರಿಯೇ ಮುಂತಾದ ಖಚರಕಾಂತೆಯರು ರಾವಣನನ್ನು ಒಪ್ಪಿಕೊಂಡ ಸಂತೋಷವೇ ಇದಕ್ಕೆ ಕಾರಣವೆಂದು ಬಗೆದರು; ಅಂತೆಯೇ ಮಾತಾಡಿಕೊಂಡರು.

ಅದನ್ನು ಕೇಳಿದ ಸೀತೆ ಕೋಪಗೊಂಡು, ಪತಿವ್ರತೆಯುಲ್ಲದವಳು ಹೇಗೆ ಕುಲವಧುವಾಗಲು ಸಾಧ್ಯ, ತನಗೆ ಪರಪುರುಷರು ಸಹೋದರಸಮಾನರು, ನಿಮ್ಮಂತಹವರು ಇಂತಹ ಮಾತುಗಳನ್ನಾಡಬಹುದೇ ಎಂದು ಗದರಿದಳು; ರಾಮನ ಸಂದೇಶವನ್ನು ತಂದ ದೂತನನ್ನು ಕಂಡು ತಾನು ಹರ್ಷಗೊಂಡುದು ಎಂದು ವಿವರಿಸಿದಳು. ಸೀತೆಯ ಈ ಮಾತನ್ನು ಕೇಳಿ ಮಂಡೋದರಿ, ಮಾನವರು ಸಮುದ್ರ ದಾಟಿ ಬರಬಲ್ಲರೇ, ಅವರಿಗೆ ಲಂಕೆಯ ವಜ್ರಕೋಟೆಯನ್ನು ಭೇದಿಸಲು ಶಕ್ಯವೇ, ಯಾವುದೋ ಕರ್ಣಪಿಶಾಚ ಈ ರೀತಿ ಸುಳ್ಳು ಸುದ್ದಿಯನ್ನು ಹೇಳಿರಬೇಕು ಅದರಿಂದ ಸೀತೆಯ ಮನಸ್ಸು ವಿಕಾರಗೊಂಡಿರಬೇಕೆಂದು ಕುಹಕವಾಡಿದಳು. ಆಗ ಸೀತೆಯು ಹನುಮನನ್ನು ಕುರಿತು, "ನನ್ನನ್ನು ದುಃಖಭಾರದಿಂದ ನಮೆಯದಂತೆ ಈ ಶುಭವಾರ್ತೆಯನ್ನು ತಂದುದರಿಂದ ನೀನು ನನಗೆ ಪ್ರಭಾಮಂಡಲನಿಗೂ ಮಿಗಿಲಾದ ಅಣ್ಣ. ಆದ್ದರಿಂದ ನಿನ್ನ ಕುಲಗೋತ್ರನಾಮಗಳನ್ನು ತಿಳಿಸು" ಎಂದು ಕೇಳಿಕೊಂಡಳು. ತಾನು ಅದೃಶ್ಯನಾಗಿರುವುದರಿಂದ ಈ ಗೊಂದಲವೆಂದು ಬಗೆದ ಆಂಜನೇಯನು ನಿಜಸ್ವರೂಪವನ್ನು ತೋರಿದ. ಅವನನ್ನು ನೋಡಿ ಅಂತಃಪುರಸ್ತ್ರೀಯರು

ಹೆದರಿ ಸೀತೆಯ ಮೊರೆಹೊಕ್ಕರು. ಆಂಜನೇಯನು ಸೀತೆಗೆ ತನ್ನ ಪೂರ್ವಾಪರಗಳನ್ನು ಹೇಳಿದ: ತನ್ನ ತಂದೆ ಖೇಚರವಲ್ಲಭನಾದ ಪವನಂಜಯ, ತಾಯಿ ಮಹಾಸತಿ ಅಂಜನೆ, ತನ್ನ ಹೆಸರು ಹನುಮಂತನೆಂಬುದು. ಜಗತ್ಪತಿ ರಾಮನು ಹೇಳಿದ ಸೀತೆಯ ಸುಚರಿತೆಯನ್ನು ಕೇಳಿ ತಾನಿಲ್ಲಿಗೆ ಬಂದನೆಂದು ತಿಳಿಸಿದ. ಕಲಹಂಸವು ಕಮಲಿನಿಯನ್ನೂ, ದುಂಬಿಯು ಹೂಗೊಂಚಲನ್ನೂ, ಮದೇಭವು ವನಾಂತಸ್ಥವಾದ ಹಸ್ತಿನಿಯನ್ನೂ ನೆನೆಯುವಂತೆ ರಘುವೀರನು ತನ್ನ ನಲ್ಲೆಯನ್ನು ನೆನೆದು ದುಃಖಿಸುತ್ತಿರುವ ವಿಷಯವನ್ನು ವರ್ಣಿಸಿದ; ಜೊತೆಗೆ ತಾನು ರಾಮನಿಂದ ಕೇಳಿದ್ದ ಅವರ ವನವಾಸದ ಅನೇಕ ಸಂಗತಿಗಳನ್ನೂ ವಿವರಿಸಿದ. ಇದರಿಂದ ಸೀತೆಗೆ ಅವನಲ್ಲಿ ಸಂಪೂರ್ಣ ನಂಬಿಕೆಯುಂಟಾಯಿತು. ಅವನು ಸಮುದ್ರವನ್ನು ದಾಟಿದ ಪರಿ, ದುರ್ಲಂಘ್ಯವಾದ ಲಂಕೆಯನ್ನು ಹೊಕ್ಕ ಬಗೆ, ಅವನಿಗೆ ರಾಮನ ಪರಿಚಯವಾದ ರೀತಿ ಇವುಗಳನ್ನು ವಿಚಾರಿಸಿಕೊಂಡಳು. ಅವುಗಳನ್ನೆಲ್ಲ ವಿವರಿಸಿದ ಆಂಜನೇಯನು, ದಶಮುಖನ ತಂಗಿ ಚಂದ್ರನಖಿಯ ಮಗನಾದ ಶಂಭುಕನನ್ನು ಲಕ್ಷ್ಮಣ ಕೊಂದುದು, ಅದರಿಂದ ದುಃಖಕೋಪಗಳಿಂದ ಗಂಡನಿಗೆ ಚಂದ್ರನಖಿ ದೂರಿತ್ತುದು, ಅವನೊಡನೆ ಲಕ್ಷ್ಮಣನು ಕಾದುತ್ತಿರುವಾಗ ಯುದ್ಧವನ್ನು ನೋಡಲೆಂದು ಬಂದ ರಾವಣನು ವಿಪರೀತಚಿತ್ತನಾಗಿ ರಾಮನನ್ನು ಸೀತೆಯಿಂದ ಅಗಲಿಸಿದುದು, ಆನಂತರ ಅವನು ಆಕೆಯನ್ನು ಅಪಹರಿಸಿದುದು, ರಾಮಲಕ್ಷ್ಮಣರು ಈಕೆಯ ಅಗಲಿಕೆಯಿಂದ ವಿಷಣ್ಣರಾದುದು, ಆಗ ಶರಣಾಗತ ವಿರಾಧಿತನು ಅವರನ್ನು ಪಾತಾಳಲಂಕೆಗೆ ಕರೆದೊಯ್ದು ಹುಡುಕಿಸುವ ಪ್ರಯತ್ನದಲ್ಲಿದ್ದುದು, ಅಷ್ಟರಲ್ಲಿ ಮಾಯಾಸುಗ್ರೀವನ ಕಾಟದಿಂದ ಬೇಸತ್ತ ಸುಗ್ರೀವನು ರಾಮನನ್ನು ಕಂಡು ತನ್ನ ಅಳಲನ್ನು ಹೇಳಿಕೊಂಡುದು, ಮಾಯಾಸುಗ್ರೀವನನ್ನು ಕೊಂದು ವಾನರಧ್ವಜಕುಲಕ್ಕೆ ಅಂಟಿದ್ದ ಅಪಮಾನವನ್ನು ಕಳೆದ ರಾಮನಿಗೆ ವಿದ್ಯಾಧರರೆಲ್ಲ ಬಂಟರಾದುದು, ರತ್ನಜಟಿಯಿಂದ ಸೀತೆಯ ವಿಷಯ ತಿಳಿದು ತನ್ನನ್ನು ಕಿಷ್ಕಿಂಧಪುರಕ್ಕೆ ಬರಮಾಡಿಕೊಂಡು ಕಳಿಸಿದ್ದರಿಂದ ಇಲ್ಲಿಗೆ ಬಂದುದು – ಮುಂತಾದ ವಿಷಯಗಳನ್ನೆಲ್ಲ ಸವಿಸ್ತರವಾಗಿ ಹೇಳಿದ.

ಆಗ ಸೀತೆಯು ಆಂಜನೇಯನಂತಹ ಏಕಾಂಗವೀರರೂ ಧುರೀಣರೂ ಬಹುವಿದ್ಯಾಪರಮೇಶ್ವರರೂ ರಾವಣನ ಬಳಿ ಎಷ್ಟು ಮಂದಿ ಇರುವರೆಂದು ವಿಚಾರಿಸಿದಳು. ಅದನ್ನು ಕೇಳಿಸಿಕೊಂಡ ಮಂಡೋದರಿಯು, ವಿದ್ಯೆ–ಕೀರ್ತಿಗಳಲ್ಲಿ ಅವನ ಸಮಾನರು ನೂತನಪುರಾತನರಲ್ಲಾಗಲೀ, ಮೂರು ಲೋಕಗಳಲ್ಲಾಗಲೀ ಯಾರೂ ಇಲ್ಲವೆಂದು ಹೊಗಳಿದಳು. ಇವನ ಪರಾಕ್ರಮವನ್ನು ವರ್ಣಿಸಲು, ಒಮ್ಮೆ ದಶವದನನನ್ನು ರಣದಲ್ಲಿ ಎದುರಿಸಿದ ವರುಣನನ್ನು ಸೋಲಿಸಿದ್ದಕ್ಕಾಗಿ ಆಂಜನೇಯನಿಗೆ ರಾವಣನು ತನ್ನ ತಂಗಿ ಚಂದ್ರನಖಿಯ ಮಗಳಾದ ಅನಂಗಪುಷ್ಪೆಯನ್ನು ಕೊಟ್ಟು ಮದುವೆ ಮಾಡಿದುದನ್ನು ಹೇಳಿದಳು. ಆಗಿನಿಂದ ಇವನನ್ನು ತನ್ನ ಆಪ್ತರಲ್ಲೊಬ್ಬನಾಗಿ ರಾವಣನು ಮಾಡಿಕೊಂಡ. ಆದರೆ ಇವನು ಪಾಳಿಗೆ ತಪ್ಪಿ, ರಾವಣನನ್ನು ಬಿಟ್ಟು ಭೂಚರರ ಸೇವಕನಾಗಿದ್ದಾನೆ. ಅದೊಂದಿಲ್ಲದಿದ್ದರೆ ಇವನಿಗೆ ಸಮರಾದವರು ಬೇರೆ ಯಾರಿದ್ದಾರೆ ಎಂದು ಉದ್ಗರಿಸಿದಳು. ಆಗ ಮಾರುತಿಯು ತನ್ನ ಕುಲಕ್ಕೆ ರಾಮನು ಮಾಡಿದ ಉಪಕಾರಕ್ಕೆ ಕೃತಜ್ಞತೆ ತೋರಿಸಲು ತಾನು ಬಂದಿರುವುದು, ದಶವದನನು ತನ್ನ ಕುಲಕ್ಕೆ ಕಳಂಕ ತಟ್ಟುವಂತೆ, ಸದ್ಗತಿ

ದೂರಾಗುವಂತೆ ಮಾಡಿದ ಪೊಲ್ಲಮೆಯನ್ನು ಕಳೆಯಲು ತಾನು ಬಂದಿರುವುದು ಎಂದು ಹೇಳಿದ. ಇದರಿಂದ ಕನಲಿದ ಮಂಡೋದರಿಯು, ಹನುಮಸುಗ್ರೀವರನ್ನು ದಶಕಂಠನು ಕೊಲ್ಲದೆ ಮಾಣ ಎಂದು ಉರಿದೆದ್ದಳು. ಆಗ ಸೀತೆಗೂ ಕೋಪ ಬಂತು; ರಾಮಲಕ್ಷ್ಮಣರು ಇಪ್ಪತ್ತೆಂಟು ದಿವಸಗಳೊಳಗಾಗಿ ಕಡಲನ್ನು ದಾಟಿ ಬಂದು ಜಗತ್ತ್ರಯಕಂಟಕನನ್ನು ಕೊಂದು ಮಂಡೋದರಿಗೆ ಅಪಾರವಾದ ಅಳಲನ್ನುಂಟುಮಾಡುವರೆಂದು ನುಡಿದಳು. ಈ ಮಾತುಗಳಿಂದ ಮಂಡೋದರಿಯು ಲಯಸಮಯದ ಚಂಡಿಕೆಯಂತಾದಳು; ಮುಖದಲ್ಲಿ ಕೆಂಪು ಉರಿ ಕಾಣಿಸಿತು, ಕಣ್ಣುಗಳಿಂದ ಕಿಡಿಗಳುದುರಿದವು, ದಾಡೆಗಳು ಬೆಳೆದು ಅಂಬರವನ್ನು ಮುಟ್ಟಲು, ಕೈಗಳನ್ನು ಮೇಲೆತ್ತಿಕೊಂಡು ಸೀತೆಯನ್ನು ಹೊಡೆಯಲೆಂದು ಮೇಲೆದ್ದಳು. ಆ ಸಮಯಕ್ಕೆ ಸರಿಯಾಗಿ ಅರಿಂಜಯಸುತನು ಅಡ್ಡಬಂದ. ಆಕೆ ಅಲ್ಲಿಂದ ಹೊರಬಿದ್ದು ರಾವಣನ ಬಳಿಗೆ ಓಡಿದಳು.

ಇತ್ತ, ಪವಮಾನಸೂನುವು ಬೋನವನ್ನು ತರಿಸಿದ. ಸುಚರಿತೆ ಸೀತೆ ಪಂಚಪರಮೇಷ್ಠಿಗಳನ್ನು ಧ್ಯಾನಿಸಿ, ಮನಸ್ಸಿನಲ್ಲಿಯೇ ಭಕ್ತಿಯಿಂದ ಮುನಿಗಳಿಗೆ ಅನ್ನವನ್ನಿತ್ತು, ತನ್ನ ಹೃತ್ಸರಸಿಯಲ್ಲಿ ರಘುರಾಮನ ಪಾದಪಂಕಜಗಳನ್ನು ಇರಿಸಿಕೊಂಡು, ದೇವತಾವಿನಿರ್ಮಿತ ಮಣಿಕುಟ್ಟಿಮ ಸ್ಥಳದಲ್ಲಿರಿಸಿದ್ದ ಅಮೃತಾನ್ನವನ್ನುಂಡಳು. ಆನಂತರ ಹನುಮನು ಕೈಮುಗಿದು, "ಜನಕಾತ್ಮಜೆಯೇ, ಜಗಜ್ಜನನಿಯಾದ ತಮ್ಮನ್ನು ರಘುಪ್ರವರನಲ್ಲಿಗೆ ಕರೆದೊಯ್ಯುತ್ತೇನೆ, ಸಿದ್ಧರಾಗಿ" ಎಂದ. ಅದಕ್ಕೊಪ್ಪದ ಸೀತೆಯು, ರಾಮನ ಆಜ್ಞೆಯಿಲ್ಲದೆ ತಾನು ಬರುವವಳಲ್ಲ, ಆದ್ದರಿಂದ ತನ್ನ ಸ್ಥಿತಿಯನ್ನು ರಾಘವನಿಗೆ ನಿವೇದಿಸಬೇಕೆಂದು ಕೇಳಿಕೊಂಡಳು. ದೈತ್ಯನು ಅವನಿಗೆ ಅಪಾಯವನ್ನುಂಟುಮಾಡುವ ಮುಂಚೆಯೇ ತಡಮಾಡದೆ ಅವನು ಅಲ್ಲಿಂದ ಹೊರಡಬೇಕೆಂದೂ ಸೂಚಿಸಿ, ಗುರುತಿಗೆಂದು ರಾಮನಿಗೆ ಕೊಡಲು ತನ್ನ ಚೂಡಾರತ್ನವನ್ನು ನೀಡಿದಳು. ಆನಂತರ ಕರ್ಣರವೆ ಎಂಬ ತೊರೆಯ ದಡದಲ್ಲಿ ಚಾರಣಯುಗಳಕ್ಕೆ ಆಹಾರದಾನವನ್ನು ಮಾಡಿ ಪಂಚಾಶ್ಚರ್ಯಗೊಂಡುದು ಮೊದಲಾದ ಹಲವಾರು ಸಂಗತಿಗಳನ್ನು ನೆನೆಸಿಕೊಂಡು ಗದ್ಗದಕಂಠೆಯಾದ ಸೀತೆಗೆ ಹನುಮನು ಸಮಾಧಾನ ಹೇಳಿ ಆಕೆಯಿಂದ ಬೀಳ್ಕೊಂಡ. ಹಾಗೆ ಹೊರಟು, ತಾನು ಬಂದು ಹೋದುದು ಯಾರಿಗೂ ಗೊತ್ತಾಗದಿದ್ದರೆ ಅದು ತನ್ನ ಬಾಹುಬಲಕ್ಕೆ ಮಾಡಿದ ಅಪಚಾರವೇ ಸರಿ. ಹಾಗಾಗಿ ಖಳರನ್ನು ಕೊಂದು, ಪುರದ ಉದ್ಯಾನವನ್ನು ಕಿತ್ತು, ಊರನ್ನು ಸುಟ್ಟು ದಶಾಸ್ಯನಿಗೆ ತನ್ನ ಬರುವಿಕೆಯನ್ನು ತಿಳಿಸಿ ಆನಂತರ ಹೋಗಿ ರಾಮನಿಗೆ ವಿಷಯವನ್ನೆಲ್ಲ ಅರುಹುತ್ತೇನೆ ಎಂದು ಆಲೋಚಿಸಿದ.

ಈ ಹೊತ್ತಿಗೆ ಮಂಡೋದರಿಯು ಖಚರವಲ್ಲಭನ ಬಳಿ ಹೋದಳು; ರಾಮನು ಸುಗ್ರೀವನ ಸಹಾಯದಿಂದ ಸೀತೆಯ ವಿಷಯವನ್ನು ತಿಳಿಯಲೆಂದು ಕಳಿಸಲು ಹನುಮನು ಇಲ್ಲಿಗೆ ಬಂದಿರುವನೆಂದೂ, ಪ್ರಮದವನದಲ್ಲಿ ಸೀತೆಯ ಬಳಿ ಅವನಿರುವನೆಂದೂ ಹೇಳಿದಳು. ರಾವಣನ ಕೋಪ ಉಕ್ಕೇರಿತು; ಕದನಕರ್ಕಶರಾದ ರಾಕ್ಷಸರನ್ನು ಹೆಸರು ಹಿಡಿದು ಕರೆದು ಆಂಜನೇಯನನ್ನು ಕೊಂದು ಬರಲು ಆಜ್ಞೆಯಿತ್ತ. ಸಮರಕ್ರೀಡೆಗೆ ಅವಕಾಶವಾಯಿತಲ್ಲ ಎಂದು ಸಂತಸದಿಂದ ಅವರು ಹೊರಟರು. ದನುಜರನ್ನು ಕೊಲ್ಲುವ ಹಾಗೂ ಮರಗಳನ್ನು ಕಿತ್ತು ಮೋದಗೊಳ್ಳುವ ಆಸೆಗಳನ್ನು ತೀರಿಸಿಕೊಳ್ಳುವ ಅವಕಾಶ

ಒಟ್ಟಿಗೇ ಒದಗಿತೆಂದು ಹನುಮನು ಅಶೋಕದ ಹೆಮ್ಮರಗಳನ್ನು ಕಿತ್ತು ಹೊಡೆದ. ಕೆಂಪು ಚಿಗುರುಗಳೊಡನೆ ಬಿದ್ದ ಅಶೋಕವೃಕ್ಷಗಳಂತೆ ದನುಜರು ರಕ್ತ ಸುರಿಸುತ್ತ ಕೆಳಗೆ ಬಿದ್ದರು. ತಾಳಹಿಂತಾಳ ಮರಗಳನ್ನು ಕಿತ್ತು ಬೀಸಲು ರಾಕ್ಷಸರು ತಾಳತಪ್ಪಿ ಕೆಳಗುರುಳಿದರು. ಹಲಸಿನ ಮರಗಳನ್ನು ಕಿತ್ತು ಹೊಡೆಯಲು ತಲೆಗಳೊಡೆದು ಬಿರಿದ ಹಣ್ಣುಗಳಿಂದ ಕೂಡಿದ ಹಲಸಿನ ಮರಗಳಂತೆ ಅಸುರರ ಕೆಡೆದರು. ತಿಲಕ ತರುಗಳನ್ನು ಎಸೆಯಲು ಯಶಸ್ತಿಲಕವೂ ಅವರ ಹೆಂಡಿರ ಹಣೆಗಳ ಮೇಲಿನ ತಿಲಕವೂ ಒಟ್ಟಿಗೆ ಕಣ್ಮರೆಯಾಗುವಂತೆ ಅವರು ಸತ್ತುಬಿದ್ದರು. ಹೀಗೆ ತನ್ನ ಮೇಲೆ ದಾಳಿಮಾಡಿದ ಅಸುರಸೇನೆಯನ್ನೆಲ್ಲ ಹೇಳಹೆಸರಿಲ್ಲದಂತೆ ಮುರಿದಿಕ್ಕಿದ. ಅಮಿತಬಲನಾದ ಮರುತ್ತನಯನು ಈ ರೀತಿ ನಮೇರು ಮಂದಾರ ಪಾರಿಜಾತ ಮುಂತಾದ ಬಗೆಬಗೆಯ ಮರಗಳನ್ನು ಕಿತ್ತೆಸೆಯುತ್ತಿರಲು ಗಂಗಾನದೀತಟದ ಉದ್ಯಾನವನ ಆಕಾಶದಲ್ಲಿ ನಿರ್ಮಿತವಾಯಿತೋ ಎನ್ನುವಂತೆ ತೋರಿತು. ಅವನ ತೋಳಬಲವೇ ಪರಶು ಮಿಂಚು ಕಾಳ್ಗಿಚ್ಚು ಬಿರುಗಾಳಿ ಕಾಡಾನೆಗಳಂತೆ ತೋರಲು ಅನೇಕ ಬಗೆಯ ಮರಗಳನ್ನು ಕಿತ್ತು ಆಂಜನೇಯನು ವನವನ್ನು ಮೈದಾನವಾಗಿಸಿಬಿಟ್ಟ. ಸುರಗಿರಿಯನ್ನೇ ಕಿತ್ತಿಡಬಲ್ಲ ಅವನಿಗೆ ಇದಾವ ಮಹಾ! ಪವಮಾನನಂದನನ ಈ ಅಟಾಟೋಪದಿಂದ ಕೋಗಿಲೆಗಳು ಬೆಚ್ಚಿ ಮಾವಿನ ಮರಗಳನ್ನು ಬಿಟ್ಟು ಹಾರಿಹೋದವು; ಗಿಳಿಗಳ ಹಿಂಡು ಪೂಗವನಗಳಿಂದ ದೂರ ಹೋದವು; ಮರಿ ಹಂಸಸಂಕುಲವು ಹೂಗೊಳಗಳನ್ನು ಅಗಲಿದವು; ಮದಿಸಿದ ದುಂಬಿವಿಂಡು ಪುನ್ನಾಗ ಮರಗಳನ್ನು ಬಿಟ್ಟು ಹೋದವು. ನರುಗಂಪನ್ನು ಬೀರುವ ತನ್ನ ಬಿಲ್ಲೆಗಳಿಂದ ಆಕರ್ಷಿಸಿ ಅಂಗಜನಿಗೆ ವಿಜಯಸ್ತಂಭವನ್ನೂ ವನಲಕ್ಷ್ಮಿಗೆ ಯೌವನದ ಮೆರುಗನ್ನೂ ಉಂಟುಮಾಡುವ ಭೃಂಗಸಿಕಾಯವನ್ನು ದಶಾನನನ ಕೀರ್ತಿಸ್ತಂಭವನ್ನೇ ಮುರಿದಿಕ್ಕಿದಂತೆ ಮರುನ್ನಂದನನು ಕಿತ್ತೆಸೆದ. ಗಂಧವಹನಾದ ತನ್ನ ತಂದೆ ಸುಳಿಯಲು ಕಷ್ಟ ಕೊಡುತ್ತವೆ ಎಂಬ ವಂಶಗತವಾದ ದ್ವೇಷದಿಂದ ಉದ್ಯಾನದಲ್ಲಿ ದಟ್ಟವಾಗಿ ಬೆಳೆದಿದ್ದ ಮರಪೊದರುಬಳ್ಳಿಗಳ ಸಮೂಹವನ್ನು ಅವನು ಒಂದನ್ನೂ ಬಿಡದೆ ಕಿತ್ತೆಸೆದ. ಮರಗಳನ್ನು ಕಿತ್ತನಂತರ ವನವೆಲ್ಲ ಉತ್ತ ಹೊಲದಂತಾಯಿತು; ಕೊಂದ ಶತ್ರುಗಳ ಹೆಣಗಳನ್ನು ಸುರಿದ ರಕ್ತದೊಡನೆ ಬಿತ್ತಲು ಶೌರ್ಯವೆಂಬ ಮೊಳಕೆ ತಲೆದೋರಿತು, ಅದೇ ಸೊಂಪಾಗಿ ಬೆಳೆದು ಕೀರ್ತಿಯೆಂಬ ಬಳ್ಳಿಯಾಯಿತು; ಅದರಿಂದ ಆಗಸವನ್ನು ತುಂಬಿ ಮರುನ್ನಂದನನು ರಾವಣನಿಗೆ ಅಳಲನ್ನು ತಂದ. ಆದರೆ ಬಿರುಗಾಳಿ ಬಿಸಿಲುಗಳಿಂದ ತೊಂದರೆಯಾದೀತೆಂದು ಜಾನಕಿಯಿದ್ದ ಅಶೋಕಮರದ ಸಮೀಪದಲ್ಲಿನ ಹಣ್ಣುಹಂಪಲನ್ನು ಬಿಟ್ಟು ಮೆರೆಯುತ್ತಿದ್ದ ಮರಗಳನ್ನು ಅವನು ಮುಟ್ಟಲಿಲ್ಲ.

ಈ ರೀತಿ ರಾವಣನ ಯಶೋಭಂಗವನ್ನು ಮಾಡುವಂತೆ ವನಭಂಗವನ್ನು ಮಾಡಿದಾಗ ಒಬ್ಬ ನಿಶಾಚರನು ಓಡಿ ಬಂದು ಈ ದಾಂಧಲೆಯ ವಿಷಯವನ್ನು ರಾವಣನಿಗೆ ಬಿನ್ನವಿಸಿದ. ಆ ಮಾತು ರಾವಣನನ್ನು ಗುಡುಗನ್ನು ಕೇಳಿದ ಸಿಂಹದಂತೆ ಕೆರಳಿಸಿತು; ಹುಬ್ಬುಗಳನ್ನು ಗಂಟಿಕ್ಕಿಕೊಂಡು ಸಿಂಹಾಸನದಿಂದೆದ್ದ; ಆಂಜನೇಯನನ್ನು ತರಿದುಹಾಕಲು ಹೊರಟ. ಆಗ ತಂದೆಯನ್ನು ತಡೆದ ಇಂದ್ರಗಿಯು, "ಏಕಾಂಗಿಯಾದವನ ಮೇಲೆ ದಶಾನನನು ದಾಳಿಮಾಡಿದ ಎಂಬ ಲೋಕಾಪವಾದಕ್ಕೆ ಒಳಗಾಗಿ ನಿಮ್ಮ ಕತ್ತಿಯನ್ನೇಕೆ ಮೊಂಡುಗೊಳಿಸಿಕೊಳ್ಳುವಿರಿ? ನೀವು ಹೋಗುವ ಆವಶ್ಯಕತೆಯೇ ಇಲ್ಲ; ನನ್ನ ದಾಳಿಗೆ

ಪವಮಾನನಂದನನು ಅಂಜಿದರೆ, ಅವನನ್ನು ನಿಮ್ಮ ಪಾದಕ್ಕೆ ಬೀಳಿಸುತ್ತೇನೆ, ಇಲ್ಲದಿದ್ದರೆ ಕೊಲ್ಲುತ್ತೇನೆ, ನನಗೆ ಅಪ್ಪಣೆ ಕೊಡಿ" ಎಂದು ತಂದೆಯ ಅನುಮತಿ ಪಡೆದು ತನ್ನ ರಥಕ್ಕೆ ಬರಹೇಳಿ ಸಾರಥಿಯೊಡನೆ ಹೊರಟ. ಆ ಹೊತ್ತಿಗೆ ಆಂಜನೇಯನು ಲಂಕಾಪುರವೇ ತಲ್ಲಣಿಸುವಂತೆ ದೊಡ್ಡ ನಾಯಕರನ್ನೆಲ್ಲ ಕೊಲ್ಲುತ್ತಿರಲು ಇಂದಗಿ ಮೇಲೇರಿ ಬಂದ. ಅವನನ್ನು ಕಂಡು ಮರುನ್ನಂದನನು, "ಕಾದಿ ತನ್ನ ಶೌರ್ಯಪ್ರದರ್ಶನ ಮಾಡಲು ರಘುಜನು ತನಗೆ ಹೇಳಿಲ್ಲ; ಆದ್ದರಿಂದ ಇವನಿಗೆ ಸೆರೆಯಾಗಿ, ಆನಂತರ ಲಂಕೆಯನ್ನು ಸುಟ್ಟು ದಶಾನನನು ಅಳುಕುವಂತೆ ಮಾಡುತ್ತೇನೆ" ಎಂದುಕೊಂಡ.

ತನ್ನ ಬಲವನ್ನೆಲ್ಲ ಬೀಡಿಗೆ ಕಳಿಸಿದ ಹನುಮನು ಒಂಟಿಯಾಗಿ ಕದನಕೇಳಿಗೆ ಆತುರನಾಗಿದ್ದ ಇಂದಗಿಗೆ ತನ್ನನ್ನು ಸೆರೆಗೈಯಲು ಅವಕಾಶವಿತ್ತ. ಆತನು ರಾವಣನ ಬಳಿ ಕರೆತಂದು ತಂದೆಗೆ ಇಂತೆಂದ: "ನಮ್ಮ ವಿದ್ಯಾನಿರ್ಮಿತವಾದ ವಜ್ರಪ್ರಾಕಾರವನ್ನೊಡೆದು ವಜ್ರಮುಖನನ್ನು ಕೊಂದು ಸೀತಾದೇವಿಯ ಸಮೀಪಕ್ಕೆ ಬಂದು ವನವನ್ನೆಲ್ಲ ಕಿತ್ತು, ಮೇಲೆ ಬಂದ ಖಚರರನ್ನೆಲ್ಲ ಕೊಂದ ಇವನಿಗೆ ಏನು ಮಾಡಬೇಕೋ ನೀವೇ ನಿರ್ಧರಿಸಿ." ಕಣ್ಣುಗಳು ಕೆಂಪಾಗಲು, ಹುಬ್ಬು ಗಂಟಿಕ್ಕಿಕೊಳ್ಳಲು, ಹಣೆಯ ಮೇಲೆ ಬೆವರಹನಿಗಳು ತುಂಬಲು ಅಸುರೇಂದ್ರನು ಕೋಪದಿಂದ ಪವನಸುತನನ್ನು ಕುರಿತು, "ನಿಮ್ಮ ವಂಶಾನುಗತವಾದ ಮಹಿಮೋನ್ನತಿಯು ಮಸುಳುವಂತೆ, ನಾನು ಮಾಡಿದ ಉಪಕಾರವನ್ನೂ ಮನ್ನಣೆಯನ್ನೂ ಬಗೆಯದೆ, ಇಂದಗಿಗೆ ಸಮನೆಂಬ ಭಾವನೆಯಿಂದ ರಕ್ಷಿಸಿದುದನ್ನು ಮರೆತು, ನಾಚಿಕೆ ಬಿಟ್ಟು, ಖೇಚರನಾದ ನೀನು ಈ ಬಗೆಯಲ್ಲಿ ಹುಲುಮಾನವರಿಗೆ ಚರನಾಗುವುದೇ? ಉಪಕಾರವನ್ನು ಮಾಡಿದವನಿಗೆ ನೀನು ಅಪಕಾರವನ್ನೇ ಗೈದೆ, ಶತ್ರುಗಳ ಜೊತೆ ಸೇರಿದೆ. ನಿನಗೆ ತಕ್ಕ ಶಿಕ್ಷೆಯಾಗಬೇಕು" ಎಂದ. ಅಲ್ಲಿದ್ದ ಇತರ ದಾನವರೂ ಪವಮಾನಸುತನ ಸ್ವಾಮಿದ್ರೋಹವನ್ನು ಖಂಡಿಸಿದರು; ಪರಬಲವನ್ನು ಸೇರಿಕೊಂಡ ದೋಷಕ್ಕೆ ಪಕ್ಕಾದನೆಂದು ದೂಷಿಸಿದರು; ಪವನಂಜಯನ ಮಗನಾಗಿಯೂ ಹೀಗೆ ಮಾಡಿದನಲ್ಲ ಎಂದು ಪೇಚಾಡಿದರು. ಆಗ ಅವರ ಮೇಲೆ ಮುಳಿದ ಅಂಜನಾಸುತನು, "ತೋಯದವಾಹನನ ವಂಶಕ್ಕೆ ಅಪಕೀರ್ತಿ ಬರುವಂತೆ, ಕೆಟ್ಟ ಹೆಸರು ಮುತ್ತಿಕೊಳ್ಳುವ ಹಾಗೆ ಪರಸ್ತ್ರೀಯನ್ನು ಹೊತ್ತು ತಂದ ಅನ್ಯಾಯದ ಬಗ್ಗೆ ಮೊದಲು ಆಲೋಚಿಸಿರಿ. ದಶಮುಖನು ಧರ್ಮಕ್ಕೆ ವಿರುದ್ಧವಾಗಿ ನಡೆದುಕೊಂಡರೂ ಅದನ್ನು ಗಮನಿಸದೆ, ತಡೆಯದೆ ಪ್ರೋತ್ಸಾಹವಿತ್ತ ನೀವು ಪಾಪಿಗಳು ತಾನೇ? ರಣರಂಗದಲ್ಲಿ ಸೌಮಿತ್ರಿಯ ಕೈಯಿಂದ ರಾವಣನು ಸಾಯಬೇಕೆಂಬ ವಿಧಿಬರಹವನ್ನು ಅಳಿಸಲು ಯಾರಿಗೆ ತಾನೇ ಸಾಧ್ಯ?" ಎಂದು ನಾನಾವಿಧವಾಗಿ ತಪ್ಪು ತೋರಿಸಿ ಮಾತಾಡಿದಾಗ, ಹನುಮನು ರಾಮದೂತನೆಂದು ಡಂಗುರ ಹೊಡೆಸಿ, ಚೆನ್ನಾಗಿ ಅವಮಾನ ಮಾಡಿ ಅಟ್ಟುವಂತೆ ರಾವಣನು ಆಜ್ಞೆ ಮಾಡಿದ. ಅದನ್ನು ಕೇಳಿದ ಪವನಸುತನು, ಸಿಡಿಲು ಹೊಡೆದಾಗ ಬೆಂಕಿಯುಗುಳಿದಂತೆ, ಕಿಚ್ಚು ಗಾಳಿಯ ನೆರವಿನಿಂದ ಕಾಡನ್ನು ಸುಡುವಂತೆ ಕೋಪತಾಪದಿಂದ ಕಿಡಿಕಿಡಿವೋದ.

ಪಾತಾಳದಿಂದ ಉರಿಯುಂಡೆಗಳು ಹೊಮ್ಮಿದುವೋ ಎನ್ನುವಂತೆ ಕಣ್ಣುಗಳಲ್ಲಿ ಕಿಡಿಗಳೊಗೆಯಲು ಮೇಲೆದ್ದ ಅವನು ಕೈಕಾಲುಗಳಿಂದ ಒದೆಯುತ್ತ ಹೊಡೆಯುತ್ತ ಆಸ್ಥಾನದಲ್ಲಿದ್ದ ದುರ್ಧರ ವಿದ್ಯಾಧರವೀರರನ್ನೆಲ್ಲ ಯಮನ ಬಾಯಿಗೆ ತುರುಕಿದ.

ಕೆಲವರನ್ನು ದೂರಕ್ಕೆ ಎಸೆದ, ಮತ್ತೆ ಕೆಲವರನ್ನು ನಿಟ್ಟೆಲ್ಲು ಮುರಿಯುವಂತೆ ಒದ್ದ, ಹಲವರನ್ನು ಬೀಳುವಂತೆ ಹೊಯ್ದು, ಮತ್ತೂ ಕೆಲವು ಉದ್ವೃತ್ತರ ಕಾಲುಗಳನ್ನು ಹಿಡಿದು ಮೇಲೆತ್ತಿ ನೆಲಕ್ಕೆ ಅಪ್ಪಳಿಸಿದ. ಹೀಗೆ ಕಲ್ಪಾಂತಕೃತಾಂತನಂತೆ ದಾಂಧಲೆ ಮಾಡಿ ಹೊಡೆಯುವ ಸಿಡಿಲಿನ ಹಾಗೆ ಸಿಂಹಲಂಘನದಿಂದ ಅಂಬರಕ್ಕೆ ನೆಗೆದ. ದಹನವಿದ್ಯೆಯಿಂದ ಮನೆಮನೆಗೂ ಉರಿಯ ಜ್ವಾಲೆಗಳು ಹಬ್ಬುವ ಹಾಗೆ ಇಡೀ ಲಂಕಾನಗರವನ್ನು ಸುಟ್ಟು, ಅಸುರಾಧೀಶನ ಮನಸ್ಸು ಉರಿಯುವಂತೆ, ಮುಖದಲ್ಲಿ ಹೊಗೆ ಮುತ್ತುವಂತೆ ಮಾಡಿದ. ಲಂಕೆಯು ಹತ್ತಿ ಉರಿಯುತ್ತಿದ್ದರೆ ವಿನಾಶಹೇತುಗಳಾದ ಧೂಮಕೇತುಗಳು ನೆಗೆದಂತೆ ತೋರುತ್ತಿತ್ತು; ಧಗಧಗ ಹಬ್ಬುತ್ತಿದ್ದ ಕೆಂಪು ಉರಿ ದಶಾನನ ಮೇಲೆ ಕೋಪಗೊಂಡ ಯಮನ ಕಣ್ಣ ಕೆಂಪಿನಂತೆ ಕಾಣಿಸಿತು, ಹಬ್ಬುವ ಹೊಗೆ ಯಮನ ಹುಬ್ಬುಗಂಟಿನಂತೆ ಗೋಚರಿಸಿತು. ಅಣುವನ ವಹ್ನಿವಿದ್ಯೆ ಊರನ್ನು ಸುಡುತ್ತ ಛಿಟಿಛಿಟಲೆಂದು ಸದ್ದುಮಾಡಿ ಚಾಚಿಕೊಂಡ ಉರಿಯ ನಾಲಗೆಗಳು ರಾಮನ ಬಾಣಗಳಿಂದ ತಾವು ರಾವಣನ ರಕ್ತವನ್ನು ಕುಡಿದು ತಣಿಯುವ ದಿನ ಹತ್ತಿರವಾಯಿತೆಂದು ಹಾಡುತ್ತ ಕುಣಿಯುವ ಭೈರವಿಯ ಜಟಾಪಟಲಗಳಂತೆ ಕಾಣಿಸಿದವು. ಶಿವನು ತ್ರಿಪುರದಹನವನ್ನು ಮಾಡಿದ ಮೇಲೆ ಸ್ವಲ್ಪ ಕಾಲ ಉಪವಾಸವ್ರತವನ್ನಾಚರಿಸುತ್ತಿದ್ದ ಅಗ್ನಿಯು ಈಗ ವಾಯುಪುತ್ರನ ನೆರವಿನಿಂದ ಪಾರಣೆಯ ಊಟ ಸಿಕ್ಕಲು ಕಂಠಪೂರ್ತಿ ತಿಂದು ತೇಗುವ ಸದ್ದಿನಂತೆ ಛಿಟಿಛಿಟಿಲ್ ಧಗಧಗಿಲ್ಲೆಂಬ ನಿಸ್ವನವು ಹೊಮ್ಮಿತು. ಆಂಜನೇಯನ ದಿವ್ಯಾಗ್ನಿಯು ಚಟುಲತೆಯಿಂದ ಕರುಮಾಡವನ್ನು ಸುಡುತ್ತಿದ್ದರೆ ದಾವಾಗ್ನಿಯು ಮೇರುಪರ್ವತವನ್ನು ಆವರಿಸಿದಂತೆ ಕಾಣುತ್ತಿತ್ತು; ದಶಕಂಧರನನ್ನು ನುಂಗಲೆಂದು ವಾಸುಗಿಯು ತನ್ನ ಸಾವಿರ ಫಣಾರತ್ನಗಳು ಕೆಂಪಾಗಿ ಹೊಳೆಯಲು, ಎರಡು ಸಾವಿರ ನಾಲಗೆಗಳನ್ನು ಚಾಚಿ ರಸಾತಳದಿಂದ ಭುಗಿಲ್ಲನೆ ಮೇಲೆದ್ದು ಬಂದನೋ ಎಂಬಂತೆ ಕೇಸುರಿಯ ಮಾಲೆಯು ರಾವಣನ ಅರಮನೆಯನ್ನು ಸುಟ್ಟಿತು. ಉರಿಯ ತಾಪಕ್ಕೆ ಅರಮನೆಯಲ್ಲಿದ್ದ ಚಿನ್ನ ಬೆಳ್ಳಿ ಕಂಚಿನ ಪಾತ್ರೆಗಳು ಕರಗಿಹೋದವು. ಯಮನ ನಾಲಗೆಯಂತೆ ಉರಿಯು ದಾನವನ ಆನೆಯ ಲಾಯವನ್ನು ತಲುಪಲು ಆನೆಗಳು ವೇಗವಾಗಿ ಓಡುತ್ತ ಕಂಬಗಳನ್ನು ಮುರಿದಿಕ್ಕಿ ಸುಳಿದಾಡುವ ನೀಲಪರ್ವತಗಳಿಂದ ನಿರ್ಝರಗಳು ರಭಸವಾಗಿ ಹರಿಯುವಂತೆ ಅವುಗಳಿಂದ ಸುರಿಯುವ ಮದಜಲದಿಂದ ಉರಿಯ ನಾಲಗೆಯು ತಂಪಾಯಿತು. ಬೆಂಕಿಯು ಲಾಯವನ್ನು ಪ್ರಳಯಪಾವಕನಂತೆ ಆವರಿಸಲು ಅಲ್ಲಿನ ಕುದುರೆಗಳು ಕಂಬಗಳನ್ನು ಮುರಿದು ಲೆಂಕರಿಗೆ ಭಯವುಂಟುಮಾಡುತ್ತ ಬಿಸಿಲುಕುದುರೆಗಳಂತೆ ನಾನಾ ದೆಸೆಗೆ ಓಡಿದವು. ತನ್ನ ಮಗನು ತನ್ನ ಗೆಳೆಯನಾದ ಅಗ್ನಿಗೆ ಒಳ್ಳೆಯ ಅತಿಥಿಸತ್ಕಾರವನ್ನು ಮಾಡುತ್ತಿರುವನೆಂಬ ತೃಪ್ತಿಯಿಂದ ವಾಯುವು ಅನುಕೂಲಕರವಾಗಿ ಬೀಸಿತು.

ಈ ಬೆಂಕಿಯಿಂದ ಭಯಗೊಂಡ ಜನಗಳು ಊರೊಗೆ ದೂರದಲ್ಲಿನ ಬಕ್ಕಬಯಲಿಗೆ ಓಡಿ ಬಂದು ತಮ್ಮತಮ್ಮೊಳಗೆ ಹೀಗೆ ಮಾತಾಡಿಕೊಳ್ಳುತ್ತಿದ್ದರು: ಜನಕಜೆಗೆ ಆಸೆಪಟ್ಟ ಸುಕೃತಕ್ಷಯದಿಂದಾಗಿ ದಶಾನನನು ಅಗ್ನಿಯ ಕೋಪಕ್ಕೊಳಗಾದುದರಲ್ಲಿ ಅಚ್ಚರಿಯಿಲ್ಲ ಎಂದರು ಕೆಲವರು. ಮಾನವನ ದೂತನೊಬ್ಬನು ಸಮುದ್ರವನ್ನು ದಾಟಿ ಬರುವುದೆಂದರೇನು, ಅವನೊಬ್ಬನೇ ರಕ್ಕಸ ಸೈನ್ಯವನ್ನೆಲ್ಲ ಬಡಿದಿಕ್ಕುವುದೆಂದರೇನು,

ಲಂಕೆಯನ್ನೂ ನಂದನವನವನ್ನೂ ನಾಶಮಾಡುವುದೆಂದರೇನು; ಇದೆಲ್ಲ ದಾನವರಾಜನ ದುರ್ವಿಲಸಿತದಿಂದಾದ ಸಂಕಟವಲ್ಲವೇ ಎಂದು ಮತ್ತೆ ಕೆಲವರು ಅಚ್ಚರಿವಟ್ಟರು. ಲಂಕಾಪತಿಗೆ ಎದುರಾದವರಿದ್ದಾರೆಯೇ, ರಾವಣನಿಗೆ ಆ ಅಣುವನು ಸಮಾನನೇ, ಆದರೆ ಆ ಮಹಾಸತಿಯಾದ ಸೀತೆಯ ಶೋಕಾನಲದಿಂದ ಲಂಕೆಯೇ ಬೇಯುವ ಹಾಗಾಯಿತು ಎಂದು ಮಗುದೂ ಹಲವರು ಆಡಿಕೊಂಡರು.

ಲಂಕೆಯನ್ನೆಲ್ಲ ಉರಿಸಿದ ಹನುಮನು ಗಗನತಳಕ್ಕೆ ನೆಗೆದು ತನ್ನ ಸೇನೆಯನ್ನು ಕೂಡಿಕೊಂಡು ಕಿಷ್ಕಿಂಧಪುರಾಭಿಮುಖನಾಗಿ ಪಯಣವನ್ನು ಕೈಗೊಂಡ. ವಾಯುಮಾರ್ಗದಲ್ಲಿ ಬಾವುಟಗಳು ತುಂಬಿ ಹಾರಾಡಿದವು; ವಿಮಾನಗಳ ಗಂಟೆಯ ಸದ್ದು ಜಯಘೋಷದಂತೆ ದಿಕ್ಕುಗಳನ್ನು ಆವರಿಸಿದವು; ಆಭರಣಗಳ ಕಾಂತಿಯು ದಿನದ ಬೆಳಗನ್ನು ಹೆಚ್ಚಿಸಿತು ಎಂಬಂತೆ ಜಯಾಂಗನಾಪ್ರಿಯನಾದ ಮಾರುತಿಯು ರಾಮನ ಮನೋರಥಸಿದ್ಧಿಯಂತೆ ಕಿಷ್ಕಿಂಧೆಯಲ್ಲಿ ಬಂದಿಳಿದ. ರಾಮನ ಬಾಹುಬಲ ಸೂರ್ಯನ ಉದಯಗಿರಿಯು ಇತರ ಬೆಟ್ಟಗಳೊಡನೆ ಬರುತ್ತಿರುವಂತೆ ಹನುಮನು ಸೂರ್ಯ ವಂಶನರಪಾಲಶಿರೋಮಣಿಯಿದ್ದ ಸಭಾಭವನಕ್ಕೆ ಆಗಮಿಸಿದ. ಅವನು ತೊಟ್ಟಿದ್ದ ಮರಕತಮಣಿಕುಂಡಲಗಳ ಕಾಂತಿಯಿಂದಾಗಿ ದೆಸೆಗಳು ಹಸುರಾದವು, ಅವನ ಕಿರೀಟದ ಮಣಿಪ್ರಭೆಯಿಂದ ಗಗನವನ್ನು ಸಂಜೆಗೆಂಪು ಆವರಿಸಿತು, ಕನಕಾದ್ರಿಯಲ್ಲಿ ಹೊಳೆಯುವ ತಾರೆಗಳಂತೆ ಅವನ ದೇಹದ ಮೇಲಿನ ತೋರಮುತ್ತುಗಳು ತಳತ್ತಳಿಸಿದವು.

ಅವನ ಅರಳಿದ ಮುಖ, ಬರುವಿಕೆಯ ಗತ್ತು ಇವುಗಳನ್ನು ಗಮನಿಸಿದ ರಾಮನಿಗೆ ಕಾರ್ಯಸಿದ್ಧಿಯಾದುದು ಸೂಚಿತವಾಯಿತು. ಹರ್ಷಗೊಂಡ ರಾಮನು ಹನುಮನನ್ನು ಎದುರುಗೊಂಡ. ರಾಮಲಕ್ಷ್ಮಣರ ಕಣ್ಣ ಹೊಳಪು ಹಾಗೂ ಅಲ್ಲಿ ನೆರೆದಿದ್ದವರ ಕಂಗಳ ಕಾಂತಿ ಸುತ್ತುವರಿಯಲು, ಅಂಜನಾಸುತನು ಆಭರಣಕಾಂತಿಯ ಅಲೆಗಳ ನಡುವೆ ನಡೆತರುವ ಅರಳಿದ ನೀಲನೀರಜವನದಂತೆ ಕಾಣಿಸಿದ. ಬಂದವನೇ ರಾಘವನಿಗೆ ವಿನಯವಿನಮಿತನಾದ, ಲಕ್ಷ್ಮಣನಿಗೆ ಕೈಮುಗಿದ. ಮಣಿಮಯಾಸನದಲ್ಲಿ ಕುಳಿತುಕೊಂಡು ಪವಮಾನಸುತನು ಸೀತೆಯ ಚೂಡಾಮಣಿಯನ್ನೀಯಲು ರಾಮನ ವಿರಹಾಂಧಕಾರವು ಮಣಿಯಿತು, ಕಣ್ಣ ಬೊಂಬೆ ಕುಣಿಯಿತು, ಮೈಯಲ್ಲಿ ಪುಲಕಾಳಿಯು ಹೆಣೆಯಿತು. ಅದನ್ನು ಇದಿರುಗೊಳ್ಳುವಂತೆ ರಾಮನ ಕಣ್ಣುಗಳಲ್ಲಿ ಆನಂದಜಲ ಹೊಮ್ಮಿತು; ಅದರ ಸ್ಪರ್ಶವು ಸೀತೆಯನ್ನೇ ಅಪ್ಪಿಕೊಂಡಂತೆ ಅವನಲ್ಲಿ ರೋಮಾಂಚವನ್ನು ತಂದಿತು. ಮಳೆಗಾಲವನ್ನು ಎದುರು ನೋಡುವ ಚಾತಕಪಕ್ಷಿಯಂತೆ ಸೀತಾಮಾತೆಯು ರಾಮನ ಆಗಮನಕ್ಕಾಗಿ ಜೀವಹಿಡಿದು ತುದಿಗಾಲಲ್ಲಿ ನಿಂತಿರುವ ಪರಿಯನ್ನು ವರ್ಣಿಸಿದ. "ದೇವಾ, ಪತಿವ್ರತಾಗುಣಕ್ಕಿಂತಲೂ ಅಗ್ಗಳವಾದುದು ಯಾವುದಿದೆ? ರಾವಣನು ಮಾಡುವ ಉಪಸರ್ಗಗಳು ಎಂಥವಾದರೂ ಹಾವಿನ ಹಲ್ಲನ್ನು ಕೀಳುವಂತಹ ಮಾಂತ್ರಿಕಶಕ್ತಿಯನ್ನು ರಾಮಭಕ್ತಿಯು ನೀಡಲಾರದೇ!" ಎಂದ. ಒಮ್ಮೆ ರಾಮನು ನದೀತೀರದಲ್ಲಿ ಮುನಿಬೃಂದಾರಕರಾದ ಚಾರಣಯುಗಕ್ಕೆ ಆಹಾರದಾನ ಮಾಡಿದಾಗ, ಹದ್ದಿನ ಜನ್ಮವನ್ನು ತಾಳಿದ್ದ ದಂಡಕನು ಆ ಯೋಗಿಗಳ ದರ್ಶನದಿಂದ ಜಾತಿಸ್ಮರನಾದ ವಿಸ್ಮಯಕರ ಘಟನೆ ನಡೆದುದನ್ನು ನೆನಸಿಕೊಂಡು ಜಾನಕಿಯು ಅದನ್ನು ಕುರುಹಾಗಿ ಹೇಳಲು

ತನಗೆ ತಿಳಿಸಿರುವ ಸಂಗತಿಯನ್ನರುಹಿದ., ರಾಮನ ಅಪ್ಪಣೆಯಂತೆ ಮನೋವೇಗದಿಂದ ಲಂಕೆಯನ್ನು ಸೇರಿದ ಹನುಮನು ವಜ್ರಮುಖನನ್ನು ಕೊಂದ, ವನವನ್ನು ಧ್ವಂಸಮಾಡಿದ, ಲಂಕೆಯನ್ನು ಸುಟ್ಟ; ಆದರೆ ರಾಘವನ ಅಪ್ಪಣೆಯಿರದುದರಿಂದ ರಾವಣನನ್ನು ಕೊಂದು ದೇವಿಯನ್ನು ಕರೆತರಲಿಲ್ಲ ಎಂಬ ಸಂಗತಿಯನ್ನು ಹನುಮನ ಪ್ರಧಾನನಾದ ಪೃಥುಮತಿಯು ಕೈಮುಗಿದುಕೊಂಡು ದಾಶರಥಿಗೆ ಅರಿಕೆ ಮಾಡಿದುದನ್ನು ವಿವರಿಸಿದ. ಇದನ್ನು ಕೇಳಿದ ಸುಗ್ರೀವಾದಿಗಳು ಪೃಥುಮತಿ ಹೇಳಿದ ಯಾವುದೂ ಹನುಮನ ಭುಜಬಲಕ್ಕೆ ಅಸಾಧ್ಯವಾಗಿರಲಿಲ್ಲ ಎಂದುಕೊಂಡರು.

ಮರುನ್ನಂದನನು ಕೈಮುಗಿದುಕೊಂಡು ರಘುನಂದನನಿಗೆ ಹೀಗೆಂದು ಅರಿಕೆಮಾಡಿಕೊಂಡ: "ನಾನು ನಿಮ್ಮ ಸುದ್ದಿಯನ್ನು ತಿಳಿಸುವವರೆಗೂ ದೇವಿಯು ನಿರಾಶೆಯಿಂದ ಅನ್ನತ್ಯಾಗವಮಾಡಿದ್ದಳು; ಅಸುರನ ಕೃತಿಯಿಂದಾಗಿ ಆಕೆಯು ಪ್ರಾಣತ್ಯಾಗವನ್ನೂ ಮಾಡುವ ನಿರ್ಧಾರಮಾಡಿದ್ದಳು. ಹಾಗಾಗಿ ಅಸುರೇಂದ್ರನನ್ನು ಕೊಲ್ಲುವುದಕ್ಕೆ ತಡಮಾಡಬಾರದು." ಈ ಮಾತುಗಳು ತನ್ನ ವೀರರಸಪ್ರವಾಹಿನಿಗೆ ಸೇತುವಾಗಲು ಲಕ್ಷ್ಮಣನು, "ಈ ಸಮುದ್ರವನ್ನು ಕುಡಿದು ಬರಿದುಮಾಡಲು ನನ್ನ ಬಾಡಬಾಗ್ನಿಯೇ ಸಾಕು; ನನ್ನ ಈ ಚಾಪದಂಡವು ಯಾರು ಎದುರಾದರೂ ಜೀವಾಕರ್ಷಣವಿದ್ಯೆಯನ್ನು ಮೆರೆಯುತ್ತದೆ. ದಶಗ್ರೀವನಿಗೆ ಅಣ್ಣನೇ ಸಾಕು. ಆದ್ದರಿಂದ ತಡವೇಕೆ?" ಎಂದು ಹೇಳಿದಾಗ ಅವನ ಗಂಡೋದ್ಗಾರದಿಂದ ಹುಬ್ಬುಗಳ ಕೊನೆಯಲ್ಲಿ ಬೆವರಹನಿಗಳು ಕಾಣಿಸಿಕೊಂಡಿದ್ದವು. ಅದನ್ನು ಸುಗ್ರೀವನೂ ಅನುಮೋದಿಸಿದ; ತನ್ನ ಭಾರಿ ಸೈನ್ಯವು ಕಡಲನ್ನು ದಾಟಲು ಸಾಧ್ಯವಾಗುವ ನಭೋಗಮನವಿದ್ಯೆಯನ್ನು ಬಲ್ಲುದೆಂದು ಹೇಳಿ ಮಾರನೆಯ ದಿನವೇ ರಣಕೇಳಿಗೆ ಹೊರಡುವುದಾಗಿ ಘೋಷಿಸಿದ. ತಮ್ಮ ಜೊತೆಯಲ್ಲಿ ಬರುವ ಗಂಡರಾರು ಎಂದು ಸುಗ್ರೀವನು ಕೇಳಿದಾಗ, ಸಿಂಹನಾದನು ಸಿಂಹದಂತೆ ಗರ್ಜಿಸಿ, "ಮಾರುತಿಗೆ ಕಡಿಮೆಯಿಲ್ಲದ ದೋರ್ಗರ್ವವುಳ್ಳವರು ನಮ್ಮಲ್ಲಿ ಸಾವಿರಾರು ಮಂದಿಯಿದ್ದಾರೆ; ಅವರನ್ನೆದುರಿಸಲು ನಿಶಾಟರಿಗೆ ಶಕ್ಯವೇ?" ಎಂದ. ಆಗ ವಾಲಿಯ ಮಗನಾದ ಚಂದ್ರಮರೀಚಿಯು, ರಾವಣನು ಮಾರುತಿಯ ಬುದ್ಧಿಮಾತುಗಳನ್ನು ಕೇಳದುದು, ರಾಮನ ಕೂರಂಬುಗಳನ್ನೂ ಲೆಕ್ಕಿಸದುದು ಅವನ ಪೂರ್ವಸಂಚಿತ ಕರ್ಮದ ದುಷ್ಪ್ರೇರಣೆಯಿಂದ; ಅದು ಅವನನ್ನು ನೇರವಾಗಿ ನಡೆದುಕೊಳ್ಳದಂತೆ ಮಾಡುತ್ತಿದೆ; ಈ ರಣಕೇಳಿಯು ದುರ್ಮತಿಯಾದ ರಾವಣನಿಗೆ ಮರಣಾಂತಿಕವಾಗದಿರುವಂತೆ ಅದು ಹೇಗೆ ತಾನೆ ತಡೆಯಬಲ್ಲುದು? ಏಕೆಂದರೆ ಸಕಲವಿದ್ಯರಾದ ಗಗನಗತಿ ಭೂಪತಿ ನಾಗರಾಜ ಅಶನಿವೇಗ ಮಹೇಂದ್ರ ಮೃಗೇಂದ್ರ ಭೀಮಕುಂಡಲ ಪ್ರಭಾಮಂಡಲ ಪ್ರಸನ್ನಕೀರ್ತಿ ತಟಿದ್ವಕ್ತ್ರ ವಜ್ರದಂಷ್ಟ್ರ ವಿದ್ಯುನ್ಮಾಲಿ ರವಿ ಕ್ರೂರ ಅಂಗದ ಶೂರ ನಳ ನೀಲ ಸುಷೇಣ ಮಂದರ ಜಾಂಬವ ಸಮೀರಣ ಸಿಂಹನಾದ ವರಾಹ ವಿರಾಧಿತ ಹನುಮಂತ ಅವರಲ್ಲದೆ ಇತರ ವಿದ್ಯಾಬಲಗರ್ವಿತರಾದ ವಿದ್ಯಾಧರರೆಲ್ಲರೂ ರಾಮಲಕ್ಷ್ಮಣರ ಆಜ್ಞೆಗಾಗಿ ಕಾಯುತ್ತಿದ್ದಾರೆ; ಇವರಲ್ಲಿ ಒಬ್ಬೊಬ್ಬರೂ ಮಾರ್ಬಲವನ್ನು ಕೊಲ್ಲಲೂ ಗೆಲ್ಲಲೂ ಸಮರ್ಥರು. ಆದ್ದರಿಂದ ತಮಗೆ ಬೇರೆ ಯೋಚನೆಗೆ ಅವಕಾಶವೇ ಇಲ್ಲ ಎಂದು ವಿವರಿಸಿದ. ಉಳಿದವರೆಲ್ಲ ಅವನ ಮಾತನ್ನು ಒಪ್ಪಿ ವಿಜಯಪ್ರಯಾಣಕ್ಕೆ

ನಿಶ್ಚಿತಮನರಾದರು. ಅಷ್ಟು ಹೊತ್ತಿಗೆ ಸೂರ್ಯನು ಪಡುಬೆಟ್ಟವನ್ನು ಸೇರಲು ಬಿರಿಬಿಸಿಲು ಉಡುಗಿ ತಂಪಾಯಿತು, ಆನಂತರ ಹೊಂಬಣ್ಣವಾಯಿತು. ತೀಕ್ಷ್ಣ ರಾಗೋದಯದಿಂದ ತಪಸಿಯ ತಪವು ತಣ್ಣಗಾಗುವಂತೆ ತೀಕ್ಷ್ಣ ಸಂಧ್ಯಾರಾಗದ ಉದಯದಿಂದ ತಪನನ ಆತಪವು ಹಿಂಗಿತು. ಹೆಂಡವನ್ನು ಕುಡಿದವನು ಯಾರು ತಾನೇ ನಾಚಿಕೆಗೇಡಿಯಾಗನು; ಹಾಗೆಯೇ ಆತ್ಮತೇಜವು ಅಸ್ತಮಿಸಿದಂತೆ ರಾಜೀವಸಖನು ಪಡುಗಡಲಿನಲ್ಲಿ ಮುಳುಗಿದ. ದಶವದನನ ಆಯುಸ್ಸು ಕೊನೆಗೊಳ್ಳುವಂತೆ ಭಾನುಮಂಡಲವು ಅಸ್ತಮಿಸಲು, ರಾವಣನ ಮುಖಕ್ಕೆ ಬಳಿದ ಅಪಕೀರ್ತಿ ಮಸಿಯಂತೆ ದಶದಿಕ್ಕುಗಳಿಗೂ ಕತ್ತಲು ಮೆತ್ತಿಕೊಂಡಿತು. ಸಿರಿಯು ತಾವರೆಗಳನ್ನು ಬಿಟ್ಟು ತಮ್ಮಲ್ಲಿ ಸೇರಲು ನೈದಿಲೆಗಳು ಮುಗುಳ್ನಕ್ಕವು; ಜಡರು ಇತರರಿಗೆ ಕೆಟ್ಟುದಾದಾಗ ಸಂತೋಷಪಡುವುದರಲ್ಲಿ ಅಚ್ಚರಿಯೇನಿದೆ! ಚಕ್ರವಾಕಮಿಥುನವು ವಿರಹತಾಪದಿಂದ ಚಿಂತಾಕುಲಿತವಾದವು; ಇಷ್ಟವಿಯೋಗವು ಎಂಥವರಿಗೂ ವ್ಯಾಕುಲತೆಯನ್ನುಂಟುಮಾಡುವುದಿಲ್ಲವೇ? ಧಾರಾಕಾರವಾಗಿ ಸುರಿಯುವ ಕತ್ತಲೆಯೆಂಬ ನೀರಲ್ಲಿ ಮುಳುಗಿದ ಆಗಸವೆಂಬ ಮದ್ದಾನೆಯ ಮೈಮೇಲಿನ ಮಚ್ಚೆಗಳಂತೆ ತಾರಗೆಗಳು ಕಾಣಿಸಿಕೊಂಡವು. ಪೂರ್ವದಿಗ್ವಧುವು ತನ್ನ ಕಣ್ಣುತೆರೆಯಲು ಹಿಂದೆ ಸರಿಯುವ ರೆಪ್ಪೆಯ ಕೂದಲಿನಂತೆ ತುಹಿನಾಂಶುಬಿಂಬವು ಮೂಡಲು ಅದರ ಸುತ್ತಲೂ ಬಿಳುಪು ಮೂಡಿತು. ಹೀಗೆ ಮೂಡಣದ ತಲೆಯಮಣಿಯಂತೆ ಉದಯಿಸಿದ ಅಮರನದಿಯ ಕಲಹಂಸದಂತಿದ್ದ ಚಂದ್ರನನ್ನು ನೋಡಿದ ರಾಮನಿಗೆ ಸೀತೆಯ ಚೆಲುವಾದ ಮೊಗವನ್ನು ಪ್ರತಿಬಿಂಬಿಸುವ ಮಣಿದರ್ಪಣದ ನೆನಪಾಯಿತು. ಆಗ ರಾಘವನು ಉಚಿತ ಸನ್ಮಾನಗಳನ್ನಿತ್ತು ಎಲ್ಲ ವಿದ್ಯಾಧರರನ್ನೂ ಬೀಳ್ಕೊಂಡು ತಾನೂ ಮಲಗಲು ತೆರಳಿದ.

* * * * *

## ೧೨. ಲಂಕಾ ದಿಗ್ವಿಜಯ ಯಾತ್ರೆ

ಬೆಳಗಿನ ಜಾವದಲ್ಲಿ ರಾಜಾಲಯದ ಸರೋವರದಲ್ಲಿನ ಹಂಸಸಾರಸಚಕ್ರವಾಕಗಳ ಏರಿದ ಕಲರವವು ಜಿನಪೂಜೆಗೆ ಹೊತ್ತಾಯಿತೆಂದೂ, ದಿಗ್ಜೈತ್ರಯಾತ್ರೆಗೆ ಮುನ್ನ ತೀರಿಸಬೇಕಾದ ಮಂಗಳ ಕಾರ್ಯಗಳನ್ನು ಮಾಡುವ ಕಾಲ ಸಮೀಪಿಸಿತೆಂದೂ ರಾಮನನ್ನು ಎಚ್ಚರಗೊಳಿಸುವಂತೆ ಕೇಳಿಸಿತು. ಸ್ವಲ್ಪ ಹೊತ್ತಿನಲ್ಲಿಯೇ ಕದನಮದೋದ್ಧತನಾದ ಲಕ್ಷ್ಮಣನು ಕೋಪದಿಂದ ಎಸೆಯಲು ಕ್ಷಣಾರ್ಧದಲ್ಲಿ ಹೋಗಿ ದೇವವಿರೋಧಿಯಾದ ದಶಕಂಠನ ವಕ್ಷವನ್ನು ಸೀಳಿದಾಗ ಚಿಲ್ಲನೆ ಚಿಮ್ಮಿದ ರಕ್ತದಿಂದ ತೊಯ್ದ ಸುದರ್ಶನಚಕ್ರದಂತೆ ಸಂಧ್ಯಾರುಣವಾದ ದಿನನಾಥಮಂಡಲವು ಕಾಣಿಸಿಕೊಂಡಿತು. ರಾಮನು ಸ್ನಾನ ಮಾಡಿ ಪಂಚ ಪರಮೇಷ್ಠಿಗಳಿಗೆ ಅರ್ಘ್ಯವಿತ್ತು, ದೇವಪೂಜಾಗೃಹವನ್ನು ಹೊಕ್ಕು ಯಥಾವಿಧಿಯಿಂದ ದರ್ಶನ ಸ್ತವನಗಳನ್ನು ಪೂರೈಸಿದ. ಸುರಗಿ ಸುರಹೊನ್ನೆ ವಾಸಂತಿ ಚಂಪಕ ಕರ್ಣಿಕಾರ ಹೊಂದಾವರೆ ಮಲ್ಲಿಗೆಗಳಿಂದ ಜಿನಪತಿಯನ್ನು ಅರ್ಚಿಸಿದ; ಘನಸಾರಾಗರುವಿನ ಧೂಮಲೇಖೆಯಿಂದಲೂ, ಮಲಯಜ ಕಾಶ್ಮೀರ ರಸದಿಂದಲೂ ಜಿನೇಂದ್ರನನ್ನು ಆರಾಧಿಸಿದ. ಬಾಳೆ ಮಾವು ಈಳೆ ಮುಂತಾದ ತನಿವಣ್ಣುಗಳನ್ನು ನಿರ್ಭರ ಭಕ್ತಿಭಾವದಿಂದ ಜಿನಪತಿಗೆ ಅರ್ಪಿಸಿದ. ಹೀಗೆ ಅರ್ಚಿಸಿ ದಿವ್ಯವಸನ ದಿವ್ಯಾಭರಣಭೂಷಿತನಾಗಿ ಯಾರ ದಿಟ್ಟಿಗೂ ಪ್ರೀತಿಯನ್ನುಂಟುಮಾಡುವಂತೆ ಕಂಗೊಳಿಸಿದ. ತನ್ನ ಕಿರೀಟದ ಪಂಚರತ್ನಗಳ ಕಾಂತಿಯಿಂದ ಸುರಚಾಪದ ಚೆಲುವನ್ನೂ ಎರಗಿಸುವ, ತನ್ನತ್ತಲೇ ನೋಡುವವರ ಕಣ್ಣ ಪಾಪೆಯು ತನಗೆರಗುವಂತೆ ಮಾಡುವ, ಆದರೆ ತಾನು ಜಿನೇಶ್ವರನಿಗೆ ಮಾತ್ರ ಎರಗುವ ರಾಘವನ ಮಹತ್ವವನ್ನು ಏನೆಂದು ವರ್ಣಿಸುವುದು? ಮರಕತಮಣಿಕುಂಡಲಗಳ ಕಾಂತಿಯಿಂದ ಆ ನರೇಂದ್ರಚೂಡಾರತ್ನನು ಪಾಚಿಯಿಂದ ಕೂಡಿದ ನೈದಿಲೆಯಂತೆ ಕಾಣಿಸುತ್ತಿದ್ದ. ಭೂಮಂಡಲವನ್ನು ಹೊತ್ತ ಶೇಷನ ಫಣಾಮಣಿಗಳಿಗೆ ತಾವು ಎಣೆಯೆಂಬಂತೆ ರಘುಸುತನ ಭುಜಯುಗ್ಮದಲ್ಲಿನ ಫಣಮಣಿಮುದ್ರೆಗಳು ನೋಟಕರ ಕಣ್ಣುಗಳನ್ನು ತಣಿಸುತ್ತಿದ್ದವು. ಎಳೆಯ ತಾವರೆದಂಟಿನಂತಹ ರಾಮನ ದೇಹದೀಪ್ತಿಯನ್ನು ಆಶ್ರಯಿಸಿದ ಅವನೆದೆಯ ಹಾರದ ಮುತ್ತುಗಳು ದಟ್ಟ ಬೆಳುದಿಂಗಳಿನ ರಾತ್ರಿಯಲ್ಲಿ ವಿರಾಜಮಾನವಾದ ನಕ್ಷತ್ರಗಳಂತೆ ಕಂಗೊಳಿಸಿದವು. ಇಕ್ಕೆಲಗಳಲ್ಲೂ ಖೇಚರಪ್ರಮದೆಯರು ಚಾಮರವಿಕ್ಕುತ್ತಿರಲು, ಬೆಳ್ಗೊಡೆಯು ಸುಧಾಕರನನ್ನು ಅಣಕಿಸುವಂತಿರಲು, ತನ್ನ ಚಂದ್ರಿಕೆಯಂತಹ ದೇಹಕಾಂತಿ ಹಾಗೂ ಪಾದಗಳ ಕೆಂಬಾರವು ಎಳವೆಣ್ಣುಗಳಲ್ಲಿ ಅನುರಾಗವನ್ನುಕ್ಕಿಸಲು ರಾಘವನು ಓಲಗಸಾಲಗೆಗೆ ಲೀಲೆಯಿಂದ ನಡೆತಂದ.

ಭವನದ ನಡುವೆ ಸ್ಫಟಿಕಘಟಿತ ವೇದಿಕಾ ಶಿಖಂಡಮಂಡನದಂತಿದ್ದ ಸಿಂಹಪೀಠದಲ್ಲಿ ಅಮೋಘಶರನಾದ ರಾಮನು ಕುಳಿತರೆ, ಸಾಗರಾವರ್ತ ಬಿಲ್ಲಿನಿಂದ ಠೇಂಕಾರ ಮಾಡಿ ಮಾಡಿ ಕಲೆ ಬಿದ್ದ ಕೈಗಳುಳ್ಳ ಲಕ್ಷ್ಮಣನು ಪಕ್ಕದಲ್ಲಿನ ಮಣಿಮಯಾಸನದಲ್ಲಿ ವಿರಾಜಮಾನನಾದ. ಅತ್ರಿಪುತ್ರನನ್ನು ಆವರಿಸಿದ ನಕ್ಷತ್ರಮಂಡಲದಂತೆ ಅವರ ಸುತ್ತಲೂ ಮಣಿಮಂಡಲ ಮಕುಟರಾದ ಸೇನಾಪ್ರಧಾನರೂ, ಸುಗ್ರೀವ ಅಂಗದ ನಳ ನೀಲ ಜಾಂಬವ ಹನುಮಂತ ಮುಂತಾದ ನಿಖಿಲ ಖೇಚರರೂ ಆಸೀನರಾಗಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಪುರೋಹಿತರ ಸ್ವಸ್ತಿಶಬ್ದ ಘೋಷವು ದಿಗ್ವಿಜಯ ಪ್ರಯಾಣಕ್ಕೆ ನಿಗದಿ ಪಡಿಸಿದ್ದ ಮುಹೂರ್ತವು ಸನ್ನಿಹಿತವಾಯಿತೆಂದು ಸೂಚಿಸಲು, ಸೇನಾಪ್ರಧಾನನಾದ ನಳನು ವಿಜಯ ದುಂದುಭಿಯನ್ನು ಹೊಯ್ಸಿದ. ಆ ಶಬ್ದವು, 'ವಾಸುದೇವನು ಪ್ರತಿವಾಸುದೇವನನ್ನು ಕೊಲ್ಲುವುದರಲ್ಲಿ ಸಂದೇಹವಿಲ್ಲ; ಬದುಕಲು ಇಷ್ಟವಿರುವುದಾದರೆ ಸೀತೆಯನ್ನು ಒಪ್ಪಿಸು' ಎಂದು ಲಂಕಾಧೀಶ್ವರನಿಗೆ ಕೊಟ್ಟ ಎಚ್ಚರಿಕೆಯಂತೆ ದಿಗ್ಭಿತ್ತಿಗಳನ್ನೆಲ್ಲ ತುಂಬಿತು. ಇದನ್ನು ಕೇಳಿ ಕುಲಶೈಲಗಳ ಮತ್ತು ಪದ್ಮಿನೀಕುಲದ ದೇವೀಸಂಕುಲವು ಬೆಚ್ಚಿತು; ದಿಕ್ಕರಿಗಳ ಕಿವಿಗಳನ್ನು ಬೆದರಿಸಿತು; ಸೂರ್ಯನ ಏಳು ಕುದುರೆಗಳ ಸಮೂಹವು ಶಂಕಾಕುಳಿತವಾಯಿತು. ಬಲದೇವನ ನಿರ್ಮಲವಾದ ಕೀರ್ತಿಯೆಂಬ ಬಳ್ಳಿಯ ಚಿಗುರಿನಂತೆ ಹನ್ನೆರಡು ಮಂಗಳ ಶಂಖಗಳ ಧ್ವನಿಯು ಕುಲಗಿರಿಗಳಲ್ಲಿ ಮಾರ್ದನಿಯನ್ನು ಮೂಡಿಸಿತು. ಭೇರಿಗಳಿಂದ ಹೊಮ್ಮಿದ ಶಬ್ದವು ರಘುವೀರನ ಜಯಶ್ರೀಯ ಗುಡುಗಿನಂತೆ ಕೇಳಿಸಿತು. ಆ ಶುಭಮುಹೂರ್ತದಲ್ಲಿ, ದೇವಲೋಕದ ಬಳ್ಳಿಗಳು ರಜತಗಿರಿಯ ಶಿಖರದ ಮೇಲೆ ಮೊಗ್ಗುಗಳನ್ನು ಸುರಿಸುತ್ತಿವೆಯೋ ಎಂಬಂತೆ ಖೇಚರಿಯರು ಅರಸನಿಗೆ ಮುತ್ತಿನ ಸೇಸೆಯನ್ನಿಕ್ಕಿದರು. ಒಬ್ಬ ಚಂದ್ರವದನೆಯು ರಾಜನಿಗೆ ಹೂಮಾಲೆಯನ್ನು ಸೂಡಿದಳು. ಜಯಜಯಧ್ವನಿಯೊಡನೆ ಕುಲವೃದ್ಧರ ಹಾಗೂ ಕುಲಾಂಗನೆಯರ ಆಶೀರ್ವಾದದ ದನಿ ಸೇರಿರಲು ರಘುರಾಮನು ಸಿಂಹಾಸನದಿಂದ ಮೇಲೆದ್ದ; ಅವನೊಡನೆ ವಿಯಚ್ಚರ ರಾಜರೂ ಎದ್ದರು. ಅವರೆಲ್ಲರ ಕಿರೀಟಗಳ ರತ್ನರುಚಿಯು ಆಗಸದಲ್ಲಿ ಚಿತ್ತಾರವನ್ನು ರಚಿಸಿದವು. ಆಗ ರಾಮನು ಲಕ್ಷ್ಮಣನೊಡನೆ ಹೊರಟ.

ಚಂದ್ರಮಂಡಲವನ್ನು ಕಂಡು ಬಂದ ಬೆಳ್ದಾವರೆಗಳ ಗುಂಪಿನಂತೆ ಆಗಸದಲ್ಲಿ ಬೆಳ್ಗೊಡೆಗಳ ಸಮೂಹವು ತುಂಬಿಕೊಂಡಿತು. ಹೂಗುಡಿಯನ್ನೇರಿದ ಜಂಗಮಲತೆಗಳಂತಿದ್ದ ಹದಿನಾರು ಮಂದಿ ಖಚರಕನ್ಯೆಯರು ರಾಮನ ಇಕ್ಕೆಲಗಳಲ್ಲಿ ನಿಂತು ಮದನಬಾಣಗಳನ್ನೆಸೆಯುವಂತೆ ಚಾಮರಗಳಿಂದ ಬೀಸತೊಡಗಿದರು. ಎಲ್ಲೆಲ್ಲೂ ಮಂಗಳಧ್ವನಿಗಳು, ಮಂಗಳಗೀತಗಳು ಹರಡಿ ಮನಸ್ಸಿಗೆ ಸಂತಸವನ್ನು ತುಂಬುತ್ತಿದ್ದವು. ಮಂಗಳಕಳಶಗಳನ್ನು ಹೊತ್ತ ಶಶಿಕಾಂತೆಯರು, ತಮ್ಮ ನೂಪುರಗಳು ಸದ್ದುಗೈಯ್ಯುತ್ತಿರಲು, ಮನುವಂಶನ ಜಯಪ್ರಯಾಣದಲ್ಲಿ ಸೇರಿ ಮುನ್ನಡೆದರು. ಸೂರ್ಯಹಾಸವನ್ನು ಕೈಯ್ಯಲ್ಲಿ ಹಿಡಿದ ಲಕ್ಷ್ಮಣನು ರಾಮನ ಬಲಬದಿಯಲ್ಲಿ ಬರುತ್ತಿರಲು, ಅವನ ಮುಖಕಾಂತಿಯು ಬೆಳುದಿಂಗಳನ್ನು ಹೋಲುತ್ತಿತ್ತು. ತನ್ನ ಆಭರಣಗಳ ಕಾಂತಿಯು ದೇಹಕಾಂತಿಯೊಡನೆ ಸೇರಿರಲು, ಬಲಭದ್ರನು ನಡೆದಾಡುವ ಬೆಳ್ಳಿಬೆಟ್ಟದಂತೆ ಕಂಗೊಳಿಸಿದ. ರಾಜಭವನದಿಂದ ಹೊರಟು ಬರಲು ದಾರಿಯಲ್ಲಿ ಪುರಜನಗಳ ಹರಕೆಗಳ ಧ್ವನಿಯು ಹೊಮ್ಮಿತು. ಅದು

ತನ್ನ ಕಿವಿಗಳನ್ನು ತುಂಬುತ್ತಿರಲು ರಾಮನು ರಥವನ್ನೇರಿದ, ವಿಜಯವಧುವು ಆತನ ಭುಜಗಳನ್ನೇರಿದಳು. ಆ ಸಮಯದಲ್ಲಿ, ನಳ ನೀಲ ಸುಷೇಣ ಪ್ರಸನ್ನಕೀರ್ತಿ ಮುಂತಾದ ಸೇನಾಮುಖ್ಯರನ್ನು ಸೇನೆಯ ಮುಂಭಾಗದಲ್ಲಿಯೂ, ಸುಗ್ರೀವ ಅಂಗದ ಜಾಂಬವ ಗಗನಪತಿ ಭೂತಗತಿ ಮುಂತಾದವರನ್ನು ಶ್ರೀರಾಮನ ಹಿಂಭಾಗದಲ್ಲಿಯೂ, ತಟಿದ್ವಕ್ತ್ರ ವಜ್ರದಂಷ್ಟ್ರ ವಿರಾಧಿತ ಮಹೇಂದ್ರ ಮೊದಲಾದವರನ್ನು ಬಲಭಾಗದಲ್ಲಿಯೂ, ಮಂದರ ಸಮೀರ ಸಿಂಹನಾದ ವರಾಹ ಮುಂತಾದವರನ್ನು ಎಡಗಡೆಯಲ್ಲಿಯೂ ನಡೆಯಲು ಲಕ್ಷ್ಮಣನು ನಿಯಮಿಸಿ, ಸಕಲ ವಿದ್ಯಾಧರ ನಾಯಕರೊಡನೆ ತಾನೂ ಹನುಮನೂ ದಾಶರಥಿಯ ಮೈಗಾಪಾಗಿ ಇಕ್ಕೆಲಗಳಲ್ಲಿ ರಥಾರೂಢರಾಗಿ ನಡೆದರು. ಮದ್ದಾನೆಗಳ ದಾನಜಲದಿಂದಾಗಿ ಗಾಳಿಯು ನಡೆಗೆಡಲು, ಎತ್ತರದಲ್ಲಿ ಹಾರುವ ಧ್ವಜಗಳಿಂದಾಗಿ ಆಕಾಶವೆಂಬ ನದಿಯ ಅಲೆಗಳು ನೂರ್ಮಡಿಯಾಗುತ್ತಿರಲು, ಅಸ್ತ್ರಶಸ್ತ್ರಸಂದೋಹದಿಂದಾಗಿ ಹಗಲು ಕೊಬ್ಬಿರಲು ರಘುತನೂಜನ ಚತುರಂಗಸೇನೆಯು ಮುಂದೆ ಸಾಗುತ್ತಿತ್ತು. ಆ ಸೈನ್ಯದಲ್ಲಿದ್ದ ಆನೆಕುದುರೆರಥಪದಾತಿಗಳ ಸಂಖ್ಯೆ ಎಷ್ಟು ಎಂಬುದು ತಿಳಿಯದಾದರೂ, ಕೇತನಗಳ ಹಾರಾಟಕ್ಕೆ ಆಕಾಶವಾಗಲೀ ಭಟಸಂದೋಹದ ನಡೆಗೆ ಭೂಮಿಯಾಗಲೀ ಸಾಕಾಗುತ್ತಿರಲಿಲ್ಲ ಎಂಬುದು ಅರ್ಥವಾಗುತ್ತಿತ್ತು! ತನ್ನ ಪರಾಕ್ರಮಕ್ಕೆದುರಾದ ಸವಾಲನ್ನು ರಾಮನು ಸೈರಿಸುತ್ತಾನೆಯೇ ಎಂಬಂತೆ, ಸೂರ್ಯನ ಕಾಂತಿಯನ್ನು ಕಡೆಗಣಿಸಿ ಸೀತಾದೇವಿಯನ್ನು ಅಪಹರಿಸಿದ ಜಗತ್ಕಂಟಕಶಕ್ತಿಯಿದ್ದ ದಿಕ್ಕನ್ನು ಹೂತುಹಾಕುವಂತೆ ಆ ಸೇನೆಯ ನಡಿಗೆಯಿಂದೆದ್ದ ದೂಳು ಹತ್ತೂ ದಿಕ್ಕುಗಳನ್ನು ಮುಚ್ಚಿಬಿಟ್ಟಿತ್ತು. ಭೂಮಿಯನ್ನು ತಲೆಯಲ್ಲಿ ಹೊತ್ತು ತಿಣುಕುತ್ತಿದ್ದ ಫಣಿರಾಜನ ನೆತ್ತಿಯು ಸೇನೆಯ ನಡಿಗೆಯ ರಭಸದಿಂದ ನೋಯಲಾರಂಭಿಸಿತು; ಫಣಾಚಕ್ರಾಂಕಿತವಾದ ಸ್ವಸ್ತಿಕವು ವಿಷಾಗ್ನಿಯ ಹೊಗೆಯಲ್ಲಿ ಗಾಳಿಯ ನಿಶ್ವಾಸವು ಒಡಗೂಡಿದಂತೆ ತೋರುತ್ತಿತ್ತು. ಹೀಗೆ ಅಸಂಖ್ಯಾತ ಸೇನಾಸಮುದ್ರವೇ ದಕ್ಷಿಣಾಭಿಮುಖವಾಗಿ ಪಯಣ ಬೆಳೆಸಿತು.

ಭೂಪಾಲರಿಂದ ಆವೃತವಾದ ಸೈನ್ಯವು ಪರ್ವತಸಾನುವಿನಲ್ಲಿದ್ದ ವೇಲಾಂಧಪುರಕ್ಕೆ ಬಂದು ತೀರವಿಲ್ಲದ ಸಮುದ್ರದಂತೆ ಬೀಡುಬಿಟ್ಟಿತು. ಆಗ ಆ ಊರಿನ ಅಧಿಪತಿಯಾದ ಸಮುದ್ರ ಎಂಬ ವಿದ್ಯಾಧರನು ಯುದ್ಧೋತ್ಸಾಹದಿಂದ ನಳನ ಸೇನೆಗೆದುರಾದನು. ಆದರೇನು, ಕಣ್ಣೆವೆ ಬಿಚ್ಚಿಮುಚ್ಚುವಷ್ಟರಲ್ಲಿ ಅವನ ಸೇನೆಯನ್ನು ನಳನ ಬಲವು ಅಡಗಿಸಿತು, ಅರಾತಿಬಲಾರ್ಣವ ಬಡಬಾಗ್ನಿಯಾದ ನಳನು ಸಮುದ್ರನನ್ನು ಹಿಡಿದು ಕಟ್ಟಿ ಅಡಿಗಳಿಗೆ ಬೀಳಿಸಲು ರಾಮನು ಅವನಿಗೆ ಅಭಯವನ್ನಿತ್ತ. ಮಾರನೆಯ ದಿನ ಸಮುದ್ರನು ಸತ್ಯಶ್ರೀ ಕಮಲೆ ಗುಣಮಾಲೆ ರತ್ನಮಾಲೆ ಎಂಬ ತನ್ನ ನಾಲ್ವರು ತನ್ನ ಹೆಣ್ಣುಮಕ್ಕಳನ್ನು ಲಕ್ಷ್ಮಣನಿಗಿತ್ತು ಮದುವೆ ಮಾಡಿ ತಾನು ಅವನ ಭೃತ್ಯಪದವನ್ನು ಅಪ್ಪುಕೈದ. ಮರುದಿವಸ ಸೇನೆಯು ತನ್ನ ಪಯಣವನ್ನು ಮುಂದುವರೆಸಿದಾಗ, ಸುವೇಳಾಚಲದೊಡೆಯನಾದ ಸುವೇಲ ಎಂಬ ಖಚರನು ಬಂದು ಶರಣಾಗಿ ತನ್ನೆಲ್ಲ ಒಡವೆಯನ್ನು ರಘುಜನಿಗರ್ಪಿಸಿದ. ಮಾರನೆಯ ದಿನ ಸೇನೆಯು ಪಯಣ ಬೆಳಸಿ ಲಂಕಾದ್ವೀಪದ ಸಮೀಪದಲ್ಲಿದ್ದ ಹಂಸದ್ವೀಪವನ್ನು ತಲುಪಿತು. ಅದರ ಒಡೆಯನಾದ ನಭಶ್ಚರನು ತನ್ನ ಅಸಂಖ್ಯಾತಬಲಸಮೇತನಾಗಿ ಯುದ್ಧಕ್ಕೆ ಬಂದ. ಆದರೆ ನಳನು ಅವನನ್ನು ಅಡಗಿಸಿದ. ಸೇನೆ ಅಂದು ಅಲ್ಲೇ ಬೀಡುಬಿಟ್ಟಿತು. ಲಕ್ಷ್ಮಣನು

ಪ್ರಭಾಮಂಡಲನಿಗೆ ಬಳಿಯಟ್ಟಿ, ಉಳಿದ ವಿದ್ಯಾಧರರಾಜರನ್ನು ಆಜ್ಞಾವಿಧೇಯರನ್ನಾಗಿ ಮಾಡಿಕೊಂಡ.

ಇತ್ತ, ರಾಹುಮಂಡಲವನ್ನು ತರುಣ ದಿನೇಶಮಂಡಲವು ಸುತ್ತುವರಿದಂತೆ ಇಂದ್ರನೀಲ ಭಾಸುರತರದೀಪ್ತಿಯಿಂದ ದಶಾನನನು ಕಾಂತಿಯುಕ್ತವಾದ ಸಿಂಹಾಸನದಲ್ಲಿ ಕುಳಿತಿದ್ದ; ಅವನೆದೆಯ ಮೇಲೆ ರಾರಾಜಿಸುತ್ತಿದ್ದ ಮುತ್ತಿನ ಮಾಲೆಯು ಕಾರಿರುಳಿನಲ್ಲಿ ತಲೆದೋರಿದ ತಾರಾವಳಿಯಂತಿತ್ತು; ಅವನ ದೇಹದ ಮೇಲಣ ಭೂಷಣಗಳ ಕಿರಣಾವಳಿಯು ಜಯವಧುವನ್ನು ಕಟ್ಟಿ ನಿಲ್ಲಿಸುವ ಪಾಶದಂತೆ ಗೋಚರಿಸಿತು; ಚಾಮರವಿಕ್ಕುವ ಹೆಂಗೆಳೆಯರ ಕಂಕಣದುಲಿಯು ಆಭರಣಗಳೆಂಬ ಪಾರಿಜಾತಪುಷ್ಪಗಳ ಮಕರಂದವನ್ನು ಹೀರಿ ಹಾಡುವ ದುಂಬಿಗಳ ಝೇಂಕಾರದಂತೆ ಕೇಳಿಸಿತು. ರಾವಣನ ಮುಂದೆ ಅವನ ಮಕ್ಕಳೂ ತಮ್ಮಂದಿರೂ ಮಂತ್ರಿಗಳೂ ಉಚಿತಾಸನಗಳಲ್ಲಿ ವಿಲಾಸದಿಂದ ಮಂಡಿಸಿದ್ದರು. ಮನಸ್ಸಿನಲ್ಲಿ ಜನಕಸುತೆಯೇ ತುಂಬಿಕೊಂಡಿದ್ದರೂ ಬಾಹ್ಯದಲ್ಲಿ ಪರಿಜನರು ಸುತ್ತುವರಿದಿರಲು ತನ್ನ ವಿರಹವ್ಯಥೆಯನ್ನು ಮರೆತು ದನುಜೇಂದ್ರನು ಓಲಗಗೊಟ್ಟಿದ್ದ. ಆ ಸಮಯದಲ್ಲಿ ಒಬ್ಬ ಚರನು ಬಂದು ಜಯಧ್ವನಿಸಮೇತನಾಗಿ ಬಾಗಿ ಹೀಗೆ ಬಿನ್ನವಿಸಿದ: "ಇದುವರೆಗೂ ನಿಮಗೆ ಮರೆತಾದರೂ ಎದುರು ನಿಲ್ಲುವ ದೇವ ದಾನವ ಖಚರರನ್ನು ನಾವು ಕಂಡರಿಯೆವು. ಆದರೆ, ದೇವಾ, ಇದೇನಚ್ಚರಿ! ಮನುಜರಾದ ರಾಮಲಕ್ಷ್ಮಣರು ತಮ್ಮ ಮೇಲೆ ಯುದ್ಧಗೈಯುವ ಉತ್ಸಾಹದಿಂದ ಬಂದಿದ್ದಾರೆ. ನಮ್ಮನ್ನೊಲ್ಲದ ಆದರೆ ಇದುವರೆಗೆ ನಮ್ಮನ್ನೆದುರಿಸಲಾಗದಿದ್ದ ಅನೇಕ ದ್ವೀಪಗಳ ಖೇಚರರು ನಿಮ್ಮೊಡನೆ ಕಾದಲು ಅವರ ಜೊತೆ ಕೈಗೂಡಿಸಿ ಬಂದಿದ್ದಾರೆ."

ಈ ಮಾತುಗಳನ್ನು ಕೇಳಿದ ರಾವಣನ ಮುಖದಲ್ಲಿ ಬೀರಸಿರಿಯ ಕಾಂತಿಯಂತೆ ಮುಗುಳ್ನಗೆ ಹರಡಿತು. "ಸೀತೆಯನ್ನು ತಂದಿದ್ದಕ್ಕಾಗಿ ನನ್ನೊಡನೆ ಕಾದಲು ಏಕಾಕಿಗಳಾಗಿ ಬಂದವರ ಜೊತೆ ನನಗೆ ಕಪ್ಪವಿತ್ತು ಬಾಳುತ್ತಿದ್ದ ಖಚರರು ಸೇರಿರುವುದು ಬೇರೆಯವರ ಕೈಗಳಿಂದ ಕಾಳನಾಗರವನ್ನು ಅಳೆಯಲು ಬಂದಂತಾಯಿತು" ಎಂದು ಅವನು ಗುಡುಗಿದ. ಸಿಂಹವು ಗರ್ಜಿಸಲು ಅದರ ಮಾರ್ದನಿ ಪಕ್ಕದ ಬೆಟ್ಟಗಳಿಂದ ಹೊಮ್ಮುವ ಹಾಗೆ ಇಂದಗಿ ಮೇಘವಾಹನ ಮುಂತಾದವರು ರಾವಣನ ಮಾತಿಗೆ ದನಿಗೂಡಿಸಿದರು. ಆದರೆ ನಯವಿನಯವಿಭೂಷಣನಾದ ವಿಭೀಷಣನು ಎದ್ದು ನಿಂತು, "ದಯವಿಟ್ಟು ಅವಧಾರಿಸಬೇಕು, ದುರಿಚ್ಛಾಪಾಲನೆಯನ್ನು ಅವಿವೇಕಿಯಾದವನು ಮಾತ್ರವೇ ಅನುಮೋದಿಸುತ್ತಾನೆ; ವಿವೇಕಿಯು ಉಭಯಲೋಕಹಿತವನ್ನು ನುಡಿಯುತ್ತಾನೆ" ಎಂದು ಪೀಠಿಕೆ ಹಾಕಿ, ತನ್ನ ಮಾತನ್ನು ಹೀಗೆ ಮುಂದುವರೆಸಿದ: "ಮನಸ್ಸು ದಿಕ್ಕಾಪಾಲಾಗಿ ಓಡುತ್ತದೆ; ವಿವೇಕಿಯಾದವನು ಅದನ್ನು ಹಿಡಿತದಲ್ಲಿರಿಸಿಕೊಳ್ಳಬೇಕು. ರಾಜನಾದವನು ಇಂದ್ರಿಯಗಳನ್ನು ಗೆದ್ದು ತನ್ನನ್ನು ಮೀರದ ಹಾಗೆ ಇಂದ್ರಿಯಸುಖಗಳನ್ನು ಅನುಭವಿಸಬೇಕು. ನೀರು ಬೀಳುತ್ತಿದ್ದರೆ ಕನ್ನಡಿಗೆ ಕಿಲುಬು ಹತ್ತುತ್ತದೆ; ಪರಸತಿಯ ಮೋಹದಿಂದ ಹಾಗೆ ಕಲುಷಿತಗೊಳ್ಳದಂತಿರುವುದೇ ನಿಜವಾದ ಪೌರುಷ. ದುಶ್ಚರಿತವನ್ನು ಬಿಡದ ರಾಜ, ಕಳಂಕವನ್ನು ತೊಡೆಯದ ಚಂದ್ರ, ಬಡಬಾಗ್ನಿಯನ್ನು ನಂದಿಸದ ಸಮುದ್ರ – ಇವೆಲ್ಲವೂ ಜಡವಾಗುತ್ತವೆ. ಸ್ವಸತಿಯ ಸಂತೋಷ ಕುಲವರ್ಧನಕ್ಕೆ ಕಾರಣ.

ಪರವಧೂ ಸಂತೋಷ ಕುಲನಾಶಕ್ಕೆ ಕಾರಣ; ವಧೆ, ಬಂಧನ, ಪರಾಭವ, ಅಂಗಚ್ಛೇದ ಇವುಗಳಿಗೆ ಕಾರಣವಾಗುತ್ತದೆ, ಬೆಳುದಿಂಗಳಿನಂತಹ ಕೀರ್ತಿಯು ಕಲುಷಿತಗೊಳ್ಳುತ್ತದೆ, ಅಪವಾದದ ದನಿ ದಿಕ್ಕುಗಳೆಲ್ಲಕ್ಕೂ ಹಬ್ಬುತ್ತದೆ, ಮರುಹುಟ್ಟಿನಲ್ಲಿಯೂ ದುರ್ಗತಿಕ್ಲೇಶಗಳು ಹಿಂಬಾಲಿಸುತ್ತವೆ ಎಂಬ ಕಾರಣದಿಂದ ಕೆಲವು ರಾಜರು ಪರಸತಿಯ ವಿಷಯವನ್ನೇ ಕೇಳಲಿಷ್ಟಪಡುವುದಿಲ್ಲ. ಶತ್ರುಗಳಿಗೆ ಯಮಪಾಶ, ಕೈಚಾಚಿದವರಿಗೆ ಕಲ್ಪಲತೆ ಎಂಬಂತಹ ಪರಾಕ್ರಮ ಹಾಗೂ ಚಾಗದ ಹಿರಿಮೆಗಳನ್ನು ಮೆರೆಯದೆ, ಅನ್ಯಸ್ತ್ರೀ ಕಚಾಕರ್ಷಣ ಶ್ರಮಸಂಭೋಗ ವಿಲಾಸಕ್ಕೆ ಹಾತೊರೆಯುವ ಬಾಹುಗಳ ಸಂಗದಿಂದ ವೀರಾಂಗನೆಯು ಬಿಡಿಸಿಕೊಳ್ಳುತ್ತಾಳೆ. ಹೂವಿನೊಡನೆ ಯುದ್ಧವೇಕೆ? ಯುದ್ಧವೆಂದರೆ ಜನಗಳ ಸಾವು. ಇದನ್ನು ಅರಿತು ಅಸದಾಗ್ರಹವನ್ನು ಬಿಟ್ಟು ಜಾನಕಿಯನ್ನು ರಾಮನೆಡೆಗೆ ಕಳಿಸಿಬಿಡು. ಪರಿಜನರು, ಆಪ್ತರು, ಬಾಂಧವರು ಅಗಲದಂತೆ ಇರುವುದು ರಾಮಸತಿಯನ್ನು ಬಿಟ್ಟಲ್ಲದೆ ಸಾಧ್ಯವಿಲ್ಲ."

ಈ ಮಾತುಗಳನ್ನು ಕೇಳಿದ ಇಂದಗಿಯು ವಿಷತರುವಿನಿಂದ ಒಸರಿದ ರಸದಂತಹ ದಂತಕಾಂತಿಯನ್ನು ಹರಡಿ, ವಿಭೀಷಣನ ಒಳ್ಳೆಯ ಮಾತುಗಳನ್ನು ದೂಷಿಸಿ ಮಾತನಾಡಿದ: "ಪುಣ್ಯಕಾರಣದಿಂದ ವನಿತಾರತ್ನವು ಶ್ರಮವಿಲ್ಲದೆ ಕೈಸಾರಿರುವಾಗ, ಅದನ್ನು ಮನುಜನಿಗೆ ವಾಪಸು ಮಾಡದಿದ್ದರೆ ಅಪಾಯವೊದಗುವುದು ಎಂಬುದು ಮನಸ್ಸಿನಲ್ಲಿ ಮಾತ್ಸರ್ಯ ತುಂಬಿಕೊಂಡವನು ಹೇಳುವ ಮಾತು. ವಿದ್ಯಾಧರಸಿದ್ಧಕಿನ್ನರಚಮೂವಿದ್ರಾವಣನಾದ ರಾವಣನು ಮಾನವನಿಗೆ ಯುದ್ಧಸಾಧ್ಯನೇ? ಬುದ್ಧಿಯನ್ನು ಶಂಕೆಯೆಂಬ ಕತ್ತಲು ಆವರಿಸಲು ಕಾಣುವುದು ಶಕ್ಯವೇ? ನೀರು ತುಂಬಿದ ಕಂದಕ, ಸಮುದ್ರದ ಕೋಟೆ, ವಿದ್ಯಾತ್ಮಕವಾದ ಸೈನ್ಯದ ಕಾವಲು ಇವುಗಳಿಂದ ಕೂಡಿದ, ಕೈಲಾಸವನ್ನೇ ಅಲುಗಿಸಿದ ಪರಾಕ್ರಮಿ ದಶಮುಖ. ಹೀಗಿರುವಾಗ ಮನುಜಬಲದಿಂದ ಲಂಕಾನಗರಕ್ಕೆ ಆತಂಕವೆಲ್ಲಿ? ನಮ್ಮ ಸೇನೆಯನ್ನು ಪರಸೇನೆ, ಭೀಕರವಾದ ಚಂದ್ರಹಾಸವನ್ನು ಮಾರ್ಪಡೆ ಎದುರಿಸಬಲ್ಲವೇ? ಸುಮ್ಮನೆ ಭಯಪಡುತ್ತಿರುವೆ; ಸಂಗರದಲ್ಲಿ ರಣರಸೋತ್ಕಂಠನಾದ ಪೌಲಸ್ತ್ಯನನ್ನು ಹಾಲುಗಲ್ಲದ ಲಕ್ಷ್ಮಣ ಗೆಲ್ಲಬಲ್ಲನೇ?"

ಇದರಿಂದ ವಿಭೀಷಣನ ಮೊಗದಲ್ಲಿ ಮುಳಿಸು ಕಾಣಿಸಿಕೊಂಡಿತು: "ತಂದೆಯ ರಾಜ್ಯಕ್ಕೆ ಆಸೆಪಟ್ಟು ನೀನು ಅಪಕೀರ್ತಿಗೆ ಅಂಜದೆ ಬಲ್ಲಿದರಲ್ಲಿ ಕಲಹವನ್ನು ಆಹ್ವಾನಿಸುತ್ತಿರುವೆ. ಗಾವಿಲ, ರಾಮಶರವು ರಣಭೂಮಿಯಲ್ಲಿ ಯಾರನ್ನಾದರೂ ಉಳಿಯಗೊಡುವುದೇ? ಸೀತೆಯನ್ನು ತಂದು ನಮ್ಮರಸನು ಲಂಕೆಗೂ ನಮಗೂ ವಿನಾಶವನ್ನು ತಂದಿದ್ದಾನೆ; ಅಪಯಶಸ್ಸಿನ ಭೇರೀರವ ಎಲ್ಲ ದಿಕ್ಕುಗಳಲ್ಲೂ ಹರಡುವಂತೆ ಮಾಡಿದ್ದಾನೆ. ಪರಾಕ್ರಮದಿಂದಾಗಿ ಬೆಳ್ಳಿಯ ಬೆಟ್ಟವೇ ಏರುಪೇರಾಯಿತೆನಿಸಿದ, ಸಿದ್ಧಶಿಲೆಗಳನ್ನೇ ಗೋಲಿಯಂತೆ ಆಡಿದ ಬಾಹಾಬಲವುಳ್ಳ ಕೇಶವನಿಗೆ ಇದಿರು ನಿಲ್ಲುವವರು ಯಾರಿದ್ದಾರೆ? ಅವನಿಗೆ ಸೂರ್ಯಹಾಸಖಡ್ಗವು ಯಾವ ಯತ್ನವೂ ಇಲ್ಲದೆ ಕೈವಶವಾಯಿತು, ಭಾರಿ ಖೇಚರಸೈನ್ಯಸಮೇತರಾದ ಖರದೂಷಣರನ್ನು ಸುಲಭವಾಗಿ ಸಂಹರಿಸಿದ ಎಂದಮೇಲೆ, ಎಲ್ಲ ಪ್ರಸಿದ್ಧ ದ್ವೀಪಾಧಿಪತಿಗಳೂ ಬೆಂಬಲಿಸುತ್ತಿರುವ ಸೌಮಿತ್ರಿಗೆ ಮಿಗಿಲಾದವರು ಯಾರು? ಆದ್ದರಿಂದ, ರಿಪುಬಲವು ವಾರಾಶಿಯನ್ನು ದಾಟಿ ಬರುವ ಮೊದಲೇ, ಬಂದು

ಲಂಕೆಯ ದ್ವಾರವನ್ನು ಮುರಿಯುವ ಮುನ್ನವೇ, ಲಕ್ಷ್ಮಣನ ಬಿಲ್ಲ ಟಂಕಾರ ಕಿವಿಗೆ ಬೀಳದ ಮುಂಚೆಯೇ ಸಂಧಿಯನ್ನು ಮಾಡಿಕೊಂಡು, ಸೀತೆಯನ್ನು ಒಪ್ಪಿಸಿಬಿಡು" ಎಂದು ಆತನು ತನ್ನಣ್ಣನಿಗೆ ಕಿವಿಮಾತನ್ನು ಹೇಳಿದ.

ಇದನ್ನು ಕೇಳಿದ ದಶಾನನನು ಗುಡುಗಿನ ದನಿ ಕೇಳಿದ ಪಂಚಾನನದಂತೆ ಕೆರಳಿ ತನ್ನ ಒರೆಯಿಂದ ಚಂದ್ರಹಾಸವನ್ನು ಹೊರಗೆಳೆದಾಗ, ಪ್ರಳಯಕಾಲದ ಮೋಡದಿಂದ ಸಿಡಿಲು ಹೊರಬರುವಂತೆ ಕೋರೈಸಿತು. ಆಗ ವಿಭೀಷಣನು ತನ್ನ ವಜ್ರಮಯ ಗದಾದಂಡವನ್ನು ಕೈಲಿ ಹಿಡಿದು ಅದಿರದೆ ಅಣ್ಣನ ಇದಿರು ನಿಂತ. ಕುಲವೃದ್ಧರು ಮಧ್ಯೆ ಪ್ರವೇಶಿಸಿ ಅವರಿಬ್ಬರನ್ನೂ ಸಮಾಧಾನಪಡಿಸಿದರು. ಕೊನೆಗೆ ಮುಖದಲ್ಲಿ ಮಂದಸ್ಮಿತವನ್ನು ಅರಳಿಸಿಕೊಂಡ ದಶಾನನನು, "ಮಾನವನು ನನಗಿಂತ ದೊಡ್ಡ ಬಿಲ್ಲಾಳೇನು? ಅವನಲ್ಲಿ ಆಳುತನವನ್ನು ಮಾಡಿ ನನ್ನಲ್ಲಿ ದಾಯಾದಿತನವನ್ನು ಇವನು ತೋರಿಸಿಕೊಳ್ಳಲಿ. ಅವನ ತೋಳ ತೀಟೆಯನ್ನು ನನ್ನ ಹರಿತವಾದ ಕತ್ತಿಯ ಹೊಡೆತದಿಂದ ಹೊಮ್ಮುವ ಹೊಗೆಯಿಂದ ಹೋಗಲಾಡಿಸುತ್ತೇನೆ. ಮುಕ್ಕಣ್ಣ ಸಹ ಎದುರಾದರೂ ನನ್ನ ಚಂದ್ರಾಸಿಯು ತಕ್ಕ ಶಾಸ್ತಿಯನ್ನು ಮಾಡುತ್ತದೆ. ಈ ಶಂಕಾಕುಲನಾದ ವಿಭೀಷಣನು ನನಗೆ ತಕ್ಕ ಮೇಳವಲ್ಲ; ಯುದ್ಧದ ಬಗ್ಗೆ ಇಲ್ಲದ ಭೀತಿಯನ್ನು ಬಿತ್ತುತ್ತಾನೆ. ಮಾತಿಗಿಳಿದರೆ ನನ್ನ ಕೋಪವುಕ್ಕಿ ಗೋತ್ರವಧೆಯಾಗಿ ನನಗೆ ಅಪವಾದವುಂಟಾಗುತ್ತದೆ. ಆದ್ದರಿಂದ ಈ ವಿಪರೀತಾತ್ಮನನ್ನು ಲಂಕೆಯಿಂದ ಈಗಲೇ ಹೊರಗಟ್ಟು" ಎಂದು ಆಜ್ಞೆಮಾಡಿದ. ಆ ಕ್ಷಣವೇ ಚಪಲಾವೇಗ ಸಂಹಾರಕ ವಿದ್ಯುತ್ಪ್ರವಾಹರೆಂಬ ಸಾಮಂತರೊಡನೆ ಮೂವತ್ತು ಅಕ್ಷೌಹಿಣೀ ಬಲಸಮೇತನಾಗಿ ವಿಭಿಷಣನು ಕಾಡಿಗಿಚ್ಚಿಗೆ ಆಹುತಿಯಾಗಲಿದ್ದ ಬೆಟ್ಟತಪ್ಪಲಿನ ಕಾಡಿನಿಂದ ಗಜರಾಜನು ದೂರಸರಿಯುವ ರೀತಿಯಿಂದ ದಶರಥನ ಮಕ್ಕಳಿಂದ ನಾಶವಾಗಲಿದ್ದ ಲಂಕೆಯನ್ನು ಬಿಟ್ಟು ಹೊರಟ. ಖಚರ ರಾಜ್ಯಲಕ್ಷ್ಮಿಯನ್ನು ವರಿಸಲಿದ್ದ ಆ ಪುಣ್ಯನಿಧಿಯನ್ನು ಸುಕೃತವು ಪಾರುಮಾಡದಿರುತ್ತದೆಯೇ!

ಹೀಗೆ ಹೊರಟ ವಿಭೀಷಣನು ಲಂಕಾದ್ವೀಪವನ್ನು ಬಿಟ್ಟು ಹಂಸದ್ವೀಪದ ಬಳಿಗೆ ಬಂದ. ಅವನು ಕಳಿಸಿದ ಮಹತ್ತರನು ಕಾಣಿಕೆಗಳೊಡನೆ ರಾಜಭವನವನ್ನು ಹೊಕ್ಕು ದೀರ್ಘದಂಡ ನಮಸ್ಕಾರ ಮಾಡಿ ಜೋಡಿಸಿದ ಕೈಗಳನ್ನು ಹಣೆಯಲ್ಲಿ ಹೊತ್ತು ರಾಮನಿಗೆ ಹೀಗೆಂದು ಬಿನ್ನವಿಸಿದ: "ತನಗೆ ಹಿತವನ್ನು ಹೇಳುತ್ತಿದ್ದರೂ ಮದಮದಿರೆಯಿಂದ ಪ್ರಮತ್ತಹೃದಯನಾಗಿ ವಿಪರೀತವನ್ನು ಆಲೋಚಿಸಿದ ರಾವಣನ ಜೊತೆ ಬಾಳ್ಕೆ ತನಗೆ ಸಾಧ್ಯವಿಲ್ಲವೆಂದು ಬಗೆದು ವಿಭೀಷಣರು ನಿಮಗೆ ಶರಣಾಗಲು ಬಂದಿದ್ದಾರೆ" ಎಂದು ಮೊದಲುಮಾಡಿ ದಶಮುಖನ ಉದ್ವೃತ್ತತೆಯನ್ನು ವಿವರವಾಗಿ ಹೇಳಿದ. ಇದನ್ನು ಕೇಳಿದ ಕೆಲವರು, ಆಪ್ತರಾದ ಅಣ್ಣತಮ್ಮಂದಿರು ಹುಸಿ ಜಗಳದಿಂದ ನಮಗೆ ಉಪಾಯದಿಂದಲೇ ಅಪಾಯವೊಡ್ಡಲು ಮಾಡಿರುವ ಸನ್ನಾಹವಿದೆಂದು ಶಂಕಿಸಿದರು. ತನಗೆದುರಾಗಲು ಹೆದರಿಯೇ ರಾವಣನು ಜನಕಜೆಯನ್ನು ಕಪಟದಿಂದ ಅಪಹರಿಸಿಕೊಂಡು ಹೋದ ಕಾರಣ ಬೆದರುವ ಕಾರಣವಿಲ್ಲವೆಂದು ಹೇಳಿದ ರಾಮನು ಶರಣು ಬಂದ ವಿಭಿಷಣನನ್ನು ಬರಮಾಡಿಕೊಳ್ಳಲು ನಿರ್ಧರಿಸಿದ. ಬೇಡಿದವರಿಗೆ ದಾನಮಾಡದೆ, ಎದುರಾದವರನ್ನು ಇರಿಯದೆ, ಮೊರೆಹೊಕ್ಕವರಿಗೆ ಅಭಯವೀಯದೆ ಬಾಳುವ ರಾಜಕುವರನ ಬಾಹುದಂಡವು

ದಂಡ, ಜೀವನ ವ್ಯರ್ಥ ಎಂಬುದು ರಾಘವನ ಅಭಿಮತವಾಗಿತ್ತು. ವಿಭೀಷಣನ ಗುಣಗಳು ಜಗತ್ಪ್ರಸಿದ್ಧವಾದವುಗಳೆಂದೂ, ಸೀತಾದೇವಿಯಿದ್ದ ಜಾಗವನ್ನು ತನಗೆ ಹೇಳಿದವನು ಅವನೇ ಎಂದೂ ಅಂಜನಾಸುತನು ಬಿನ್ನವಿಸಿದ. ಆಗ ರಾಮನು ವಿಭೀಷಣನ ಮಹತ್ತರನಿಗೆ ತುಷ್ಟಿದಾನ ಮಾಡಿ ತನ್ನೊಡೆಯನನ್ನು ಕರೆತರಲು ಹೇಳಿದ.

ಅದಕ್ಕನುಗುಣವಾಗಿ ವಿಭೀಷಣನು ಸಮುದ್ರವನ್ನು ಬಂದು ಸೇರುವ ಕುಲವಾಹಿನಿಯಂತೆ ನಾನಾ ಬಗೆಯ ವಾದ್ಯಗಳ ಸದ್ದಿನ ನಡುವೆ ತನ್ನ ಸೇನೆಯೊಡನೆ ಬಂದ. ಅವನನ್ನು ಬರಮಾಡಿಕೊಳ್ಳಲು ಉದಾತ್ತರಾಘವನು ದಿವ್ಯವಸನವಿಭೂಷಣಗಳೊಂದಿಗೆ ಸುಗ್ರೀವ ಅಂಗದರನ್ನು ಕಳಿಸಿಕೊಟ್ಟ. ವಿಭಿಷಣನು ಕೆಲವೇ ಮಂದಿ ಆಪ್ತರೊಡನೆ ರಾಜಮಂದಿರವನ್ನು ಹೊಕ್ಕು, ರೋಹಣಗಿರಿಯು ಸಮುದ್ರಕ್ಕೆ ಮೊರೆವೊಗುವಂತೆ ಆತನು ರಾಮನೆಡೆಗೆ ಬಂದು ಅವನ ಕಾಲ್ಗಳಿಗೆರಗಿದ. ಅವನನ್ನು ಆದರದಿಂದ ತಕ್ಕೈಸಿದಾಗ ದೇಹಕಾಂತಿಯೆಂಬ ಬೆಳುದಿಂಗಳಿನಲ್ಲಿ ತೇಲುವ ಹಕ್ಕಿಯಂತೆ ಆ ಖೇಚರನು ಕಂಗೊಳಿಸಿದ; ಗುಣವನ್ನು ಕಡೆಗಣಿಸಿದ ರಾವಣನ ಜೊತೆಯಿದ್ದ ದೋಷನಿವಾರಣೆಗೆ ಗಂಗೆಯಲ್ಲಿ ಮಿಂದು ಪೂತನಾದಂತೆ ಕಂಡ. ಮೈಯಲ್ಲಿ ಸಂತಸ ತುಂಬಿರಲು ವಿಭೀಷಣನು ರಾಮನ ಬಲಭಾಗದಲ್ಲಿದ್ದ ಕನಕಾಸನದಲ್ಲಿ ಮಂಡಿಸಿದ. ರಾವಣನಿಂದ ಆಗಿದ್ದ ಎದೆಯಳಲು ಈಗ ಮಾಯವಾಗಿತ್ತು; ಕಾಳ್ಗಿಚ್ಚಿನಲ್ಲಿ ಸುಟ್ಟು ಅಮೃತದ ಮಳೆಯಲ್ಲಿ ತೊಯ್ದ ಪರ್ವತದಂತೆ ಅವನೀಗ ಕಾಣಿಸುತ್ತಿದ್ದ. ಉಚಿತ ಮಾತುಕತೆಗಳಿಂದ ಆನಂದವನ್ನುಂಟುಮಾಡಿದ ರಾಮನು ಅವನನ್ನು ಬಿಡಾರಕ್ಕೆ ಕಳಿಸಿಕೊಟ್ಟ. ಅಷ್ಟು ಹೊತ್ತಿಗೆ ಇತ್ತ ಅಪ್ರತಿಮಪ್ರಭನಾದ ಪ್ರಭಾಮಂಡಲನು ಸಾವಿರ ಅಕ್ಷೌಹಿಣೀಸೈನ್ಯಸಮೇತನಾಗಿ ಬಂದು ಅವರನ್ನು ಕೂಡಿಕೊಂಡ.

ಮಾರನೆಯ ದಿನ ಅವರೆಲ್ಲ ಅಲ್ಲಿಂದ ಹೊರಟು ಸಮುದ್ರತೀರವನ್ನು ಸೇರಿದರು. ಸಮುದ್ರವು ತೇಜಸ್ಸುಯಶಸ್ಸುಗಳನ್ನು ತಲೆಯಲ್ಲಿ ಧರಿಸಿ ನಿಂತಂತೆ ಹವಳದ ಬಳ್ಳಿಗಳೂ ಶಂಖದ ಬಳ್ಳಿಗಳೂ ಕಂಗೊಳಿಸಿದವು; ರಘುತನೂಭವನಿಗೆ ತನ್ನ ಅಲೆಗಳೆಂಬ ಕೈಗಳಿಂದ ಸೇಸೆಯಿಕ್ಕಿದಂತೆ ತೋರಮುತ್ತುಗಳು ಸೂಸಿದವು. ಹೊಳೆಯುವ ಪದ್ಮರಾಗರುಚಿಮಂಜರಿಗಳು ರಾಘವನಿಗೆ ಸಮುದ್ರರಾಜನು ಎತ್ತಿದ ನೀರಾಜನದ ದೀಪಗಳಂತೆ ರಾರಾಜಿಸಿದವು. ನೆಲವನ್ನು ಬಳಸಿದ್ದರೂ ಒಂದು ನೆಲೆಯಿಲ್ಲದ ಸಮುದ್ರನು ಅಲೆಗಳ ಸಮೇತ ಬಂದು ನಮಸ್ಕರಿಸಿದಾಗ ಅವು ಛಿದ್ರಗೊಂಡ ರೀತಿಯು ಅನ್ಯರಾಜರನ್ನು ನೆನೆಸಿತು. ಸುಳಿಗಳು ನೀರಿನ ಚಕ್ರಗಳಂತೆ ಸುತ್ತಿದವು; ತೆರೆಗಳು ತೆರೆಗಳನ್ನಟ್ಟಿದವು; ಬೆಟ್ಟಗಳನ್ನು ಬೆಟ್ಟಗಳು ಅಟ್ಟಿಸಿಕೊಂಡು ಕೊಡೆ ಹಿಡಿದು ಹೋಗುವಂತೆ ಮಣಿಕಿರಣಗಳು ಒಗೆದವು. ಅದನ್ನೆಲ್ಲ ಬಲಾಚ್ಯುತರು ಮೆಚ್ಚಿಕೆಯಿಂದ ನೋಡಿದರು.

ಆ ಹೊತ್ತಿನಲ್ಲಿ, ನಭೋಗಮನವಿದ್ಯೆಯೇ ಸೇತುವೆಯಾಗಲು, ಸಮುದ್ರದ ಮೇಲೆ ಬಂದ ಜಲರಾಶಿಯಂತೆ ಸೇನೆಯು ಶತ್ರುರಾಜಪಿಲಯಾನಿಲನಾದ ನಳನ ನಾಯಕತ್ವದಲ್ಲಿ, ಆನೆಗಳೆಂಬ ಮೊಸಳೆಗಳು ಕುದುರೆಗಳೆಂಬ ಅಲೆಗಳು ರಥಗಳೆಂಬ ಏಡಿಗಳು ಇವುಗಳಿಂದ ಕೂಡಿ ಆಕಾಶಮಾರ್ಗದಲ್ಲಿ ಮುಂದುವರೆಯಿತು. ಆಯುಧಗಳ ಹೊಳಪು, ಖೇಚರರ ಕಿರೀಟಗಳ ಕಾಂತಿ, ವಿಮಾನಗಳ ಬಹುರತ್ನ ದೀಪ್ತಿ – ಇವುಗಳೆಲ್ಲ ಸೇರಿ ಜ್ಯೋತಿರ್ಮಂಡಲವೇ ದಕ್ಷಿಣದಿಕ್ಕಿಗಭಿಮುಖವಾಗಿ ನಡೆಯುತ್ತಿರುವಂತೆ ರಾಘವನ

ಅಸಂಖ್ಯಬಲವು ನಭೋಭಾಗದಲ್ಲಿ ನಡೆಯಿತು. ಜಾಂಬವ ಅಂಗದ ಸುಷೇಣ ವಿಭೀಷಣ ಚಂದ್ರರಶ್ಮಿ ಸುಗ್ರೀವ ಮುಂತಾದ ಮುಖ್ಯ ಖೇಚರರ ವಿಮಾನಗಳ ನಡುವೆ ರಘುಜನು ಅಂಬರವೆಂಬ ಬಯಲ್ದಾವರೆದಾಣದಲ್ಲಿನ ಕಲಹಂಸದಂತೆ ತನ್ನ ವಿಮಾನದಲ್ಲಿ ಕಂಗೊಳಿಸಿದ. ರಾವಣನ ಯಶಸ್ಸೆಂಬ ಹಾಲುಗಡಲನ್ನು ಹೀರಲು ತನ್ನ ಸಾವಿರ ಬಾಹುಗಳನ್ನು ಚಾಚಿ ಬರುವ ಬಡಬಾಗ್ನಿಯಂತೆ ವಿಮಾನದ ಕಿರಣಗಳ ಗೊಂಚಲು ಹರಡಿರಲು ಪೀತಾಂಬರದ ಕಾಂತಿ ಹಾಗೂ ತನುಪ್ರಭೆಗಳಿಂದ ಕೂಡಿದ ಸೌಮಿತ್ರಿ ಬಂದ. ಈ ರಾಜರುಗಳು ಸಂಪಾದಿಸಿದ ಪುಣ್ಯವು ಅಳತೆಗೆ ಮೀರಿದ್ದು ಎಂಬಂತೆ ರಾಮಲಕ್ಷ್ಮಣರ ವಿಮಾನಗಳನ್ನು ಬಳಸಿ ಖೇಚರರಾಜರ ವಿಮಾನಗಳ ಗುಂಪು ಆಕಾಶವು ಬಹು ಕಿರಿದು ಎಂಬಂತೆ, ಅಲೆಯು ದಡವನ್ನು ಸೇರುವಂತೆ, ಕ್ಷಣಾರ್ಧದಲ್ಲಿ ದಾಟಿ ಕಾಡಿನಲ್ಲಿ ಬಂದಿಳಿಯಿತು. ಬೆಟ್ಟಗಳನ್ನು ತಂದಿಟ್ಟು ಕಡಲನ್ನು ದಾಟುವ ಕಷ್ಟವೇಕೆ ಎಂದು ಆಗಸಮಾರ್ಗದಿಂದ ವಿಯಚ್ಚರಾಧಿಪರು ವಾರಿಧಿಯನ್ನು ದಾಟಿ ಆಚೆಯ ದಡಕ್ಕೆ ಬಂದಾಗ ತೂತುಬಿದ್ದು ಇದ್ದುದೆಲ್ಲ ಸೋರಿಹೋದಂತೆ ಆಕಾಶ ಬಟಾಬಯಲಾಯಿತು. ಹೀಗೆ ಬಂದ ಸೈನ್ಯವು ಲಂಕೆಯ ಕಡೆ ನಡೆದು ಇಪ್ಪತ್ತೈದು ಯೋಜನ ಅಗಲ ಮೂವತ್ತು ಯೋಜನ ಉದ್ದದ ರಣಭೂಮಿಯನ್ನು ಆವರಿಸಿಕೊಂಡಿತು. ಬಂದವರ ಅಂತಸ್ತಿಗೆ ತಕ್ಕಂತೆ ಅರಮನೆಗಳನ್ನು ಸ್ಥಪತಿಯು ವಾಸ್ತುವಿದ್ಯೆಯಿಂದ ನಿರ್ಮಿಸಲು ಎಲ್ಲರೂ ಅವುಗಳಲ್ಲಿ ಬೀಡುಬಿಟ್ಟರು. ಹಾಗೆಯೇ ಗೃಹಮಹತ್ತರರು ಮನೆಗಳಿಗೆ ಕುಡಿಯುವ ನೀರಿನ ಬಾವಿಗಳನ್ನೂ, ಕಾರಂಜಿಗಳನ್ನೂ, ಉಪವನಗಳನ್ನೂ ಸುಂದರವಾದ ರೀತಿಯಲ್ಲಿ ರಚಿಸಿದರು. ರಾಮಲಕ್ಷ್ಮಣರ ಭವನಗಳನ್ನು ಸುತ್ತುವರಿದಂತೆ ಸುಗ್ರೀವ ಪ್ರಭಾಮಂಡಲ ಮುಂತಾದ ಮುಖ್ಯ ಖಚರರ ಮನೆಗಳಿದ್ದವು.

* * * * *

# ೧೩. ಬಲಾಚ್ಯುತರ ಪುಣ್ಯಪ್ರಭಾವೋದಯ

ರಾಘವಸೈನ್ಯವು ಪೂರಿಸಿದ ಕಹಳೆ ಶಂಖ ಭೇರಿ ಮುಂತಾದವುಗಳ ಸದ್ದಿನೊಡನೆ ಕುದುರೆಗಳ ಕೆನೆತ ಆನೆಗಳ ಘೀಳುಗಳು ಸೇರಿ ಪ್ರಳಯಕಾಲದ ಸಮುದ್ರಘೋಷದಂತೆ ಕೇಳಿಸಿತು. ಇದನ್ನು ಕೇಳಿ ರಾವಣನು ಹೊಡೆಸಿದ ಸನ್ನಾಹಭೇರೀ ನಿನದವು ಲೋಕವನ್ನೇ ಆವರಿಸಿಬಿಟ್ಟಿತು. ರಾಮನು ರಣರಭಸದಿಂದ ತನ್ನ ಮೇಲೇರಿ ಬಂದುದರಿಂದಾಗಿ ತನ್ನ ತೋಳ ತೀಟೆಯನ್ನು ಕಳೆದುಕೊಳ್ಳಲು ಕಾರಣವಾಯಿತೆಂದು ದಶಾನನನ ಕಣ್ಣುಗಳು ಕೆಂಪೇರಿದವು. ಈ ಶಬ್ದ ಕೇಳಿಬರಲು ಭಾಸ್ಕರಪುರ ಪಯೋಧರಪುರ ಕಾಂಚನಪುರ ಕಂಪನಪುರ ವ್ಯೋಮಪುರ ವ್ಯೋಮವಲ್ಲಭಪುರ ಗಂಧರ್ವಪುರ ಶಶಿಮಂದಿರಪುರ ಶಿವಮಂದಿರಪುರ ಸಿಂಹಪುರ ಲಕ್ಷ್ಮೀಪುರ ಮಹಾಶೈಲಪುರ ಚಕ್ರಪುರ ಸೀಮಂತಪುರ ಮಲಯಪುರ ಶ್ರೀಗುಹಾಪುರ ಅಶ್ವಪುರ ಚಂದ್ರಪುರ ಕಿರಿಂಜಯಪುರ ಶಶಿಸ್ಥಾಪನಾಪುರ ಮಾರ್ತಂಡಪುರ ಸಹಸ್ಥಾಪನಾಪುರ ವಿಶಾಲಸ್ಥಾಪನಾಪುರ ಜಯಪುರ ಪರೀಕ್ಷಾಪುರ ವಿಶ್ವಪುರ ಶ್ರೀಚಂದ್ರಪುರ ಗಜಪುರ ಗೋಪುರ ಮಹಿಷಪುರ ರತ್ನಪುರ ಮುಂತಾದವುಗಳ ವಿದ್ಯಾಧರರೆಲ್ಲ ತಂತಮ್ಮ ಸಂಗರಸಾಮಗ್ರೀಸಹಿತರಾಗಿ ಬಂದು ದಶಗ್ರೀವನನ್ನು ಕೂಡಿದರು. ಅವರೆಲ್ಲರಿಗೆ ಸಮುಚಿತ ಸನ್ಮಾನಗಳನ್ನು ಮಾಡಿದ ರಾವಣನು ಮೂವತ್ತುನಾಲ್ಕುಸಾವಿರ ಅಕ್ಷೌಹಿಣಿ ಬಲಸಮೇತನಾಗಿ ಯುದ್ಧಸಿದ್ಧನಾಗಿ ಹೊರಟ.

ಈ ಕಡೆ ರಾಮಲಕ್ಷ್ಮಣರ ಸಹಸ್ರ ಅಕ್ಷೌಹಿಣಿ ಬಲಕ್ಕೊಡೆಯರಾದ ಸುಗ್ರೀವ ಪ್ರಭಾಮಂಡಲರೊಡನೆ ಇತರ ಅತಿಬಲರಾದ ವಿಯಚ್ಚರರು ಸಂಗ್ರಾಮೋತ್ಸುಕರಾಗಿ ಬಂದು ಸೇರಿದರು. ಆ ಪಡೆಗೆ ಎಂಟು ವಿಭಾಗಗಳಿದ್ದವು: ಒಂದು ಆನೆಯ ಕಾವಲಿನಲ್ಲಿ ಒಂದು ರಥ, ಮೂರು ಕುದುರೆಗಳು, ಐವರು ಕಾಲಾಳುಗಳು ಸೇರಿದರೆ ಒಂದು ಪತ್ತಿ ಎನಿಸುತ್ತಿತ್ತು; ಪತ್ತಿಗೆ ಮೂರು ಪಟ್ಟು ದೊಡ್ಡದಾದುದು ಸೇನೆ; ಅದರ ಮೂರರಷ್ಟು ದೊಡ್ಡದು ಸೇನಾಮುಖ; ಅದರ ಮೂರರಷ್ಟು ಹಿರಿದಾದುದು ಗುಲ್ಮ; ಅದರ ಮೂರರಷ್ಟು ದೊಡ್ಡದು ವಾಹಿನಿ; ಅದರ ಮೂರುಪಟ್ಟು ಹಿರಿದು ಪೃತನೆ; ಅದರ ಮೂರು ಬಾರಿ ದೊಡ್ಡದಾದುದು ಚಮು; ಅದರಕ್ಕೆ ಮೂರರಷ್ಟು ದೊಡ್ಡದು ಆನೀಕಿನಿ. ಹತ್ತು ಆನೀಕಿನಿಗಳು ಸೇರಿದರೆ ಜೈನಶಾಸ್ತ್ರಗಳ ಪ್ರಕಾರ ಒಂದು ಅಕ್ಷೌಹಿಣಿ ಎನಿಸುತ್ತದೆ. ಒಂದು ಅಕ್ಷೌಹಿಣಿಯಲ್ಲಿ ಇಪ್ಪತ್ತೊಂದು ಸಾವಿರದ ಎಂಟುನೂರ ಎಪ್ಪತ್ತು ಆನೆಗಳೂ, ಅಷ್ಟೇ ಸಂಖ್ಯೆಯ ರಥಗಳೂ, ಅರವತ್ತೈದು ಸಾವಿರದಾರುನೂರ ಹತ್ತು ಕುದುರೆಗಳೂ, ಒಂದು ಲಕ್ಷ ಒಂಬತ್ತು ಸಾವಿರದ

ಮುನ್ನೂರೈವತ್ತು ಕಾಲಾಳುಗಳೂ ಇರುತ್ತಾರೆ. ಹೀಗಾಗಿ ಎರಡೂ ಕಡೆಯ ಸೇನೆಗಳು ಸೇರಿದರೆ ಭೂಮಿಯೇ ಇಕ್ಕಟ್ಟೆನಿಸುತ್ತದೆ. ನಕ್ಷತ್ರಗಳನ್ನೂ, ಮಳೆಯ ಹನಿಗಳನ್ನೂ, ಪರಮಾಣುಗಳನ್ನೂ, ಆಕಾಶದ ವಿಸ್ತಾರವನ್ನೂ, ಸಮುದ್ರದ ಅಲೆಗಳನ್ನೂ, ದಿಕ್ಕಿನ ಕೊನೆಯನ್ನೂ, ಅಂತೆಯೇ ಈ ಎರಡೂ ಬಲಗಳ ಸಂಖ್ಯೆಯನ್ನೂ ಎಣಿಸಹೊರಡುವವನು ಗಾಂಪನೇ ಸರಿ. ಅವರ ಬಲಗಳು ಅಷ್ಟು ದೊಡ್ಡವು.

ಎರಡು ಕಡೆಗಳಲ್ಲಿಯೂ ಆಯುಧಗಳನ್ನು ಅರ್ಚಿಸುವ, ಯುದ್ಧದ ಆನೆಕುದುರೆಗಳನ್ನು ಪೂಜಿಸುವ, ವೀರರ ಆಲಾಪಗಳನ್ನು ಕೇಳುವ, ಘೋಷಣೆ ಕೂಗುವ ಕೆಲಸದಲ್ಲಿಯೇ ಆ ರಾತ್ರಿ ಕಳೆಯಿತು. ನೇಸರು ಮೂಡಲು ಇಂದಗಿಯ ಆಜ್ಞೆಯ ಪ್ರಕಾರ ತಮಗಾರೂ ಎದುರಿಲ್ಲ, ಸಮರವನ್ನು ಮೊದಲಿಡಲು ತಾವೇ ನಾಯಕರು ಎಂದು ಹಸ್ತಪ್ರಹಸ್ತರು ಸಿದ್ಧರಾದರು. ಮಾರೀಚ ಮೊದಲಾದ ಮಹಾರಥರೊಡನೆ ರಥಿಕರೆಲ್ಲರೂ ತಂತಮ್ಮ ಸಿಂಹರಥಗಳನ್ನೇರಿ, ರಣಭೇರೀರವದೊಡನೆ ಲಂಕೆಯಿಂದ ಹೊರಟರು. ವಜ್ರೋದರ ಮುಂತಾದ ಕೆಲವು ಮೈಗಲಿಗಳು ಹುಲಿಗಳನ್ನೇ ವಾಹನಗಳನ್ನಾಗಿ ಮಾಡಿಕೊಂಡಿದ್ದರು; ಕೆಲವರು ಕುದುರೆಗಳ ಮೇಲೆ ಕೂತರು. ಆನೆಕುದುರೆಗಳ ಮೇಲೆ ಕೂತ ತನ್ನ ಅಂಗರಕ್ಷಕರಾದ ಏಳುಕೋಟಿ ವಿದ್ಯಾಧರತನಯರೊಡನೆ ಇಂದ್ರಜಿತ್ತುವು ಹೊರಟ. ಅವರೊಡನೆ ಜಿತಶತ್ರು ಮೇಘವಾಹನರು 'ಇಂದಗಿಯೊಡನೆ ಅಹಿತರನ್ನು ಇಂದು ಅಗಿಯುವಂತೆ ಮಾಡುತ್ತೇವೆ' ಎಂದು ಸಿದ್ಧರಾದರು. ರಿಪುಬಲವಿಲಯೋತ್ಪಾತಕರದಂತೆ ಕೋರೈಸುವ ದೀಪ್ತಿತ ತ್ರಿಶೂಲಗಳನ್ನು ಹಿಡಿದು ಕುಂಭಕರ್ಣನು ಜ್ಯೋತಿಷ್ಪ್ರಭವೆಂಬ ತನ್ನ ಮಣಿವಿಮಾನವನ್ನೇರಿ ಹೊರಟ.

ಹೀಗೆ ಉಗ್ರಬಲವು ಸಂಗ್ರಾಮರಂಗದಲ್ಲಿ ಒಗ್ಗೂಡಿ ನಿಲ್ಲಲು, ಉಗ್ರಾಸ್ತ್ರವನ್ನು ಹಿಡಿದು, ಪುಷ್ಪಕವಿಮಾನವನ್ನೇರಿ ಪೂರ್ಣೇಂದುವನ್ನು ಹೋಲುತ್ತಿದ್ದ ರಾವಣನು ಬೆಳ್ಗೊಡೆ ಭೇರೀರವ ಶಂಖನಿನಾದಗಳಾಗುತ್ತಿರಲು ಸಡಗರದಿಂದ ಹೊರಟ. ಬರುವಾಗ, ಸುರಾಲಯಗಳು ಒಡೆಯುವಂತೆ, ಪರ್ವತಸಂಕುಲವು ಕೆಡೆಯುವಂತೆ, ಭೂತಳವು ನಡುಗುವಂತೆ, ಮರಗಳು ಪ್ರತಿಕೂಲ ಗಾಳಿಯಿಂದ ಬಾಗುವಂತೆ, ಹಕ್ಕಿಗಳು ಭಯದಿಂದ ಕಲರವಮಾಡಲು ಮಾನಧನನು ಎದುರಾದ ಉತ್ಪಾತಗಳನ್ನೂ, ಅಪಶಕುನಗಳನ್ನೂ ಲೆಕ್ಕಿಸದೆ, ಸಂಗರಾವನಿಗೆ ನಡೆತಂದ. ದನುಜೇಂದ್ರನ ಒಡ್ಡು ಕೋರೈಸುತ್ತಿರಲು ವಾನರಚಿಹ್ನರು ಕಾದುವ ತಕ್ಕಿನಿಂದ ರಣಭೂಮಿಗೆ ಬಂದರು; ಸಮುದ್ರದ ಅಲೆಗಳ ಭೋರ್ಗರೆತದಂತೆ ನಾನಾ ರಣವಾದ್ಯಗಳ ದನಿಯೊಡನೆ ಕಪಿಧ್ವಜರು ನಡೆತಂದರು. ಹಲವು ಬಗೆಯ ವಾಹನಗಳನ್ನೇರಿ ಅಲಂಘ್ಯವಿಕ್ರಮರಾದ ವಿದ್ಯಾಧರ ವೀರರು ಸಂಗ್ರಾಮಲೋಲುಪರಾಗಿ ಐತಂದರು. ಹಸ್ತಪ್ರಹಸ್ತರೊಡನೆ ತಳ್ತಿರಿಯಲು ನಳನೀಲರು ವಿಲಯಾಗ್ನಿಗಳಂತೆ ಮುಂಭಾಗದಲ್ಲಿ ಬಂದರು. ಇಂದ್ರಜಿತ್ತುವಿಗೆ ಭಂಗವನ್ನುಂಟುಮಾಡಬೇಕೆಂಬ ಆತುರದಿಂದ ಅಂಗದಕುಮಾರನು ಕಡುಕೈದು ಬಂದ. ಸುಷೇಣ ಜಾಂಬವರು ಅಮಿತ ಚತುರಂಗಸೇನಾಸಮನ್ವಿತರಾಗಿ ಮಾರುತಮಾರ್ಗದಲ್ಲಿ ಬಂದು ಸೇರಿದರು. ಈ ಬಗೆಯಲ್ಲಿ ತಮ್ಮ ತಮ್ಮ ವಿಜಯಧ್ವಜಗಳನ್ನು ಆಗಸದಲ್ಲಿ ಹಾರಾಡಿಸಿ ಪ್ರಮುಖ ವೀರರುಗಳೆಲ್ಲ ರಣರಸಿಕರಾಗಿ ನಡೆತಂದರು. ಪ್ರಭಾಮಂಡಲ ಮಹೇಂದ್ರ

ಚಂದ್ರಾಭ ಮಹಾಬಲ ಸರ್ವಪ್ರಿಯ ಶರಭ ಪ್ರೀತಿಂಕರ ದೃಢರಥ ಕುಮುದಾವರ್ತ ಸೂರ್ಯಜ್ಯೋತಿ ವಿಮಲಸಾಗರ ರತಿವರ್ಧನ ವಿಜಯಾಶ್ರಯ ಮುಂತಾದ ಹೆಸರಿನ ನಾಯಕರು ಉತ್ಸಾಹದಿಂದ ರಣರಂಗದೆಡೆಗೆ ನಡೆತಂದರು.

ಒಬ್ಬೊಬ್ಬ ವೀರನನ್ನು ಹಿಂಬಾಲಿಸಿದ್ದ ಚತುರಂಗಬಲವೂ ಎಣಿಕೆಗೆ ಮೀರಿದುದಾಗಿತ್ತು; ಅವರೆಲ್ಲರ ರಣವಾದ್ಯಗಳ ಸದ್ದು ದಿಕ್ಕರಿಗಳ ಕಿವಿಗಳನ್ನು ತುಂಬಿತ್ತು. ವಿದ್ಯಾಧರ ಸೇನೆಯೆಲ್ಲ ಅನುವರಬುವಿಯಲ್ಲಿ ನೆರೆದು ನಳ ನೀಲರು ಹೇಳಿದಂತೆ ಶತ್ರುಬಲಕ್ಕೆದುರಾಗಿ ನಿಂತರು. ಅಪ್ರತಿಮ ಪ್ರತಾಪನಿಧಿಯಾದ ವಿಭೀಷಣನು ಉದ್ಗತ ಮುದ್ಗರವನ್ನು ಕೈಯಲ್ಲಿ ಹಿಡಿದು ತನ್ನ ರತ್ನಪ್ರಭ ವಿಮಾನವನ್ನೇರಿ ನಭಮಾರ್ಗದಲ್ಲಿ ಬಂದ. ಅವನೊಡನೆ ಬಂದ ಅಕ್ಷೌಹಿಣಿಸೈನ್ಯದಿಂದಾಗಿ ಆಗಸದಲ್ಲಿ ಜಾಗವೇ ಇರದಂತಾಯಿತು. ಬಲದೇವ ವಾಸುದೇವರನ್ನು ನಿರೀಕ್ಷಿಸಿ ದಶಗ್ರೀವನು, ಅವರೆದುರು ತನ್ನ ಪೊಡರ್ಪುದೋರುವೆನೆಂಬ ಸಂಭ್ರಮದಿಂದ ಆಗಸಮಾರ್ಗವನ್ನು ಮೂವಳಸಾಗಿ ಸುತ್ತುವರಿದ. ತನ್ನ ಆಭರಣಗಳ ಕಾಂತಿಯಿಂದ ಆವೃತನಾದ ಪ್ರಭಾಮಂಡಲನು ಕಡಲ ಮಧ್ಯೆ ನಿಂತ ವರುಣನಂತೆ ಕಾಣಿಸಿದ. ದಶಕಂಠನನ್ನು ಇರಿಯಲು ನಾನೇ ಸಾಕು ಎಂಬ ಯುದ್ಧಾಕಾಂಕ್ಷೆಯಿಂದ ಸುಗ್ರೀವನು ತನ್ನ ರತ್ನಮಯ ವಿಮಾನವೇರಿ ಬಂದ. ಅವನೊಡನೆ ವಿರೋಧಿಬಲಕ್ಕೆ ಬಿರುಗಾಳಿಯೆನಿಸಿದ ಯುದ್ಧಾವರ್ತ, ರಣಕ್ರೀಡೆಯ ಯಮನೆನಿಸಿದ್ದ ವಸಂತ, ಶತ್ರುಬಲವೆಂಬ ಕುಮುದವನಕ್ಕೆ ಆನೆಯಂತಿದ್ದ ಕುಮುದ, ಅರಿಕುಲ ಕಾಳೋರಗನೆನಿಸಿದ ಉರಗ ಮೊದಲಾದ ಹಲವು ಮಂದಿ ನಾಯಕರು ನಾನಾ ಬಗೆಯ ಆಯುಧಗಳನ್ನು ಹಿಡಿದು ರಣಸಿದ್ಧರಾದರು. ಇವರೆಲ್ಲರ ನಡುವೆ ಕಲ್ಪಾಮರರಂತೆ ಮಣಿಮಯವಿಮಾನದಲ್ಲಿ ರಾಮಲಕ್ಷ್ಮಣರಿದ್ದರು; ಖೇಚರಕಾಮಿನಿಯರು ಅವರಿಗೆ ಚಾಮರವಿಕ್ಕುತ್ತಿದ್ದರು, ಮಣಿಮಯ ಘಂಟಾನಾದ ಮಧುರದನಿಗೈಯ್ಯುತ್ತಿತ್ತು.

ಹೀಗೆ ಎರಡೂ ಕಡೆಯ ಬಲಗಳು ನೆಲ–ಆಗಸಗಳೆರಡನ್ನೂ ಪೂರ್ತಿ ಅವರಿಸಿಬಿಟ್ಟವು. ಇಕ್ಕೆಲಗಳಲ್ಲೂ ತಮಗೆ ಸರಿಯೆನಿಸಿದ ವ್ಯೂಹ ಪ್ರತಿವ್ಯೂಹಗಳು ಯಥಾವಿಧಿಯಿಂದ ರಚಿತವಾದವು. ತಮ್ಮ ಕಡೆಯ ನಾಯಕರ ಬಿರುದುಗಳನ್ನು ಉಗ್ಗಡಿಸುತ್ತ ಬೀರವದ್ದಳೆ ಕಹಳೆ ಹರೆಗಳ ಶಬ್ದ ಮಾಡಿ ಎಲ್ಲರ ಕಿವಿಗಳನ್ನು ತುಂಬಿದರು; ನಾಯಕರ ಹೊಳೆಯುವ ಕುರುಹಿನ ಬಾವುಟಗಳನ್ನು ಮೇಲೆತ್ತಿ ಹಿಡಿದರು; ತಮ್ಮೆದುರಾದ ಶತ್ರುಗಳ ಧ್ವಜಗಳನ್ನು ಕಂಡು ಕುಪಿತಗೊಂಡು ಕದನಕುತೂಹಲವನ್ನು ತಳೆದರು. ಇತ್ತ, ಕಡೆಗಾಲದ ನಂಜಿನ ಬಿರುಗಾಳಿ ಬೀಸುವಂತೆ ನಳ ನೀಲರು ಹಸ್ತಪ್ರಹಸ್ತರೊಡನೆ ಸೇರಿ ಕೈಬೀಸಿದರು. ಭೂಮಿ ಗುಡುಗಿತೋ, ಸೂರ್ಯನ ರಥವು ಬುವಿಯ ಮೇಲೆ ಬಿದ್ದಿತೋ, ಭೂಮಿಯನ್ನು ಹೊತ್ತ ಆದಿಶೇಷನ ಕಂಠದ ಗಟ್ಟಿ ಮೂಳೆಯು ಮುರಿದ ಸದ್ದಾಯಿತೋ, ಕುಲಪರ್ವತವು ಸೀಳಿಹೋಯಿತೋ, ಸಾಗರವು ಮೇರೆವರಿಯಿತೋ, ಇಲ್ಲದಿದ್ದರೆ ಇಂತಹ ಶಬ್ದವಾಗಲು ಸಾಧ್ಯವಿಲ್ಲ ಎಂಬಂತೆ ಇಕ್ಕೆಲದಲ್ಲಿಯೂ ಸಮರಾನಕಸ್ವನವು ಭೋರ್ಗರೆಯಿತು. ಆನೆಆನೆಗಳೊಡನೆ. ಕುದುರೆಕುದುರೆಗಳೊಡನೆ, ರಥರಥಗಳೊಡನೆ, ಆಳುಗಳು ಆಳುಗಳೊಡನೆ ಕಲಹಕ್ಕೆ ಮೊದಲುಗೈಯಲು ಆಕಾಶವು ಭೂಮಿಯೊಡನೆ ಯುದ್ಧಕ್ಕೆ ತೊಡಗಿದಂತೆ ತೋರಿತು. ಭೂಮಿ ಕಂಪಿಸುವಂತೆ ಎರಡೂ ಕಡೆಯ ಪೆರ್ವಡೆಗಳು ತಾಗಲು, ಕಹಳೆಗಳ ಸದ್ದೂ,

ಬಿಲ್ಲಿನ ಠೇಂಕಾರದ ಸದ್ದೂ, ಆನೆಗಳ ದಂತಗಳ ತಿಕ್ಕಾಟವೂ, ಯೋಧರ ಬಾಣಗಳ ಘೋರಧ್ವನಿಯೂ, ಕತ್ತಿಗಳ ಟಣತ್ಕಾರವೂ ದಿಗಂತದವರೆಗೂ ಹಬ್ಬಿ ಪ್ರಳಯಕಾಲದ ಸಮುದ್ರಘೋಷದಂತೆ ಕೇಳಿಸಿತು. ಕತ್ತಿಗಳು ಸಂಘರ್ಷಿಸಲು ಕಿಡಿಗಳು ಹೊಮ್ಮಿದವು, ಆನೆಗಳ ಗುದ್ದಾಟದಲ್ಲಿ ದಂತಗಳು ಮುರಿದುಬಿದ್ದವು, ತೇರುಗಳು ಪರಸ್ಪರ ಘಟ್ಟಿಸಲು ಕುದುರೆಗಳೂ ಧ್ವಜಗಳೂ ನೆಲಕ್ಕುರುಳಿದವು, ಕೊಂತಗಳ ನಡುವಣ ಇರಿದಾಟದ ನಡುವೆ ತೋರವೆಣಗಳು ನೆಲಕ್ಕುರುಳಿದವು.

ಉಭಯ ಬಣಗಳಲ್ಲಿನ ಬಿಲ್ಲಣಿಗಳು ಒಬ್ಬರೊಬ್ಬರ ಮೇಲೆ ಬಾಣಗಳ ರಾಶಿಯನ್ನು ಕರೆದಾಗ ರಣಗತ್ತಲೆಯು ಆವರಿಸಿ, ಬಾಣಗಳು ಆಗಸದಲ್ಲಿ ಘರ್ಷಿಸಿ ಕಿಡಿಗಳ ಮಳೆಯನ್ನು ಕರೆದವು. ಬಾಣಾಂಧಕಾರದೊಡನೆ ಸುರಿದ ರಕ್ತದಿಂದ ಕೆಂಪಾದ ನಭವು ಮುಳುಗುವ ಸೂರ್ಯನ ಕಿರಣಗಳಂತೆ ಕಂಡು ಸಮರಭೂಮಿಯಲ್ಲಿ ಸೇನೆಯೆಂಬ ಕಾಳರಾತ್ರಿ ಆವರಿಸಿತು. ಗಗನ ಎಡೆಗೆಟ್ಟಿತು, ಗಾಳಿಯು ನಡೆಗೆಟ್ಟಿತು, ಬಿಲ್ಲ ಪಡೆಗಳು ಬಿಡುವ ಬಾಣಗಳು ಮರ್ಮಗಳಿಗೆ ತಾಕಿ ಯಮಕಿಂಕರರಂತೆ ಸುಭಟರ ಪ್ರಾಣಗಳನ್ನು ಮೇಲೆ ನಡೆಸಿದವು. ಸೂರ್ಯಕಿರಣಗಳು ಕಣ್ಮರೆಯಾದವು, ಕತ್ತಲೆ ದಟ್ಟವಾಯಿತು, ಹೊನ್ನ ಗರಿಗಳಿಂದಾಗಿ ಆಗಸವು ಕಪಿಲವರ್ಣಕ್ಕೆ ತಿರುಗಿತು, ಇಬ್ಬಲದ ಬಿಲ್ಲ ಪಡೆ ಗಾಳಿಯ ವೇಗದಲ್ಲಿ ಬಿಟ್ಟ ಬಾಣಗಳು ಕಾಡನ್ನು ಹೊಗುವ ಹಕ್ಕಿಗಳಂತೆ ಆವರಿಸಿದವು. ಉಭಯಬಲಗಳ ಅಸ್ತ್ರವಿದ್ಯೆಯಿಂದಾಗಿ ಗಾಳಿ ನಡೆಗೆಟ್ಟಿತು, ಗಗನಸ್ಥಳವು ಹೂತುಹೋಯಿತು, ದಿಕ್ಕುಗಳು ತುಂಬಿಕೊಂಡವು, ನಡು ಹಗಲೇ ಮಧ್ಯರಾತ್ರಿಯಂತೆ ಕತ್ತಲಿಸಿತು; ಇದನ್ನು ಕಂಡು ಯುದ್ಧವನ್ನು ನೋಡಲು ನೆರೆದಿದ್ದ ದೇವತೆಗಳು ಬೆರಗಾದರು. ಬಾಣಶ್ರೇಣಿಯು ದೆಸೆಯನ್ನು ನುಂಗಿ, ದಿನೇಶನನ್ನು ನೋಣೆದು, ದಿಗಂತಗಳನ್ನು ಹೀರಿಬಿಟ್ಟಿತು; ಸೇನೆಗಳಲ್ಲಿ ನೆತ್ತರನ್ನು ಸುರಿಸಿ, ಕರುಳು ಹೊರಬರುವಂತೆ ಮಾಡಿ, ಕಣ್ಣಾಲಿಗಳು ಸೂಸುವಂತಾಗಿ, ಕೈಗಳನ್ನು ಕತ್ತರಿಸಿ, ಕಾಲುಗಳನ್ನು ಖಂಡತುಂಡಗಳನ್ನಾಗಿಸಿತು. ಕಡುವಿಲ್ಲರು ಬಾಣಗಳನ್ನು ತುಡುವ, ಬಿಡುವ, ನಡುವ ಕಾರ್ಯಗಳಾವುವೂ ಕಾಣಿಸದಿದ್ದರೂ ರಣರಂಗದಲ್ಲಿ ರಕ್ತದ ಹೊನಲುಗಳು ರಭಸದಿಂದ ಹರಿದವು. ಸುಭಟನೊಬ್ಬ ತನ್ನ ಹಣೆಯಲ್ಲಿ ನಟ್ಟ ಬಾಣವನ್ನು ಕಿತ್ತಾಗ ಗಾಯದೆಡೆಯಿಂದ ನೆತ್ತರು ಉಕ್ಕಿಬರಲು ಹಣೆಗಣ್ಣಿನ ಉರಿಯಂತೆ ಕಾಣಿಸಿತು; ಆ ಭಟನು ಮರುಳುಗಳ ನಡುವೆಯಿದ್ದ ಮೃಡನಂತೆ ಗೋಚರಿಸಿದ.

ಯಮನ ಎದೆಯನ್ನೇ ಬಿಚ್ಚುಂತೆ ಉಭಯಬಲದ ಧನುರ್ಧರ ಸೈನ್ಯಗಳು ಕಾದಾಡಿದವು; ಯಮನ ಕೋಣಗಳು ಸೆಣಸಾಡುವಂತೆ ಕಡಿತಲೆಕಾರರು ತಾಗಿದರು. ಕಡಿತಲೆಕಾರರು ನಾನಾ ಬಗೆಯ ಹೊಡೆತಗಳಿಂದ ಯುದ್ಧಗೈಯಲು ಅನೇಕರ ಮೈಗಳು ಕಡಿಖಂಡವಾದವು, ಮುಂಡಗಳು ಕುಣಿದಾಡಿದವು, ಕೈಗಳು ಕತ್ತರಿಸಿ ಬಿದ್ದವು, ತೊಡೆಗಳ ಮಾಂಸ ಹೊರಬಂದಿತು, ಹೊಟ್ಟೆ ಬಿರಿದವು, ರಣರಂಗ ಕಣೆಕಾಲುಗಳ ಗಣಿಯಾಯಿತು, ಮೇಗಾಲುಗಳ ದೊಣೆಯಾಯಿತು, ಹಸಿಯ ತಲೆಗಳು ದೆಸೆದೆಸೆಯಲ್ಲಿ ಬಿದ್ದವು, ಕಣ್ಣುಗಳು ಸೂಸಾಡಿದವು, ಮೂಳೆಗಳು ಮುರಿದವು, ಕರುಳುಗಳು ಹೊರಚೆಲ್ಲಿದವು. ಮರುಳುಗಳು ಸಂತಸದಿಂದ ಕುಣಿದಾಡಿದವು. ಸಿಡಿಲ ಬಳಗದಂತೆ ಇಕ್ಕೆಲದ ಬಲಗಳೂ ಸೆಣಸಾಡಿದವು.

ಸವಾರರು ಸೆರಗುಬೆರಗನ್ನು ಬಗೆಯದೆ ತಮ್ಮ ಆಶ್ರಯದಾತನ ಜೋಳವಾಳಿ

ನಿಲ್ಲುವಂತೆ ತಮ್ಮ ಕುದುರೆಗಳನ್ನು ದೌಡಾಯಿಸಿದರು; ಎರಡೂ ಕಡೆಯ ಹಯಗಳು ಒಂದೇ ನೇರದಲ್ಲಿ ಹರಿದಾಡಿದವು. ಗೊರಸುಗಳ ಲೋಹದ ಲಾಳಗಳು ಪ್ರವಾಹದಂತೆ ಹರಿದವು. ಕಟ್ಟಿಕೊಂಡ ಐಬಣ್ಣದ ಪಟ್ಟೆಯ ಕುಚ್ಚುಗಳಲ್ಲಿ ಕಾಮನಬಿಲ್ಲನ್ನು ಮೂಡಿಸಿ, ತೊಟ್ಟ ಕವಚದ ಕಾಂತಿಯಲ್ಲಿ ಚಾಂಚಲ್ಯವನ್ನು ಹುಟ್ಟಿಸಿ ಆ ಸವಾರರು ಒಡ್ಡಿ ಬರಲು ರೌದ್ರರಸವು ಮೇರೆದಪ್ಪಿ ಹರಿಯಿತು. ಲೋಹದ ರಕ್ಷಾಕವಚಗಳು, ಶಿರಸ್ತ್ರಾಣಗಳು ಹಾಗೂ ಕತ್ತಿ–ಒರೆಗಳ ಹೊಳಪು ದಿಗಂತರಾಳವನ್ನು ಹೊಗುವಂತೆ ವಾಯುವೇಗದಲ್ಲಿ ಹರಿಯುವ ಎರಡೂ ಬದಿಯ ಕುದುರೆಗಳು ನೋಡುವವರ ಕಂಗಳಿಗೆ ಬಿಸಿಲಕುದುರೆಗಳಂತೆ ಕೋರೈಸಿದವು. ಸವಾರರು ಯುದ್ಧಗೈಯುತ್ತಿರಲು ಕರ್ಕಡೆಗಳು ಯಮನ ಸರ್ಪಗಳಂತೆ, ಚಕ್ರಗಳು ಲಯಕಾಲಚಕ್ರಗಳಂತೆ, ನಾಳಿ ಬಾಣಗಳು ಜವನಾಳಿಯಂತೆ, ತೋಮರಗಳು ಯಮನ ಡಾಮರಗಳಂತೆ ತೋರಿದವು. ಕುದುರೆಸವಾರರು ಕಡಿಖಂಡ ಮಾಡಿದ ತಲೆಗಳು ಆಗಸವನ್ನು ತುಂಬಿ ರವಿಮಂಡಲವನ್ನು ಆವರಿಸಲು ಬಿಸಿಲ ಝಳ ತಗ್ಗಿ ಗ್ರಹಣಸಮಯದಂತಾಯಿತು. ಕತ್ತಿಗಳ ಚೂರುಗಳು ಉಲ್ಕೆಗಳಂತೆ ಹಾರಿದವು; ಚಿಲ್ಲನೆ ಚೆಲ್ಲಿದ ರಕ್ತವು ದಿಗಂತಗಳನ್ನೂ ಕೆಂಪುಮಾಡಿದವು; ಆಕಾಶವನ್ನು ಅವಸಾನಕಾಲದ ಸಂಜೆ ಆವರಿಸಿದಂತೆ ಕಾಣಿಸಿತು; ಮೇಲಿನಿಂದ ಬೀಳುವ ಮಿದುಳುಗಳು ಭೂಮಿಗೆ ಬೀಳುವ ನಕ್ಷತ್ರಗಣದಂತೆ ತೋರಿತು. ಮೂಳೆ ಮುರಿದು ಬಿದ್ದ ಆನೆಗಳೇ ದೋಣಿಗಳಾಗಲು, ಹೆಣಗಳ ಕೈಗಳೇ ಹುಟ್ಟುಗಳಾಗಲು, ಅಲೆಗಳು ಮುಗಿಲುದ್ದ ಏರಿ ಹರಿಯುವ ನೆತ್ತರ ತೊರೆಯನ್ನು ಮರುಳುಗಳು ಹಾಯುತ್ತಿದ್ದವು. ಚಕ್ರಚೀತ್ಕಾರವು ಭೂಚಕ್ರವು ತನ್ನ ಭಾರದಿಂದಲೇ ನರಳಿದಂತೆಯೂ, ಬಿಲ್ಲುಗಳ ಟಂಕಾರವು ಪ್ರಳಯಕಾಲದ ಗುಡುಗಿನಂತೆಯೂ, ಕುದುರೆಗಳ ಕೆನೆತವು ಅಟ್ಟಹಾದಂತೆಯೂ ಕೇಳಿಸುತ್ತಿತ್ತು. ಹೀಗೆ ತುರಂಗ ಸಂಗರವು ಭಯಂಕರವಾಯಿತು.

ರಥಿಕರು ರಥಿಕರೊಡನೆಯೂ, ಸಾರಥಿಗಳು ಸಾರಥಿಗಳೊಡನೆಯೂ, ಆಗಸದಲ್ಲಿ ಧ್ವಜಗಳು ಧ್ವಜಗಳೊಡನೆಯೂ, ರಥಗಳು ರಥಗಳೊಡನೆಯೂ ತಾಗಿದವು. ಅಪಾರ ಪ್ರಮಾಣದ ಬಾಣಪ್ರಯೋಗದಿಂದಾಗಿ ರಥಗಳ ಅಚ್ಚುಗಳು ಸಿಡಿದವು, ಮೂಕಿಗಳು ಮುರಿದವು, ಕಡಾಣಿಗಳು ಕಳಚಿಬಿದ್ದವು, ಪಾರಿಗಳು ಕಡಿದುಹೋದವು, ನೊಗಗಳು ಓರೆಯಾದವು, ಕುದುರೆಗಳು ಓಡಿದವು, ಬಾವುಟಗಳು ಕಿತ್ತುಬಿದ್ದವು, ರಥಿಕರು ಸತ್ತರು. ಸಾರಥಿ ಸತ್ತರೂ ಕೆಲವು ರಥಿಕರು ಗಾಬರಿಗೊಳ್ಳದೆ ತಾವೇ ರಥಗಳನ್ನು ಚೋದಿಸಿಕೊಂಡು ಕಾದಿದರು. ಮಹಾರಥರು ಅದಟರ ಮೇಲೆ ಬಿಟ್ಟಾಗ ಯಮನಾಳುಗಳನ್ನು ಕರೆತರುವ ಬಾಣಗಳು ಶತ್ರುಗಳ ರೋಮರೋಮಗಳಲ್ಲಿ ನಾಟಿ ವಿಧಿಲಿಪಿಯನ್ನೇ ಒರೆಸಿಬಿಟ್ಟವು. ತೇರಿನ ಒಡ್ಡು ಗಾಳಿಗಿದಿರಾದ ಮೋಡದ ಒಡ್ಡಿನಂತಾದಾಗ, ಯೋಧರು ಕೂರಂಕುಶದಿಂದ ಚುಚ್ಚಿ ಆನೆಗಳನ್ನು ರಣದಲ್ಲಿ ನೂಕಿದರು.

ಮಾವತಿಗರು ಅಂಕುಶದಿಂದ ಚುಚ್ಚಿದಾಗ ಆನೆಗಳು ಗಾಳಿಗೆ ಗರಿ ಮೂಡಿದಂತೆ ಓಡಿ ಕಾರ್ಮುಗಿಲ ದಂಡಿನಂತೆ ಆವೇಶದಿಂದ ಕಾದಿದವು, ತಮ್ಮ ಕೋಡುಗಳಿಂದ ತಲೆಗಳನ್ನು ಸೀಳಿ ಮಿದುಳನ್ನು ಹೊರತೆಗೆದವು. ಧ್ವಜಗಳು ಮತ್ತು ಪರಿಘಗಳ ಪ್ರತಿಘಾತದಿಂದ ಧರಾತಳವೇ ನಡುಗಲು, ಮೋಡಗಳೆಲ್ಲ ಚದುರಲು, ಕೋಪ–ವೇಗಗಳಿಂದ ತಮ್ಮ

ಮದಜಲವನ್ನು ಸುರಿಸುತ್ತ ಎರಡೂ ಕಡೆಯ ಆನೆಗಳು ಸಿಡಿಲು ಸಿಡಿಲಿನೊಂದಿಗೆ ತಾಗಿ ಕಿಡಿಗಳುದುರುವಂತೆ, ದಂತಗಳು ಮುರಿದು ಬೀಳುವಂತೆ ತಾಗಿದವು. ಮದಜಲವು ಬಲ್ಸರಿಗಳನ್ನೂ, ದಂತಗಳ ಕಾಂತಿಯು ಬಳ್ಳಿಮಿಂಚುಗಳನ್ನೂ, ದೃಷ್ಟಿ ಸಿಡಿಲನ್ನು ನಾಚಿಸುವಂತೆ, ಮುಗಿಲ ರಾಶಿಗಳು ಪರಸ್ಪರ ಗುದ್ದಾಡುವಂತೆ ತಾಗಿದವು, ಅವುಗಳ ಘೀಳು ಗುಡುಗಿನಂತೆ ಕೇಳಿಸಿತು. ಮದವನ್ಮಾತಂಗ ಕುಂಭಗಳಿಂದ ರಣಭೂಮಿಯಲ್ಲಿ ಮುತ್ತಿನ ಮಣಿಗಳು ಇಟ್ಟಾಡಿದವು. ಕರಿಘಟೆಗಳ ಜೊತೆಯಲ್ಲಿ ಅಂಗರಕ್ಷಕ ಪಡೆ ಯಮನ ಕೋಣಗಳಂತೆ ಹೊಡೆದಾಡಲು ಕಡಿಖಂಡವಾಗಿ ಬಿದ್ದ ಹೆಣಗಳ ರಾಶಿಯಿಂದ ರಣಾಂಗಣದಲ್ಲಿ ಜವನುಂಡು ಕಾರಿಕೊಂಡ ಹಾಗೆ ಕಾಣುತ್ತಿತ್ತು. ಕಾಲ್ದಾಗಿನವರ ಬಲ್ಗೆಯ್ತದಿಂದ ನೆತ್ತರ ತೊರೆಗಳು ಗಳಗಳನೆ ಹರಿದವು, ಕರುಳುಗಳ ಹಿಣಿಲುಗಳು ತೆಪ್ಪಗಳಾಗಲು ಕೆಲವರು ತೇಲಾಡಿದರು. ಆನೆಗಳ ಹೋರಾಟದಿಂದ ಅಮರರೂ ಅಪ್ಸರರೂ ಅಳುಕುವಂತಾಯಿತು. ತಮ್ಮೊಡನೆ ಬಲುಹಿನಿಂದ ಕಾದಿ ಸತ್ತ ಸುಭಟರನ್ನು ಆನೆಗಳು ತಮ್ಮ ಸೊಂಡಿಲಿನಿಂದ ಹಿಡಿದೆತ್ತಿ, ಸುರಪ್ರಮದೆಯರಿಗೆ ದುರ್ಲಭರಾದ ವಲ್ಲಭರನ್ನು ಪ್ರೀತಿಯ ಕಾಣಿಕೆಯಾಗಿ ನೀಡುವಂತೆ ಮಾರ್ಬಲಕ್ಕೆದುರಾಗಿ ಓಡಿದವು.

ಆನೆಕುದುರೆಸವಾರರು ರಥಿಕರು ಹಾಗೂ ಕಾಲಾಳುಗಳ ಹೆಣಗಳೊಡನೆ ಭೂತಗಣಗಳು ರೌದ್ರಕರವಾಗಿ ನೆರೆದಾಡಿದವು. ದಾನವ ಸೇನೆಯು ಹೀಗೆ ಕಾದಿ ಖಚರ ಚಾತುರ್ದಂತವನ್ನು ಅಂತಕನ ಪುರಿಗಟ್ಟಿತು. ಹಸ್ತಪ್ರಹಸ್ತರು ತಮ್ಮ ದೋರ್ವಲವನ್ನು ಎರಡೂ ಕಡೆಯ ಭಟರಿಂದ ಹೊಗಳಿಸಿದರು. ತಮ್ಮ ಪಡೆ ನಾಶಗೊಳ್ಳಲು ವಾನರ ಸೇನೆಯು ಓಡಿ ನಳನೀಲರ ಮೊರೆಹೊಕ್ಕಿತು. ಇಳೆಯು ನಡುಗುವಂತೆ ಹಸ್ತನು ಕೆರಳಿದ ಯಮನಂತೆ ತನ್ನ ರಥವನ್ನು ನಳನ ಕಡೆ ಓಡಿಸಿದ. ನಳನನ್ನು ಕಂಡು ಅವನ ಕೋಪ ಉಲ್ಬಣಿಸಿತು. ಬಿಲ್ಲಿನ ಟೇಂಕಾರವೆಂಬ ಗುಡುಗಿನೊಡನೆ ಹಸ್ತನು ಹಸ್ತದ ಮಳೆಯಂತೆ ನಳನ ಮೇಲೆ ಬಾಣದ ಮಳೆಗರೆದ. ಇದರಿಂದ ನಳನು ಬಡಬಾಗ್ನಿಯಂತೆ ಕಿನಿಸಿ ಚಂದ್ರಶರವನ್ನು ತೆಗೆದು ತೊಟ್ಟು ತಲೆಯನ್ನು ಕಡಿಯಲು ಹಸ್ತನು ಅಸ್ತಮಿಸಿದ. ಅತಿಕುಪಿತನಾದ ಪ್ರಹಸ್ತನು ತನ್ನ ರಥವನ್ನು ನಳನ ರಥಕ್ಕಿದಿರಾಗಿ ತಂದು ನಿಲ್ಲಿಸಿಕೊಂಡ. ಆಗ ನೀಲನು ನೀಲಮೇಘದಂತೆ ಗರ್ಜಿಸುತ್ತ ನಳನ ನೆರವಿಗೆ ಧಾವಿಸಿ ತನ್ನ ಕೈಚಳಕದಿಂದ ಪ್ರಹಸ್ತನ ನೆಚ್ಚಿನ ಕೈದುವನ್ನು ಕಡಿಖಂಡಮಾಡಿದ. ಮರುಚಣದಲ್ಲಿಯೇ ತನ್ನ ಬತ್ತಳಿಕೆಯಿಂದ ಮೊನೆಯಂಬನ್ನು ತೆಗೆದು ಬಿಲ್ಲಿಗೆ ಹೂಡಿ ಪ್ರಹಸ್ತನ ಎದೆಗೆ ಸರಿಯಾಗಿ ಗುರಿಯಿಟ್ಟ. ಅದು ಕಾಳನಾಗದಂತೆ ಎದೆಯನ್ನು ಹೊಕ್ಕು ಬೆನ್ನಲ್ಲಿ ಹೊರಬಂತು! ಹೀಗೆ ಅವನೂ ಹತನಾದ. ಅಷ್ಟು ಹೊತ್ತಿಗೆ. ಈ ದಿನವಾದರೂ ನಳನೀಲರ ಕೈಯಿಂದ ದಶಾನನನ ಸೇನೆಯನ್ನು ಪಾರುಮಾಡಬೇಕೆಂಬ ರೀತಿಯಲ್ಲಿ ರಾಜೀವಸಖನು ಪಶ್ಚಿಮಸಮುದ್ರದಲ್ಲಿ ಮರೆಯಾದ. ಎರಡೂ ಕಡೆಗಳಲ್ಲಿ ಅಪಹಾರ್ಯತೂರ್ಯಧ್ವನಿಯಾಯಿತು.

ಉಭಯ ಬಲಗಳ ಸೈನಿಕರು ಸಮರಪರಿಶ್ರಮವನ್ನು ಆರಿಸಿಕೊಳ್ಳಲು ತಮ್ಮ ತಮ್ಮ ಬೀಡುಗಳಿಗೆ ಹೋದರು. ಎಲ್ಲೆಡೆಯೂ ಶತ್ರುಸೇನೆಯು ಅಲ್ಲಾಡುವಂತೆ ಮಾಡಿದ ನಳನೀಲರ ಶೌರ್ಯ, ಹಸ್ತಪ್ರಹಸ್ತರ ವೀರಮರಣ ಇವುಗಳನ್ನು ಕುರಿತ ಹೊಗಳಿಕೆಯ ಮಾತೇ ಮಾತು. ಈ ಮಧ್ಯೆ ಗಾಯಗೊಂಡವರಿಗೆ ಮದ್ದು ಹಾಕುವುದು, ಮರುದಿನದ ಕದನಕ್ಕೆ ಸಿದ್ಧತೆ, ತೊಡಬೇಕಾದ ಕವಚಗಳ ಆಯ್ಕೆ, ಆನೆಕುದುರೆಗಳಿಗೆ ತೊಡಿಸಬೇಕಾದ

ತನುತ್ರಗಳ ಜೋಡಣೆ ಮುಂತಾದ ಕೆಲಸಗಳು. ಇವುಗಳಲ್ಲಿಯೇ ರಾತ್ರಿ ಕಳೆಯಿತು. ಕದನರಸಾಸ್ವಾದನ ಲೋಭದಿಂದ ಎರಡೂ ಕಡೆಯ ವೀರರು ಕಾತುರರಾಗಿರುವುದರಿಂದ ತಾನಿನ್ನು ತಡಮಾಡುವುದು ಸಲ್ಲದೆಂದು ದಿನಪನುದಯಿಸಿದ. ನಿಶಾಚರರ ಆಟವನ್ನು ಮುಗಿಸಲೆಂದು ಉಷೆಯು ಕತ್ತಲೆಯ ತೆರೆಯನ್ನು ಸರಿಸಲು ರವಿಯು ಕಾಣಿಸಿಕೊಂಡು ಬೆಳಕನ್ನು ಹರಡಿದ. ಸಿದ್ಧರಾಗಿದ್ದ ಚತುರಂಗಬಲಗಳು ರಣರಂಗಕ್ಕೆ ಧಾವಿಸಿದವು.

ಸರಿ, ಸ್ವಲ್ಪ ಹೊತ್ತಿನಲ್ಲಿಯೇ ಯಮುನಿಗೆ ಹುಗ್ಗಿಯನ್ನು ಬೇಯಿಸಿದಂತೆ ರಣಮಂಡಲದಲ್ಲಿ ಅಸಂಖ್ಯಾತ ದೇಹಗಳು ಬಿದ್ದವು. ಮಾರೀಚ ಸಿಂಹಕಟಿ ಚಾರಣ ಶುಕ ಮಕರ ವಿಘ್ನ ಶರಪಂಜರ ಗಂಭೀರ ವಜ್ರ ಮದನಾಂಕುಶ ಮೊದಲಾದ ರಾವಣನ ಹನ್ನೆರಡು ಮಂದಿ ಸಾಮಂತರು ಒಂದೆಡೆ, ಸಂತಾಪ ಪ್ರಥಿತ ನಂದನ ಉದ್ಧತ ಮಹೋದಧಿ ಉದ್ದಾಮಕೀರ್ತಿ ವಿಘಟ ಉದ್ದಾಮ ಗಜ ದುರಿತಾಸ್ತ್ರ ಮುಂತಾದ ಪ್ರಭಾಮಂಡಲನ ಹನ್ನೆರಡು ಜನ ಸಾಮಂತರು ಗರಿಸನ್ನೆ ಮಾಡಿ ಕಾದಲು ತೊಡಗಿದರು. ಮಾರ್ಬಲವು ಸಂತಾಪದಿಂದ ತಲ್ಲಣಿಸುವಂತೆ ಕಲ್ಪಾಂತಕೃತಾಂತನಾದ ಮಾರೀಚನು ಸಂತಾಪನನ್ನು ಕೊಂದುಹಾಕಿದ. ರಾವಣನ ಸೇನೆಯಲ್ಲಿ ಜಯಭೇರಿ ಮೊಳಗಿತು; ರಾಮನ ದಳದಲ್ಲಿ ಭಯವಾವರಿಸಿತು. ಕೊಂಚ ಹೊತ್ತಿನಲ್ಲಿಯೇ ಮಕರನು ತನ್ನ ಚಾಪವನ್ನು ಮೀಟಿ ಟಂಕಾರಮಾಡಿ ಬಡಬಾಗ್ನಿಯಂತಹ ತನ್ನ ಬಾಣಾವಳಿಯಿಂದ ಮಹೋದಧಿಯ ಜೀವವನ್ನು ಪೂರ್ತಿ ಹೀರಿಬಿಟ್ಟ. ಉದ್ದಾಮನ ರಕ್ತಸಿಕ್ತ ತಲೆಯು ಆಗಸದಲ್ಲಿ ಹಾರುವಂತೆ ಗಂಭೀರನು ಬಾಣ ಪ್ರಯೋಗಿಸಿದ; ಅವನ ಕಡೆಯ ಹರೆಗಳು ಜೋರಾಗಿ ಸದ್ದುಮಾಡಿದವು. ಶತ್ರುಮದಕರಿಸಿಂಹನಾದ ಸಿಂಹಕಟಿಯು ದಶಾಸ್ಯನ ಸಿಂಹಾಸನವನ್ನು ಸ್ಥಿರಪಡಿಸುವಂತೆ ಅಜೇಯನೆನಿಸಿದ ಬಾಹಾಬಲನನ್ನು ಸಂಹರಿಸಿದ.

ಈ ಪರಿಯಲ್ಲಿ ತಮ್ಮ ಕಡೆಯ ನಾಲ್ವರು ಮಹಾಸಾಮಂತರು ಅಂತಕನ ಜಠರಾಗ್ನಿಗೆ ಆಹುತಿಯಾಗಲು, ಈ ಕಡೆಯ ಉಳಿದ ಸಾಮಂತರು ತುಪ್ಪವನ್ನು ಕುಡಿದ ಅಗ್ನಿಯಂತೆ ಅತಿಕುಪಿತರಾಗಿ ರಾವಣನ ಕಡೆಯ ವರೂಥಿನಿಯನ್ನು ಆಹ್ವಾನಿಸಿ ಲಯಸಮಯಭೈರವನಂತೆ ಭೀಕರಾಕಾರರಾಗಿ ಕಾದಲು ಮೊದಲುಮಾಡಿದರು. ಇಕ್ಕಡೆಯ ರಥಗಳ ಅಚ್ಚುಗಳು ಒಂದರೊಡನೊಂದು ತಾಕಿ ನೆಲ ನಡುಗಲು, ಅವುಗಳ ತುದಿಯಲ್ಲಿನ ಧ್ವಜಗಳು ಅದಕ್ಕೆ ತಕ್ಕಂತೆ ಮೇಲೆ ಅಭಿನಯಮಾಡಿದವು. ಆವೇಶದಿಂದ ಕೋದಂಡವನ್ನು ಟಂಕಾರ ಮಾಡಿ ದಶಮುಖನ ಸಾಮಂತನಾದ ವಿಘ್ನನು ಬಲವಾಗಿ ಬಾಣ ಬಿಡಲು ಉದ್ದಾಮನು ತನ್ನ ತೋಮರದಿಂದ ಅವನ ಮರ್ಮಸ್ಥಾನಕ್ಕೆ ಹೊಡೆದ; ಇಂದ್ರನ ವಜ್ರಹತಿಯಿಂದ ಕೆಡೆವ ಕುಲಪರ್ವತದಂತೆ ಅವನು ಧರೆಗುರುಳಿದ. ಈ ಸಲ, ಕಪಿಬಲದಲ್ಲಿ ಜಯನಿನದ ಮೊಳಗಿತು. ಅಂತೆಯೇ ವಜ್ರನ ಬಾಹುಗಳನ್ನು ತನ್ನ ಕುಠಾರಾಯುಧದಿಂದ ತುಂಡರಿಸಿದ; ಉನ್ಮದವಾರಣವು ಅಜಗರವನ್ನು ತುಳಿಯುವಂತೆ ಚಾರಣನನ್ನು ಕೊಂದಿಕ್ಕಿದ. ದೆಸೆವಲಿ ಕೊಡುವಂತೆ ಆ ರಣರಂಗದಲ್ಲಿ ಎಲ್ಲೆಲ್ಲೂ ತುಂಡು ದೇಹಗಳು ಚೆಲ್ಲವರಿದವು. ಶುಕನನ್ನು ದುರಿತಾಸ್ತ್ರನು ಕಾಳ್ಗಿಚ್ಚಿನಂತೆ ಅಂತಕನ ಹೋಮಕುಂಡಕ್ಕೆ ನೂಕಿದ; ಯಮನ ಕೋಣದ ಕೊಂಬುಗಳಿಗೆ ಅಣಸುಗಳನ್ನು ತೊಡಿಸುವ ಹಾಗೆ ನಂದನನು ಶರಪಂಜರನನ್ನು ತನ್ನ ಕತ್ತಿಯಿಂದ ಕತ್ತರಿಸಿ ಎಸೆದ; ಸಿಂಹವು ತನ್ನ ಉಗುರುಗಳಿಂದ ಆನೆಯನ್ನು ಸೀಳುವಂತೆ ಮದನಾಂಕುಶನು ಗಜನನ್ನು ಕೊಚ್ಚಿಹಾಕಿದ. ಇದನ್ನೆಲ್ಲ ಕಂಡ ರಾವಣನು ಕಾಲಾಗ್ನಿಯಂತೆ

ಉರಿದ. ಹೀಗೆ ದನುಜ ಹಾಗೂ ಪ್ರಭಾಮಂಡಲನ ಕಡೆಯ ಬಲಗಳು ಭಯಂಕರವಾಗಿ ಹೋರಾಡಿದವು. ಮುಖ್ಯ ನಾಯಕರುಗಳು ಒಬ್ಬರನ್ನೊಬ್ಬರು ಇರಿದಾಡುವುದನ್ನು ಕಂಡು ಕೃಪಾಳುವಾದ ಚಂಡಮರೀಚಿಯು ಯುದ್ಧವನ್ನು ಕೊನೆಗೊಳಿಸುವೆನೆಂಬ ಬಗೆಯಿಂದ ಪಶ್ಚಿಮ ಪಯೋನಿಧಿಯಲ್ಲಿ ನಿಧಾನವಾಗಿ ಇಳಿದ. ಅಪಹಾರ್ಯತೂರ್ಯಗಳು ಮೊಳಗಿ ಸೈನಿಕರು ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

ಮಾರನೆಯ ಬೆಳಿಗ್ಗೆ ತನ್ನ ಕುಲಜನ ವಿಜಯವನ್ನು ಕಂಡು ಕಣ್ಣುಗಳನ್ನು ತಣಿಸಿಕೊಳ್ಳುವ ಉತ್ಕಂಠತೆಯಿಂದ ಬೆಟ್ಟದ ಮೇಲೇರಿದಂತೆ ಸೂರ್ಯನು ಉದಯಿಸಿದ. ಉಭಯ ವಾಹಿನಿಗಳು ಪೂರ್ವಕ್ರಮದಲ್ಲಿ ರಣಭೂಮಿಯಲ್ಲಿ ಎದುರಿಸಿ ನಿಂತುವು. ದಶಾಸನನ ಸೇನಾಪತಿಗಳಾದ ಕುಂಭ ನಿಕುಂಭ ಶಂಭು ಸ್ವಯಂಭೂ ಚಂಡ ಪ್ರಚಂಡ ಕುಂಡಲ ಹಲಾಹಲ ಪುಷ್ಪಚೂಲ ಧೂಮ ರಾಕ್ಷಸ ಸಂಧ್ಯಾಕ್ಷ ಬಿಂದುಮಾಲಿ ಭೀಮಭೀಷಣ ಧವಳಕೀರ್ತಿ ವಿಕ್ರಮ ವಿದ್ಯುಜ್ಜಿಹ್ವ ಸೌಮ್ಯಾನನ ಮುಂತಾದ ಪ್ರಮುಖರು ರಾಮನ ಸೈನ್ಯದೆದುರು ನಿಂತರು. ಮನುವಂಶಲಲಾಮನಾದ ರಾಮನ ಮುಂದೆ ತಮ್ಮ ಶೌರ್ಯವನ್ನು ತೋರಿಸುವ ಪುಣ್ಯ ತಮಗೆ ದೊರಕಿತೆಂದು ಸಂತಸದಿಂದ ಕೆಲವು ಖೇಚರವಲ್ಲಭರು ರಣಾನುರಾಗದಿಂದಿದ್ದರು. ಉದಾತ್ತ ರಾಘವನೊಡನೆ ಮಿತ್ರಭಾವದಿಂದ ಕೂಡಿದ ಚಂದ್ರಾಭ ಚಂದ್ರಮಾಲಿ ರತಿವರ್ಧನ ಮೇಘವಾಹನ ಭೀಮರವ ಕುಮುದಾವರ್ತ ಸುಷೇಣ ಜಯಮಿತ್ರ ಮಾನಾರ್ಹ ಮಹೇಂದ್ರ ಮೇಘಪರ್ವತ ಸರ್ವಪ್ರಿಯ ತರಂಗ ತರಲ ಚಪಲಾವೇಗ ವಿದ್ಯುತ್ಕರ್ಣ ಜಯ ವಿಜಯರೆಂಬ ವಿದ್ಯಾಧರರು ತಮತಮಗೆ ಸಮಬಲರೆನಿಸಿದ ವಿದ್ಯಾಧರಪ್ರತಿನಾಯಕರೊಡನೆ ವೀರಾವೇಶದಿಂದ ಹೋರಾಟದಲ್ಲಿ ತೊಡಗಿದರು. ಉಡಿವ ರಥಗಳು, ಮಡಿಯುವ ಕುದುರೆಗಳು, ದೇಹ ತುಂಡಾಗಿ ಬೀಳುವ ಎರಡೂ ಕಡೆಯ ಕಾಲಾಳುಗಳು, ಉರುಳುವ ಆನೆಗಳು, ಕತ್ತರಿಸಲು ಕುಣಿಯುವ ಅಟ್ಟೆಗಳಿಗಾಗಿ ಕೂಗಾಡುತ್ತ ಸಂಭ್ರಮಿಸುವ ಮರುಳುಗಳು, ಹರಿಯುವ ರಕ್ತಪ್ರವಾಹ, ಆಗಸದಲ್ಲಿ ಧಿಂಕಿಡುವ ಶಿರಗಳು – ಇವುಗಳಿಂದ ಕೂಡಿ ಸಂಗರಾಂಗಣವು ಅತಿ ಭಯಂಕರವಾಯಿತು. ಹಲವಾರು ದಿನಗಳ ಕಾಲ ಹೀಗೆ ಕಾದಾಡಿ ತಮ್ಮ ಮನೋಬಲ ಭುಜಬಲ ವಿದ್ಯಾಬಲಗಳನ್ನು ಮೆರೆದ ಅನೇಕ ಪರಾಕ್ರಮಿಗಳು ಮಣ್ಣುಪಾಲಾದರು.

ಒಂದು ದಿನ ಕಾಳ್ಗಿಚ್ಚಿನಿಂದ ಹೆದರಿ ಓಡುವ ಮೃಗಗಳಂತೆ ಸುಗ್ರೀವನ ಪಡೆಯು ದಶಗ್ರೀವನ ಪಡೆಗೆ ಬೆಂಗುಡುವಂತಾಯಿತು. ಆಗ ಸುಗ್ರೀವನು ತನ್ನ ರಥವನ್ನೇರಿ ವಿಪಕ್ಷವನ್ನು ಧೂಳಿಪಟಮಾಡಲೆಂದು ಸೇನೆಯ ಮುಂದೆ ಬಂದ. ಮಾರುತಿಯೂ ಯಮನಂತೆ ತನ್ನ ಆನೆ ಹೂಡಿದ ರಥವನ್ನೇರಿ ನಡೆದ. ಮಾರಿಯ ಮೂರಿಯಂತೆ ಬಂದವನೇ ಹನುಮನು ಕುಂಭಕರ್ಣನ ಮಕ್ಕಳಾದ ಮಾಲಿ ಜಂಬುಮಾಲಿಗಳ ಮೇಲೆ ಬಿದ್ದ. ಅವನ ದಿವ್ಯಾಸ್ತ್ರಗಳನ್ನು ಎದುರಿಸಲಾಗದೆ ದ್ವಿಷತ್ಸೇನೆಯ ಪೇರಾಳುಗಳೂ ಆನೆಕುದುರೆಗಳೂ ರಥಗಳೂ ಬಿದ್ದವು. ಪವಮಾನನಂದನನು ಚರಮದೇಹಿಯಾದ್ದರಿಂದ ಅವನ ದೇಹಕ್ಕೆ ಕೈದುಗಳು ನಾಟವು; ವಿದ್ಯಾಪರಮೇಶ್ವರನಾದ ಅವನಿದಿರಲ್ಲಿ ಹೋರಾಡುವುದು ಯಾರಿಗೂ ಅಸಾಧ್ಯ. ಹೀಗಾಗಿ ಅವನು ಮಾಲಿ ಜಂಬುಮಾಲಿಗಳ ಮಹಾಸಾಮಂತಸಂದೋಹವನ್ನು ಕೊಂದ. ಯಮನ ಎದೆ ತೆರೆಯಿತೆಂಬಂತೆ, ದಾನವಸೇನೆಗೆ ಪ್ರಲಯಸಮಯ ಸನ್ನಿಹಿತವಾದಂತೆ ಅವನು ಶತ್ರುಗಳನ್ನು ತರಿದುಹಾಕಿದ. ಇದನ್ನು ಕಂಡ ಮಾಲಿಯು ವಿಲಯಸಮಯಜ್ವಾಲೆಯಂತೆ

ಉರಿಯುತ್ತ ತನ್ನ ರಥವನ್ನು ಮಾರುತಿಯ ರಥಕ್ಕೆದುರಾಗಿ ನಿಲ್ಲಿಸಿದ. ಬಿಸಿಲ ಪ್ರಖರತೆ ಕಡಿಮೆಯಾಗುವಂತೆ, ಕತ್ತಲೆಯಾವರಿಸುವಂತೆ, ಮಾರುತಿಯ ತೇರಿನ ಆನೆಯ ಮಸ್ತಕದಿಂದ ಹೊಸಮುತ್ತುಗಳಂತೆ ಬಿಸುನೆತ್ತರುಗಿವಂತೆ ಮಾರುತಿಯ ರಥ ಮಿಸುಕಾಡದಂತೆ ಅಂಬಿನ ಮಳೆಯನ್ನು ಕರೆದ. ತನಗೆ ಸ್ಯಂದನಬಂಧನವನ್ನು ಮಾಡುವ ಅವನ ಮೇಲೆ ಆಂಜನೇಯನ ಕೋಪ ಮೇರೆ ಮೀರಿ ತಾನೂ ಬಾಣಬಿಟ್ಟು ಅದನ್ನೆಲ್ಲ ಖಂಡಿಸಿ ಮತ್ತೊಂದರಿಂದ ಅವನ ತಲೆಯನ್ನೂ ಕತ್ತರಿಸಿಹಾಕಿದ. ತನ್ನ ಅಣ್ಣನ ಸಾವು ಜಂಬುಮಾಲಿಯಲ್ಲಿ ಅಸಾಧ್ಯ ದುಗುಡಕೋಪಗಳನ್ನುಂಟುಮಾಡಿತು; ಆನೆಯ ಮೇಲೆ ಸಿಂಹ ಏರಿಹೋಗುವಂತೆ ತನ್ನ ಗದೆಯನ್ನು ಹಿಡಿದು ಮುನ್ನುಗ್ಗಿದಾಗ ಮರುನ್ನಂದನನು ಅವನನ್ನೂ ಕತ್ತಿಯಿಂದ ಇರಿದು ಧರೆಗುರುಳಿಸಿದ.

ಆ ಬಳಿಕ ಅಂಜನಾಸುತನು ಮುಂದೆ ಬರಲು ಬೆಳ್ಗೊಡೆ ಚಾಮರ ಪಾಳಿಧ್ವಜ ಶಂಖ ಕಹಳೆ ಮುಂತಾದ ರಾಜಚಿಹ್ನಗಳಿಂದ ಕೂಡಿದ ಚತುರಂಗಬಲಪರಿವೃತನಾಗಿದ್ದ ದಶಮುಖನು ಕಾಣಿಸಿಕೊಂಡ. ತನಗೆ ಸಮನಾದ ವೀರ ಈಗ ದೊರೆತನೆಂದು ವಲೀಮುಖಧ್ವಜನು ಅವನತ್ತ ತನ್ನ ತೇರನ್ನು ಮುನ್ನಡೆಸಿದ. ಅವನ ರಭಸದಿಂದ ರಕ್ಕಸವಡೆ ತಲ್ಲಣಿಸಿತು. ಇದರಿಂದ ಕುಪಿತನಾದ ದಶಮುಖನು ಕಡುಮುಳಿದು ಅವನೊಡನೆ ಕಾದಲು ಬಗೆದಾಗ, ಮಯನ ಮಕ್ಕಳಾದ ಮಹೋದರ ವಜ್ರೋದರರು ಅಡ್ಡಬಂದು, ಮಹೋದರನು ಅಂಗದನೊಡನೆಯೂ, ವಜ್ರೋದರನು ಆಂಜನೇಯನೊಡನೆಯೂ ಕಾದಲು ತೊಡಗಿದರು. ನಿಡುಗಾಲ ಅವರಲ್ಲಿ ಕಾದಾಟವಾಯಿತು; ಸಾಮಾನ್ಯಾಸ್ತ್ರ ಹಾಗೂ ದಿವ್ಯಾಸ್ತ್ರಗಳ ಬಳಕೆಯಾಯಿತು. ಕೊನೆಗೆ ಅಂಗದನ ಕಣೆ ಮಹೋದರನಂಗದ ರಕ್ತ ಹೀರಿ ಅವನನ್ನು ದಿವಿಜಾಂಗನೆಯರ ಬಳಿ ಕಳಿಸಿತು. ಇತ್ತ, ಹನುಮನು ದಿವ್ಯಾಸ್ತ್ರವನ್ನು ಬಿಡಲು ಅದು ವಜ್ರೋದರನ ಎದೆಗೆ ನಾಟಿ ಬೆನ್ನಲ್ಲಿ ಹೊರಬಂದಿತು; ಎರಡೂ ಕಡೆಯಿಂದ ನೆತ್ತರುಗಿದು ಅವನು ಕಣ್ಣುಗಳನ್ನು ಬಿಟ್ಟು, ರಾವಣನ ಭುಜಬಲಶ್ರೀ ಅಲ್ಲಾಡಲು ಕರಿಯ ಬೆಟ್ಟ ಧರೆಗುರುಳುವಂತೆ ಕೆಡೆದು ಜೀವಬಿಟ್ಟ. ಆ ಮುಂದೆಯೂ ಕಾಳ್ಗಿಚ್ಚು ಕಾನನವನ್ನೂ, ಬಡಬಾನಲವು ವಾರಿಧಿಯನ್ನೂ ನಾಶಮಾಡುವಂತೆ ಪವನಸುತನು ಅಗಣಿತ ದಾನವಸೈನ್ಯವನ್ನು ತವಿಸಿದ. ಅಣುವನ ಕೂರ್ಗಣೆಗಳಿಂದ ನೆಲವೆಲ್ಲ ಕತ್ತಲೆಯಾವರಿಸಿದಂತೆ ಹೆಣಮಯವಾಯಿತು. ಎರಡೂ ಕೈಗಳಿಂದ ದಿವ್ಯಾಯುಧಗಳನ್ನು ಬಳಸುತ್ತ ಅನಿಲತನೂಜನು ರಣವ್ಯಸನಿಯಾಗಿ ಯುದ್ಧಗೈದು ಪಿಶಾಚಸಂಕುಲಕ್ಕೆ ಔತಣ ಮಾಡಿಸಿದ.

ತನ್ನ ತಮ್ಮಂದಿರನ್ನು ಕೊಂದ ಮಾರುತಿಯ ಮೇಲಿನ ಅತೀವ ಕೋಪದಿಂದ ಕುಂಭಕರ್ಣನು ತ್ರಿಶೂಲವನ್ನು ಹಿಡಿದು ಏರಿಬಂದ. ಇದನ್ನು ಕಂಡ ಚಂಡ ಬಲಿ ಶಶಿಮಂಡಲರೆಂಬ ರಘುವೀರನ ಮಹಾಸಾಮಂತರು ಹನುಮನನ್ನು ಸುತ್ತುವರಿದು ಕುಂಭಕರ್ಣನ್ನೆದುರಿಸಿದರು. ಅವನು ಪ್ರಕ್ಷೋಭಣ ವಿದ್ಯಾಶರವನ್ನು ಪ್ರಯೋಗಿಸಿ ಕಪಿಧ್ವಜಸೈನ್ಯವು ಮೈಮರೆಯುವಂತೆ ಮಾಡಿದ. ಸುಗ್ರೀವನು ನಿದ್ರಾಪ್ರಬೋಧಿನಿ ಎಂಬ ದಿವ್ಯಾಸ್ತ್ರದಿಂದ ಹನುಮ ಮುಂತಾದವರ ನಿದ್ದೆಯನ್ನು ಹೋಗಲಾಡಿಸಿದ. ಆನಂತರ ಅವರೆಲ್ಲ ಸೇರಿ ರಕ್ಕಸವಡೆಯನ್ನು ಹಿಮ್ಮೆಟ್ಟಿಸಲು, ದನುಜೇಂದ್ರನು ಅಮರಾದ್ರಿಯು ಅಲುಗಾಡುವಂತೆ, ಸಮುದ್ರದ ನೀರು ತುಳುಕಾಡುವಂತೆ, ರವಿಮಂಡಲವನ್ನು ಭೂಮಿಗಿಳಿಸುವಂತೆ ಯುದ್ಧಗೈದರು. ಆ ಹೊತ್ತಿಗೆ ಇಂದ್ರಜಿತ್ತು ಬಂದು ಕೈಗಳನ್ನು ಮುಗಿದು

"ನಿಮ್ಮ ಹಣೆಯಲ್ಲಿ ಗೆರೆಗಳೂ ಕಣ್ಣಲ್ಲಿ ಕೆಂಪೂ ಕಾಣಿಸಿಕೊಳ್ಳುವಂತಾಗುವುದೇ ನಮಗೆ ಅವಮಾನ. ಕಪಿಸೈನ್ಯವು ನೀವು ಬರಬೇಕಾದಷ್ಟು ಅಸಾಧ್ಯರೇನಲ್ಲ; ನನಗೆ ಅಪ್ಪಣೆ ಕೊಡಿ, ಅವರ ಬಾಳ್ದಲೆಗಳನ್ನು ತರುತ್ತೇನೆ, ಅದಾಗದಿದ್ದರೆ ಹಸಿತಲೆಗಳನ್ನು ತರುತ್ತೇನೆ" ಎಂದು ತಂದೆಯ ಅಪ್ಪಣೆ ಪಡೆದು ಹೊರಟ.

ಬೆಟ್ಟಗಳೇ ಪರಮಾಣುಗಳು ಎಂಬ ಪ್ರಮಾಣದಲ್ಲಿ ಬ್ರಹ್ಮನು ನಿರ್ಮಿಸಿದ ತ್ರೈಲೋಕ್ಯಕಂಟಲಕವೆಂಬ ತನ್ನ ಭಾರಿ ಆನೆಯನ್ನೇರಿ, ಪ್ರಳಯಕಾಲದ ಬಿರುಗಾಳಿಯಂತೆ ಸುಗ್ರೀವ-ಪ್ರಭಾಮಂಡಲರನ್ನು ಎದುರಿಸಲೆಂದು ಇಂದ್ರಜಿತ್ತು ಬಂದ. "ಕಪಿಗಳಿಗೆ ಚಪಲತೆ ಸಹಜವಾದುದು; ಹಾಗಾಗಿ ದಶಕಂಧರನ ಪಾದಕಮಲಸೇವೆಯನ್ನು ಬಿಟ್ಟು ಹುಲುಮಾನವನಿಗೆ ಸೇವಕರಾದಿರಲ್ಲ! ನಿಮ್ಮ ನಿಮ್ಮ ಅಳವನ್ನು ಅರಿಯದೆ ನನ್ನೊಡನೆ ಪೋಣರ್ಕೆಗೆಂದು ಬಂದಿರಲ್ಲ, ಸಂಹರಿಸುವೆಡೆಯಲ್ಲಿ ನಿಮ್ಮನ್ನು ಕಾಪಾಡಬಲ್ಲವರು ಭೂಮಿಯ ಮೇಲೇ ಇಲ್ಲವಲ್ಲ!" ಎಂದು ಅವರನ್ನು ಕುರಿತು ಹೀಯಾಳಿಸಿದ. ಅದನ್ನು ಕೇಳಿ ಸುಗ್ರೀವನು, "ಕಾಳಗವನ್ನು ಬಿಟ್ಟು ಹೆಂಗಸರ ಜಗಳ ಮಾಡುವೆಯಲ್ಲ; ನಿನಗೆ ಪರಾಕ್ರಮವಿದ್ದರೆ ನಿನ್ನ ಕತ್ತಿಯನ್ನು ಬೀಸಿ ತೋರಿಸು" ಎಂದು ಅವನ ಮೇಲೆ ವಾಗ್ಬಾಣವನ್ನೆಸೆದ. ಈ ಪರಸ್ಪರ ಮೂದಲಿಕೆ ಸ್ವಲ್ಪ ಕಾಲ ನಡೆಯಿತು. ಪ್ರಭಾಮಂಡಲನ ಮೇಲೆ ದಶಮುಖಕುಮಾರನಾದ ಮೇಘವಾಹನನು ಪ್ರಳಯಕಾಲದ ಮೋಡದಂತೆ ಬಾಣಗಳ ಮಳೆಯನ್ನೇ ಸುರಿಸಿದ. ಆದರೆ ಅವಾರ್ಯವೀರ್ಯನಾದ ಜನಕಾತ್ಮಜನು ಅವನು ಬಿಟ್ಟ ಬಾಣಗಳನ್ನೆಲ್ಲ ತುಂಡರಿಸಿದ. ಆಗ ಮೇಘವಾಹನನು ಅಗ್ನಿಬಾಣವನ್ನು ಪ್ರಯೋಗಿಸಲು ಪ್ರಭಾಮಂಡಲನು ವರುಣಶರವನ್ನು ಬಿಟ್ಟು ಅದನ್ನು ನಂದಿಸಿದ. ಅಲ್ಲದೆ ಅವನ ರಥದ ಕುದುರೆ ಸಾರಥಿ ಧ್ವಜಗಳ ಮೇಲೆಲ್ಲ ಅಸ್ತ್ರಪ್ರಯೋಗ ಮಾಡಿ ಅವನ್ನೆಲ್ಲ ನುಚ್ಚುನುರಿಗೊಳಿಸಿದ. ವಿರಥನಾದ ದನುಜಸುತನು ನಾಗಾಸ್ತ್ರವನ್ನು ಬಿಡಲು, ಅದು ಅಹಿಬಂಧನವನ್ನು ಮಾಡಿ ಪ್ರಭಾಮಂಡಲನನ್ನು ಮೂರ್ಚೆಗೊಳಿಸಿತು. ಈ ಕಡೆ ಇಂದ್ರಜಿತುವು ಸುಗ್ರೀವನನ್ನು ವಿರಥನನ್ನಾಗಿಸಿ ಅವನ ಮೇಲೆ ತಾನೂ ಪನ್ನಗಾಸ್ತ್ರವನ್ನು ಬಿಟ್ಟ. ಆ ಫಣಿಸಾಯಕವು ಸುಗ್ರೀವನನ್ನು ಅಡಿಯಿಂದ ಮುಡಿಯವರೆಗೂ ಆವರಿಸಿ ಅವನನ್ನು ಮೈಮರೆಯುವಂತೆ ಮಾಡಿಬಿಟ್ಟಿತು. ದಾನವಸೈನ್ಯದಲ್ಲಿ ಎಲ್ಲೆಡೆ ಜಯದುಂದುಭಿಗಳು ಮೊಳಗಿದವು.

ಇತ್ತ, ಅಧಿಕಬಲರಾದ ಕುಂಭಕರ್ಣ-ಮಾರುತಿಯರು ಮಾಯಾಯುದ್ಧ ಹಾಗೂ ದಿವ್ಯಾಯುಧಪ್ರಯೋಗದಲ್ಲಿ ತೊಡಗಿದರು. ಖಚರಕುಲಾಗ್ರಣಿಯನ್ನು ವಿರಥನನ್ನಾಗಿ ಮಾಡಿದ ಅಸುರಕುಲಚೂಡಾಮಣಿಯು ಅಣುವನನ್ನು ಅಣುವಿನಂತೆ ಹಿಡಿದ. ಹೀಗೆ ನಾಗಪಾಶವಿದ್ಯೆಯಿಂದ ಸುಗ್ರೀವ ಪ್ರಭಾಮಂಡಲ ಹನುಮಂತ ಮುಂತಾದ ಮುಖ್ಯನಾಯಕರನ್ನು ಕಟ್ಟಿಹಾಕಲು, ಈ ವಿಷಯವನ್ನು ವಿಭೀಷಣನು ರಾಮಲಕ್ಷ್ಮಣರಿಗೆ ತಿಳಿಸಿ, ತನ್ನ ಸೈನ್ಯದೊಡನೆ ಕಾದಾಡುತ್ತಿರಬೇಕೆಂದೂ ತಾನು ಬಂಧಿತರನ್ನು ಕರೆತರುವುದಾಗಿಯೂ ಹೇಳಿ ಹೊರಟ. ಸಂಗರದಲ್ಲಿ ದೋರ್ಭಂಗವನ್ನು ಮಾಡುವೆನೆಂದು ಅಂಗಾರವನ್ನುಗುಳುವ ಸಿಡಿಲಿನಂತೆ ಅಂಗದನೂ ಕುಂಭಕರ್ಣನ ಮೇಲೆ ಏರಿ ಹೋದ. ಸಾಧಾರಣಾಸ್ತ್ರ ದಿವ್ಯಾಸ್ತ್ರಗಳ ಪ್ರಯೋಗವಾಯಿತು; ಕೊನೆಗೆ, ಶರಭವನ್ನು ಹಿಡಿದ

ಸಿಂಹವನ್ನು ಭೇರುಂಡವು ಸೆಳೆದುಕೊಳ್ಳುವಂತೆ ಅಂಗದನು ನಿಶಾಚರನ ಕರದಿಂದ ಹನುಮಂತನನ್ನು ಸೆಳೆದುಕೊಂಡ. ಆ ಕ್ಷಣವೇ ಅವನು ಆಗಸಕ್ಕೆ ನೆಗೆದು ಮಾರುತಿಯೊಡನೆ ರಘುಜನಲ್ಲಿಗೆ ಬಂದ.

ಈ ಕಡೆ, ವಿಭೀಷಣನು ಇಂದಗಿ–ಮೇಘವಾಹನರೊಡನೆ ಕಾಳಗಕ್ಕೆ ತೊಡಗಿದ. ಆದರೆ ಅವರು ತಮ್ಮ ಚಿಕ್ಕಪ್ಪನೊಡನೆ ಕಾದಲು ಇಷ್ಟಪಡದೆ, ಅವನ ಮುಂದೆ ಸೋಲಾದರೂ ತಮಗೆ ಕುಂದಲ್ಲವೆಂದು ಬಗೆದು ಹೊರಟು ಹೋದರು. ಇದರಿಂದ ನಾಗಶರಾವೃತರಾದ ಸುಗ್ರೀವಪ್ರಭಾಮಂಡಲರನ್ನು ಏನುಮಾಡಬೇಕೆಂದು ತೋಚದೆ ವಿಭೀಷಣನು ಗಲಿಬಿಲಿಗೊಂಡ. ಇಷ್ಟು ಹೊತ್ತಿಗೆ ರಘುಕುಲ ಪಕ್ಷಕ್ಕೆ ಸೋಲಾಗುವುದನ್ನು ಕಾಣಲು ಇಷ್ಟಪಡದವನಂತೆ ಸೂರ್ಯನು ಅಪರವಾರಿಧಿಯನ್ನು ಹೊಕ್ಕ. ದಶಾಸ್ಯನು ಅಪಹಾರತೂರ್ಯವನ್ನು ಘೋಷಿಸಿದ. ಎಲ್ಲರೂ ತಮ್ಮ ತಮ್ಮ ಬೀಡಿಗೆ ಹೋದರು.

ಇತ್ತ, ಪನ್ನಗಶರದಿಂದ ಮೂರ್ಚೆಗೆ ಸಂದ ಸುಗ್ರೀವ ಪ್ರಭಾಮಂಡಲರನ್ನು ಪಾರುಗಾಣಿಸುವ ಪರಿ ಯಾವುದೆಂದು ಲಕ್ಷ್ಮಣನು ಮುಕುಳಿತಾಂಜಲಿಯಾಗಿ ಬೆಸಗೊಳ್ಳಲು, ಹಿಂದೆ ವರವಿತ್ತ ದಿವಿಜನನ್ನು ನೆನೆದರೆ ಕ್ಷಣಮಾತ್ರದಲ್ಲಿ ಅವರ ಪ್ರಜ್ಞೆ ಮರಳುವುದೆಂದು ರಾಮನು ಸಲಹೆಯಿತ್ತ. ಲಕ್ಷ್ಮಣನು ಹಾಗೆಯೇ ಮಾಡಲು ಮಹಾಲೋಚನನೆಂಬ ನಿಲಿಂಪನಿಗೆ ಆಸನಕಂಪವಾಯಿತು. ತನ್ನನ್ನು ನೆನಸಿಕೊಳ್ಳುತ್ತಿರುವವನು ರಘುವೀರನೆಂಬುದು ಅವನಿಗೆ ಅವಧಿಜ್ಞಾನದಿಂದ ತಿಳಿಯಿತು. ಗರುಡಾಧಿಪನಾದ ಆ ದೇವತೆಯು ಬಹುವಿದ್ಯೆಗಳನ್ನು ಪಡೆದ ಸಿಂಹವಾಹಿನಿ–ಗರುಡವಾಹಿನಿಗಳನ್ನೂ ದಿವ್ಯಾಸ್ತ್ರಗಳನ್ನೂ ಕೊಡುವಂತೆ ತನ್ನ ಅನುಚರನಾದ ಚಿಂತಾವೇಗನಿಗೆ ಅಪ್ಪಣೆಮಾಡಿದ. ಅವನು ಬಂದು ಸಿಂಹವಾಹಿನಿಯನ್ನು ಶ್ರೀರಾಮನಿಗೂ, ಗರುಡವಾಹಿನಿಯನ್ನು ಲಕ್ಷ್ಮೀಧರನಿಗೂ ಸದ್ಭಾವದಿಂದ ತಲುಪಿಸಿದ. ಅವನನ್ನು ಉಚಿತ ಮರ್ಯಾದೆಗಳಿಂದ ರಾಮಲಕ್ಷ್ಮಣರು ಗೌರವಿಸಿದರು; ಜಿನಪೂಜೆಗೈದು ಹರ್ಷಪುಲಕಿತರಾದರು. ಅವರನ್ನು ನಿರ್ಭರಭಕ್ತಿಯಿಂದ ಸ್ತುತಿಗೈದು, ವಿನಮ್ರತೆಯಿಂದ ವರ್ಷ ವರುಣ ಅಗ್ನಿ ಮುಂತಾದ ನಾನಾ ಬಗೆಯ ದಿವ್ಯಾಸ್ತ್ರಗಳನ್ನೂ, ಬೆಳ್ಗೊಡೆ ಚಾಮರಗಳನ್ನೂ, ಸಿಂಹಗರುಡವಾಹಿನಿಗಳನ್ನೂ, ಕವಚಗಳನ್ನೂ, ಅನೇಕ ಬಗೆಯ ರತ್ನಭೂಷಣಗಳನ್ನೂ ರಾಮಲಕ್ಷ್ಮಣರಿಗಿತ್ತು ಚಿಂತಾವೇಗನು ಮನೋವೇಗದಿಂದ ಮರಳಿದ.

ಇದನ್ನು ಕಂಡು ಹನುಮಂತನೇ ಮುಂತಾದ ವಿದ್ಯಾಧರರಿಗೆಲ್ಲ ತುಂಬ ಅಚ್ಚರಿಯಾಯಿತು. ಆಮೇಲೆ, ಗರುಡವಾಹಿನಿಯ ತಮಪ್ರಭೆಯು ಸುತ್ತಲಿನ ಕತ್ತಲೆಯನ್ನು ಹೋಗಲಾಡಿಸಲು, ಅದರಿಂದ ಹೊಮ್ಮಿ ವೇಗವಾಗಿ ಬೀಸಿಬಂದ ಗಾಳಿಯಿಂದಾಗಿ ನಾಗಪಾಶವಿದ್ಯೆಯು ಸಡಿಲಗೊಂಡಿತು; ಸುಗ್ರೀವ ಪ್ರಭಾಮಂಡಲರು ಮೂರ್ಚೆ ತಿಳಿದೆದ್ದು ಪ್ರಸನ್ನಚಿತ್ತರಾಗಿ ರಾಮಲಕ್ಷ್ಮಣರಲ್ಲಿಗೆ ಬಂದರು. ಈ ಎಲ್ಲ ಸಾಧ್ಯವಾದ ಬಗೆಯನ್ನು ನಿರೂಪಿಸಬೇಕೆಂದು ಅವರು ಕೇಳಿಕೊಳ್ಳಲು ಶ್ರೀರಾಮನು ಎಲ್ಲವನ್ನೂ ವಿವರವಾಗಿ ತಿಳಿಸಿದ. ಎಲ್ಲರಿಗೂ ಸಂತಸವಾಯಿತು. ಆ ರಾತ್ರಿಯ ವಿಶ್ರಾಂತಿಗೆಂದು ಎಲ್ಲರೂ ಬೀ ಡಾರಗಳಿಗೆ ತೆರಳಿದರು.

* * * * *

# ೧೪. ರಘುವೀರ ವಿಜಯ

ಇಂದಿನ ಯುದ್ಧದಲ್ಲಿ ಸೂರ್ಯವಂಶಜನು ದನುಜನಿಗೆ ಸೋಲನ್ನುಂಟು ಮಾಡುವನೆಂದು ಹೆಚ್ಚಿದ ರಾಗದಿಂದ ಇನನು ಉದಯಶಿಖರಿಶೇಖರನಾದ. ಬೆಳಗಾಗಲು ದಶವದನನು ಎಂದಿನಂತೆ ರಣಭೂಮಿಗೆ ಬಂದು ಒಡ್ಡಿ ನಿಂತ. ಇತ್ತ ರಾಮಲಕ್ಷ್ಮಣರು ನಿತ್ಯನಿಯಮಗಳನ್ನು ಪೂರೈಸಿ ದೇವದತ್ತವಾದ ದಿವ್ಯಕವಚಗಳನ್ನು ಧರಿಸಿ ದಿವ್ಯಾಭರಣಭೂಷಿತರಾದರು. ದನುಸುತನು ತನ್ನನ್ನು ಕಿತ್ತನೆಂಬ ಮುಳಿಸಿನಿಂದ ಮೃಡಾದ್ರಿಯು ಸಿಂಹವಾಹಿನಿಯ ರೂಪಿನಿಂದ ರಘೂದ್ವಹನಿಗೆ ಸಹಾಯಕವಾಗಿ ಬಂದಿದೆಯೋ ಎಂಬಂತೆ ಹೊಳೆಯುವ ಬಂಡೆಗಳೆಂಬ ಕಣ್ಣುಗಳನ್ನುಳ್ಳ ಗುಹೆಯ ಅಗಲವಾದ ಬಾಯಿಯು ಭಯಂಕರವಾಗಿ ತೋರಿತು, ತುಂಗಶೃಂಗವು ಕೋರೆದಾಡೆಗಳಂತೆ ಕಂಡವು. ರೆಕ್ಕೆಗಳು ಪ್ರಳಯಕಾಲದ ಮೋಡಗಳಂತೆ, ಪಂಚವರ್ಣದ ಕಾಂತಿಯುಕ್ತ ದೇಹವು ನಡೆಯುವ ರೋಹಣಾಚಲದಂತೆ, ಕಣ್ಣುಗಳು ಹೊಳೆಯುವ ಸೂರ್ಯಬಿಂಬಗಳಂತೆ, ಕೊಕ್ಕು ಕಣ್ಣು ಕೋರೈಸುವ ಮಿಂಚಿನಂತೆ ಗರುಡವಾಹಿನಿಯು ಭೀಕರವಾಗಿ ಕಾಣಿಸುತ್ತಿತ್ತು. ಅಂತು ವಿಗುರ್ವಿಸುವ ಸಿಂಹ ಮತ್ತು ಗರುಡವಾಹನಗಳನ್ನೇರಿ, ಸಿಂಹಗರುಡಧ್ವಜಗಳನ್ನೆತ್ತಿ, ದೇವನಿರ್ಮಿತವಾದ ಬೆಳ್ಗೊಡೆಗಳನ್ನು ಹಿಡಿಸಿ, ಸುಗ್ರೀವ ಪ್ರಭಾಮಂಡಲ ಮಾರುತಿ ವಿಭೀಷಣ ಮುಂತಾದ ಎಲ್ಲ ವಿದ್ಯಾಧರರು ಸುತ್ತುವರೆದಿರಲು ರಾಮಲಕ್ಷ್ಮಣರು ಸಂಗ್ರಾಮಭೂಮಿಗೆ ಬಂದು ರಾವಣಸೈನ್ಯಕ್ಕೆದುರಾಗಿ ನಿಂತರು.

ಯುದ್ಧ ಶುರುವಾಗಿ ಎರಡೂ ಕಡೆಯು ಭಯಂಕರವಾಗಿ ಕಾದಿದವು. ಕತ್ತರಿಸಿದ ತಲೆಗಳು, ನೆತ್ತರ ಕಾರಂಜಿ, ಕೋಳ್ಮಿದುಳ ರಾಶಿ, ಹರಡಿದ ಕೊಬ್ಬು ಇವು ಸಮರಾವನಿಯಲ್ಲಿ ತುಂಬಿಹೋದವು. ಆನೆಗಳ ದಂಡು, ಯೋಧರು ಕುದುರೆಸವಾರರು ರಥಿಕರು ಒಟ್ಟೊಟ್ಟಿಗೇ ನಾಶವಾಗುವಂತೆ ಈರೊಡ್ಡುಗಳೂ ಬಿರುಗಾಳಿಗೆ ಸಿಲುಕಿದ ಮೋಡಗಳ ರಾಶಿಯಂತಾದವು. ಕೆಲವರು ಎಂಥ ಪರಿಸ್ಥಿತಿಯಲ್ಲಿಯೂ ಧೈರ್ಯವಾಗಿ ಕಾದಿದ ದೃಶ್ಯವು ಅದ್ಭುತವಾಗಿತ್ತು. ವಾನರಸೇನೆಯು ದಾನವಸೇನೆಯನ್ನು ಧ್ವಂಸಮಾಡಲು ತೊಡಗಿದಾಗ ಪಂಚಾನನದಂತೆ ಗರ್ಜಿಸುತ್ತ ದಶಾನನನು ಏರಿ ಬರಲು ಕಪಿಧ್ವಜಿನಿಯು ಬೆಚ್ಚಿತು; ಆದರೆ ವಿಭೀಷಣನು ಯಮಕಿಂಕರನಂತೆ ಮುಂದೆ ಬಂದು ತಾಗಿದ. ಅವನನ್ನು ಕಂಡು ರಾವಣನು, "ನನ್ನೊಡನೆ ಹುಟ್ಟಿಯೂ ಖೇಚರ ಕುಲಕ್ಕೆ ಕಂಟಕಪ್ರಾಯನಾಗಿ ಹುಲುಮನುಜರಲ್ಲಿ ಕಿಂಕರಭಾವವನ್ನು ತಳೆದೆ; ನಿನ್ನನ್ನು ಕಂಡು ಎಲ್ಲರೂ ನಗುವಂತಾಯಿತು. ಅಕ್ಷೂಣವಾದ ಸಿರಿ, ದಕ್ಷಿಣ

ಭರತಖಂಡದ ಧರೆ, ಯುವರಾಜಪದವಿಯ ಛತ್ರಚಾಮರಗಳನ್ನು ಧಿಕ್ಕರಿಸಿ ಮಾನವನಿಗೆ ಆಳಾದೆ. ಅಸುರೇಂದ್ರತನುಜನಾದ ನಾನು ಗೋತ್ರವಧೆಗೆ ತೊಡಗುವವನಲ್ಲ; ಆದ್ದರಿಂದ ನನ್ನ ಕಣ್ಮುಂದಿನಿಂದ ಬೇಗ ತೊಲಗು" ಎಂದು ಮೂದಲಿಸಿದ. ಇದರಿಂದ ವಿಭೀಷಣನ ಸಿಟ್ಟು ನೆತ್ತಿಗೇರಿತು. ಅದನ್ನು ತಡೆದುಕೊಳ್ಳುತ್ತ, "ಹಿತವಚನವನ್ನು ನುಡಿದಾಗ ನೀನು ನನ್ನನ್ನು ಹೊರಹಾಕಿದೆಯಲ್ಲ, ಅಂದೇ ನಿನ್ನ ಸುಧರ್ಮಿಕೆಯೂ ಪ್ರೀತಿಯೂ ಕೊನೆಗಂಡಿತು. ಇನ್ನಾದರೂ, ಇಂದ್ರವಂಶಕ್ಕೆ ತಗದ ಪರಪ್ರೇಯಸೀಮೋಹದ ನೀಚತನವನ್ನು ತೊರೆದು, ನಿನಗೂ ನಿನ್ನ ವಂಶಕ್ಕೂ ಅಕಾಲಮೃತ್ಯುವುಂಟಾಗದಂತೆ ರಾಮಸ್ವಾಮಿಗೆ ಜಗನ್ಮಾತೆಯನ್ನು ಒಪ್ಪಿಸಿ ಸಾಮ್ರಾಜ್ಯಪದವಿಯಲ್ಲಿ ಹದುಳದಿಂದ ನೆಲೆಗೊಳ್ಳು" ಎಂದು ಗರ್ಜಿಸಿದ. ಕೋಪದಿಂದ ಹಣೆಯಲ್ಲಿ ಗೆರೆಗಳು ಮೂಡಲು, ತನ್ನ ಬಿಲ್ಲಿಗೆ ಬಾಣವನ್ನು ಹೂಡಿ ಬಿಟ್ಟಾಗ ಕೀರ್ತಿಪತಾಕೆಯ ದಂಡದಂತೆ ರಾವಣನ ಪತಾಕಾದಂಡವು ಮುರಿದು ಬಿತ್ತು. ಅಲ್ಲದೆ ವಿಭೀಷಣನು ದಶಾನನನ ಶರಾಸನವನ್ನುಡಿದ. ಆಗ ಅದಕ್ಕುತ್ತರವಾಗಿ ಮದಮದಿರೋನ್ಮಾದವಶನಾದ ರಾವಣನು ಸೋದರನ ಬಿಲ್ಲು ಮುರಿಯುವಂತೆ ಬಾಣ ಬಿಟ್ಟ.

ಹೀಗೆ ತಂದೆಚಿಕ್ಕಪ್ಪಂದಿರು ಕಾದಾಡಲು ಇಂದಗಿಯು ತಂದೆಯ ಪಕ್ಷ ವಹಿಸಿದ; ಒಂದು ಮರದ ತೊಗಟೆ ಬೇರೊಂದು ಮರಕ್ಕೆ ಹತ್ತುವುದೇ! ಈ ರೀತಿ ನಡುವೆ ಬಂದ ಇಂದ್ರಜಿತ್ತುವಿಗೂ ವಿಭೀಷಣನಿಗೂ ಕಾದಾಟವಾಗಲು, ಲಕ್ಷ್ಮಣನು ತನ್ನ ರಥವನ್ನು ಇಂದಗಿಯ ರಥಕ್ಕೆದುರಾಗಿ ನಿಲ್ಲಿಸಿದ. ಅವರಿಬ್ಬರಿಗೆ ಕದನವುಮ್ಮಳಿಸಲು, ಇತ್ತ ರಾಘವನು ಸುಭಟೋತ್ತಮನಾದ ಕುಂಭಕರ್ಣನೊಡನೆ ಬಿಲ್ಗಾಳಗಕ್ಕಿಳಿದ. ಅಷ್ಟರಲ್ಲಿ ಪ್ರಳಯಸಮರ್ಥನಾದ ಕೃತಾಂತನಂತೆ ಹನುಮಂತನು ಕುಂಭಕರ್ಣನೊಡನೆ, ಕಿಷ್ಕಿಂಧನು ಕೇತುವಿನೊಡನೆ, ಪ್ರಭಾಮಂಡಲನು ಮೇಘವಾಹನನೊಡನೆ, ವಿರಾಧಿತನು ಮಯನೊಡನೆ, ಊರ್ಜಿತನು ದೃಢರಥನೊಡನೆ, ಅಂತೆಯೇ ಇನ್ನುಳಿದವರು ತಮಗೆ ಅನುರೂಪರಾದ ವೀರರೊಡನೆ ಬಿಲ್ವೊಯ್ದರು. ಬಹುಕಬಂಧನರ್ತನಪ್ರಬಂಧದಂತೆ ಆಜಿಯು ಅದ್ಭುತವೂ ಭಯಂಕರವೂ ಆಯಿತು. ಲಕ್ಷ್ಮಣನೊಡನೆ ಸಾಧಾರಣಶರಸಂದೋಹದಿಂದ ಕಾದಲು ಸಾಧ್ಯವಾಗದೆ ಇಂದಗಿಯು ದಿವ್ಯಾಸ್ತ್ರಗಳ ಶರಧಿಗೆ ಕೈಹಾಕಿದ. ಒಂದೊಂದಾಗಿ ದಿವ್ಯಶರಗಳನ್ನು ಪ್ರಯೋಗಿಸಲು ಲಕ್ಷ್ಮಣನು ವಿಲಯಕಾಲದಿಂದುಗಿವ ಮಿಂಚಿನಂತೆ ಕೆಂಗಣ್ಣು ಮಾಡಿಕೊಂಡು ಕತ್ತಲಬಾಣವನ್ನು ನೇಸರಬಾಣದಿಂದ, ಉಗ್ರವಾದ ಸರ್ಪಶರವನ್ನು ಗರುಡಾಸ್ತ್ರದಿಂದ ಕತ್ತರಿಸಿ ಹಾಕಿ ಅವನನ್ನು ಗೆದ್ದ. ಇಂದಗಿಯನ್ನು ವಿರಥನನ್ನಾಗಿ ಮಾಡಿ, ನಾಗಪಾಶದಿಂದ ಕಟ್ಟಿ ಅವನನ್ನು ವಿರಾಧಿತನ ಕೈಲಿ ಬೀಡಿಗೆ ಕಳಿಸಿಕೊಟ್ಟ.

ಇತ್ತ, ರಾವಣನ ನೇರ ತಮ್ಮನಂತೆಯೇ ಕುಂಭಕರ್ಣನು ರಾಮನೊಡನೆ ಯುದ್ಧದಲ್ಲಿ ತೊಡಗಿದ. ಕೊನೆಗೆ ಅವನನ್ನು ಕೊನೆಗೊಳಿಸಲು ನಿರ್ಧರಿಸಿ ರಾಘವನು ದಿವ್ಯಶರವನ್ನು ತುಡುಕಿದ. ಶ್ರೀರಾಮನು ಸಾಮಾನ್ಯವಾದ ಬಾಣವನ್ನು ಬಿಟ್ಟಾಗಲೇ ಎದುರಿಸುವವರು ಯಾರೂ ಇಲ್ಲ ಎನ್ನಬೇಕಾದರೆ, ದಿವ್ಯಾಸ್ತ್ರವನ್ನು ತೊಟ್ಟರೆ ಕುಲಪರ್ವತವೇ ನಡುಗಿಬಿಡುತ್ತದೆ, ದಿಕ್ಕರಿಸ್ತೋಮವು ಬಾಯ್ಬಿಟ್ಟು ಹಿಮ್ಮೆಟ್ಟುತ್ತವೆ, ಇನಬಿಂಬವು ಭೂಮಿಗೆ ಇಳಿದುಬಿಡುತ್ತದೆ!

ರಾಮನ ಬಾಣಗಳು ಕುಂಭಕರ್ಣನ ಕವಚ ಕೋದಂಡ ಪತಾಕಾದಂಡಗಳನ್ನು ಮುರಿದವು; ಕುಂಭಕರ್ಣನು ವಿರಥನಾಗಿ ನೆಲಕ್ಕುರುಳಿ ರಜೋಮಯನಾದ; ಅವನನ್ನು ರಘುಸುತನು ನಾಗಪಾಶಕ್ಕೊಳಪಡಿಸಿ ಕುಂಭಕರ್ಣನನ್ನು ಪ್ರಭಾಮಂಡಲನಿಗೊಪ್ಪಿಸಿದ. ಪ್ರಭಾಮಂಡಲನು ಮೇಘವಾಹನನನ್ನು ನಾಗಪಾಶದಲ್ಲಿ ಕಟ್ಟಿ ಕುಂಭಕರ್ಣನೊಡನೆ ಬೀಡಿಗೆ ಕರೆದೊಯ್ದ.

ಈ ಕಡೆ, ನಿಡುಗಾಲ ತನ್ನೊಡನೆ ಹೋರಾಡುತ್ತಲಿದ್ದ ವಿಭೀಷಣನನ್ನು ಕೊಲ್ಲಬಯಸಿದ ರಾವಣನು ಅವನ ಮೇಲೆ ಶೂಲಾಯುಧವನ್ನು ಪ್ರಯೋಗಿಸಿದ. ಅದು ಲಯಕಾಲದ ಕಾಳೋರಗದಂತೆ ಬರಲು, ಅದನ್ನು ಕಂಡ ಲಕ್ಷ್ಮಣನು ಅದನ್ನು ಮಾರ್ಗಮಧ್ಯದಲ್ಲಿಯೇ ತುಂಡುಗೈದ; ಆನಂತರ ವಿಭೀಷಣನನ್ನು ಮರೆಮಾಡಿ ತಾನೇ ರಾವಣನನ್ನೆದುರಿಸಿದ. ಅದನ್ನು ಕಂಡು ರಾವಣನು, “ನೀನೇನೋ ಶೂಲಾಯುಧದಿಂದ ವಿಭೀಷಣನನ್ನು ಪಾರುಮಾಡಿದೆ, ಆದರೆ ನಿನ್ನನ್ನಾರು ಕಾಯುವವರು?” ಎಂದು ದಿವ್ಯಶಕ್ತಿಯನ್ನು ಅಭಿಮಂತ್ರಿಸಿ ಲಕ್ಷ್ಮೀಧರನ ಮೇಲೆ ಬಾಣಪ್ರಯೋಗಿಸಿದ. ಅದು ವಿಷಸರ್ಪದ ಹಲ್ಲಿನಂತೆ, ಯಮನ ದಾಡೆಯಂತೆ, ಪ್ರಳಯಾಗ್ನಿಯ ನಾಲಗೆಯಂತೆ, ಕಡಲನ್ನು ಕುಡಿಯ ಹೊರಟ ಬಡಬಾಗ್ನಿಯಂತೆ ರೌದ್ರರೂಪನ್ನು ತಳೆದು ಕಪಿಧ್ವಜರೆಲ್ಲ ನಡುಗುವಂತೆ ಮುನ್ನಡೆದು ಜನಾರ್ದನನ ವೀರವಕ್ಷದಲ್ಲಿ ನಾಟಿಕೊಂಡಿತು. ಸಮರವಿಜಯಾಂಗನೆಯ ಕೂಟದಿಂದಾದ ಆಯಾಸದಿಂದ ನಿದ್ರೆ ಹೋದಂತೆ ತಕ್ಷಣ ಲಕ್ಷ್ಮಣನು ಮೂರ್ಛೆಗೆ ಸಂದ. ಬಿದ್ದವನನ್ನು ಇರಿಯಬಾರದೆಂಬ ನಿಯಮಪಾಲಕನಾದ ರಾವಣನು ಅವನ ಮೇಲೆ ಕೈಮಾಡಲಿಲ್ಲ.

ದಾನವಸೈನ್ಯದಲ್ಲಿ ಸಮುದ್ರಘೋಷದಂತೆ ಉಂಟಾದ ಜಯಧ್ವನಿಯೊಡನೆ ಬಂದ ಲಕ್ಷ್ಮಣನ ಮೂರ್ಛೆಯ ವಿಷಯವನ್ನು ಕೇಳಿ ರಾಮನು ಕೆಂಡಾಮಂಡಲನಾದ; ಕುಲಶೈಲವನ್ನೇ ಕಿತ್ತುಬಿಡಲೋ, ಕಡಲನ್ನೇ ಕುಡಿದುಬಿಡಲೋ, ಚಂದ್ರಸೂರ್ಯರನ್ನು ನೆಲಕ್ಕುದುರಿಸಲೋ, ನೆಲವನ್ನೇ ಆಗಸಕ್ಕೆತ್ತಿಬಿಡಲೋ ಎಂದು ಘೂರ್ಣಿಸುತ್ತ ರಾವಣನಲ್ಲಿ ಯುದ್ಧಕ್ಕಿಳಿದ. ರಾವಣನ ಬಿಲ್ಲುಬಾಣ ಪತಾಕೆ ವಜ್ರಕವಚ ಸಾರಥಿ ರಥ ಕುದುರೆಗಳನ್ನು ಕ್ಷಣಾರ್ಧದಲ್ಲಿ ಕಡಿಖಂಡಮಾಡಿ, ದಿವ್ಯಾಸ್ತ್ರವನ್ನು ಬಿಟ್ಟು ರಾವಣನನ್ನು ಏಳು ಬಾರಿ ವಿರಥನನ್ನಾಗಿಸಿದ. ಆದರೂ ರಾವಣನ ಕವಚ ಹರಿಯಲಿಲ್ಲ, ಅವನ ದೇಹದಲ್ಲಿ ಗಾಯಗಳಾಗಲಿಲ್ಲ. ‘ಕುಲಾದ್ರಿಯನ್ನೇ ಸೀಳಿಬಿಡುವ ತನ್ನ ದಿವ್ಯಶರಗಳು ಇವನ ದೇಹವನ್ನು ಸ್ವಲ್ಪವೂ ಗಾಸಿಗೊಳಿಸಲಿಲ್ಲವಲ್ಲ; ಇವನು ಅಲ್ಪಾಯುವಿನಂತೆ ಕಾಣ!’ ಎಂಬ ಆಶ್ಚರ್ಯವು ರಾಮನನ್ನಾವರಿಸಿತು. ಅಷ್ಟರಲ್ಲಿ, ಇನವಂಶೋದ್ಭವನಾದ ಲಕ್ಷ್ಮಣನ ಮೂರ್ಛೆಯ ತೀವ್ರತೆಯನ್ನು ತಗ್ಗಿಸಲು ಮನುವಂಶನಿಗೆ ಈ ರಾತ್ರಿ ಅನುವು ಮಾಡಿಕೊಡುವೆನೆಂಬಂತೆ ದಿನಾಧಿನಾಥನು ಅಪರಾಂಬುಧಿಗಿಳಿದ. ಎರಡು ಕಡೆಗಳಲ್ಲಿಯೂ ಅಪಹಾರತೂರ್ಯಗಳು ಧ್ವನಿಗೈದವು.

ರಾವಣನ ಮನಸ್ಸಿನಲ್ಲಿ ಹರ್ಷವಿಷಾದಗಳ ಮಿಶ್ರಭಾವ: ಮಹಾಬಲನಾದ ಒಬ್ಬ ವೈರಿಯನ್ನು ಸೋಲಿಸಿದ ಉತ್ಸಾಹ, ಆದರೆ ಮಕ್ಕಳಾದ ಇಂದಗಿಮೇಘವಾಹನರನ್ನೂ ತಮ್ಮ ಕುಂಭಕರ್ಣನನ್ನೂ ಶತ್ರುಗಳು ಸೆರೆವಿಡಿದ ಉಬ್ಬೆಗ. ಹಾಗೆಯೇ ಲಂಕೆಗೆ ಮರಳಿದ. ಇತ್ತ, ದಾಶರಥಿಯು ಮೂರ್ಛಿತನಾಗಿದ್ದ ತಮ್ಮನನ್ನು ಕಂಡು ತಾನೂ ಮೂರ್ಛೆವೋದ. ಕೆಲಕಾಲಾನಂತರ ಎಚ್ಚೆತ್ತ ಅವನ ಚಿತ್ತ ವಿಹ್ವಲಕ್ಕೊಳಗಾಗಿತ್ತು. ಲಕ್ಷ್ಮಣನನ್ನು ಮುಟ್ಟಲು

ಮುಂದಾದ. ಆಗ ಜಾಂಬವ ಸುಷೇಣ ಮೊದಲಾದವರು, ದಿವ್ಯಶಸ್ತ್ರದಿಂದಾದ ವೇದನೆ ಕರಸ್ಪರ್ಶದಿಂದ ಹೆಚ್ಚುವುದೆಂದು ತಿಳಿಸಿ ಮುಟ್ಟದಿರಲು ಸೂಚಿಸಿದರು. "ನೀವು ಉದ್ವೇಗಗೊಳ್ಳಬಾರದು, ಸೌಮಿತ್ರಿಯು ಎಂಟನೆಯ ವಾಸುದೇವ; ಅಪಾಯವಾಗುವುದು ಈತನಿಂದ ರಾವಣನಿಗೇ ಹೊರತು, ಅವನಿಂದ ಈತನಿಗಲ್ಲ; ಈಗ ಮೂರ್ಚೆ ತಿಳಿದೇಳುವಂತೆ ಔಷಧಿಯನ್ನು ಮಾಡೋಣ" ಎಂದು ಅವರೆಲ್ಲ ರಾಘವನನ್ನು ಸಮಾಧಾನಪಡಿಸಿದರು.

ಸುಗ್ರೀವನು ಲಕ್ಷ್ಮಣನ ಸುತ್ತಲಿದ್ದ ಭೂಮಿಯನ್ನು ಸಮಗೊಳಿಸಿ, ತನ್ನ ವಿದ್ಯಾಬಲದಿಂದ ಏಳು ಪೌಳಿಗಳನ್ನು ನಿರ್ಮಿಸಿದ; ಅವುಗಳ ಒಳಹೊರಗೆ ವಿದ್ಯಾಧರರನ್ನು ಕಾವಲಿಗೆ ನೇಮಿಸಿದ. ಮೊದಲ ಬಾಗಿಲಲ್ಲಿ ಪ್ರಭಾಮಂಡಲ, ಎರಡನೆಯದರಲ್ಲಿ ಅಂಗದ, ಮೂರನೆಯದರಲ್ಲಿ ವಿಭೀಷಣ, ನಾಲ್ಕನೆಯದರಲ್ಲಿ ಕುಮುದ, ಐದನೆಯ ಬಾಗಿಲಲ್ಲಿ ಸುಷೇಣ, ಆರನೆಯದರಲ್ಲಿ ಹನುಮಂತ, ಏಳನೆಯದರಲ್ಲಿ ನೀಲ – ಇವರುಗಳನ್ನು ನೇಮಿಸಿದ. ಅವರೆಲ್ಲ ಅಸಂಖ್ಯಾತಬಲಸಮೇತರಾಗಿ ಕಾವಲು ನಿಂತರು. ಪ್ರಾಕಾರದೊಳಗಣ ಮಣಿಮಂಟಪದ ಪೂರ್ವದ ಬಾಗಿಲಲ್ಲಿ ಶರಭನೂ, ಪಶ್ಚಿಮದ ಬಾಗಿಲಲ್ಲಿ ಚಂದ್ರಮರೀಚಿ, ಉತ್ತರದ್ವಾರದಲ್ಲಿ ಜಾಂಬವ, ದಕ್ಷಿಣದ್ವಾರದಲ್ಲಿ ಮಹೇಂದ್ರರು ಅಪಾರ ವೀರಭಟಸಹಿತ ಲಕ್ಷ್ಮಣನ ಕಾಪಿಗೆಂದು ನಿಂತರು. ಇತ್ತ ರಾವಣನ ಮನಸ್ಸಿನಲ್ಲಿ ಚಿಂತೆ ತುಂಬಿಕೊಂಡಿತ್ತು: ಈ ರಾತ್ರಿ ಲಕ್ಷ್ಮಣನು ಸಾಯದಿರಲಾರ; ಹಾಗಾದರೆ ಆ ಕಡೆಯವರು ಸೆರೆಯಾಳುಗಳನ್ನಾಗಿ ಒಯ್ದಿರುವವರನ್ನು ಕೊಲ್ಲದೆ ಇರರು. ಇದಕ್ಕೇನು ಮಾಡಬೇಕೆಂಬ ಯೋಚನೆ ಅವನದು.

ಲಕ್ಷ್ಮೀಧರನು ಶಕ್ತಿಪ್ರಹಾರದಿಂದ ಮೂರ್ಚೆಗೊಂಡ ವಿಷಯ ಸೀತೆಗೆ ತಿಳಿಯಿತು; ಅವಳ ಮನಸ್ಸು ಶೋಕಾನಲದಿಂದ ಬೆಂದುಹೋಯಿತು. 'ದಿವ್ಯಾಯುಧದ ಹೊಡೆತದಿಂದ ನಿನಗೆ ವಿಪತ್ತು ಸಂಭವಿಸಿತು; ಧಾತ್ರಿಗೆ ನೀನೇ ಒಡೆಯನಾಗುವೆಯೆಂಬ ಭರವಸೆ ಎತ್ತ ಹೋಯಿತು, ಮನುಕುಲತಿಲಕಾ! ರಾವಣನೇ ಸಾಯುತ್ತಾನೆಂದು ಕೇವಲಿಗಳು ಹೇಳಿದ್ದರಲ್ಲ, ಅದು ಹುಸಿಯಾದುದೇ, ಸಿದ್ಧಶಿಲೆಯನ್ನೆತ್ತಿದ ಶೌರ್ಯಾವಷ್ಟಂಭಾ!' ಎಂದು ನಾನಾ ವಿಧವಾಗಿ ಪ್ರಲಾಪಗೈದಳು. ಅವಳನ್ನು ವಿನೀತೆಯೆಂಬ ಖಚರಕಾಂತೆ ಸಂತೈಸಿ, "ನಿಮ್ಮ ಮೈದುನನು ವಾಸುದೇವನಾಗಿರುವುದರಿಂದ ಪ್ರತಿವಾಸುದೇವನಿಂದ ಸಾವನ್ನು ಹೊಂದಲು ಸಾಧ್ಯವಿಲ್ಲ" ಎಂದು ಆಶ್ವಾಸನೆಯಿತ್ತಳು. ಒಬ್ಬ ಗಗನಚರನು ತನ್ನ ಹೊಳೆಯುವ ಭೂಷಣಾವಳಿಗಳಿಂದ ಕೂಡಿ ತ್ವರೆಯಿಂದ ಬಂದು ಬೀಡನ್ನು ಹೊಗಲು ಪ್ರಯತ್ನಿಸಿದ; ಅವನನ್ನು ಕಾವಲುಗಾರರು ತಡೆದರು. ಆಗ ಅವನು, ತಾನು ರಥನೂಪುರಚಕ್ರವಾಳಪುರದಿಂದ ಬಂದ ಜನಕನ ದೂತ, ಕಾಳಗದ ವಾರ್ತೆಯನ್ನು ನೇರವಾಗಿ ತಿಳಿದು ಬರಲು ಬಂದಿದ್ದೇನೆ ಎಂದಾಗ ಅವನನ್ನು ಒಳಗೆ ಬಿಟ್ಟರು. ಅವನು ಪ್ರಭಾಮಂಡಲನನ್ನು ಕಂಡು ಲಕ್ಷ್ಮಣನ ಮೂರ್ಚೆಯ ವಿಷಯವನ್ನು ಅರಿತ. ದಿವ್ಯಾಯುಧದಿಂದ ಲಕ್ಷ್ಮಣನಿಗಾದ ಅಪಾಯವನ್ನು ಪರಿಹರಿಸುವ ಉಪಾಯ ತನಗೆ ತಿಳಿದಿದೆಯೆಂದು ನುಡಿದ. ಪ್ರಭಾಮಂಡಲನಿಗೆ ಇದನ್ನು ಕೇಳಿ ಸಂತಸವಾಯಿತು; ದೂತನನ್ನು ಶ್ರೀರಾಮನ ಬಳಿಗೆ ಕರೆದೊಯ್ದ. ಅವನಿಗೆ ಸಾಷ್ಟಾಂಗಪ್ರಣತನಾಗಿ, ಲಕ್ಷ್ಮೀಧರನಿಗೆ ಯಾವ ಅಪಾಯವೂ ಸಂಭವಿಸದೆಂದೂ ತನ್ನ ಮಾತನ್ನು ಕೇಳಿಸಿಕೊಳ್ಳಬೇಕೆಂದೂ ಬಿನ್ನವಿಸಿಕೊಂಡ:

ತಮ್ಮದು ದೇವನೀತಪುರ, ತನ್ನ ತಂದೆ ಶಶಿಮಂಡಲನೆಂಬ ಖೇಚರ, ತನ್ನ ಹೆಸರು ಅತಿಚಂದ್ರ; ತಾನೊಮ್ಮೆ ಉತ್ಸಾಹದಿಂದ ವಾಯುಪಥದಲ್ಲಿ ವಿಹರಿಸುತ್ತಿರುವಾಗ ಹಗೆಯಾದ ಸಹಸ್ರವಿಜಯನು ತನ್ನ ಮೇಲೆ ದಾಳಿ ಮಾಡಿದ; ತಮ್ಮಿಬ್ಬರಲ್ಲಿ ಬಹಳ ಹೊತ್ತು ಕದನ ನಡೆಯಿತು; ಅವನ ಶಕ್ತಿಪ್ರಹಾರದಿಂದ ತಾನು ಬಸವಳಿದು ಆಗಸದಿಂದ ಸಾಕೇತಪುರದ ಮಹೇಂದ್ರೋದ್ಯಾನದ ವನದ ಒಂದು ತಣ್ಣನೆಯ ಜಾಗದಲ್ಲಿ ಬೀಳಲು, ಅಷ್ಟು ಹೊತ್ತಿಗೆ ಅಲ್ಲಿಗೆ ತನ್ನ ಪುಣ್ಯವಶದಿಂದ ಭರತನು ಬಂದು, ಮೂರ್ಛೆ ಹೋಗಿದ್ದ ತನ್ನನ್ನು ಕರುಣೆಯಿಂದ ನೋಡಿ ದಿವ್ಯ ಸುಗಂಧಭರಿತವಾದ ನೀರನ್ನು ತರಿಸಿ ತನ್ನ ಮೇಲೆ ಚುಮುಕಿಸಿದ; ಆಗ ಶಕ್ತಿಯ ಶಕ್ತಿ ಹೊರಹೋಗಿ ತಾನು ಮೂರ್ಛೆಯಿಂದ ಎದ್ದ; ಆನಂತರ ಕೆಲವು ಪರಿಜನರೊಡನೆ ಭರತನನ್ನು ಕಂಡು, ಗಂಧಸಲಿಲಕ್ಕೆ ಅಷ್ಟು ಸಾಮರ್ಥ್ಯ ಬರಲು ಕಾರಣವನ್ನು ಕೇಳಿದಾಗ ಭರತನು ಹೀಗೆಂದ: ತಮ್ಮ ಊರಿಗೆ ಮಾರಿಗುತ್ತ ಮುಂತಾದ ನಾನಾ ಆಗಂತುಕ ಪೀಡೆಗಳು ಬರಲು ಅವುಗಳಿಗೆ ತಮಗೆ ಪರಿಹಾರ ಗೊತ್ತಾಗಲಿಲ್ಲ; ತಮ್ಮ ಕಷ್ಟವನ್ನು ಮಾವನಾದ ದ್ರೋಣಮೇಘನು ಕೇಳಿ ಬಂದು ಗಂಧೋದಕವನ್ನು ತಳಿದ; ಬಹು ಬೇಗನೆ ಬಂದ ಪೀಡೆಗಳೆಲ್ಲ ತೊಲಗಲು ಭರತನಿಗೆ ಆಶ್ಚರ್ಯವಾಗಿ ದ್ರೋಣಮೇಘನನ್ನು ಬೆಸಗೊಳ್ಳಲು ಆಗ ಅವನು ಹೀಗೆಂದನಂತೆ: ನಾನಾ ವ್ಯಾಧಿಗಳಿಂದ ತನ್ನ ಹೆಂಡತಿಯು ನಮೆಯುತ್ತಿದ್ದು ಬಸಿರಿಯಾದಾಗ ಎಲ್ಲ ಮಾಯವಾಗಿ ಒಂದು ಹೆಣ್ಣುಕೂಸನ್ನು ಹೆತ್ತಳು; ಅದಕ್ಕೆ ವಿಶಲ್ಯಸುಂದರಿಯೆಂದೇ ಹೆಸರಿಟ್ಟರಂತೆ; ಅವಳು ಸ್ನಾನಮಾಡಿದ ನೀರಿನಿಂದ ತಮ್ಮ ನಾಡಿನ ವ್ಯಾಧಿಗಳೆಲ್ಲ ತೊಲಗಿದುವೆಂದು ಹೇಳಿದನಂತೆ; ಭರತನ ಈ ವಿವರಣೆಯನ್ನು ಕೇಳಿ ತನಗೆ ತುಂಬ ಕುತೂಹಲವುಂಟಾಗಿ ಆ ಮಗಳಿಗೆ ಈ ಶಕ್ತಿ ಬಂದ ಕಾರಣವನ್ನು ಹೇಳಲು ಕೇಳಿಕೊಂಡಾಗ ಅವನು ಹೇಳಿದ:

ಪೂರ್ವವಿದೇಹದ ಪುಂಡರೀಕಿಣೀ ಪುರದ ಅರಸು ತ್ರಿಭುವನಾನಂದ ಚಕ್ರವರ್ತಿ; ಅವನ ಮಗಳು ಅನಂಗಶರೆ ಎನ್ನುವವಳು. ಒಮ್ಮೆ ಕೇಳೀವನದೊಳಗೆ ವಿಹರಿಸುತ್ತ ಬರುತ್ತಿರಲು, ಪುಷ್ಕಳಾವತೀ ನಾಡಿನ ವಿಜಯಾರ್ಧಗಿರಿಯ ಪ್ರತಿಷ್ಠಾಪುರದ ರಾಜ ಪುನರ್ವಸು ಎಂಬ ಹೆಸರಿನ ವಿದ್ಯಾಧರನು ಅವಳನ್ನು ಕಂಡು ಮದನಶರಶಲಾಕಾ ಕೀಲಿತಹೃದಯನಾದ; ತಕ್ಷಣವೇ ಅವಳನ್ನು ತನ್ನ ವಿಮಾನದಲ್ಲಿ ಕುಳ್ಳಿರಿಸಿಕೊಂಡು ನಭಕ್ಕೆ ನೆಗೆದ. ತ್ರಿಭುವನಾನಂದನಿಗೆ ಈ ವಿಷಯ ತಿಳಿದು ಕೋಪವಶನಾಗಿ ಹಲವಾರು ಮಂದಿ ವಿದ್ಯಾಧರರನ್ನು ಅವನ ಮೇಲೆ ಎತ್ತಿ ಕಟ್ಟಿದ. ಅವರ ಜೊತೆ ಕಾದಿದ ಪುನರ್ವಸುವು ಕೊನೆಗೆ ಬಸವಳಿದು ಅನಂಗಶರೆಯನ್ನು ಲಘುಪರ್ಣವಿದ್ಯೆಯಿಂದ ನೆಲಕ್ಕಿಳಿಸಿ ಹೋದ. ಅವಳು ಬಂದಿಳಿದ ಜಾಗ ಮಹಾ ರೌದ್ರ ಮೃಗಗಳ ಆವಾಸಸ್ಥಾನವಾದ ಭಯಂಕರ ಕಾಡು. ಅನಂಗಶರೆಯು ಅಲ್ಲಿನ ಒಂದು ನದಿಯ ದಡದಲ್ಲಿ ಕುಳಿತು ತನ್ನ ತಂದೆತಾಯಿಯರನ್ನು ನೆನೆದು ಶೋಕಾಕುಲಿತೆಯಾದಳು. ರಾಜನ ಮಗಳಾಗಿಯೂ ಅಡವಿಯಲ್ಲಿ ಬಿದ್ದು ಸಾಯುವ ದುಷ್ಕರ್ಮಫಲ ತನ್ನದಾಯಿತಲ್ಲ ಎಂದು ಹಲುಬಿದಳು. ಇದಕ್ಕೆ ಪರಿಹಾರವೆಂದರೆ ಜಿನೇಂದ್ರ ಚರಣಗಳಿಗೆ ಶರಣಾಗುವುದೇ ಎಂದು ನಿರ್ಧರಿಸಿದಳು. ಅಂತೆಯೇ ನಾನಾ ಬಗೆಯ ನೋಂಪಿಗಳಲ್ಲಿ ತೊಡಗಿಕೊಂಡಳು. ಹೀಗೆಯೇ ಮೂರು ಸಾವಿರ ವರ್ಷಗಳು ಸಂದವು. ಅವಳ ದೇಹ ಕೃಶವಾಯಿತು. ದೀಕ್ಷೆಯಲ್ಲಿದ್ದಾಗ ಒಂದು ದಿವಸ ಅವಳನ್ನು

ರೋಗವೆಂಬ ಅಜಗರ ಹಿಡಿಯಿತು. ಅವಳು ತನ್ನ ಮನಸ್ಸಿನಲ್ಲಿ ಪಂಚಪರಮೇಷ್ಠಿಗಳನ್ನು ನೆಲೆಗೊಳಿಸಿಕೊಂಡಳು, ನಾಲಗೆಯ ಮೇಲೆ ಅವರ ಜಪ ನೆಲೆಸಿತು, ಅರಿವೇ ಅವಳ ದೇಹವಾಯಿತು. ಕೊನೆಗೆ ಈ ಶರೀರದಿಂದ ಬಿಡುಗಡೆ ಹೊಂದಿ ಸನತ್ಕುಮಾರಕಲ್ಪದಲ್ಲಿ ಹುಟ್ಟಿ ಸ್ವರ್ಗಸುಖವನ್ನು ಅನುಭವಿಸಿದಳು. ಆನಂತರ ಭೂಮಿಗೆ ಬಂದು ದ್ರೋಣಮೇಘನ ಸರ್ವೌಷಧಿಪ್ರಾಪ್ತೆಯಾದ ಮಗಳಾಗಿ ಹುಟ್ಟಿದ್ದಾಳೆ. ಪುನರ್ವಸುವೂ ಆನಂತರ ಆ ಕಾಡಿಗೆ ಬಂದು ತಾನು ಇಳಿಸಿದ್ದ ಅನಂಗಶರೆಯು ಕಾಣದಿರಲು ನಿರ್ವೇಗಗೊಂಡು ದೀಕ್ಷೆ ಪಡೆದ. ಅವನೂ ತಪಸ್ಸಿನಲ್ಲಿ ತನ್ನ ದೇಹವನ್ನು ತವಿಸಿ ಸಂನ್ಯಸನ ವಿಧಿಯಿಂದ ಮುಡಿಪಿ ಸನತ್ಕುಮಾರಕಲ್ಪದಲ್ಲಿ ಅಪಾರ ಸುಖದಲ್ಲಿದ್ದ. ನಿಡುಗಾಲ ಆ ಸುಖವನ್ನು ಸೂರೆಮಾಡಿ ಬಂದು ಈಗ ಅವನೇ ಲಕ್ಷ್ಮಣನಾಗಿ ಹುಟ್ಟಿದ್ದಾನೆ ಎಂಬ ವಿಷಯವನ್ನು ಮನಃಪರ್ಯಯಜ್ಞಾನಿಗಳಾದ ಸರ್ವಭೂತಹಿತ ಭಟ್ಟಾರಕರು ತನಗೆ ಹೇಳಿದುದಾಗಿ ಭರತನು ತಿಳಿಸಿದನೆಂದು ಅತಿಚಂದ್ರನು ನಿವೇದಿಸಿದ.

ರಾಮಚಂದ್ರನು ಅವನ ಮಾತುಗಳಿಂದ ಸಂತಸಗೊಂಡು ಮೆಚ್ಚುಗೊಟ್ಟ. ಭರತನನ್ನು ಬೇಡಿ ಆ ಗಂಧೋದಕವನ್ನು ತರಲು ಹನುಮ ಅಂಗದ ಪ್ರಭಾಮಂಡಲರನ್ನು ಕಳಿಸಿಕೊಟ್ಟ. ಅವರು ದಿವ್ಯವಿಮಾನಗಳನ್ನೇರಿ ಮನೋವೇಗದಿಂದ ಆಕಾಶಮಾರ್ಗದಲ್ಲಿ ಸಾಗಿದರು. ಸಾಕೇತಪುರವನ್ನು ತಲುಪಿ ಭರತನನ್ನು ಕಂಡು ಸಂಕ್ಷಿಪ್ತವಾಗಿ ಯುದ್ಧದ ವಾರ್ತೆಯನ್ನರುಹಿದರು; ದಶಾನನ ಶಕ್ತಿಪ್ರಯೋಗದಿಂದ ಲಕ್ಷ್ಮಣನು ಮೈಗರೆದಿರುವುದನ್ನು ತಿಳಿಸಿದರು. ಇಂದು ರಾತ್ರಿಯೊಳಗಾಗಿ ವಿಶಲ್ಯಸೌಂದರಿಯು ಮಿಂದ ಗಂಧೋದಕವನ್ನು ತಂದೀಯಬೇಕೆಂದೂ, ಬೆಳಕು ಹರಿದುಬಿಟ್ಟರೆ ಲಕ್ಷ್ಮಣನು ಗತಪ್ರಾಣನಾಗುವನೆಂದೂ ಬಿನ್ನೈಸಿದರು. ಇದನ್ನು ಕೇಳಿದ ಭರತ ಶತ್ರುಘ್ನರು ರಾವಣನ ಮೇಲೆ ಏರಿಹೋಗಲು ಕಾತರರಾದರು; ದಶಮುಖನನ್ನು ದೆಸೆವಲಿಗುಡಲು ಸನ್ನಾಹಭೇರಿಯನ್ನು ಹೊಯಿಸಿದರು. ರಾಮನ ಅನುಮತಿಯಿಲ್ಲದೆ ಆ ಕೆಲಸ ಮಾಡಬಾರದೆಂದು ಅವರನ್ನು ಪ್ರಭಾಮಂಡಲನು ತಡೆದ. ಹಾಗಾದರೆ ತಮ್ಮ ಕೆಲಸವೇನು ಎಂದು ಕೇಳಲು ಗಂಧೋದಕವನ್ನು ತರಿಸಿಕೊಟ್ಟರೆ ತಾವು ಅದನ್ನು ಒಯ್ಯುವುದಾಗಿಯೂ, ಅದರಿಂದ ಲಕ್ಷ್ಮಣನ ಶಸ್ತ್ರಪೀಡೆಯು ನಿವಾರಣೆಗೊಳ್ಳುವುದೆಂದೂ ತಿಳಿಸಿದ. ಆಗ ಭರತನು, ಬರಿಯ ಗಂಧೋದಕದಿಂದೇನಾದೀತು, ಆ ತರುಣಿಗೆ ಲಕ್ಷ್ಮೀಧರನೇ ವರ ಎಂಬ ವಿಷಯವನ್ನು ಮುನಿವರರು ತನಗೆ ತಿಳಿಸಿದ್ದರು; ಅವನು ಈ ಸ್ತ್ರೀರತ್ನಕ್ಕೆ ಯೋಗ್ಯ ವರನೇ ಸರಿ ಎಂದು ಅವಳನ್ನು ಕರೆತರಲು ಅತ್ಯಂತ ಹಿತರಾದ ಪ್ರಧಾನರನ್ನು ಕಳಿಸಿದ. ಅವನ ಮಾತನ್ನು ಮನ್ನಿಸಿದ ದ್ರೋಣಮೇಘನು ತನ್ನ ಮಗಳು ವಿಶಲ್ಯಸೌಂದರಿಯೊಡನೆ ನೂರು ಮಂದಿ ಕನ್ನೆಯರನ್ನೂ ಸಂಭ್ರಮದಿಂದಲೇ ಕಳಿಸಿಕೊಟ್ಟ.

ಆ ಕನ್ಯಾರತ್ನವನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ನಕ್ಷತ್ರವೀಧಿಯಲ್ಲಿ ಬಂದು ಪ್ರಭಾಮಂಡಲನು ರಣಭೂಮಿಯಲ್ಲಿಳಿದ. ವಿಶಲ್ಯಸುಂದರಿಯು ಲಕ್ಷ್ಮಣನಿಗೆ ಹತ್ತಿರ ಬಂದಂತೆಲ್ಲ ಲಕ್ಷ್ಮಣನನ್ನು ಮೂರ್ಛೆವೋಗಿಸಿದ್ದ ಶಕ್ತಿಯ ಶಕ್ತಿ ಕುಂದುತ್ತ ಬಂತು. ಕಿಡಿಯುಗುಳುತ್ತ, ತನ್ನ ಸಹಸ್ರಾರು ಜ್ವಾಲೆಗಳಿಂದ ಆಗಸವನ್ನೆಲ್ಲ ಬೆಳಗುತ್ತ, ಜನಾರ್ದನನ ಎದೆಯಿಂದ ಹೊರಟು ಮೇಲಕ್ಕೆ ನೆಗೆಯುವಾಗ ಪವನತನಯನು ಅದನ್ನು

ಹಿಡಿಯಲು ಹೋದ. ತಕ್ಷಣ ಜ್ವಾಲೆಯು ದಿವ್ಯಸ್ತ್ರೀರೂಪವನ್ನು ತಳೆದು ಕೈಮುಗಿದು ತನ್ನನ್ನು ಬಿಟ್ಟುಬಿಡಲು ಕೇಳಿಕೊಂಡಿತು. ಆ ಸ್ತ್ರೀಯು ನಡುನಡುಗುತ್ತ, ತಾನು ಪಿಜೆಯೆ ಎಂಬುವವಳು, ಪ್ರಜ್ಞಪ್ತಿವಿದ್ಯೆಗಿಂತ ಕಿರಿಯೆಯೆಂದೂ; ವಾಲಿಭಟ್ಟಾರಕರ ಕಾರಣದಿಂದ ರಾವಣನು ಕೈಲಾಸವನ್ನೆತ್ತಿದ ಬಳಿಕ ವೀಣೆಯನ್ನು ಬಾಜಿಸುತ್ತ ಜಿನನ ಗುಣಸ್ತವನಗಳನ್ನು ಮಾಡುತ್ತಿರಲು ಧರಣೀಂದ್ರನಿಗೆ ಆಸನಕಂಪವಾಗಲು ಅವನು ಬಂದು ದಶಕಂಧರನನ್ನು ನೋಡಿ ಹರ್ಷಚಿತ್ತನಾಗಿ ನನ್ನನ್ನು ಅವನಿಗೆ ಕೊಡುಗೆಯಾಗಿತ್ತನೆಂದೂ; ತನ್ನನ್ನು ಸರ್ವೌಷಧಪ್ರಾಪ್ತೆಯಾದ ವಿಶಲ್ಯಸೌಂದರಿಯಲ್ಲದೆ ಬೇರೆಯವರು ಹೋಗಲಾಡಿಸಲು ಸಾಧ್ಯವಿಲ್ಲ ಎಂದೂ ಬಿನ್ನವಿಸಿದಳು. ಇದನ್ನು ಕೇಳಿ ಎಲ್ಲರಿಗೂ ಅಚ್ಚರಿಯೆನಿಸಿತು. ಆಗ ಹನುಮಂತನೂ ಅವಳನ್ನು ಬಿಟ್ಟುಬಿಟ್ಟ. ಆನಂತರ ರಾವಣನ ವಿಜಯದೇವತೆಯೋ, ಲಕ್ಷ್ಮಣನ ಪುಣ್ಯದೇವತೆಯೋ ಎನ್ನುವಂತಿದ್ದ ವಿಶಲ್ಯಸೌಂದರಿಯು ಬಂದು ಲಕ್ಷ್ಮಣನನ್ನು ಸ್ಪರ್ಶಿಸಿ ಸುರಭಿಸಲಿಲವನ್ನು ಅವನ ಮೇಲೆ ತಳಿದಳು. ಆಗ ಮೂರ್ಛೆ ತಿಳಿದು, ಕೋಪವು ಅಚ್ಚೊತ್ತಿದ್ದ ಹಾಗೆ ಕಣ್ಣು ಕೆಂಪಗೆ ಮಾಡಿಕೊಂಡು, ಸುತ್ತಲೂ ನೋಡುತ್ತ 'ರಾವಣನೆಲ್ಲಿ?' ಎನ್ನುತ್ತ ಲಕ್ಷ್ಮಣನು ಎದ್ದು ಕುಳಿತ.

ಲಕ್ಷ್ಮೀಧರನ ಮೂರ್ಛೆ ಕಳೆದಾಗ ರಾಮನೇ ಮುಂತಾದವರ ಮುಖಗಳು ಸೂರ್ಯೋದಯವಾದಾಗಿನ ಕಮಲಗಳಂತೆ ಅರಳಿದವು. ಮಂಗಳಧ್ವನಿಗಳೂ, ಆಶೀರ್ವಾದನಿನಾದವೂ ಎಲ್ಲೆಡೆ ತುಂಬಿದವು. ಮೇರುವನ್ನೊಲ್ಲದ ತಾರಾವಳಿಯು ನೀಲಾಚಲವನ್ನು ಬಳಸುವಂತೆ ಮಣಿಮಯ ನೀರಾಜನ ದೀಪಮಾಲೆ ಲಕ್ಷ್ಮಣನನ್ನು ಸುತ್ತುವರಿಯಿತು. ಆಗ ಅವನ ಬಳಿಯಿದ್ದ ವಿಶಲ್ಯಸೌಂದರಿಯು ಅವನ ಶಕ್ತಿಯ ನೋವನ್ನು ನಿವಾರಿಸಿದರೂ ತನ್ನ ಚೆಲುವಿನಿಂದ ಅತೀವ ಕಾಮಬಾಧೆಯನ್ನುಂಟುಮಾಡಿದಳು. ಆಗ ಹನುಮಂತ ಮುಂತಾದವರು ಅವಳನ್ನೂ ಜೊತೆಯ ಇನ್ನೂರು ಮಂದಿ ಕನ್ನೆಯರನ್ನೂ ವಿವಾಹವಾಗಲು ಅವನಿಗೆ ಸೂಚಿಸಿದರು. ರಾವಣವಿಜಯಾನಂತರ ಸೀತಾದೇವಿಯನ್ನು ತಂದು ರಾಮಸ್ವಾಮಿಗೊಪ್ಪಿಸಿದ ಹೊರತು ತಾನು ಮದುವೆ ನಿಲ್ಲುವುದಿಲ್ಲವೆಂದು ಲಕ್ಷ್ಮೀಧರನು ಹೇಳಿದಾಗ, ಹನುಮನು ತಾವು ವಿಶಲ್ಯಸೌಂದರಿಯನ್ನು ಕರೆತಂದ ವೃತ್ತಾಂತವೆಲ್ಲವನ್ನೂ ವಿಶದವಾಗಿ ನಿರೂಪಿಸಿ ಒಪ್ಪಿಸಲು ಅವನು ಒಂದೇ ಮುಹೂರ್ತದಲ್ಲಿ ಎಲ್ಲರನ್ನೂ ಮದುವೆ ನಿಂದನು.

ಲಕ್ಷ್ಮಣನು ಶಕ್ತಿಯಿಂದ ಮುಕ್ತನಾದ ವಿಷಯವನ್ನು ಚರರಿಂದ ತಿಳಿದ ಮೃಗಾಂಕ ಮುಂತಾದ ರಾವಣನ ಮಂತ್ರಿಮುಖ್ಯರು ಈ ವಿಷಯವನ್ನು ತಮ್ಮ ವಿಭುಗೆ ಅರುಹಲು ರಾವಣನಲ್ಲಿಗೆ ತ್ವರಿತವಾಗಿ ಬಂದರು. ಬಂದವರೇ ಕೈಮುಗಿದುಕೊಂಡು, ವಿಶಲ್ಯಾಸೌಂದರಿಯು ಬಂದು ಲಕ್ಷ್ಮಣನ ಮೂರ್ಛೆಯನ್ನು ತಿಳಿಗೊಳಿಸಿದ್ದನ್ನೂ, ಅವನು ಅವಳ ಸಮೇತ ಎಲ್ಲ ಕನ್ನಿಕೆಯರನ್ನು ಲಗ್ನವಾದ ವಿಷಯವನ್ನೂ ವಿವರಿಸಿದರು. ಸೀತೆಯನ್ನು ದಯವಿಟ್ಟು ರಾಮನಿಗೊಪ್ಪಿಬೇಕೆಂದೂ, ಅವರೊಡನೆ ಯುದ್ಧ ಸರ್ವಥಾ ಸಲ್ಲದೆಂದೂ, ರಘುನಾಥನಲ್ಲಿ ಸಂಧಿಮಾಡಿಕೊಳ್ಳಬೇಕೆಂದೂ ಅವರೆಲ್ಲ ಒತ್ತಾಯಿಸಿದರು. ನಮಗಿಂತಲೂ ಅವರು ಅಧಿಕಬಲರೆಂದೂ, ಅವರನ್ನು ಒಂದೊಮ್ಮೆ ಗೆದ್ದರೂ ಅವರು ಸೆರೆಗೈದಿರುವ ಕುಂಭಕರ್ಣಾದಿಗಳಿಗೆ ಏನಾದರೂ ಕೆಡುಕನ್ನು ಮಾಡಬಹುದೆಂದೂ, ಅಂಥ ಪರಿಸ್ಥಿತಿಯಲ್ಲಿ

ತಮ್ಮ ಗೆಲವಿಗೆ ಅರ್ಥವಿರುವುದಿಲ್ಲವೆಂದೂ ಹೇಳಿದರು. ಈ ಮಾತುಗಳನ್ನು ಕೇಳಿದ ರಾವಣನು ಗುಡುಗಿನ ಸದ್ದನ್ನು ಕೇಳಿದ ಸಿಂಹದಂತೆ ಕನಲಿದ. "ಇಂದ್ರನನ್ನು ಗೆದ್ದ ನನ್ನನ್ನು ಉಪೇಂದ್ರನು ಗೆಲ್ಲಲಾದೀತೇ? ಗೆದ್ದರು ತಾನೇ ಏನು, ಜೀವನವೇನು ಆಚಂದ್ರಾರ್ಕವೇ? ನನ್ನ ಯಶಶ್ಚಂದ್ರಿಕೆಗೆ ಕಳಂಕವುಂಟಾಗದಂತೆ ನಡೆಯುತ್ತೇನೆ. ನಿಮ್ಮ ಉಪದೇಶವೇನೂ ಆವಶ್ಯಕವಲ್ಲ, ಮಾತನಾಡದಿರಿ" ಎಂದು ಮಂತ್ರಿಗಳ ಬಾಯಿ ಮುಚ್ಚಿಸಿದ. ರಾವಣನ ಈ ಸ್ಥೈರ್ಯಕ್ಕೆ ಮಯನು ವಿಸ್ಮಯಗೊಂಡ; "ದೇವಾ, ಅವರ ಬಳಿ ಸೆರೆಯಾಗಿರುವ ನಮ್ಮವರಿಗೆ ಅಪಾಯವಾಗದಂತೆ ಕಾದಿ ಗೆಲ್ಲಿರಿ" ಎಂದ. ಮಯನು ಹೇಳಿದ್ದನ್ನು ಕೇಳಿದರೂ, ಸಂಧಿಯ ಮಾತಿಗೆ ಮಾತ್ರ ಮದವಶನಾದ ದಶವದನನು ಸಮ್ಮತಿಸಲಿಲ್ಲ. ಆನಂತರ ರಾಮಲಕ್ಷ್ಮಣರ ಪುಣ್ಯಪ್ರಭಾವದಿಂದ ಚಕಿತಗೊಂಡು, ಸಿಂಹಗರುಡ ವಾಹನಗಳನ್ನು ಪಡೆದು, ಸುಗ್ರೀವ ಪ್ರಭಾಮಂಡಲ ಹನುಮರಿಗೆ ತನ್ನ ನಾಗಶರದ ಏಟಿನಿಂದಾದ ಆಸನ್ನಮೃತ್ಯುವನ್ನು ಹಿಂದೆಗೆದುಕೊಂಡ, ತನ್ನ ತನುಜಾನುಜರನ್ನು ಸೇನೆಯ ಬಲದಿಂದ ಹಿಡಿದ, ತಾನು ವಾಸುಕಿಯಿಂದ ಪಡೆದ ಶಕ್ತಿಯ ಪ್ರಹಾರವನ್ನು ಸುಲಭವಾಗಿ ಹೋಗಲಾಡಿಸಿಕೊಂಡ ಬಲದೇವವಾಸುದೇವರನ್ನು ಅಶಲ್ಯರೆಂದು ಬಗೆದು ಕಾದಿದರೆ ಕಾರ್ಯಹಾನಿಯಾಗುವುದು ಖಂಡಿತ ಎಂದು ಅಂದುಕೊಂಡ. ಇದಕ್ಕೆ ತಕ್ಕುದನ್ನು ಮನಸ್ಸಿನಲ್ಲಿಯೇ ಲೆಕ್ಕಹಾಕಿ, ಸಾಧಾರಣರಾದ ಶತ್ರುಗಳನ್ನೇ ಅಲಕ್ಷ್ಯದಿಂದ ಎದುರಿಸುವುದು ತಕ್ಕುದಲ್ಲ, ಆದ್ದರಿಂದ ತಾನು ಬಹುರೂಪಿಣಿಯನ್ನು ಸಾಧಿಸಿ ಹಗೆಯನ್ನು ಗೆಲ್ಲುವ ತೀರ್ಮಾನ ಮಾಡಿದ.

ಲಂಕಾನಗರದಲ್ಲಾಗಲೀ ನಾಡಿನಲ್ಲಾಗಲೀ ಯಾವುದೇ ಬಗೆಯ ಹಿಂಸೆ ನಡೆಯಬಾರದೆಂದೂ, ಪ್ರತಿದಿನ ಜಿನಪೂಜೆಯನ್ನು ಮಾಡಬೇಕೆಂದೂ ರಾವಣನು ಆಜ್ಞೆ ಹೊರಡಿಸಿದ; ಮಂಡೋದರಿಗಾಗಲೀ ಊರಿಗಾಗಲೀ ಯಾರು ಏನು ತೊಂದರೆ ಕೊಟ್ಟರೂ ಪ್ರತಿಹಿಂಸೆ ಮಾಡಬಾರದೆಂದು ನಿಯಮಿಸಿದ. ಆನಂತರ ಮಂಗಳದ್ರವ್ಯಪುರಸ್ಸರನಾಗಿ ಅರಮನೆಯೊಳಗಣ ಜಿನಮಂದಿರಕ್ಕೆ ನಡೆತಂದ; ಶಾಂತೀಶ್ವರನಿಗೆ ಭಕ್ತಿಯಿಂದ ಅಭಿಷೇಕ ಪೂಜೆಗಳನ್ನು ನೆರವೇರಿಸಿದ. ಆನಂತರ ಪದ್ಮಾಸನವನ್ನು ಹಾಕಿಕೊಂಡು ಕುಳಿತು, ಕೈಯ್ಯಲ್ಲಿ ಸ್ಫಟಿಕಾಕ್ಷಮಾಲೆಯನ್ನು ಹಿಡಿದು ದಿವ್ಯಮಂತ್ರಗಳನ್ನು ಜಪಿಸುತ್ತ ಕುಳಿತ. ಅಷ್ಟು ಹೊತ್ತಿಗೆ ಫಾಲ್ಗುಣ ನಂದೀಶ್ವರವ್ರತವು ಬರಲು ಉಭಯ ಬಣಗಳೂ ಅಭಯಘೋಷಣೆಯನ್ನು ಮಾಡಿ ಕಾಳಗವನ್ನು ನಿಲ್ಲಿಸಿದವು.

ಚರವಚನದಿಂದ ವಿಭೀಷಣನಿಗೆ ಅಣ್ಣನ ಜಪದ ವಿಷಯ ತಿಳಿಯಿತು; ಇದನ್ನು ರಘುವೀರನಿಗೆ ಅರುಹುವ ಉದ್ದೇಶದಿಂದ ಬಂದ. ಭುಜಬಲನಾದ ತನ್ನ ಅಣ್ಣನ ಚಂದ್ರಹಾಸವನ್ನಾಗಲೀ ಅವನ ಸೇನೆಯನ್ನಾಗಲೀ ಎದುರಿಸುವ ಸಾಮರ್ಥ್ಯ ಈಗಲೇ ಭೂಭುಜಸುರಖೇಚರರಿಗೆ ಸಾಧ್ಯವಿಲ್ಲ; ಇನ್ನು ಅವನು ಬಹುರೂಪಿಣಿಯನ್ನು ಸಾಧಿಸಿಬಿಟ್ಟರೆ ರಾವಣಕೋಟಿಯಾಗುತ್ತಾನೆ, ಆಗ ಅವನೊಬ್ಬನನ್ನು ಎದುರಿಸುವುದೂ ಅರಿದಾಗುತ್ತದೆ. ಆದ್ದರಿಂದ ಅವನು ಅದನ್ನು ಸಾಧಿಸದ ಹಾಗೆ ಭಂಗಪಡಿಸಲು ಈಗಲೇ ಲಂಕೆಯ ಮೇಲೆ ದಂಡೆತ್ತಿ ಹೋಗುವುದು ಆವಶ್ಯಕ ಎಂದು ಸಲಹೆಯಿತ್ತ. ಆಗ ಉದಾತ್ತ ರಾಘವನು, "ಹೆಣ್ಣಿನ ಮೇಲಾಗಲೀ, ಕೈದುವಿರದವನ ಮೇಲಾಗಲೀ ದಾಳಿ ಮಾಡುವುದು ರಾಜನಿಗೆ ಉಚಿತವಲ್ಲ. ತಪಸ್ಸಿಗೆ ತೊಡಗಿ ಜಿನೇಂದ್ರನ ಶರಣುವೊಕ್ಕು ದಶಾನನನು ವಿದ್ಯೆಯನ್ನು

ಸಾಧಿಸಲು ಹೊರಟಿದ್ದಾನೆ, ಈಗ ಅವನಲ್ಲಿ ನೋವು ಉಂಟುಮಾಡುವುದು ಸಾಧ್ಯವಿಲ್ಲ; ಇಂಥ ಮಾತುಗಳನ್ನು ಆಡಬಾರದು" ಎಂದುಬಿಟ್ಟ. ಮಹಾಸತ್ವನಾದ ರಘುವೀರನನ್ನು ಅನಾಚಾರವನ್ನೆಸಗಲು ಪ್ರೇರಿಸುವುದು ಆಗದು; ಹೀಗಾಗಿ ಅವನಿಗೆ ತಿಳಿಯದಂತೆ ತಾವೇ ರಾವಣನ ವಿದ್ಯಾಸಾಧನೆಗೆ ವಿಘ್ನಗಳನ್ನು ತಂದೊಡ್ಡಲು ವಿಭೀಷಣ ಅಂಗದಾಗಿಗಳು ನಿಶ್ಚೈಸಿದರು.

ನಂದೀಶ್ವರವ್ರತವು ಮುಗಿದ ಮೇಲೆ, ವಿಭೀಷಣನೊಡನೆ ಮಕರಧ್ವಜಮುಖ್ಯರಾದ ಖಚರ ವೀರರು ಕಪಿಧ್ವಜರೊಡನೆ ಗಗನಮಾರ್ಗದಿಂದ ಬಂದು ಲಂಕೆಯನ್ನು ಸೇರಿದರು. ಎಲ್ಲ ಸೇರಿ ಮನೆಮಠಗಳನ್ನು ಒಡೆದುಹಾಕಿದರು; ಉದ್ಯಾನವನಗಳನ್ನು ಹಾಳುಗೆಡವಿದರು; ನೀರುನೆಲಗಳನ್ನು ಕೆಡಿಸಿದರು; ಎಲ್ಲ ಬಗೆಯಿಂದ ಲಂಕೆಯನ್ನು ಕದಡಿದರು. ಇದನ್ನು ಕಂಡ ಮಯನಿಗೆ ಕೋಪ ಬಂತು; ತಾನೂ ಅವರೆದುರು ಕಾಳಗಕ್ಕೆ ಸಿದ್ಧನಾಗಲು, ಮಂಡೋದರಿ ಬಂದು ತಂದೆಯನ್ನು ತಡೆದಳು. ಸಮಾಧಾನಗೊಂಡ ಅವನು ತನ್ನ ಅರಮನೆಯನ್ನು ಹೊಕ್ಕ. ಆಗ ವಾನರಸೇನೆಯು ರಾವಣನ ಅರಮನೆಯನ್ನು ಹೊಕ್ಕು, ಅಲ್ಲಿದ್ದ ಕುಲವನಿತೆಯರನ್ನು ಎಳೆದು ತಂದರು. ವನಿತೆಯರ ಹಾಹಾಕ್ರಂದನ ಎಲ್ಲೆಡೆ ಹರಡಿತು. ಇದೆಲ್ಲ ಕೇಳಿಸುತ್ತಿದ್ದರೂ ದನುಜಶ್ರೇಷ್ಠನು ವಿಚಲಿತಗೊಳ್ಳದೆ ತನ್ನ ಜಪವನ್ನು ಮುಂದುವರೆಸಿದ. ಆಗ ಜಿನಭವನದಲ್ಲಿ ವಾಸಿಸುತ್ತಿದ್ದ ದೇವತೆಗಳೆಲ್ಲ ಬೇತಾಳರೂಪುಗಳನ್ನು ಧರಿಸಿ ತಕ್ಕುದಲ್ಲದ್ದನ್ನು ಮಾಡುವ ಕಪಿಧ್ವಜರ ಮೇಲೆ ಹಾಯ್ದು ಭಂಗಿಸಿದರು. ಆಗ ಜಿನಾವಾಸನಿವಾಸಿಗಳಾದ ಇತರ ದೇವತೆಗಳು ಮುಂಚಿನ ದೇವತೆಗಳನ್ನು ಹೊಡೆದೋಡಿಸಿದರು.

ಅವು ಓಡಿ ಬಂದು ತಮ್ಮ ಸ್ವಾಮಿಯಾದ ಪೂರ್ಣಭದ್ರನೆಂಬ ಯಕ್ಷಾಧಿಪತಿಗೆ ಈ ವಿಷಯವನ್ನು ತಿಳಿಸಿದವು. ಮುನಿಗಳಂತೆ ಉಪವಾಸವನ್ನು ಕೈಕೊಂಡು, ಕೈದುವನ್ನು ಬಿಸುಟು ತಪಸ್ಸು ಮಾಡುವ ದಶಾನನನ ಮೇಲೆ ಯುದ್ಧಗೈಯ್ಯುವುದು ತರವಲ್ಲ ಎಂದು ಕೋಪಿಸಿಕೊಂಡು ಅವನು ಮಾಣಿಭದ್ರನಲ್ಲಿಗೆ ಹೋಗಿ ಈ ವಿಚಾರ ತಿಳಿಸಿದಾಗ ಅವನೂ ಮುನಿದ. ಇಬ್ಬರೂ ಬಂದು ದೇವತೆಗಳನ್ನು ಧ್ವಂಸಗೈದರು, ಕಪಿಧ್ವಜಿನಿಯನ್ನು ದೂಡಿದರು. ಆನಂತರ ಪೂರ್ಣಭದ್ರ ಮಾಣಿಭದ್ರರು ರಾಮಲಕ್ಷ್ಮಣರನ್ನು ಕಂಡು ಸ್ತುತಿಸಿದರು; ನಿಮ್ಮ ಅನುಯಾಯಿಗಳು ಉಪಶಾಂತನಾದ ರಾವಣನ ಮೇಳೆ ಮಾಡಿದ ದಾಳಿಯಿಂದ ನಿಮ್ಮ ಘನತೆಗೆ ಕುಂದು ಎಂದರು. ಆಗ ಲಕ್ಷ್ಮಣನು, "ರಘುರಾಜನ ಕುಲವಧುವಾದ ಸೀತೆಯನ್ನು ಮೋಸದಿಂದ ಹಿಡಿದುಯ್ದುವನಿಗೆ ಸಹಾಯ ಮಾಡಬೇಕೋ ಬೇಡವೋ ನೀವೇ ಆಲೋಚನೆ ಮಾಡಿ; ನಿಮಗೆ ನಾವು ಮಾಡಿದ ಅಪಕಾರವೇನು? ಅಂದ ಮೇಲೆ ನಮ್ಮ ಮೇಲೆ ನೀವು ದಾಳಿ ನಡೆಸಬಹುದೇ?" ಎಂದು ಮಾರ್ಮಿಕವಾಗಿ ನುಡಿದ. ಆಗ ಅವರು, ಲಂಕಾಪುರದಲ್ಲಿನ ಮನೆಗಳಿಗಾಗಲೀ, ಚೈತ್ಯಾಲಯಗಳಿಗಾಗಲೀ ಹಾನಿಮಾಡದೆ, ಜಪದಲ್ಲಿ ತೊಡಗಿದ ರಾವಣನನ್ನು ಈಗಲೇ ಹತ್ಯೆಗೈಯದೆ ಅವನ ವಿದ್ಯಾಸಾಧನೆಗೆ ವಿಘ್ನಗಳನ್ನು ಮಾಡಿ ಎಂದು ಹರಸಿ ಯಕ್ಷರು ಹೊರಟುಹೋದರು.

ಯಕ್ಷರು ಹೋದ ಬಳಿಕ ಅಂಗದನು ಆನೆಯನ್ನೇರಿ ತಕ್ಕಿನ ಕಿಷ್ಕಿಂಧ ಎಂಬ ಆನೆಯನ್ನು ತಿವಿಯಲು ಹೊರಟ. ಪುರದ ಗೋಪುರವನ್ನು ಹೊಕ್ಕು ಲಂಕೆಯ ಚೆಲುವನ್ನು ನೋಡುತ್ತ, ತನ್ನ ಅಂಕುಶಾಭರಣದ ಹೊಳಪು ಆಕಾಶವನ್ನು ಚುಚ್ಚುತ್ತಿರಲು,

ರಾವಣನ ಅರಮನೆಯ ಬಳಿ ಬಂದ. ಒಳಗಿದ್ದ ಹಲವಾರು ಅಂಬರಚರಕುಮಾರರನ್ನು ಅವರ ಸೈನ್ಯಸಮೇತ ಹೊರಕ್ಕೆಳೆದು ಶಾಂತಿಜಿನಭವನವನ್ನು ಬಲಗೊಂಡು ಅದರ ಒಳಗೆ ನಡೆದು ದರ್ಶನಸ್ತುತಿ ಮಾಡಿದ. ಅಲ್ಲಿ ನಿಶ್ಚಲನಾಗಿ ಕುಳಿತಿದ್ದ ರಾವಣನನ್ನು ನೋಡಿ, "ಎಲೈ ಲಂಕಾಧಿಪತಿಯೇ, ರಾಮನ ಬಾಣಗಳಿಗೆ ಹೆದರಿ ಆತ್ಮವಿಶ್ವಾಸವಿಲ್ಲದೆ ಸುಮ್ಮನೆ ಜಪವನ್ನೇಕೆ ಕೈಕೊಂಡಿದ್ದೀಯೆ; ನಿನ್ನ ಪಾಪಕಾರ್ಯಗಳನ್ನು ನೆನೆಸಿಕೋ" ಎಂದು ಹೀಗಳೆದ. "ಖೇಚರಾನ್ವಯದ ಶುದ್ಧಾಚಾರವನ್ನು ಬಿಟ್ಟು, ಸತ್ಪುರುಷರೆಲ್ಲ ಕಾಪುರುಷ ಎಂದು ದೂರುತ್ತಿರಲು, ಪರದಾರಪ್ರಿಯನಾದ ಪಾತಕನೇ, ಯುದ್ಧಕ್ಕೆ ಅಂಜಿ ಶುದ್ಧಾತ್ಮನ ಹಾಗೆ ಶಾಂತೀಶನ ಮುಂದೆ ಕಣ್ಮುಚ್ಚಿ ಏನು ಧ್ಯಾನ ಮಾಡುತ್ತಿರುವೆ? ನಿನ್ನ ಸೈನ್ಯವೆಲ್ಲ ನಾಶವಾಗುತ್ತಿರಲು, ನೀನು ವಿದ್ಯೆಯನ್ನು ಸಾಧಿಸಿ ರಾಮಲಕ್ಷ್ಮಣರನ್ನು ಕೊಲ್ಲಲು ಆಲೋಚಿಸುತ್ತಿರುವೆಯಾ? ಮನೆಗೆ ಬೆಂಕಿ ಬಿದ್ದ ಮೇಲೆ ಗಾಬರಿಯಿಂದ ನೀರಿಗಾಗಿ ಬಾವಿ ತೋಡುವವರಂತೆ ಕಣ್ಣು ಮುಚ್ಚಿ ಜಪಿಸುತ್ತಿರುವೆ, ನಿನ್ನನ್ನು ದೇವತೆಗಳು ಕಾಯಬಲ್ಲವೇ?" ಎಂದು ನಾನಾ ಬಗೆಯ ಚುಚ್ಚುಮಾತುಗಳನ್ನಾಡಿದ. ರಾವಣನ ಉತ್ತರೀಯದ ಸೆರಗನ್ನೆಳೆದು, ಅವನ ಕೈಲಿದ್ದ ಜಪಸರವನ್ನು ಕಿತ್ತು ಸ್ಫಟಿಕದ ಮಣಿಗಳನ್ನು ಈಡಾಡಿದ, ಮತ್ತಷ್ಟು ಹೀಗಳಿಕೆಯ ನುಡಿಗಳನ್ನಾಡಿದ. ಅರಮನೆಯ ಯುವತಿಯರ ಜಡೆಗಳನ್ನು ಒಬ್ಬರದೊಬ್ಬರದಕ್ಕೆ ಗಂಟುಹಾಕಿದ. ಅವರೆಲ್ಲರ ಹಾಹಾಕಾರ ದ್ವಿಗುಣಿಸಿ ಜಿನಾಲಯದಲ್ಲಿ ಮಾರ್ದನಿಸಿತು. "ಆಸೆಯಿಂದ ಜಾನಕೀದೇವಿಯನ್ನು ಎಳೆತಂದ ನಿನ್ನ ಕಣ್ಣೆದುರಿಗೇ ನಿನ್ನರಮನೆಯ ಹೆಣ್ಣುಗಳನ್ನು ಎಳೆದೊಯ್ಯುತ್ತೇನೆ. ಜಪವನ್ನು ತೊರೆದು ನಿನ್ನ ಕೂರ್ಪನ್ನು ನನ್ನೆದುರು ತೋರಿಸು ನೊಡೋಣ" ಎಂದ. "ಈಗ ಮಂಡೋದರಿಯನ್ನು ನಮ್ಮ ತಾಯ್ತಂದೆಯರಿಗೆ ಚಾಮರಸೇವೆಮಾಡಲು ಕರೆದೊಯ್ಯುವೆ; ಪೊಡರ್ಪು ಇರುವುದಾದರೆ ಬಿಡಿಸಿಕೋ" ಎಂದು ಅವನನ್ನು ಪರಿಭವಿಸಿದ. ಆಗ ಮಂಡೋದರಿಯೇ ಮುಂತಾದ ಹಲವರು ಅಂತಃಪುರಕಾಂತೆಯರು, "ನೀನು ವಿದ್ಯೆಯನ್ನು ಸಾಧಿಸಿ ಪಡೆವುದೇನು? ನಿನ್ನ ಎದುರಲ್ಲಿಯೇ ಹೀಗೆ ನಮಗೆ ತೊಂದರೆ ಕೊಡುತ್ತಿದ್ದರೂ ಮೂರ್ಚೆ ಹೋದವನಂತೆ ಮಿಡುಕದೇ ಇರುವೆಯಲ್ಲ. ವಿದ್ಯಾಧರ ಚಕ್ರವರ್ತಿಯೇ, ನಮ್ಮನ್ನು ಕಾಪಾಡು" ಎಂದು ಉಚ್ಚರವದಿಂದ ರೋದನಗೈದರು.

ಹೀಗೆ ಅತೀವ ವೇದನೆಯಿಂದ ಅವರೆಲ್ಲ ರೋದಿಸುವಂತೆ ಮಾಡಿದರೂ ರಾವಣನು ಮಾತ್ರ ಚಿತ್ತನಿರೋಧಗೈದು ಚಲಿಸದೆ ಧ್ರುವಮಂಡಲದಂತೆ ಇದ್ದು ಕೊನೆಗೂ ವಿದ್ಯೆಯನ್ನು ಕೈವಶಮಾಡಿಕೊಂಡ. ಆಗ ವಿದ್ಯಾಧಿದೇವತೆಯು ಮುಂಗಾರ ಸಿಡಿಲಿನಂತೆ ಪ್ರತ್ಯಕ್ಷವಾಗಿ, ಯಮನ ನಾಲಗೆ ನುಡಿಯುವಂತೆ "ಬೆಸಸು ಬೆಸಸು" ಎಂದು ಕೇಳಿತು; "ಚಕ್ರಧಾರಿಯಾದ ಲಕ್ಷ್ಮಣ ಹಾಗೂ ಚರಮದೇಹಧಾರಿಯಾದ ರಾಮಸ್ವಾಮಿ ಇವರಿಬ್ಬರನ್ನುಳಿದು ಮಿಕ್ಕೆಲ್ಲರನ್ನು ನಾಶಗೊಳಿಸುತ್ತೇನೆ" ಎಂದು ಆಶ್ವಾಸನೆಯಿತ್ತಿತು. ಆಗ ರಾವಣನು, "ಮಿಕ್ಕೆಲ್ಲರ ಸಾವಿನಿಂದ ನನಗೇನು ಪ್ರಯೋಜನ?" ಎನ್ನುತ್ತ ದೇವತೆಗೆ ಪೊಡಮಟ್ಟು, ಶಾಂತಿಜಿನಭವನವನ್ನು ಮೂರು ಬಾರಿ ಬಲವಂದು ನಡೆದ. ಇಷ್ಟು ಹೊತ್ತಿಗೆ ಅಂಗದಾದಿಗಳು ಅಲ್ಲಿಂದ ಹೊರಟು ತಮ್ಮ ಬೀಡನ್ನು ಸೇರಿದ್ದರು. ಇತ್ತ, ತನ್ನ ವಧೂಜನವನ್ನು ಕೊರಚಾಡಿ ಕಡಿದ ಉದ್ವೃತ್ತರನ್ನು ಇಕ್ಕುವ ಬಲು ಮುಳಿಸಿಂದ ಬಂದ ರಾವಣನಿಗೆ ಕಾಣಿಸಿದ್ದು ಬಾಡಿದ ಮುಖದ

ಮಂಡೋದರಿ. ಅವಳಿಗೂ ಇತರ ಸ್ತ್ರೀಯರಿಗೂ ಭಂಗವನ್ನು ಮಾಡಿದ ಅಂಗದಾದಿಗಳನ್ನು ಭ್ರೂಭಂಗಮಾತ್ರದಲ್ಲಿ ಸೆರೆಗೈದು ತರುತ್ತೇನೆ ಎಂದು ಅವರನ್ನು ಸಂತೈಸಿದ. ಆನಂತರ ಶಾಂತಿಜಿನಭವನದಲ್ಲಿ ಮಹಾಪೂಜೆಯನ್ನು ಮಾಡಿಸಿ, ನಿಯಮಾನುಸಾರ ಅಮೃತಾಹಾರವನ್ನು ಸೇವಿಸಿ ತನಗೆ ಲಭಿಸಿದ್ದ ಬಹುರೂಪಿಣಿ ವಿದ್ಯೆಯ ಪ್ರಭಾವವನ್ನು ಪರೀಕ್ಷಿಸಿಕೊಂಡ. 'ಮೂಲೋಕಗಳಲ್ಲಿಯೂ ನನಗೆ ಸಮಧಿಕರಾರು, ಸಮರದಲ್ಲಿ ನನ್ನ ಇದಿರಿಸುವವರಾರು' ಎಂದು ತನ್ನ ಭುಜದಂಡವನ್ನು ನೋಡಿಕೊಳ್ಳುತ್ತ ಜಾನಕಿಯ ಮುಖಾಬ್ಜವನ್ನು ನೋಡಲು ಕಾತರಗೊಂಡು ಹೂಬಾಣಗಳಿಲ್ಲದ ಕಾಮನಂತಿದ್ದ ಲಂಕಾಧಿಪತಿಯು ಪ್ರಮದವನಕ್ಕೆ ಬಂದ.

ಅವನ ಗಂಡಗಾಡಿಯನ್ನು ಜೊತೆಗಿದ್ದ ಖಚರಕಾಂತೆಯರು ಸೀತೆಗೆ ತೋರಿಸಿದರು. ಅವನ ರೂಪು ಸೀತೆಗೆ ತೃಣಸಮಾನವೆನಿಸಿತು; ಆದರೆ ಇವನು ರಘುಸೂನು ಲಕ್ಷ್ಮಣರ ಬಗ್ಗೆ ಏನು ಕೆಟ್ಟ ವಾರ್ತೆಯನ್ನು ತಂದಿರುವನೋ ಎಂದು ತಲ್ಲಣಗೊಂಡಳು. ಅವಳ ಬಳಿ ಬಂದ ದಶಾನನನು, "ಬಹುರೂಪಿಣಿ ವಿದ್ಯೆಯನ್ನು ನಾನು ಸಾಧಿಸಿದ್ದೇನೆ; ಈಗ ನನಗೆ ಅಸಾಧ್ಯವಾದ ಕೆಲಸವಾವುದೂ ಇಲ್ಲ. ಹಾಗಾಗಿ ನೀನು ರಾಮನ ಗೊಡವೆ ಬಿಟ್ಟು ನನ್ನನ್ನು ಒಪ್ಪಿಕೊಂಡು ಸಾಮ್ರಾಜ್ಯಸುಖವನ್ನು ಅನುಭವಿಸು" ಎಂದು ಸೊಕ್ಕಿನಿಂದ ನುಡಿದ. ವಿಹ್ವಲಗೊಂಡ ಸೀತಾದೇವಿಯು, "ನನ್ನ ಮೇಲೆ ಕರುಣೆಯಿರುವುದಾದರೆ, ದಶಕಂಧರನೇ, ರಘುತನೂಜನು ಆಯುಸ್ಸು ಇರುವವರೆಗೂ ಈ ಕಡೆ ಸುಳಿಯಬೇಡ"ಎನ್ನುತ್ತ ಮೂರ್ಛೆಯಿಂದ ಧರೆಗುರುಳಿದಳು. ಇದನ್ನು ಕಂಡು ಅವಳ ಬಗ್ಗೆ ದಶಾನನನಿಗೆ ಅನುಕಂಪೆ ಹುಟ್ಟಿತು; ಇದಕ್ಕೆ ತಾನೇ ಕಾರಣನೆಂದು ಹಳಿದುಕೊಂಡ. ಬಗ್ಗಡಗೊಂಡಿದ್ದ ನೀರು ತಿಳಿಯಾದಂತೆ ಅವನ ಮನಸ್ಸು ತಿಳಿಯಿತು; ಸೀತೆಯ ಬಗೆಗೆ ವೈರಾಗ್ಯವೇ ಹುಟ್ಟಿತು. ಎಷ್ಟಾದರೂ ಅವನು ಉದಾರಚರಿತನಲ್ಲವೇ! ತನಗೆ ಹತ್ತಿದ ಸಂಧ್ಯಾರಾಗವನ್ನು ರವಿ ಕಳೆದುಕೊಳ್ಳುವುದಿಲ್ಲವೇ, ಹಾಗೆ. ಕಾರುಣ್ಯರಸವು ಸೀತೆಯ ಬಗೆಗಿನ ಅವನ ಅನುರಕ್ತಿಯನ್ನು ತೊಳೆದುಬಿಟ್ಟಿತು. ಆಗ ಮುನ್ನಿನ ಸ್ವಭಾವದಂತೆ ಅವನು ತನ್ನ ಆಪ್ತರಿಗೆ ಹೀಗೆಂದು ನುಡಿದ: "ತನ್ನ ನಿಶ್ಚಲಗುಣದಿಂದ ಸೀತೆಯು ನನ್ನ ಬಗ್ಗೆ ಗಮನ ಹರಿಸಲಿಲ್ಲ; ನನ್ನ ದಿವ್ಯಭೂಷಣವಸನಗಳನ್ನಾಗಲೀ, ಖೇಚರರಾಜ್ಯವನ್ನಾಗಲೀ ತೃಣಸಮಾನವಾಗಿ ಕಂಡಳು. ಹೀಗಾಗಿ ಪೌರುಷಪ್ರಣಯಿಯಾದ ನಾನು ಪಾಪಗೈದು ಇವಳನ್ನು ಬಯಸುತ್ತೇನೆಯೇ?" ಪ್ರಾಣಪ್ರಿಯರಾದ ರಾಮಸೀತೆಯರನ್ನು ಕರ್ಮವಶದ ನೆವದಿಂದ ಕಾಮಮೋಹಿತನಾದ ತಾನು ಅಗಲಿಸಿದೆ; ಅವಿವೇಕಿಯಾದ ತನ್ನಿಂದ ಕುಲದ ಪೆಂಪು ಅಳಿಯಿತು ಎಂದು ಪರಿತಾಪಗೊಂಡ. ಕಾಮಪೀಡಿತನಾಗಿ ತಾನು ಈ ಮಾನಿನಿಯನ್ನು ರಾಮನಿಂದ ಬೇರ್ಪಡಿಸಿ ತಂದು ದುಃಖಕ್ಕೀಡುಮಾಡಿದೆ, ಅದರಿಂದ ದುರ್ಯಶಃಪಟಹರವ ಎಲ್ಲೆಡೆ ತುಂಬಿಕೊಂಡಿತಲ್ಲ ಎಂಬ ಪಶ್ಚಾತ್ತಾಪ ಅವನನ್ನು ಸುಟ್ಟಿತು. ವಿಭೀಷಣನು ತನಗೆ ಹಿತವನ್ನು ನುಡಿದರೂ ಕಿವಿಗೊಡಲಿಲ್ಲ; ಬದಲಿಗೆ ವಿನಯವಂತನಾದ ಅವನನ್ನು ಗದರಿ ದೂರಸರಿಸಿದವ ದುರ್ವ್ಯಸನಿ ತಾನು ಎಂಬ ಪಾಪಪ್ರಜ್ಞೆ ಅವನನ್ನಾವರಿಸಿತು. ಕೀರ್ತಿಗೆ ಮಸಿ ಹತ್ತುವುದಾಗಲೀ, ಪರಿಭವವುಂಟಾಗುವುದಾಗಲೀ, ಮನಸ್ಸಿನ ಕೇಡಾಗಲೀ, ಔನ್ನತ್ಯದ ಅವನತಿಯಾಗಲೀ, ದೂರಸರಿದ ಸುಗತಿಯಾಗಲೀ, ಗೆಳೆಯರ ಬೇಸರವಾಗಲೀ,

ಅಪವಾದವಾಗಲೀ ವಿಷಯವ್ಯಸನಿಗಳ ಅರಿವಿಗೆ ಬರುವುದೇ ಇಲ್ಲವಲ್ಲ ಎಂದು ದಶಶಿರನು ಬೇಗುದಿಗೊಂಡ. ಈಗಲೇ ಸೀತೆಯನ್ನು ರಾಮನಿಗೊಪ್ಪಿಸಿಬಿಟ್ಟರೆ, ಇದುವರೆಗೆ ತಾನು ತೋರಿಸಿದ ಕಡುಪು ಕಟ್ಟಾಯ ಬೀರಬಿರುದುಗಳು ವ್ಯರ್ಥಗೊಳ್ಳುತ್ತವೆ; ಹಾಗಾಗಬಾರದು. ಆದ್ದರಿಂದ ಎರಡೂ ಕಡೆಯ ಸೇನೆಗಳು ತನ್ನ ದೋರ್ವಲವನ್ನು ಕಂಡು ಹೊಗಳುವಂತೆ ಯುದ್ಧಗೈದು ಸೌಮಿತ್ರಿರಾಘವರನ್ನು ವಿರಥರನ್ನಾಗಿಸಿ ಸೆರೆಗೈದು ತಂದು ಆನಂತರ ಒಪ್ಪಿಸುತ್ತೇನೆ ಎಂದು ನಿರ್ಧರಿಸಿ ತನ್ನರಮನೆಗೆ ಬಂದ. ದುರಾಚಾರವೆಸಗಿದ್ದ ಪ್ರಭಾಮಂಡಲ ಅಂಗದ ಹನುಮಾದಿಗಳನ್ನು ಕೊಂದು ರಾಮನಿಗೆ ಅಳಲನ್ನುಂಟುಮಾಡುವೆನೆಂದು ಉದ್ವೇಗಗೊಂಡ.

ಆ ಸಮಯದಲ್ಲಿ ಪರಿಸರವು ತುಂಬ ಭಯಂಕರವಾಯಿತು; ಸೂರ್ಯಬಿಂಬದಲ್ಲಿ ನಡುವಿರುಳು ಕಾಮನಬಿಲ್ಲು ಮೂಡಿತು, ಗಿರಿಶಿಖರಗಳು ಬಿರಿದವು, ನೆಲವು ಗುಡುಗಿತು, ಹೆಣ್ಣಾನೆಗೆ ಮದವೇರಿತು, ಮದ್ದಾನೆಗಳ ಮದವುಡುಗಿತು, ಗೃಹದೇವತೆಗಳು ಒಟ್ಟಾಗಿ ಅತ್ತವು, ಆಗಸದಲ್ಲಿ ಧೂಮಕೇತುಗಳು ಮೂಡಿದವು, ಹಗಲೇ ಉಲ್ಕೆಗಳು ಬಿದ್ದವು, ಭೂಮಿ ನಡುಗಿತು, ನರಿಗಳು ಜೋರಾಗಿ ಊಳಿಟ್ಟವು, ಕೈದುಗಳು ಮುರಿದವು, ಸೂರ್ಯಚಂದ್ರರು ಮೇಲೆ ಹಾರಿದಂತಾಯಿತು, ಮಾಡದ ಮಣಿಕಳಶವು ಬಿದ್ದಿತು. ಇವುಗಳನ್ನು ಕಂಡ ನೈಮಿತ್ತಿಕರು ಮಾರನೆಯ ದಿನದ ಕದನದಲ್ಲಿ ದಶಾಸ್ಯನಿಗೆ ಅಪಾಯವಾಗುವುದೆಂಬುದನ್ನು ಗುರುತಿಸಿದರು; ಈ ಬಗ್ಗೆ ತಮ್ಮಲ್ಲಿಯೇ ಮಾತಾಡಿಕೊಂಡರು. ಆಗ ಅಸುರಪತಿಯು ತನ್ನ ಆಸ್ಥಾನದಲ್ಲಿ ಸಿಂಹಾಸನದಲ್ಲಿ ಕುಳಿತಿದ್ದ. ಅವನಿಗೆ ರಾಮನ ಕಡೆ ಸೆರೆಯಲ್ಲಿದ್ದ ತನ್ನ ಮಗ–ತಮ್ಮಂದಿರ ನೆನಪಾಯಿತು; ಕೋಪದಿಂದ ತಕ್ಷಣ ಯುದ್ಧಕ್ಕೆ ನಡೆಯಲು ಸಿದ್ಧನಾದ. ಅವನು ಶಸ್ತ್ರಶಾಲೆಗೆ ನಡೆದುದನ್ನು ಕಂಡ ಮಂಡೋದರಿ ಹೆದರಿಕೆಯಿಂದ ಮಂತ್ರಿಗಳನ್ನು ಕರೆದು ರಣವನ್ನು ನಿಲ್ಲಿಸುವ ಹಾಗೆ ಮಾಡಲು ಬೇಡಿಕೊಂಡಳು. ತಾವೂ ಈ ಯುದ್ಧವನ್ನು ನಿಲ್ಲಿಸುವಂತೆ ಬೇಡಿಕೊಂಡರೂ ರಾವಣನು ಕೇಳುತ್ತಿಲ್ಲವೆಂದೂ ಅವಳಾದರೂ ಸರ್ವಪ್ರಯತ್ನದಿಂದ ತಡೆಯಬೇಕೆಂದೂ ಕೇಳಿಕೊಂಡರು.

ಅದರಂತೆ ಆಕೆ ರಾವಣನ ಬಳಿ ಬಂದು ಎರಗಿ, "ನಾನು ಜಾನಕಿಯನ್ನು ರಘುತನೂಜನಿಗೊಪ್ಪಿಸಿ ನಿಮ್ಮ ತಮ್ಮ ಹಾಗೂ ಮಗನನ್ನು ವಾಪಸು ಕರೆತರುತ್ತೇನೆ. ರಣವ್ಯಸನದಿಂದ ಬಂಧುಗಳಿಗೆ ಸಾವುಂಟಾಗುತ್ತದೆ; ಆದ್ದರಿಂದ ಕಾಳಗವನ್ನು ಕೈಬಿಡಿರಿ" ಎಂದು ಬೇಡಿಕೊಂಡಳು. ಅವಳ ಮಾತುಗಳನ್ನು ಕೇಳಿದ ದಶಾಸ್ಯನ ರೋಷ ಮೇರೆವರಿಯಿತು; ಅಲ್ಲಿಂದ ತೊಲಗುವಂತೆ ಗದರಿಸಿದ. ಆದರೂ ಮಂಡೋದರಿ ಬಿಡಲಿಲ್ಲ; ಪರವನಿತೆಗೆ ಆಸೆಪಟ್ಟ ರಣದುರ್ಧರನಾದ ಅಶನಿವೇಗನು ನಾಶವಾದುದನ್ನು ನೆನಪಿಸಿ ಆಗ್ರಹವನ್ನು ಬಿಡುವಂತೆ ಕೋರಿಕೊಂಡಳು. ಎಂಟನೆಯ ಅರ್ಧಚಕ್ರವರ್ತಿಗಳು ಈಗಾಗಲೇ ಅವನಿಗೆ ಶತ್ರುಗಳಾಗಿದ್ದಾರೆ, ಹಾಗಾಗಿ ಸಂಧಿಗೊಡಂಬಟ್ಟು ವಿದ್ಯಾಧರ ರಾಜ್ಯಸುಖವನ್ನು ಅನುಭವಿಸು ಎಂದು ಪರಿಪರಿಯಿಂದ ಬೇಡಿದಳು. ಆಗ ರಾವಣನು, "ಅವರೆಲ್ಲ ಕದನದಲ್ಲಿ ನನಗೆ ಎದುರು ನಿಲ್ಲುವ ಗಂಡರಲ್ಲ, ನೀನು ಹೆದರಬೇಡ" ಎಂದು ಅವಳಿಗೆ ಸಮಾಧಾನ ಹೇಳಿ ಸನ್ನಾಹಭೇರಿಯನ್ನು ಹೊಯ್ಸಿದ. ಹಿತವರು ತಿಳಿ ಹೇಳಿದರೂ ಕೇಳದ ದಶಮುಖನು ಮತಿಗೆಟ್ಟನೆಂದು ಕುಲದೇವತೆಯು ಹುಯ್ಯಲಿಡುವ

ಹಾಗೆ ಭೇರೀನಾದವು ಕೇಳಿಸಿತು. ರಾವಣ ಸಿಂಹಾಸನಾರೋಹಣವು ಕೊನೆಗಂಡಿತೆಂದು ಅರುಹುವಂತೆ, ತಾರಗೆಗಳನ್ನು ಕತ್ತಲೆಯು ಸೆರೆಗೈದಂತೆ ಅವನ ಮೈಕಾಂತಿಯೊಡನೆ ಸೇರಿದ್ದ ಹಾರ ಮತ್ತು ಮಾಣಿಕದ ಪೆರ್ದೊಡವಿನ ಕಾಂತಿಯು ತನ್ನೊಡಲನ್ನು ದಾರುಣವಾಗಿ ಸುಡುವಂತೆ, ಕೋಪಪಾವಕವು ಕಣ್ಣುಗಳಲ್ಲಿ ಭುಗಿಲೇಳಲು ಖಚರೇಂದ್ರನು ಹೊರಟ. ಖಚರಪ್ರಮದೆಯರು ಚಾಮರವಿಕ್ಕುತ್ತಿರಲು, ಉತ್ತಮಾಂಗದ ಮೇಲೆ ಬೆಳ್ಗೊಡೆಯು ಚಂದ್ರನಂತೆ ಹೊಳೆಯುತ್ತಿರಲು ವಿಕ್ರಮಧವಳನು ಚಂದ್ರಹಾಸವನ್ನು ಜಡಿಯುತ್ತ ಮುನ್ನಡೆದ.

ಆಗ ಅಸಮಕದನಕೇಳೀಕುತೂಹಲ ಖಚರರು ಅವನ ಸುತ್ತ ಹೊರಟರು; ಅಪಾರ ಚತುರಂಗಸೇನೆ ಹಿಂಬಾಲಿಸಿತು; ಕರಿ ವೃಷಭ ಸಿಂಹ ಗರುಡ ಹಂಸ ಮುಂತಾದ ಮಹಾಧ್ವಜಗಳು ಆಗಸದಲ್ಲಿ ಮೆರೆದವು; ವಿವಿಧ ಬಗೆಯ ರತ್ನಖಚಿತವಾದ ಕನಕದಂಡಮಂಡಿತವಾದ ರಾಜಚಿಹ್ನಗಳು ಸಂದಣಿಸಿ ನಡೆದವು. ಆಗ ಆದ ನೆಲದ ಮೊಳಗು ಹರೆಯ ಸದ್ದು ಎಂಬಂತೆ; ಭೂಕಂಪವನ್ನು ಸೇನೆಯ ಭರದ ನಡಿಗೆಯಿಂದಾದ ಕಂಪವೆಂಬಂತೆ; ದಿಕ್ಕುಗಳಲ್ಲಿನ ಬೆಂಕಿಯನ್ನು ಅಂಬರಚರರ ಕಿರೀಟಗಳ ಮಾಣಿಕ್ಯ ಮಯೂಖಲೇಖೆಗಳೆನ್ನುವಂತೆ; ದಟ್ಟವಾಗಿ ಕವಿದ ಕಾವಳವನ್ನು ಸೇನೆಯ ಕಾಲುಧೂಳಿನಂತೆ; ಕದನಕುದುರೆಗಳಲ್ಲಿನ ನೀರನ್ನು ಆನಂದಬಾಷ್ಪವೆಂಬಂತೆ; ಹಿರಿದ ಕತ್ತಿಗಳನ್ನು ಕಬ್ಬಿಣ ಕಾಲಪುರುಷನನ್ನು ಯಮನೇ ತನ್ನ ನೆರವಿಗೆ ಬಂದಂತೆ; ಆಗಸದಲ್ಲಿ ಒಗೆದ ಧೂಮಕೇತುಗಳನ್ನು ವಿಜಯಕೇತುಗಳಂತೆ; ಕಣ್ಣಿನಿಂದ ಹೊಮ್ಮುವ ಉಲ್ಕೆಗಳನ್ನು ಪ್ರತಾಪಾನಲದ ಕಿಡಿಗಳಂತೆ ಬಗೆದು ಅಭೂತಪೂರ್ವವಾದ ಉತ್ಪಾತಗಳನ್ನು ಕಂಡರೂ ಗಮನ ಕೊಡದೆ ರಾವಣನು ಸಾವಿರಾರು ಆನೆಗಳ ನಡುವೆ ನಾಲ್ಕು ಆನೆಗಳನ್ನು ಹೂಡಿದ್ದ ವಿದ್ಯಾದೇವತಾ ನಿರ್ಮಿತವಾದ ರಥದಲ್ಲಿ ಕುಳಿತು, ಎತ್ತರವಾದ ಪತಾಕೆಯು ಪಟಪಟ ಹಾರುತ್ತಿರಲು, ಸಂಗ್ರಾಮಭೇರೀರವವು ದಿಕ್ಕುಗಳನ್ನು ತುಂಬಲು ಸುತ್ತಲೂ ನೋಡುತ್ತ ಬಂದ.

ಸಂಗ್ರಾಮಭೂಮಿಯಲ್ಲಿ ಒಡ್ಡಿ ನಿಂತ ದಶಾಸ್ಯನ ರಥವನ್ನು ಕಂಡು ಸೀತಾರಮಣನು, ಮುಂದೆ ಕಾಣಿಸುವುದೇನು ಪರ್ವತವೋ ಮೋಡವೋ ಎಂದು ಜಾಂಬವನನ್ನು ವಿಚಾರಿಸಿದ. ಅದು ಬಹುರೂಪಿಣೀ ವಿದ್ಯಾದೇವತಾ ನಿರ್ಮಿತವಾದ ರಥವೆಂದು ವಿವರಿಸಿದಾಗ, ಅದನ್ನು ಕೇಳಿದ ಲಕ್ಷ್ಮಣನು ಸನ್ನಾಹಭೇರಿಯನ್ನು ಹೊಯ್ಸಿದ. ಆರಾಧಿಸಿ ಪಡೆದ ಈ ತೇರು ದೋರ್ಬಲವಿಲ್ಲದವನಿಗೇನು ಪ್ರಯೋಜನ ಎಂದುಕೊಳ್ಳುತ್ತ ವೀರಶ್ರೀರಮಣನಾದ ರಘುವೀರನು ತನ್ನ ಸಿಂಹರಥವನ್ನೇರಿದ. ವಿಗ್ರಹಭೂಮಿಯಲ್ಲಿ ದಶಗ್ರೀವನನ್ನು ಕೊಂದು ವಿಜಯಲಕ್ಷ್ಮಿಯೊಡನೆ ಆತನ ಪಾಣಿಗ್ರಹಣವನ್ನು ನೆರವೇರಿಸುತ್ತೇನೆ ಎಂಬ ಆಗ್ರಹದಿಂದ ಲಕ್ಷ್ಮಣನು ತನ್ನ ಗರುಡ ರಥವೇರಿದ. ವಿದ್ಯಾಧರಪರಿವೃತರಾಗಿ ಅವರು ಚತುರಂಗಬಲದೊಡನೆ ರಣಭೂಮಿಗೈದುವಾಗ ಶುಭಶಕುನಗಳಾದವು. ಅವರನ್ನು ಕಂಡ ರಾವಣನು ಕೈ ಬೀಸಿದ; ಎರಡೂ ಕಡೆಯ ವೀರರು ಹೋರಾಟಕ್ಕೆ ಮೊದಲು ಮಾಡಿದರು. ವಾನರ ಬಲದ ನಳ ನೀಲ ಕುಮುದ ಮತ್ತು ಯೂಥನಾಥರು ಒಟ್ಟಾಗಿ ಸೇರಿ ದನುಜಬಲವನ್ನು ಪುಡಿಗೈದರು; ಆಗ ರಾಕ್ಷಸಬಲದ ಮುಖ್ಯ ನಾಯಕರಾದ ಕುಂಭ

ವಿಕ್ರಮ ಮಾಲಿ ವೀರ ಸೂರ್ಯರಥ ಮೊದಲಾದವರು ಬಂದು ತಮ್ಮ ಪಡೆಗೆ ಅಭಯ ನೀಡುವಂತೆ ಕಾದಲು ತೊಡಗಿದರು.

ಮತ್ತೊಂದು ಕಡೆ ಭೂತ ಸಂಭೂತ ಕುಟಿಲ ಕಾಲದಂಡ ಊರ್ಮಿ ತರಂಗ ಮುಂತಾದವರು ವಾನರ ಬಲದೊಡನೆ ಮಲೆತು ಕಾದಿದರು; ವನಗಜಸಂಕುಲವನ್ನು ಓಡಿಸುವ ಸಿಂಹದಂತೆ ಅವರನ್ನು ವಾನರರು ಬೆದರಿಸಿ ಅಟ್ಟಿದರು. ಆಗ ಮುಟ್ಟಿ ಮೂದಲಿಸುತ್ತ ಆಹವ ದುರ್ಜಯನಾದ ಮಯನು ತಾಗಿದ. ಅವನ ಹೋರಾಟದ ರೀತಿಯನ್ನು ಕಂಡು ಮಾರುತಿಗೂ ವಿಸ್ಮಯವಾಯಿತು. ಅವನ ಮೇಲೆ ಮಯ ಬಾಣಪ್ರಯೋಗಕ್ಕೆ ತೊಡಗಿದ; ನೋಡ ನೋಡುತ್ತಿರುವಂತೆಯೇ ದಿಗ್ವಲಯವೆಲ್ಲ ಬಾಣಮಯವಾಯಿತು. ಮಾರುತಿಯು ಭೈರವನಂತೆ ಅದನ್ನೆಲ್ಲ ಖಂಡಿಸಿ ಹಾಕಿದ. ಮಯನು ತ್ರಿಶೂಲದಿಂದ ಹೊಡೆದಾಗ ದನುಜ ಸೇನೆಯು ಬೊಬ್ಬಿರಿಯಿತು. ಆದರೇನು, ಪವನಸೂನುವು ಶೂಲಾಯುಧವನ್ನು ಕಡಿದಿಟ್ಟ. ಮಯನ ಚಿತ್ತ ಡೋಲಾಯಮಾನವಾಯಿತು; ಅವನು ಚಿಂತೆಯಿಂದ ಮರವಟ್ಟು ನಿಂತ. ಇದನ್ನು ಕಂಡ ದಶವದನನು ಪ್ರಜ್ವಲಿತವೆಂಬ ದಿವ್ಯರಥವನ್ನು ಅವನಿಗಾಗಿ ಕಳಿಸಿದ. ಅದನ್ನೇರಿದ ಮಯನು ಮಹಾಯುದ್ಧವನ್ನು ಮಾಡಿದ; ಅವನ ಕಡೆ ವಿಜಯಶ್ರೀ ಒಲಿಯುವಂತೆ ತೋರಿತು. ತನ್ನ ಬಾಹಾಪರಿಘವನ್ನು ಯಾರೂ ಎದುರಿಸಲಾರರು ಎನ್ನುವಂತೆ ಅವನು ಮರುನ್ನಂದನನನ್ನು ನಿರಾಯುಧನನ್ನಾಗಿ ಮಾಡಿದ. ಇದನ್ನು ನೋಡಿದ ಪ್ರಭಾಮಂಡಲನು ಮಯನೊಡನೆ ಯುದ್ಧಕ್ಕೆ ತೊಡಗಲು, ಅನತಿ ಕಾಲದಲ್ಲಿಯೇ ಮಯನು ಅವನನ್ನು ವಿರಥನನ್ನಾಗಿಸಿದ. ಆಗ ಸುಗ್ರೀವ ಬಂದ. ಸ್ವಲ್ಪ ಹೊತ್ತಿನಲ್ಲಿ ಅವನೂ ನಿರಸ್ತ್ರನಾದ. ಈಗ ಉರವಣಿಸಿ ಬಂದವನು ವಿಭೀಷಣ. ಆದರೇನು ಅವನು ಕೂಡ ಮಯನ ಭುಜಾಪರಿಘಕ್ಕೆ ಇನಿಸೂ ಕುಂದುಂಟುಮಾಡಲಾಗಲಿಲ್ಲ.

ಇದನ್ನು ಕಂಡ ದಾಶರಥಿಯು ಕಡುಮುಳಿದು, ರಕ್ಕಸರ ಉಸಿರನ್ನು ಹೀರುವ ಉದಗ್ರ ಕಾಳಸರ್ಪದಂತಿದ್ದ ಬಿಲ್ಲನ್ನು ಉಂಗುಷ್ಠದಿಂದ ಅದುಮಿ ಹಿಡಿದು ಹೆದೆಯೇರಿಸಿ ಜೇವೊಡೆದ. ಆ ಸದ್ದಿನಿಂದ ರಾವಣನ ದಿವ್ಯ ರಥದ ಗಜಾವಳಿಯು ಬೆದರಿದವು, ಸೂರ್ಯನ ಕುದುರೆಗಳು ಬೆಚ್ಚಿದವು; ವಜ್ರಾವರ್ತ ಧನುವಿನ ಘನ ಜ್ಯಾರವವು ಆಗಸವನ್ನೆಲ್ಲ ತುಂಬಿತು. ಆನಂತರ ಸಂವರ್ತಸಮಯದ ದಂಡಧರನಂತೆ ಮಾರ್ಪಡೆಯನ್ನು ಚದುರಿಸುತ್ತ ಬರುವ ಉದಾತ್ತ ರಾಘವನ ಹಿಂದೆ ವಿಭೀಷಣ ಪ್ರಭಾಮಂಡಲ ಹನುಮ ಸುಗ್ರೀವ ಮುಂತಾದವರು ಮತ್ತೆ ಕಾದಲು ಬಂದರು. ಪದ್ಮಧರನು ಅವರನ್ನು ಹಿಂದಕ್ಕಿಟ್ಟು ಮಯನ ಜೊತೆ ಮಹಾಯುದ್ಧಗೈದ; ಕೊನೆಗೆ ರಾಮನು ಜಯವನಿತೆಯ ಕೈವಿಡಿವ ರೀತಿಯಲ್ಲಿ ಮಯನನ್ನು ಹಿಡಿದ. ಅದನ್ನು ನೋಡಿದ ರಾಕ್ಷಸ ಚಕ್ರವರ್ತಿಯು ಚೀರುತ್ತ ರಾಮನೊಡನೆ ಕಾದಲು ತನ್ನ ರಥವನ್ನು ಅವನೆಡೆಗೆ ಚೋದಿಸಿದ. ಆದರೆ ಲಕ್ಷ್ಮಣನು ಸಿಡಿಲ ರಭಸ ಮತ್ತು ಯಮನ ತೀಕ್ಷ್ಣತೆಗಳಿಂದ ಕೂಡಿ ಅವನಿಗೆ ಅಡ್ಡಲಾಗಿ ಬಂದು ತನ್ನೆಡೆಗೆ ಕರೆದ. "ಅಂತೂ ಸಿಕ್ಕಿದೆಯಲ್ಲ! ರಾಘವನ ಅಮೋಘಾಸ್ತ್ರಕ್ಕೆ ಎದುರಾಗುವ ಸಾಮರ್ಥ್ಯ ನಿನ್ನಲ್ಲಿದೆಯೆ? ಮೊದಲು ನನ್ನ ಜೊತೆ ಯುದ್ಧ ಮಾಡು; ನನ್ನ ಕೂರ್ಗಣೆಯ ಮೊನಚನ್ನು ತೋರಿಸುತ್ತೇನೆ" ಎಂದು ಕಲ್ಪಾಂತದ ಅಂತಕನ ಹಾಗೆ ಆರಕ್ತೇಕ್ಷಣನಾಗಿ ಗರ್ಜಿಸಿದ. ಆ ಮಾತನ್ನು ಕೇಳಿದ ರಾವಣನು ಘನಗರ್ಜನೆಯನ್ನು ಕೇಳಿದ ಕೇಸರಿಯಂತೆ ಕೆರಳಿದ.

ಸಾವಿರ ಆನೆಗಳು ಹೂಡಿದ ಕುಲಾದ್ರಿಯಂತಿದ್ದ ತನ್ನ ರಥದಲ್ಲಿ ಬಂದು ರಾವಣನು ಲಕ್ಷ್ಮಣನೊಡನೆ ತಾಗಿದ. ಅದಕ್ಕೆದುರಾಗಿ ರೆಕ್ಕೆ ಮೂಡಿದ ಬೆಟ್ಟದಂತಿದ್ದ ಲಕ್ಷ್ಮಣನ ಗರುಡ ರಥವು ನುಗ್ಗಿತು. ಇಬ್ಬರ ರಥಗಳು ಎದುರುಬದರಾದವು. ನೋಟದಿಂದಲೇ ಕೊಲ್ಲುವ ಸರ್ಪದ ವಿಷಾಗ್ನಿಯಂತಿದ್ದ ತಮ್ಮ ದೃಷ್ಟಿಗಳಿಂದ ಇಬ್ಬರೂ ಒಬ್ಬರನ್ನೊಬ್ಬರು ನುಂಗುವಂತೆ ನಿಡುಗಾಲ ನೋಡಿದರು. ಆನಂತರ ಲಕ್ಷ್ಮೀಧರನು ರಾವಣನನ್ನು ಕುರಿತು, "ಬಹುದಿನಗಳ ನಂತರ ನನ್ನ ಕೈಗೆ ಸಿಕ್ಕಿಬಿದ್ದೆ; ಇನ್ನು ನಿನ್ನ ಜೀವದಾಸೆಯನ್ನು ತೊರೆ; ರಘುವೀರನ ಕಾಲುಗಳಿಗೆ ಬಿದ್ದು ಮೃತ್ಯುಂಜಯನಾಗು" ಎಂದ. ಇದರಿಂದ ಮುನಿದ ದಶಮುಖನು, "ಮೂರೂ ಲೋಕಗಳ ವೀರರನ್ನೆಲ್ಲ ಭುಜಬಲದಿಂದ ನನ್ನ ಕಾಲ್ಗೆರಗಿಸಿಕೊಂಡಿದ್ದೇನೆ. ನಿನ್ನನ್ನು ನಿಮಿಷಾರ್ಧದಲ್ಲಿ ಹದ್ದುಕಾಗೆಗಳಂತೆ ಎರಗಿಸಿಕೊಳ್ಳುತ್ತೇನೆ" ಎಂದು ಬಿಡೆನುಡಿದು ತನ್ನ ವಿಜಯ ಚಾಪವನ್ನು ಹಿಡಿದು ಜೇವಡೆದ, ಉಪೇಂದ್ರನೂ ತನ್ನ ಬಿಲ್ಲನ್ನು ಟೇಂಕರಿಸಿದ. ಅವುಗಳ ದನಿ ದಿನಕೃನ್ಮಂಡಲವನ್ನು ಮುಟ್ಟಿತು, ಕುಲಪರ್ವತಗಳಲ್ಲಿ ಮಾರ್ದನಿಸಿತು; ಕೇಳಿದ ಲೋಕಪಾಲರ ಮನದಲ್ಲಿ ಆತಂಕವನ್ನುಂಟುಮಾಡಿ ನಭವನ್ನೆಲ್ಲ ಆವರಿಸಿತು.

ಇಬ್ಬರೂ ಐದು ಸ್ಥಾನಗಳಲ್ಲಿ ನಿಂತು ಐದೂ ತೆರದಲ್ಲಿ ಶರಪ್ರಯೋಗ ಮಾಡಲು ಪುಂಖಾನುಪುಂಖವಾದ ಅಸ್ತ್ರಗಳಿಂದಾಗಿ ದೆಸೆ ಮಸುಳಿಸಿತು. ದನುಜೇಂದ್ರನ ಗಜರಥ ಮತ್ತು ಮನುಜೇಂದ್ರನ ಗರುಡರಥಗಳು ಪರಸ್ಪರ ಬಿಟ್ಟ ಬಾಣಗಳ ಪಂಜರದಲ್ಲಿ ಬಂಧಿತವಾದವು. ಒಬ್ಬೊಬ್ಬರೂ ಬಾಣಗಳನ್ನು ಕತ್ತರಿಸಲು ತುಂಡುಗಳು ಮುಗಿಲಿನಿಂದ ಬೀಳುವ ಪುಷ್ಕರಧಾರೆಯಂತೆ ಕಾಣಿಸಿತು. ಹೀಗಾಗಿ ಒಬ್ಬರು ಬಿಟ್ಟ ನಿಶಿತಾಸ್ತ್ರ ಇನ್ನೊಬ್ಬರ ದೇಹವನ್ನು ಚುಚ್ಚಲಾರದೆ ಹೋಯಿತು. ಅಸ್ತ್ರಶಸ್ತ್ರಬಲದಲ್ಲಿ, ದೃಢಕಾಯದಲ್ಲಿ, ಉದಗ್ರ ವಿಕ್ರಮದಲ್ಲಿ, ಅನಂತವೀರ್ಯದಲ್ಲಿ, ಅನೇಕ ಬಗೆಯ ಯುದ್ಧಕೌಶಲದಲ್ಲಿ, ಧನುಶ್ರಮದಲ್ಲಿ, ಅಪಾರಪೌರುಷದಲ್ಲಿ ಅವರಿಬ್ಬರೂ ಸಮಧಿಕರು. ಆದರೇನು, ಪ್ರತಿವಾಸುದೇವನ ಕೊನೆಗಂಡ ಆಯುಸ್ಸು ವಾಸುದೇವನಲ್ಲಿ ಜಯಪ್ರದವೆನಿಸಿತು. ಸಾಧಾರಣಾಸ್ತ್ರದಿಂದ ಅಸಾಧಣಾಣಾಸ್ತ್ರದವರೆಗೂ ಎಲ್ಲವನ್ನು ಪ್ರಯೋಗಿಸಿದರೂ ಕದನಕರ್ಕಶ ದಶವದನನು ಲಕ್ಷ್ಮೀಧರನನ್ನು ಸಾಧಿಸಲಾರದಾದ. ಕೊನೆಗೆ ಅವನು ದಿವ್ಯಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟ; ಆ ಪನ್ನಗಶರವು ಹೊಗೆಯುಗುಳುತ್ತ, ಕಿಡಿಗಳನ್ನು ಸೂಸುತ್ತ, ತನ್ನ ವಿಷಕಂಠದಿಂದ ಮೂರೂ ಜಗತ್ತುಗಳನ್ನೇ ನುಂಗಲು ಅಂತಕನ ಆಜ್ಞೆಯಿಂದಲೇ ಧಾವಿಸುತ್ತಿದೆ ಎಂಬಂತೆ ನುಗ್ಗಿ ಬಂತು; ಆದರೆ ಜನಾರ್ದನನು ಗರುಡಶರವನ್ನು ಪ್ರಯೋಗಿಸಿ ಅದನ್ನು ತುಂಡರಿಸಿದ. ಜಗತ್ತನ್ನು ಸುಟ್ಟುರಿಸುವ ಪ್ರಳಯಾಗ್ನಿ ಬೇರಾವುದೂ ಅಲ್ಲ, ರಾವಣನ ಉಗ್ರಶರವೇ ಎಂಬಂತೆ ಸಾವಿರಾರು ನಾಲಗೆಗಳನ್ನು ಚಾಚುತ್ತ ಬ್ರಹ್ಮಾಂಡವನ್ನೆಲ್ಲ ಆವರಿಸುತ್ತ ಬಂದ ವಹ್ನಿಬಾಣವನ್ನು ಲಕ್ಷ್ಮಣನು ತನ್ನ ವಾರುಣ ಬಾಣದಿಂದ ತವಿಸಿದ. ರಾವಣನ ತಮದ ಅಂಬನ್ನು ಗದಾಯುಧನು ತಪನಾಸ್ತ್ರದಿಂದಲೂ, ಅದ್ರಿಶರವನ್ನು ಸಿಡಿಲಬಾಣದಿಂದಲೂ, ತರುಶರವನ್ನು ಕುಠಾರಶರದಿಂದಲೂ, ಮೇಘಬಾಣವನ್ನು ಪವನಬಾಣದಿಂದಲೂ ತರಿದು ಹಾಕಿದ. ಹೀಗೆಯೇ, ದಶಕಂಧರನ ಎಲ್ಲ ಬಾಣಗಳನ್ನು ತಕ್ಕ ಪ್ರತಿಬಾಣದಿಂದ ದಾನವರಿಪುವು ಖಂಡಿಸಿದ.

ದಿವ್ಯಾಸ್ತ್ರಗಳಿಂದ ಲಕ್ಷ್ಮಣನನ್ನು ಗೆಲ್ಲಲು ಅಸಾಧ್ಯವೆಂದು ರಾವಣನಿಗೆ

ಮನವರಿಕೆಯಾಯಿತು. ಸಿಡಿಮಿಡಿಗೊಂಡು ತನ್ನ ಕೋಪಾಗ್ನಿಯಲ್ಲಿ ಬೇಯುತ್ತ, ತನ್ನ ದಿವ್ಯಬಾಣಗಳನ್ನೆಲ್ಲ ಲಕ್ಷ್ಮಣನು ನಾಶಗೊಳಿಸಲು ಅಸಹಾಯಕತೆಯಿಂದ ಉಮ್ಮಳಿಸುತ್ತ ಬಹುರೂಪಿಣೀವಿದ್ಯೆಯ ನೆರವಿನಿಂದ ಅಪಾರ ಸಂಖ್ಯೆಯ ದೇಹಗಳನ್ನು ಧರಿಸಿದ. ಆ ವಿದ್ಯೆಯ ಸಾಮರ್ಥ್ಯವೇನೆಂದು ಬಣ್ಣಿಸುವುದು? ಒಂದೇ ಕ್ಷಣದಲ್ಲಿ ಭೂಮಿ ಆಕಾಶ ದಿಗ್ವಲಯಗಳೆಲ್ಲ ರಾವಣಮಯವಾದವು! ಪ್ರಚಂಡ ದೋರ್ದಂಡರಾದ ಅಸಂಖ್ಯ ರಾವಣರು ಜನಾರ್ದನನ ಸುತ್ತ ಮುತ್ತಿಕೊಂಡು ಬಂದರು. ಅವರಲ್ಲಿ ಕೆಲವರು ಇರಿದರು, ಮತ್ತೆ ಕೆಲವರು ಹೊಡೆದರು, ಕೆಲವರು ಬಾಣಗಳನ್ನು ಬಿಟ್ಟರು, ಮತ್ತೂ ಹಲವರು ಬೊಬ್ಬಿಟ್ಟರು. ಹೀಗೆ ರಾವಣಕೋಟಿಯು ನಾನಾ ತೆರದಲ್ಲಿ ದಿವ್ಯಾಸ್ತ್ರಗಳನ್ನೂ ಶಸ್ತ್ರಗಳನ್ನೂ ಪ್ರಯೋಗಿಸಲು ಅದನ್ನೆಲ್ಲ ಧನುರ್ಧರನೂ ದುರ್ಧರಧುರೀಣನೂ ಆದ ಲಕ್ಷ್ಮಣನೊಬ್ಬನೇ ಎದುರಿಸಿದ. ಅವನ ಶರಸಂಧಾನದ ವೇಗವನ್ನು ಹೊಗಳಲು ಯಾರಿಂದಾದೀತು? ದೀಪಗಳ ಸಾಲುಸಾಲುಗಳನ್ನು ಚಂಡಮಾರುತವು ನಂದಿಸುವ ಹಾಗೆ, ಅಸಂಖ್ಯ ಇಬ್ಬನಿಮಣಿಗಳನ್ನು ಸೂರ್ಯನು ನಿರ್ಮೂಲಗೊಳಿಸುವಂತೆ ಆ ಕೋಟಿ ದೈತ್ಯರನ್ನು ತನ್ನ ನಿತಾಂತ ಶರಸಂಘಾತದಿಂದ ಲಕ್ಷ್ಮಣನು ಒರಸಿಹಾಕಿದ. ಸೌಮಿತ್ರಿಯು ತುಂಡರಿಸಿದ ನಾನಾ ರಾವಣರ ತಲೆಗಳು ರಣಮಂಡಲದಲ್ಲಿ ಹರಡಿದ ಕೆಂದಾವರೆಗಳಂತೆ ಕಂಡವು. ಸುಮಿತ್ರಾಪುತ್ರನ ಬತ್ತಳಿಕೆಯಲ್ಲಿ ವಿಶ್ರಮಿಸಿದ್ದ ಯೋಗಿನಿಯು ಕೆಂದಾವರೆಗಳ ರಾಶಿಯಿಂದ ಜಯಶ್ರೀಯನ್ನು ಅರ್ಚಿಸಿದಂತೆ ಆ ದೃಶ್ಯವಿತ್ತು. ರಾವಣರ ತಲೆಗಳು ಬೀಳಲು ಆಗಸದಲ್ಲಾಗಲೀ ಭೂಮಿಯಲ್ಲಾಗಲೀ ಎಡೆಯಿಲ್ಲವೆಂಬಂತಾಯಿತು. ಆಗ ರಾವಣನು ಬಹುರೂಪಿಣೀವಿದ್ಯೆಯನ್ನು ವಿಸರ್ಜಿಸಿದ; ಆದರೆ ಮುಳಿಸನ್ನು ಬಿಡಲಿಲ್ಲ. ಅವನು ಚಂದ್ರಹಾಸದಿಂದ ಇರಿಯಲು ಬಂದಾಗ ಲಕ್ಷ್ಮಣನು ತನ್ನ ಸೂರ್ಯಹಾಸದಿಂದ ಅದನ್ನು ತಪ್ಪಿಸಿದ. ಇದರಿಂದ ರಾವಣನ ಕೆಚ್ಚು ಹೆಚ್ಚಾಯಿತು. ಅವನು ತನ್ನ ದೊಣೆಯಿಂದ ದಿವ್ಯಾಸ್ತ್ರವನ್ನು ತೆಗೆಯಬೇಕೆನ್ನುವ ಹೊತ್ತಿಗೆ ದಿನಾಧಿಪನ ತೇಜಸ್ಸು ಹಿಂಗಿ ಮಬ್ಬು ಎಲ್ಲೆಡೆ ಆವರಿಸಿತು.

ಅಷ್ಟರಲ್ಲಿ ಈ ಕಡೆ, ಚಂದ್ರವರ್ಧನ ವಿಯಚ್ಚರನ ಎಂಟು ಮಂದಿ ಮಗಳಂದಿರು ಮಣಿಮಯ ವಿಮಾನಾರೂಢೆಯರಾಗಿ ವಿಯನ್ಮಾರ್ಗದಲ್ಲಿ ಬರುತ್ತ ಲಕ್ಷ್ಮಣನನ್ನು ನೋಡುತ್ತಿರಲು, ಅಲ್ಲಿಗೆ ಬಂದ ಕಾರಣವೇನೆಂದು ದಿವ್ಯಾಪ್ಸರೆಯರು ಅವರನ್ನು ವಿಚಾರಿಸಿದರು. ತಾವೆಲ್ಲ ತಂದೆಯೊಂದಿಗೆ ಸೀತಾಸ್ವಯಂವರಕ್ಕೆ ಹೋಗಿದ್ದಾಗ ಲಕ್ಷ್ಮಣನನ್ನು ಕಂಡು ಅವನಿಗೆ ಮನಸೋತರೆಂದೂ, ಅವನನ್ನೇ ಗಂಡನೆಂದು ಬಗೆದದ್ದರಿಂದ ಅವನ ಯುದ್ಧದ ಪರಿಯನ್ನು ನೋಡಲು ಬಂದವರೆಂದೂ ಹೇಳಿದರು. ಆ ಮಾತು ಲಕ್ಷ್ಮಣನಿಗೆ ಕೇಳಿಸಿತು; ಅವರನ್ನೆಲ್ಲ ಆತ ಪ್ರೀತಿಯಿಂದ ನೋಡಿದ. ಅವರು ಸಮಯಕ್ಕೆ ತಕ್ಕುದಾದ ರೀತಿಯಲ್ಲಿ ಅವನಿಗೆ ಸಮ್ಮೋಹನಶರಶಕ್ತಿಯನ್ನು ಪಡೆಯುವ ಮಂತ್ರವನ್ನು ಹೇಳಿಕೊಟ್ಟರು. ಅವನು ಮಂತ್ರಪೂರ್ವಕವಾಗಿ ಬಾಣವೊಂದನ್ನು ಹೊಡೆದಾಗ ಕ್ಷಣಾರ್ಧದಲ್ಲಿ ಕತ್ತಲೆ ಮಾಯವಾಗಿ ಸೂರ್ಯನು ಕಾಣಿಸಿಕೊಂಡ. ಸಮ್ಮೋಹನಾಸ್ತ್ರದ ಶಕ್ತಿಯು ಕುಂದಿದರೂ ರಾವಣನ ಧೈರ್ಯ ಮಸುಳಿಸಲಿಲ್ಲ; ಅದರ ಪ್ರತಿಯಾಗಿ ವಿಘ್ನವಿನಾಯಕಾಸ್ತ್ರವನ್ನು ಪ್ರಯೋಗಿಸಿದ; ಅದನ್ನು ಲಕ್ಷ್ಮಣನು ಸಿದ್ಧಾರ್ಥವಿದ್ಯಾಶರದಿಂದ ಹಿಂದಕ್ಕೆ ಓಡಿಸಿದ.

ರಾವಣನೆದೆಯಲ್ಲಿ ಕೋಪವಹ್ನಿ ಧಗಧಗನೆ ಉರಿಯಿತು. ಪರಸೈನ್ಯವನ್ನು ನಾಶಗೊಳಿಸುವ ಕಾಲಚಕ್ರದಂತಿದ್ದ ಚಕ್ರರತ್ನವಿದ್ದೆಡೆಗೆ ರಾವಣನ ಕೈ ಹೋಯಿತು; ಅದು ಕೋಟಿಸೂರ್ಯತೇಜದಿಂದ ಅವನ ಕೈಗೆ ಬಂತು. ಆದರೆ ಅದನ್ನು ಕುಂಬಾರನ ಚಕ್ರದಂತೆ ಬಗೆದು ಈ ಚಕ್ರವನ್ನು ಮುರಿದು ದಶಾನನನ ಕಂಠನಾಳವನ್ನು ಸೀಳಿ ತನ್ನ ಭುಜವೀರ್ಯವನ್ನು ತೋರಿಸುವೆನೆಂದು ಲಕ್ಷ್ಮಣನು ಕುಲಿಶಾಸ್ತ್ರದ ಹಿಳುಕನ್ನು ಬಿಲ್ಲ ನಾರಿಯಲ್ಲಿ ಹೊಂದಿಸಿ ಸಿದ್ಧನಾದ. ಆಗಲೇ ರಾಮಚಂದ್ರನು ಚಕ್ರವನ್ನು ಮಧ್ಯದಲ್ಲಿಯೇ ಕಡಿದು ತುಂಡುಮಾಡುತ್ತೇನೆ ಎಂದು ನಿರ್ಧರಿಸಿ ಧನುಸ್ಸನ್ನು ಠೇಂಕಾರ ಮಾಡಿ, ಐದು ಉಗ್ರಾಸ್ತ್ರಗಳನ್ನೂ ಬಿಲ್ಲಿನ ತಿರುವಿನಲ್ಲಿ ಜೋಡಿಸಿ ಆಲೀಢ ಭಂಗಿಯಲ್ಲಿ ನಿಂತು ಬಾಣ–ಕಡೆಗಣ್ಣು–ಕೈಗಳ ಹೊಂದಾಣಿಕೆಗೈದು ಅವ್ಯಗ್ರೇಕಾಗ್ರಚಿತ್ತನಾಗಿ ತ್ರಿಪುರವನ್ನು ಸುಡುವಾಗ ಚಂದ್ರಚೂಡನಿದ್ದ ಭಂಗಿಯಲ್ಲಿ ನಿಂತ. ಅದೇ ಸಮಯಕ್ಕೆ ಪ್ರಭಾಮಂಡಲನು ವಿಯಚ್ಚರನ ಚಕ್ರವನ್ನು ಶತಖಂಡವಾಗಿ ತುಂಡರಿಸುವೆನೆಂದು ಬಗೆದು, ಹಣೆಯಲ್ಲಿ ಬೆವರಹನಿಗಳು ಸಾಲುಗಟ್ಟಿರಲು, ತನ್ನ ಭುಜದಂಡವನ್ನೆತ್ತಿ ನಿಂತ. ದಶವದನನ ರಭಸವನ್ನು ಕೆಡಿಸುವೆನೆಂದು ವಿಭಿಷಣನೂ ಕಣ್ಣುಗಳಲ್ಲಿ ಕಿಡಿ ಸೂಸುತ್ತ ಶೂಲಾಯುಧವನ್ನೆತ್ತಿ ಭೈರವನಂತೆ ಸನ್ನದ್ಧನಾದ. ಲಕ್ಷ್ಮಣನನ್ನು ತಲುಪದಂತೆ ನಡುವೆಯೇ ಚಕ್ರವನ್ನು ಪುಡಿಪುಡಿ ಮಾಡುವೆನೆನ್ನುತ್ತ ಗದೆವಿಡಿದು ಸುಗ್ರೀವನು ಕಡೆಗಾಲದ ಸಿಡಿಲಂತೆ ಸಜ್ಜುಗೊಂಡ. ಎಡಗೈಯಲ್ಲಿ ಬಿಲ್ಲು ಹಿಡಿದು ಚಕ್ರವನ್ನು ಚೆಲ್ಲಾಡಿಸುವೆನೆಂದು ಪವನನಂದನನು ಲಾಂಗಲಶರಗಳನ್ನು ಅನುಗೊಳಿಸಿದ. ಸಾಕ್ಷಾತ್ ಇಂದ್ರನಂತೆ ವಜ್ರಾಯುಧವನ್ನು ಹಿಡಿದು ಅಂಗದನು ಚಕ್ರವನ್ನು ಆಕ್ರಮಿಸಲು ನಿರ್ಧರಿಸಿದ. ಹೀಗೆ ಅವರೆಲ್ಲ ಸಹಸ್ರ ಯಕ್ಷರಕ್ಷಿತವಾದ ಸುದರ್ಶನ ಚಕ್ರದ ಬರವನ್ನು ಎದುರು ನೋಡುತ್ತಿದ್ದರು.

ಅತ್ತ ದಶಮುಖನು ಲಕ್ಷ್ಮಣನಿಗೆ ಎದುರಾಗಿ ನಿಂತು, "ಅಳಿಗಂಡಿನಿಂದೇನು ಪ್ರಯೋಜನ? ಕೈದುವನ್ನು ಬಿಸುಡು; ಶಕ್ತ್ಯಾಯುಧದ ಏಟನ್ನು ಹೇಗೋ ನಿಭಾಯಿಸಿಕೊಂಡೆ, ಈಗ ಈ ಚಕ್ರವು ಎದುರಾದವರನ್ನು ಉಳಿಸುತ್ತದೆಯೇ?" ಎಂದು ಮೂದಲಿಸಿದ. 'ಲಕ್ಷ್ಮಣನನ್ನು ಇನ್ನು ಕಾಯುವವರಾರು, ಸೀತೆಯ ದುಃಖಕ್ಕೆ ಮೇರೆಯಿಲ್ಲ' ಎಂದು ಸುರಾಸುರ ಮಂಡಲವು ಚೀರಲು, ರಾವಣ ಸೈನಿಕರು ಹರ್ಷದಿಂದ ಕೇಕೆ ಹಾಕುತ್ತಿರಲು, ಕಪಿಬಲವು ಹೆದರಿ ಪಲಾಯನಗೈಯಲು ತ್ರಿಲೋಕ ವಿದ್ರಾವಣನಾದ ರಾವಣನು ದಿವ್ಯಚಕ್ರವನ್ನು ಎಸೆದ. ಅವನು ಬಿಟ್ಟ ಚಕ್ರವು ಕುಲಾಲ ಚಕ್ರದಂತೆ ಭೂಮಿಯನ್ನೂ ಎಂಟು ದಿಕ್ಕುಗಳನ್ನೂ ತಿರುಗಿಸುತ್ತ ಬಂದಿತು; ಅದರ ಬಿಸುಪಿನಿಂದ ಹೆದರಿ ಸೇರಿದ್ದ ಸುರಸಂಕುಲವೆಲ್ಲ ಓಡಿತು. ಚಕ್ರರತ್ನವು ತನ್ನನ್ನು ಆಕ್ರಮಿಸಲು ಸಿದ್ಧಗೊಂಡಿದ್ದ ಹನುಮಾದಿಗಳ ದಿವ್ಯಾಯುಧಗಳನ್ನೆಲ್ಲ ನೂಕಿ ಲಕ್ಷ್ಮೀಧರನ ಬಳಿ ಬಂದು ಮೂರು ಬಾರಿ ಪ್ರದಕ್ಷಿಣೆಗೈದು ಅವನ ಬಲಭುಜದ ಬಳಿ ನಿಂತುಬಿಟ್ಟಿತು! ಅದನ್ನು ಲಕ್ಷಣನು ನೋಡುತ್ತ ನಿಂತಾಗ ರಾಮಸ್ವಾಮಿಯು, "ಲಕ್ಷ್ಮಣಾ, ನಿನಗೆ ಚಕ್ರರತ್ನ ದೊರಕಿದೆ; ಅದನ್ನೇ ಅವನ ಮೇಲೆ ಬಿಡು" ಎಂದು ಕೂಗಿ ಹೇಳಿದ. ಆಗ ಲಕ್ಷ್ಮಣನು ಅದರೆಡೆಗೆ ತನ್ನ ಬಲಗೈಯನ್ನು ನೀಡಿದ; ಲಂಕಾಧೀಶನ ಜಯವಧುವು ಪಂಕಜನಾಭನನ್ನು ಪ್ರೀತಿಸಿ ಮುಂಚೆಯೇ ಕಳಿಸಿ ಕೊಟ್ಟಿದ್ದ ಕಂಕಣವು ರಣಮುಖದಲ್ಲಿ ಕೈಸೇರುತ್ತಿದೆ ಎಂಬಂತೆ ರತ್ನವು ಅವನ ಕೈಗೆ ಬಂತು.

ಚಕ್ರಪಾಣಿಯು ಆಗ ಖಚರರಾಜನಿಗೆ ಹೀಗೆಂದ: "ನಿನ್ನ ನಚ್ಚಿನ ಚಕ್ರರತ್ನವೂ ನಿನ್ನ ಮಾತನ್ನು ಕೇಳಲೊಲ್ಲದೆ ನನ್ನ ಹತ್ತಿರ ಬಂತು; ಬರಿದೆ ಕಾದಿ ಅನ್ಯಾಯವಾಗಿ ಸಾಯದೆ, ಅಣ್ಣನಲ್ಲಿ ಅಭಯವನ್ನು ಬೇಡಿಕೊಂಡು ಮುಂಚಿನಂತೆಯೇ ಮಕ್ಕಳು ತಮ್ಮಂದಿರೊಡನೆ ಲಂಕೆಯಲ್ಲಿ ಹಾಯಾಗಿ ಜೀವಿಸು. ನಿನ್ನ ದುರಾಗ್ರಹವನ್ನು ಬಿಸುಟು ಜಗಜ್ಜನನಿಯಾದ ಸೀತಾದೇವಿಯನ್ನು ಒಪ್ಪಿಸಿ, ನಿನ್ನ ಕಿರೀಟದ ಮಣಿಮಂಜರಿಯಿಂದ ರಾಮಸ್ವಾಮಿಯ ಚರಣಾರವಿಂದಗಳನ್ನು ಅರ್ಚಿಸು" ಎಂದು ಒಂದು ಅವಕಾಶವನ್ನಿತ್ತ. ಆಗ ದಶಮುಖನು ನಂದುವ ಸೊಡರಿನಂತೆ ಭುಗ್ಗನೆ ಉರಿದು, "ಸುಮಿತ್ರಾಪುತ್ರನೇ, ಚಕ್ರ ಹೋದರೆ ನನ್ನ ಪೌರುಷ ಹೋದಂತೇನಲ್ಲವಲ್ಲ; ಗಿಳಿಯ ಹಾಗೆ ಸೊರಟಬೇಡ; ಕೈಲಾಸವನ್ನೇ ಎತ್ತಿದ ಈ ನನ್ನ ಬಲಗೈಯನ್ನು ಎದುರಿಸುವ ಗಂಡರಾರಿದ್ದಾರೆ" ಎನ್ನುತ್ತ ರಥದಿಂದ ಹಾರಿ ಚಂದ್ರಹಾಸ ಖಡ್ಗವನ್ನು ನೆಲದ ಮೇಲೆ ಜಡಿಯುತ್ತ ಇರಿಯಲೆಂದು ಲಕ್ಷ್ಮಣನೆಡೆಗೆ ನುಗ್ಗಿದ. ಆಗ ಪರ್ವತವೆತ್ತಿದ ಮಹಾಸತ್ವನಾದ ಸೌಮಿತ್ರಿಯು ಅವನ ಮೇಲೆ ಸುದರ್ಶನ ಚಕ್ರವನ್ನು ಬಿಟ್ಟ. ಸೀತಾನಿಮಿತ್ತವಾಗಿ ಕಾಮನು ಬಿಟ್ಟಿದ್ದ ಬಾಣಗಳಿಂದ ಆಗಲೇ ಜರ್ಜರಿತವಾಗಿದ್ದುದರಿಂದ ಸುಲಭವಾಗಿ ಚಕ್ರವು ಅವನೆದೆಯನ್ನು ಹೊಕ್ಕು ಬೆನ್ನಿಂದ ಹೊರಬಂದಿತು; ವಜ್ರಾಯುಧದಿಂದ ಹೊಡೆಯಲು ಪರ್ವತವು ನೆಲ ನಡುಗುವಂತೆ ಬೀಳುವ ರೀತಿಯಲ್ಲಿ ರಾವಣನು ಗತಪ್ರಾಣನಾಗಿ ಬಿದ್ದ. ತೊಟ್ಟಿದ್ದ ಅನರ್ಘವಾದ ಮಣಿಭೂಷಣಗಳ ಕಾಂತಿ, ಕಿರೀಟದ ಮಿಸುಗುವ ಪದ್ಮರಾಗರುಚಿ, ಚಿಮ್ಮಿದ ರಕ್ತದ ಕೆಂಪು – ಇವೆಲ್ಲ ಸೇರಿ ಸುತ್ತುವರಿದು ರಾವಣನು ಮೇಲಿನಿಂದ ನೋಡಿದ ಅಪ್ಸರಾಗಣಕ್ಕೆ ಚಿತೆಯ ಬೆಂಕಿಯಲ್ಲಿ ಸುಡುವ ದೇಹದಂತೆ ಕಂಡ. ಮೇಲಿನಿಂದ ಪುಷ್ಪವೃಷ್ಟಿಯಾಯಿತು; ಸುರದುಂದುಭಿಗಳು ಮೊಳಗಿದವು; ಸುರಗಣವು ಉಪೇಂದ್ರನನ್ನು ಮನವಾರೆ ಸ್ತುತಿಗೈದಿತು; ಜಯಧ್ವಜ ಗಗನದಲ್ಲಿ ಹಾರಾಡಿತು; ಕಪಿಸೈನ್ಯದಲ್ಲೆದ್ದ ಜಯಘೋಷವು ಸಮುದ್ರಘೋಷವನ್ನು ಮೀರಿಸಿತು. ಓಡುತ್ತಿದ್ದ ರಾಕ್ಷಸಸೈನ್ಯದೆಡೆಗೆ ಅಭಯ ಘೋಷಣೆ ಮಾಡಲಾಯಿತು.

ನೆಲದ ಮೇಲೆ ಬಿದ್ದಿದ್ದ ರಾವಣನನ್ನು ನೋಡಿದ ವಿಭೀಷಣನು ಸಹೋದರಪ್ರೇಮದ ಕಾರಣದಿಂದ ಮೂರ್ಚೆ ಹೋದ. ಶೀತಲಕ್ರಿಯೆಯಿಂದ ಸ್ವಲ್ಪ ಹೊತ್ತಿನ ಬಳಿಕ ಮೇಲೆದ್ದು ಶೋಕವಿಹ್ವಲನಾಗಿ ಪ್ರಲಾಪಗೈದ. ಇತ್ತ, ರಾವಣನ ಮರಣವಾರ್ತೆಯನ್ನು ಕೇಳಿ ರಂಭೆ ಚಂದ್ರಾನನೆ ಚಂದ್ರಿಕೆ ಪ್ರವರೆ ಊರ್ವಶಿ ಮಂಡೋದರಿ ಕಮಲೆ ಕಮಲಾನನೆ ರುಕ್ಮಿಣಿ ರತ್ನಮಾಲೆ ಶ್ರೀಮತಿ ಶ್ರೀಮಾಲೆ ಶ್ರೀಕಾಂತೆ ಸಂಧ್ಯಾಮಾಲೆ ತಟಿನ್ಮಾಲೆ ಅನಂಗಸೌಂದರಿ ಆನಂದೆ ವಸುಂಧರೆ ಪ್ರಭಾವತಿ ಪದ್ಮಾವತಿ ಭಾನುಮತಿ ಧೃತಿ ಮನೋವೇಗೆ ರತಿಕಾಂತೆ ಮುಂತಾದ ನಲವತ್ತೆಂಟು ಸಾವಿರ ಮಂದಿ ಅಂತಃಪುರಸ್ತ್ರೀಯರು ಓಡಿ ಬಂದು ಅವನ ಕಳೇಬರವನ್ನು ತಕ್ಕೈಸಿಕೊಂಡು ಮೂರ್ಚೆ ಹೋದರು. ಎಚ್ಚೆತ್ತ ಬಳಿಕ ಅವರನ್ನು ವಿಷಾದವಹ್ನಿಯು ಆವರಿಸಿತು; ಪರಿಪರಿಯಿಂದ ಗೋಳಿಟ್ಟರು. ಅವರ ಅಳಲನ್ನು ಕಂಡು ಶ್ರೀರಾಮನಿಗೆ ಮರುಕವೆನಿಸಿತು. "ಈತನ ಮರಣವು ದುರ್ವ್ಯಸನದಿಂದ ಆದುದೇ ಹೊರತು ನಮ್ಮಿಂದಾದುದಲ್ಲ. ಯಾರಿಗಾದರೂ ಸಂಸಾರವೆಂಬುದು ಇಷ್ಟೇ ಅಲ್ಲವೇ? ಯಾರ ಜೀವನವಾಗಲೀ ಯೌವನಧನಧಾನ್ಯಗಳಾಗಲೀ ಇಷ್ಟಸಂಯೋಗವಾಗಲೀ ನಶ್ವರವಲ್ಲವೇ? ಆದ್ದರಿಂದ ನೀವೆಲ್ಲ ಸಮಾಧಾನ ಹೊಂದಬೇಕು" ಎಂದು ಅವರನ್ನೂ ವಿಭೀಷಣನನ್ನೂ

ಸಂತೈಸಿದ. ಯುದ್ಧದಲ್ಲಿ ರಾವಣನಿಗೇನೋ ಅವಸಾನವಾಯಿತು; ಆದರೆ ಉಳಿದವರಲ್ಲಿ ನಮಗೆ ಯಾವ ದ್ವೇಷವೂ ಇಲ್ಲ ಎಂದು ರಾಮನು ಲಕ್ಷ್ಮಣನೊಡಗೂಡಿ ಸಾಮಂತರೊಡನೆ ಮಂಡೋದರಿಯ ಸಮೀಪಕ್ಕೆ ಬಂದು, ಸಂಸಾರದ ಸ್ವರೂಪವನ್ನು ವಿವರಿಸಿ ಅವಳನ್ನು ಸಾಂತ್ವನಗೊಳಿಸಿದ.

ಆನಂತರ ಕರ್ಪೂರ ಅಗರು ಚಂದನ ಮುಂತಾದವುಗಳಿಂದ ಯಥಾವಿಧಿಯಾಗಿ ರಾವಣನಿಗೆ ಸಂಸ್ಕಾರ ನಡೆಯಿತು. ಇಂದಗಿ ಮೇಘವಾಹನ ಕುಂಭಕರ್ಣ ಮಯ ಮಾರೀಚ ಮೊದಲಾದವರನ್ನು ಬಿಡುಗಡೆಗೊಳಿಸಿ ಕರೆತರಿಸಿದ ರಾಮನು ಅವರ ಶೋಕವನ್ನೂ ಉಪಶಮಗೊಳಿಸಿದ. "ರಾವಣನೊಬ್ಬ ಸತ್ತ; ನೀವೆಲ್ಲ ವಿಭೀಷಣನೊಡನೆ ಸದ್ಭಾವದಿಂದ ಕೂಡಿದ್ದು ಎಂದಿನಂತೆಯೇ ಖಚರಶ್ರೀವಿಭವವನ್ನು ಅನುಭವಿಸಿರಿ" ಎಂದು ಹಿತ ನುಡಿದ. ರಾಮಲಕ್ಷ್ಮಣರ ನಿಷ್ಕಷಾಯತ್ವ, ಸಂಸಾರಭೀರುತ್ವ, ಧೈರ್ಯ, ಬಾಹುವೀರ್ಯ ಮುಂತಾದವುಗಳನ್ನು ಕಂಡು ಕುಂಭಕರ್ಣಾದಿಗಳಿಗೆ ಆಶ್ಚರ್ಯಸಂತೋಷಗಳಾದವು. ಅವರಲ್ಲಿ ಈ ಸಂಸಾರಸುಖದ ಬಗ್ಗೆ ನಿರ್ವೇಗವುಂಟಾಯಿತು. ರಾಮಲಕ್ಷ್ಮಣರೊಡನೆ ಪದ್ಮಸರೋವರದಲ್ಲಿ ಜಲದಾನಕ್ರಿಯೆಯನ್ನು ನೆರವೇರಿಸಿದರು.

* * * * *

# ೧೫. ಸೀತಾ ಪರಿತ್ಯಾಗ

ಹೊತ್ತು ಹುಟ್ಟುವ ವೇಳೆಗೆ, ಧಾತಕೀಷಂಡದಲ್ಲಿ ತೀರ್ಥಂಕರಕುಮಾರ ಜನ್ಮೋತ್ಸವ ನಿಮಿತ್ತ ಚತುರ್ನಿಕಾಯ ದೇವನಿಕಾಯ ಭಗವಜ್ಜನ್ಮಾಭಿಷೇಕ ಮಹೋತ್ಸವವನ್ನು ತೀರಿಸಿಕೊಂಡು ಕುಸುಮಾಯುಧವನದಲ್ಲಿ ಸರ್ವಜ್ಞತ್ವವನ್ನು ಪಡೆದ ಅಪ್ರಮೇಯ ಭಟ್ಟಾರಕರು ಲಂಕೆಯ ಮಾರ್ಗವಾಗಿ ಹೋಗುತ್ತ ಅಲ್ಲಿನ ನಂದನವನದಲ್ಲಿ ಬೀಡುಬಿಟ್ಟಿರುವ ವಿಷಯ ರಾಮಲಕ್ಷ್ಮಣರಿಗೆ ತಿಳಿಯಿತು. ಇಂದ್ರಜಿತು ಮೇಘವಾಹನ ಕುಂಭಕರ್ಣಾದಿಗಳು ಹಾಗೂ ವಾನರಧ್ವಜರೊಡನೆ, ಶಂಖ ಪಟಹ ಮುಂತಾದ ವಾದ್ಯಧ್ವನಿಗಳ ಸಮೇತ ಅವರನ್ನು ಕಂಡು ಬಲಗೊಂಡು ವಿನಮಿತರಾಗಿ ಭಕ್ತಿಭಾವದಿಂದ ಅರ್ಚಿಸಿದರು. ಭಟ್ಟಾರಕರು ಸಂಸಾರಕ್ಷಯ ಕಾರಣವಾದ ಧರ್ಮವನ್ನೂ, ಆಪ್ತಗುಣಗಳನ್ನೂ, ಜೀವ ಮುಂತಾದ ತತ್ವಭೇದಗಳನ್ನೂ ವಿವರಿಸಲು ಅದನ್ನು ಕೇಳಿ ಸಂತುಷ್ಟಗೊಂಡರು. ಆನಂತರ ಇಂದ್ರಜಿತ್ತು ಮೇಘವಾಹನ ಕುಂಭಕರ್ಣ ಮಯ ಮಾರೀಚರು ತಮ್ಮತಮ್ಮ ಭವಾಂತರಗಳನ್ನು ಮುನಿಗಳಿಂದ ತಿಳಿದು ಅಲ್ಲಿಯೇ ದೀಕ್ಷೆಯನ್ನು ಹೊಂದಿದರು. ಮಂಡೋದರಿ ಹಾಗೂ ನಲವತ್ತೆಂಟು ಸಾವಿರ ಮಂದಿ ವಿದ್ಯಾಧರಿಯರು ಶಶಿಕಾಂತ ಆರ್ಯಿಕೆಯರ ಸಮಕ್ಷದಲ್ಲಿ ದೀಕ್ಷೆಗೊಂಡು ಶುಭಧ್ಯಾನಕ್ಕೆ ತೊಡಗಿದರು.

ಇತ್ತ ಬಲದೇವ ವಾಸುದೇವರು ಭಟ್ಟಾರಕರಿಗೆ ಪುನರ್ನಮಸ್ಕಾರವನ್ನು ಮಾಡಿ ಸುಗ್ರೀವ ಅಂಗದ ಪ್ರಭಾಮಂಡಲ ಮರುತ್ಸುತ ವಿರಾಧಿತ ಮುಂತಾದ ಪ್ರಮುಖ ವಿದ್ಯಾಧರರೊಡನೆ ಗಜಾರೂಢರಾಗಿ ಹೊರಟು ಲಂಕೆಯ ಚೆಲುವಾದ ಉಪವನದೆಡೆಗೆ ಸಾಗಿದರು. ಸುದರ್ಶನಚಕ್ರವು ಮುಂದೆ ಯಕ್ಷರ ಕಾಪಿನಲ್ಲಿ ಸಾಗಿತು; ಇರ್ವಕ್ಕಗಳಲ್ಲಿ ವಿಯಚ್ಚರ ಕುಲಪ್ರಭುಗಳು ಬರಲು ಬಲಾಚ್ಯುತರು ನಡೆತಂದರು. ಪುರವನ್ನು ಹೊಕ್ಕು ರಾಜವೀಧಿಯಲ್ಲಿ ಬರುತ್ತಿರುವಾಗ, ಸೀತಾದರ್ಶನೋತ್ಸುಕನಾಗಿರುವ ರಾಮಸ್ವಾಮಿಯ ಮನಸ್ಸನ್ನು ಅರಿತು ಚಾಮರಧಾರಿಣಿಯರು "ದೇವ, ಸೀತಾದೇವಿಯವರು ಈ ಕಡೆಯ ಪುಷ್ಪಪ್ರಕೀರ್ಣ ಎಂಬ ಬೆಟ್ಟದ ಬಳಿಯ ನಂದನವನದಲ್ಲಿದ್ದಾರೆ" ಎಂದು ಬಿನ್ನವಿಸಿದರು. ಆ ಕಡೆಗೆ ವಿಜಯವಾರಣವು ಮುಂದುವರೆಯಿತು; ಅವರ ಬರವು ಸೀತಾದೇವಿಯ ಪಕ್ಕದಲ್ಲಿದ್ದ ಖೇಚರಿಯರಿಗೆ ಗೋಚರಿಸಿತು. ಮಂಜು ಸುರಿದು ಬಾಡಿದ ಅಂಬುಜಲತೆಯಂತಿದ್ದ ಜಾನಕಿಯನ್ನು ನೋಡಿದಾಕ್ಷಣವೇ ಶ್ರೀರಾಮನು ಉತ್ಸಾಹಗೊಂಡು ವಿಜಯಸ್ತಂಬೇರಮದಿಂದ ಧರೆಗಿಳಿದ.

ವಲ್ಲಭನ ಬರವನ್ನು ಕಂಡ ದೇವಿಯ ದೇಹ ಕಂಪಿಸಿತು, ಮೈ ರೋಮಾಂಚನಗೊಂಡಿತು. ಕೈಮುಗಿದು ರಾಘವನ ಪದಪದ್ಮಗಳಲ್ಲಿ ಮರಿದುಂಬಿಗಳಂತಿದ್ದ ತನ್ನ ತಲೆಗೂದಲನ್ನು ಹರಡಿ ಎರಗಿದಳು. ಆಗ, ಆಕೆಯ ಪತಿವ್ರತಾಗುಣಸಮೃದ್ಧಿ ದರ್ಶನಶುದ್ಧಿಗಳನ್ನು ಮನದುಂಬಿ ಸ್ತುತಿಸುತ್ತ ನಿರ್ಜರರು ಅವರ ಮೇಲೆ ಹೂಮಳೆಗರೆದರು; ನಾನಾ ಬಗೆಯಲ್ಲಿ ಪೂಜಿಸಿದರು. ಅದನ್ನು ಕಂಡ ಖಚರಾದಿನಾಯಕರು ವಿಸ್ಮಿತರಾಗಿ ಜಾನಕಿಗೆ ಕೈಮುಗಿದರು. ಸೀತೆಯ ಶೀಲವನ್ನು ಅಮರರು ಹೊಗಳಿದ್ದನ್ನು ಕೇಳಿ ರಾಮನಿಗೆ ಆನಂದಪುಲಕಗಳು ಹೊಮ್ಮಿದವು. ತನಗೆರಗಿದ ಲಕ್ಷ್ಮೀಧರನನ್ನು ಜಾನಕಿಯು ಹರಸಿದಳು, ತನಗಾಗಿ ಅವರು ಎಷ್ಟು ಕಷ್ಟಪಟ್ಟರೆಂಬುದನ್ನು ನೆನೆದು ಶೋಕಿಸಿದಳು. ರಾಮಲಕ್ಷ್ಮಣರು ಆಕೆಯನ್ನು ಸೂಕ್ತ ಮಾತುಗಳಿಂದ ಸಂತೈಸಿದರು. ಆನಂತರ ತನಗೆರಗಿದ ಆಕೆಯನ್ನು ಪ್ರಭಾಮಂಡಲನು ಪ್ರೀತಿಯಿಂದ ಹರಸಿದ; ಆಮೇಲೆ ಸುಗ್ರೀವ ನಳ ನೀಲ ಅಂಗದ ಹನುಮ ಚಂದ್ರಾಭ ಸುಷೇಣ ಜಾಂಬವ ಮುಂತಾದವರನ್ನು ಒಬ್ಬೊಬ್ಬರನ್ನಾಗಿ ಪರಿಚಯ ಮಾಡಿಕೊಟ್ಟು ಸಂತೋಷವುಂಟುಮಾಡಿದ.

ಆನಂತರ ಶ್ರೀರಾಮನು ಸತಿಯೊಡನೆ ಮದೇಭವನ್ನೇರಿ ವಿದ್ಯಾಧರರು ಸುತ್ತುವರಿದಿರಲು, ಬೇರೊಂದು ಪೂರ್ಣ ಚಂದ್ರನಂತೆ ಬೆಳ್ಗೊಡೆಯು ಶೋಭಿಸಲು, ದೆಸೆದೆಸೆಗಳನ್ನು ತೂರ್ಯರವವು ತುಂಬಿರಲು ನಡೆತಂದು ರಾವಣನ ಅರಮನೆಯನ್ನು ಹೊಕ್ಕ. ವಿಜಿಗೀಷು ಲಕ್ಷ್ಮಣನೂ ತನ್ನ ಗಜವನ್ನೇರಿ ಅಣ್ಣನನ್ನು ಹಿಂಬಾಲಿಸಿದ. ಅವರು ಮೊದಲು ಅಲ್ಲಿನ ಶಾಂತಿಜಿನಭವನವನ್ನು ಮೂರು ಸೂಳ್ ಬಲವಂದು, ಜಿನಪತಿಯನ್ನು ಸ್ತುತಿಶತದಿಂದ ಹೊಗಳಿ, ದಿವ್ಯಾರ್ಚನೆಗಳನ್ನು ಸಮರ್ಪಿಸಿದರು. ಇತ್ತ, ಸಹಸ್ರಾಂತಃಪುರ ಪ್ರಧಾನೆಯಾದ ವಿದಗ್ಧೆ ಎಂಬ ಹೆಸರಿನ ತನ್ನ ಮಹಾದೇವಿಯನ್ನು ವಿಭೀಷಣನು ರಾಮಸ್ವಾಮಿಯಲ್ಲಿಗೆ ಕಳಿಸಿದ. ಆ ಮಹಾನುಭಾವೆಯು ಬಂದು ರಾಮಲಕ್ಷ್ಮಣಸೀತಾದೇವಿಯರಿಗೆರಗಿ ತಮ್ಮ ಅರಮನೆಗೆ ದಯಮಾಡಿಸಬೇಕೆಂದೂ, ಅವರ ಪಾದಾರ್ಚನೆ ಮಾಡುವೆನೆಂದೂ ಬಿನ್ನೈಸಿದಳು. ಅಷ್ಟು ಹೊತ್ತಿಗೆ ವಿಭೀಷಣನೇ ಬಂದು ತಾನೂ ಆಹ್ವಾನಿಸಿ ಅವರನ್ನು ವೈಭವದಿಂದ ತನ್ನರಮನೆಗೆ ಕರೆದೊಯ್ದು ಸಿಂಹಾಸನದಲ್ಲಿ ಕುಳ್ಳಿರಿಸಿ, ಮಣಿಭಾಜನದಲ್ಲಿ ಅರ್ಘ್ಯಪಾದ್ಯಗಳನ್ನು ಸಮರ್ಪಿಸಿ, ಔತಣವೇರ್ಪಡಿಸಿ, ದಿವ್ಯ ಮಣಿಮಯಭೂಷಣಾದಿಗಳನ್ನು ಕಾಣಿಕೆಯಾಗಿತ್ತು ತನ್ನ ವಿನಯವನ್ನು ಪ್ರಕಟಿಸಿದ.

ಹೀಗೆ ಕೆಲದಿನಗಳು ಸಂಭ್ರಮದಿಂದ ಕಳೆಯಿತು. ಒಂದು ಶುಭದಿನ ಶುಭವೇಳೆ ವಿಭೀಷಣ ಸುಗ್ರೀವಾದಿಗಳು ಪರಮೋತ್ಸಾಹದಿಂದ ರಾಮಲಕ್ಷ್ಮಣರಿಗೆ ರಾಜ್ಯಾಭಿಷೇಕವನ್ನು ಮಾಡಿದರು. ಪೂರ್ವಜನ್ಮಸುಕೃತದಿಂದ ದಿವ್ಯಾಯುಧ ವಸ್ತುವಾಹನಗಳನ್ನೂ ದಿವ್ಯಸ್ತ್ರೀಯರನ್ನೂ ಸ್ವೀಕರಿಸಿ, ಉಪೇಂದ್ರನು ಶುಭದಿನ ಮುಹೂರ್ತದಲ್ಲಿ ಈ ಮುಂಚೆ ತಾನು ಮದುವೆ ನಿಂದ ಅರಸಿಯರನ್ನು ಕರೆಸಿ, ಅವರೊಡನೆ ಅತಿಶಯ ರೂಪವಿದ್ಯಾವಿನಯಸಮನ್ವಿತರಾದ ಚಂದ್ರವರ್ಧನನ ಮಕ್ಕಳನ್ನೂ ಮದುವೆ ನಿಂದ. ಸುಖದಿಂದ ಕೆಲ ಕಾಲ ಕಳೆಯಿತು.

ಈ ಕಡೆ, ದೀಕ್ಷೆ ವಹಿಸಿ ತಪಸ್ಸಿನಲ್ಲಿ ತೊಡಗಿದ್ದ ಇಂದ್ರಜಿತು ಮೇಘವಾಹನರು ಕೇವಲಜ್ಞಾನವನ್ನು ಪಡೆದು ನರ್ಮದೆಯ ತೀರದಲ್ಲಿ ಮುಕ್ತಿಯನ್ನು ಪಡೆದರು. ಅದರಿಂದಾಗಿ

ಆ ನದಿಯು ಮೇಘರವೆ ಎಂಬ ಹೆಸರಿನ ತೀರ್ಥವಾಯಿತು. ಜಂಬುಮಾಲಿಯು ತೂರ್ಣಮತಿ ಎಂಬ ಬೆಟ್ಟದ ತಪ್ಪಲಿನಲ್ಲಿ ತಪಗೈದು ಅಹಮಿಂದ್ರನಾಗಿ ಹುಟ್ಟಿದ. ಕುಂಭಕರ್ಣನು ನರ್ಮದೆಯ ತೀರದಲ್ಲಿ ಕೇವಲಜ್ಞಾನವನ್ನು ಪಡೆದು ಮೋಕ್ಷಪ್ರಾಪ್ತನಾದ. ಅದರಿಂದಾಗಿ ಆ ನದಿಗೆ ಪೀತರವೆ ಎಂಬ ಹೆಸರುಂಟಾಯಿತು. ಮಾರೀಚನು ಕಲ್ಪಗತನಾದ; ಮಯನು ಅಂಬರ ಚಾರಣತ್ವವನ್ನೂ, ಸರ್ವೌಷಧರ್ಧಿತ್ವವನ್ನೂ ಅವಧಿಜ್ಞಾನವನ್ನೂ ಹೊಂದಿ ಮಲರಹಿತನಾಗಿ ಬಾಳಿ ಸತ್ತು ಈಶಾನಕಲ್ಪವನ್ನು ಸೇರಿದ. ಮಂಡೋದರಿ ಮುಂತಾದವರು ಅನೇಕ ಕಾಲ ದುರ್ಧರ ಕಾಯಕ್ಲೇಶದಿಂದ ಕೂಡಿದ ತಪಸ್ಸನ್ನು ಕೈಗೊಂಡು, ನೋಂಪಿಗಳನ್ನು ಮಾಡಿ, ವಿಹರಿಸುತ್ತ ನಡೆದು ವೈತರಿಣೀಪರ್ವತದ ಬುಡದಲ್ಲಿನ ಶಾರ್ದೂಲಗುಹೆಯೊಂದರಲ್ಲಿ ಧರ್ಮಧ್ಯಾನದಿಂದ ಮುಡಿಪಿ ಈಶಾನಕಲ್ಪವನ್ನು ಸೇರಿದರು. ಉಳಿದ ಅರಸಿಯರು ಉಗ್ರೋಗ್ರವಾದ ತಪಸ್ಸನ್ನಾಚರಿಸಿ ಶುಭಧ್ಯಾನಗೈದು ಸತ್ತು ತಮಗೆ ಅನುಗುಣವಾದ ಸ್ಥಾನದಲ್ಲಿ ಹುಟ್ಟಿದರು.

ಮತ್ತೆ ಈ ಕಡೆ ಲಂಕೆಯಲ್ಲಿ ರಾಮಲಕ್ಷ್ಮಣರು ಚಕ್ರವರ್ತಿಗಳಾಗಿ ಸುಖದಿಂದಿರುವಾಗ, ಅಪರಾಜಿತೆಯು ರಘುರಾಮನನ್ನು ನೆನೆಸಿಕೊಂಡು ಶೋಕಿತೆಯಾದಳು. ಅಷ್ಟು ಹೊತ್ತಿಗೆ ನಾರದ ಮುನಿಪನು ಆಗಸಪಥದಿಂದ ಇಳಿದು ಅರಮನೆಗೆ ಬಂದ. ಅವರನ್ನು ಕಂಡ ದೇವಿಯು ಎದ್ದು ಪೀಠದಲ್ಲಿ ಕುಳ್ಳಿರಿಸಿ ಗೌರವ ಸಮರ್ಪಣೆ ಮಾಡಿದಳು. ಆಗ ನಾರದನು ಅವಳ ಶೋಕಕ್ಕೆ ಕಾರಣವೇನೆಂದು ಬೆಸಗೊಂಡ; ತನ್ನ ಮನಸ್ಸಿನ ದುಗುಡವನ್ನು ದೇವಿಯು ತೋಡಿಕೊಂಡಳು. ಅದನ್ನು ಕೇಳಿದ ಮುನಿನಾಥನು ರಾಮಲಕ್ಷ್ಮಣರ ಕ್ಷೇಮವಾರ್ತೆಯನ್ನು ತಿಳಿಸಿ ಆಕೆಯ ಅಳಲನ್ನು ಕಳೆದ. ಅಲ್ಲಿಂದ ಗಗನಪಥಕ್ಕೆ ನೆಗೆದು ನೇರವಾಗಿ ಬಲದೇವನಾರಾಯಣರಿದ್ದ ಸಭೆಯನ್ನು ಹೊಕ್ಕ. ಅವರನ್ನು ಕಂಡ ರಾಮಸ್ವಾಮಿಯು ಇದಿರೆದ್ದು ಬಂದು ಸ್ವಾಗತಿಸಿ ಮಣಿಮಯಾಸನದಲ್ಲಿ ಕುಳ್ಳಿರಿಸಿ ಕನಕಪಾತ್ರದಲ್ಲಿ ಅರ್ಘ್ಯವನ್ನಿತ್ತ. ಆನಂತರ ರಾಮನು, “ನೀವು ಈ ಯುದ್ಧದ ಸಂದರ್ಭದಲ್ಲಿ ಎಲ್ಲಿದ್ದಿರಿ; ಈಗ ಎಲ್ಲಿಂದ ಬಂದಿರಿ?” ಎಂದು ಕೇಳಿದ. ಧಾತಕೀಷಂಡದ ಪೂರ್ವವಿದೇಹದ ಸುರೇಂದ್ರರಮಣಪುರದಲ್ಲಿ ತೀರ್ಥಂಕರರು ಜನಿಯಿಸಲು ಅವರಿಗೆ ಸುರರೆಲ್ಲ ಸೇರಿ ಸುರಗಿರಿಶಿಖರದಲ್ಲಿ ಜನ್ಮಾಭಿಷೇಕವನ್ನು ಮಾಡುವುದನ್ನು ನೋಡಿ, ಅಲ್ಲಿಂದ ಅಯೋಧ್ಯೆಯನ್ನು ಹೊಕ್ಕು ಅಪರಾಜಿತಾದೇವಿ–ಸುಮಿತ್ರಾದೇವಿಯರನ್ನು ಕಂಡು ಬಂದ ವಿಷಯವನ್ನು ನಾರದನು ತಿಳಿಸಿ, “ನಿಮ್ಮ ತಾಯಂದಿರು ನಿಮ್ಮನ್ನು ಕೂಡಲೇ ನೋಡದಿದ್ದರೆ ಸಾಯುವುದು ಖಚಿತ” ಎಂದು ಮಾತು ಮುಗಿಸಿದ. ಆ ಮಾತನ್ನು ಕೇಳಿದ ರಾಮಕ್ಷ್ಮಣರು ಉದ್ವೇಗಕ್ಕೊಳಗಾದರು; ಸುಖದಲ್ಲಿ ತಾಯಂದಿರನ್ನು ಮರೆತದ್ದಕ್ಕಾಗಿ ತಮ್ಮನ್ನು ಕೃಪಾಶೂನ್ಯರೆಂದು ನಿಂದಿಸಿಕೊಂಡರು.

ವಿಭೀಷಣನನ್ನು ಕರೆಸಿ ರಾಮಲಕ್ಷ್ಮಣರು ತಾವು ಅಲ್ಲಿರಬೇಕಾದ ಅವಧಿಯು ಮುಗಿಯಿತೆಂದೂ, ಬೇಗ ಅಯೋಧ್ಯೆಗೆ ಮರಳದಿದ್ದರೆ ತಮ್ಮ ತಾಯಂದಿರೂ ಬಂಧುಗಳು ಖೇದಗೊಳ್ಳುವರೆಂದೂ ಹೇಳಿ ಪ್ರಯಾಣ ಹೊರಡುವ ವಿಷಯವನ್ನು ಅರುಹಿದರು. ಲಂಕೆಯ ಜಿನಭವನಗಳಲ್ಲೆದರಲ್ಲೂ ರಾಮನು ಜಿನಸವನೋತ್ಸವವನ್ನು ನೆರವೇರಿಸಿದ. ಮಂಗಳ ಪರಿಕರವನ್ನು ಖಚರಾಂಗನೆಯರು ಹಿಡಿದು ಮುಂದೆ ಬಂದರು;

ಮಂಗಳಪಾಠಕರು ದಿವ್ಯವೃತ್ತಗಳನ್ನು ಪಠಿಸುತ್ತ ಬಂದರು; ನಾನಾ ಬಗೆಯ ಸ್ತುತಿಯು ದಿಕ್ಕುಗಳನ್ನು ತುಂಬಲು, ರಾಜಚಿಹ್ನಗಳು ಎಸೆದವು. ಆಗ ರಾಮನು ದಿವ್ಯವಿಮಾನವಾದ ಪುಷ್ಪಕವನ್ನೇರಿದ; ಎಡದಲ್ಲಿ ಜಾನಕಿ, ಬಲಗಡೆ ಲಕ್ಷ್ಮೀಧರರು ಕುಳಿತರು; ಖಚರ ವಿಮಾನಾವಳಿಯು ಸುತ್ತ ನೆರೆಯಿತು. ಹೀಗೆ ದಕ್ಷಿಣ ದಿಗ್ವಿಜಯವನ್ನು ಸಾಧಿಸಿದ ರಾಮಲಕ್ಷ್ಮಣರು ಪ್ರಯಾಣ ಭೇರಿಯನ್ನು ಹೊಯಿಸಿ, ಜಂಗಮಸರೋವರಗಳಂತೆ ಖಚರ ವಿಮಾನಗಳು ಗಗನಾಂಗಣವನ್ನು ತುಂಬಲು ಅಯೋಧ್ಯೆಗಭಿಮುಖವಾಗಿ ಹೊರಟರು. ಸಮುದ್ರವನ್ನು ದಾಟಿ ಅವರೆಲ್ಲ ದಂಡಕಾರಣ್ಯವನ್ನು ಪ್ರವೇಶಿಸಿದರು. ಚಾರಣಮುನಿಯುಗಳಕ್ಕೆ ಆಹಾರದಾನ ಮಾಡಿದ ಜಾಗ, ತಾವಿದ್ದ ಲತಾಗಾರದ ಮರಳದಿಣ್ಣೆ, ದೇಶಭೂಷಣ ಕುಲಭೂಷಣ ಸಾಧುಗಳಿಗೆ ಕೇವಲಜ್ಞಾನವು ಲಬ್ಧವಾದ ಸ್ಥಳ ಮುಂತಾದವುಗಳನ್ನು ರಘುವೀರನು ಸೀತಾರಮಣಿಗೆ ತೋರಿಸಿ ನೆನಪಿಸಿದ. ಪವನಪಥದಲ್ಲಿ ಮನಃಪವನವೇಗದಿಂದ ಬರಲು, ತನ್ನ ಮನಸ್ಸಿಗೆ ಹಿಡಿಸಿದ ಕನಕಪ್ರಾಕಾರಗಳು ಹಾಗೂ ವನಮಾಲೆಯನ್ನು ಹೊಂದಿದ ಪುರವು ಯಾವುದೆಂದು ತೋರಿಸಿ ಜಾನಕಿಯು ಬೆಸಗೊಂಡಳು. ಇದೇ ಅಯೋಧ್ಯೆಯೆಂದು ಶ್ರೀರಾಮದೇವನು ಹೇಳುವಷ್ಟರಲ್ಲಿ ವಿಮಾನವು ಊರಿನ ಬಹಿಃಪ್ರದೇಶವನ್ನು ತಲುಪಿತು.

ನಾನಾ ವಿಧವಾದ ವಿಮಾನಗಳಿಂದಲೂ, ವಿದ್ಯಾಧರರಿಂದಲೂ ಆವೃತವಾಗಿ ವೈಭವದಿಂದ ಬಂದ ರಾಮನನ್ನು ಸ್ವಾಗತಿಸಲು ನೀಲಾಚಲಸನ್ನಿಭವಾದ ಇಭವನ್ನೇರಿ ಭರತನು ಶತ್ರುಘ್ನನೊಡನೆ ಬಂದ. ಅವರನ್ನು ದೂರದಲ್ಲಿಯೇ ನೋಡಿದ ರಾಮನು ಪುಷ್ಪಕವಿಮಾನದಿಂದ ಕೆಳಗಿಳಿದ. ಭರತಶತ್ರುಘ್ನರು ಆನೆಯಿಂದಿಳಿದು ಅವನ ಪಾದಪ್ರಾಂತದಲ್ಲಿ ಸರ್ವಾಂಗಪ್ರಣತರಾದರು. ಅವರನ್ನು ತೆಗೆದಪ್ಪಿಕೊಂಡ ಶ್ರೀರಾಮನು ಮನಃಪೂರ್ವಕವಾಗಿ ಹರಸಿದ. ಆನಂತರ ಅವರು ಅನುಕ್ರಮವಾಗಿ ಸೀತಾದೇವಿಗೂ ಲಕ್ಷ್ಮಣನಿಗೂ ಎರಗಿದರು. ಪರಸ್ಪರ ಕುಶಲವನ್ನು ವಿಚಾರಿಸಿಕೊಂಡರು. ಎಲ್ಲರ ಮುಖಗಳಲ್ಲಿಯೂ ಸಂತುಷ್ಟಿ ತುಂಬಿಕೊಂಡಿತ್ತು. ಆನಂತರ ಸುಗ್ರೀವ ಪ್ರಭಾಮಂಡಲ ಮರುತ್ಸುತ ಮುಂತಾದವರಿಂದೊಡಗೂಡಿ ಪುಷ್ಪಕವನ್ನೇರಿ ಪುರವನ್ನು ಹೊಕ್ಕರು. ರಾಮಲಕ್ಷ್ಮಣರು ಮೊದಲು ಅರಮನೆಗೈದು ಅಪರಾಜಿತೆ, ಸುಮಿತ್ರೆ, ಕೈಕೆ ಮತ್ತು ಸುಪ್ರಭಾದೇವಿಯರನ್ನು ಕಂಡು ಪೊಡೆವಟ್ಟು ಅವರ ಆಶೀರ್ವಾದಗಳನ್ನು ಪಡೆದರು. ನಮಸ್ಕರಿಸಿದ ಸೀತೆಯನ್ನು ತಕ್ಕೈಸಿಕೊಂಡು ಕ್ಷೇಮವನ್ನು ವಿಚಾರಿಸಿದ ತಾಯಂದಿರು ಇಷ್ಟಸಂಯೋಗದಿಂದ ಆನಂದಿತರಾದರು.

ಬಲನಾರಾಯಣರು ಭರತತ್ರಿಖಂಡವನ್ನು ತಮ್ಮ ಬಾಹುಬಲದಿಂದ ರಕ್ಷಿಸುತ್ತ ನಿರ್ಮಲ ಯಶದಿಂದ ಆಳುತ್ತಿದ್ದರು. ಒಂದು ಶುಭದಿನ ಮುಹೂರ್ತದಲ್ಲಿ ರಾಮನು ರಾಕ್ಷಸದ್ವೀಪಸಹಿತವಾದ ಲಂಕೆಯನ್ನು ವಿಭೀಷಣನಿಗೂ, ದೇವಾನೀಕಪುರವನ್ನು ರತ್ನಜಟಿಗೂ, ಕಿಷ್ಕಿಂಧನಗರವನ್ನು ಸುಗ್ರೀವನಿಗೂ, ಶ್ರೀಪರ್ವತನಗರವನ್ನು ಹನುಮಂತನಿಗೂ, ಪಾತಾಳಲಂಕೆಯನ್ನು ವಿರಾಧಿತನಿಗೂ, ರಥನೂಪುರಚಕ್ರವಾಳಪುರವನ್ನು ಪ್ರಭಾಮಂಡಲನಿಗೂ ಇತ್ತು ರಾಜ್ಯಾಭಿಷೇಕವನ್ನು ಮಾಡಿ, ತಮಗೆ ಉಪಕಾರ ಮಾಡಿದ ಇತರರಿಗೂ, ಜೊತೆಗೆ ಬಂದ ವಿದ್ಯಾಧರರಿಗೂ ನಾಡು ಬೀಡುಗಳನ್ನು ಕೊಟ್ಟು,

ಲಕ್ಷ್ಮಣನನ್ನು ತ್ರಿಖಂಡಮಂಡಲಕ್ಕೆ ಅಧಿರಾಜನನ್ನಾಗಿ ಮಾಡಿ, ಭರತನು ಮೊದಲಿನಂತೆಯೇ ಅಯೋಧ್ಯೆಯನ್ನು ಆಳುವುದೆಂದು ನಿಯಮಿಸಿದ. ಆಗ ಭರತನು, "ನಿಮ್ಮ ಆಣತಿಯಂತೆ ಇಲ್ಲಿಯವರೆಗೂ ವಸುಮತಿಯನ್ನು ಕಾಯ್ದುಕೊಂಡಿದ್ದೆ; ಇನ್ನು ನನಗೆ ಆ ಜವಾಬ್ದಾರಿ ಬೇಡ. ನನಗೆ ವಿಷಯಸುಖ ಸಾಕಾಗಿದೆ, ನಾನೀಗ ಮೋಕ್ಷಲಕ್ಷ್ಮೀಪರಿರಂಭೋತ್ಕಂಠ ನಾಗಿದ್ದೇನೆ. ಸಂಸಾರದ ಹೊರೆ ಸಾಕು" ಎಂದು ಕೈಮುಗಿದುಕೊಂಡು ಬೇಡಿಕೊಂಡ; ತಾನು ತಪಸ್ಸನ್ನು ಕೈಗೊಳ್ಳುವ ನಿರ್ಧಾರವನ್ನು ಪ್ರಕಟಿಸಿದ. ಆಗ ಶ್ರೀರಾಮನು ಅವನನ್ನು ಸಮಾಧಾನಪಡಿಸುತ್ತ, "ಇಲ್ಲಿಯವರೆಗೂ ನಮಗೆ ಭೂಚರರು ಮಾತ್ರ ಅಧೀನರಾಗಿದ್ದರು; ಇನ್ನು ಮುಂದೆ ಖೇಚರರೂ ನಮ್ಮ ಬೆಸಗೈಯುತ್ತಾರೆ. ಇನ್ನು ಸ್ವಲ್ಪವೇ ಕಾಲ ರಾಜ್ಯಸುಖವನ್ನನುಭವಿಸಿ ಆನಂತರ ಎಲ್ಲ ಒಟ್ಟಿಗೇ ತಪಸ್ಸಿಗೆ ತೆರಳೋಣ" ಎಂದ. ಆದರೆ ತಾನಂತೂ ಆಗಲೇ ತಪಬಡುವವನೆಂತಲೂ, ದಯವಿಟ್ಟು ತಡೆಯದಿರುವಂತೆಯೂ, ಬಲವಂತ ಮಾಡಕೂಡದೆಂದೂ ಭರತನು ಮರುಮಾತಿಗೆ ಅವಕಾಶವಿಲ್ಲದಂತೆ ಬಿನ್ನವಿಸಿ ರಾಜಭವನದಿಂದ ಹೊರಟ. ಆಗ ಲಕ್ಷ್ಮೀಧರನೂ ಕೈಕೆಯೂ ವೈದೇಹಿಯೂ ವಿಶಲ್ಯಸುಂದರಿಯೂ ಹಲವು ಮಂದಿ ಅಂತಃಪುರಸ್ತ್ರೀಯರೊಡನೆ ಭರತನ ಹಿಂದೆ ಹೋಗಿ ಅವನನ್ನು ತಪಸ್ಸಿನಿಂದ ವಿಮುಖಗೊಳಿಸುವ ಮಾತುಗಳನ್ನಾಡುತ್ತಿದ್ದರು.

ಇತ್ತ, ಕ್ರೋಧಿನಿಯೆಂಬ ಐದನೆಯ ಮದದಿಂದ ಕೂಡಿದ ತ್ರಿಜಗದ್ಭೂಷಣವಾರಣವು ತನ್ನನ್ನು ಕಟ್ಟಿದ್ದ ಕಂಬವನ್ನು ಮುರಿದು, ತನ್ನನ್ನು ಬಂಧಿಸಿದ್ದ ಚರ್ಮ ಹಾಗೂ ಲೋಹದ ಕಟ್ಟುಗಳನ್ನು ಹರಿದುಕೊಂಡು ಯಮಸ್ವರೂಪಿಯಾಗಿ ಓಡಿಬಂದಿತು. ಭರತನನ್ನು ಕಂಡ ತಕ್ಷಣ ವಿಸ್ಮಯಕರವಾದ ರೀತಿಯಲ್ಲಿ ಅದರ ಮದ ಇಳಿಯಿತು; ಅವನನ್ನು ಕಂಡು ಅದಕ್ಕೆ ಜಾತಿಸ್ಮರಣೆಯಾಗಿತ್ತು. ಅವನನ್ನು ಕಂಡು ಸೊಂಡಿಲನ್ನೆತ್ತಿ ಮೊಡೆವಟ್ಟಿತು. ಭರತನು ವೈದೇಹಿ ಮತ್ತು ವಿಶಲ್ಯಸುಂದರಿಯರ ಜೊತೆಯಲ್ಲಿ ಅದನ್ನೇರಿ ಮಹಾವೈಭವದಿಂದ ರಾಜಭವನವನ್ನು ಹೊಕ್ಕ. ಎಲ್ಲರೂ ಜೊತೆಯಾಗಿ ಆರೋಗಿಸಿ ಸುಖಸಲ್ಲಾಪಗಳಲ್ಲಿ ತೊಡಗಿದ್ದರು. ಆದರೆ ತ್ರಿಜಗದ್ಭೂಷಣ ಕರಿಯು ಯಾಕೋ ಆಹಾರವನ್ನೇ ಸೇವಿಸುತ್ತಿಲ್ಲವೆಂದು ಲಾಯದ ಕೆಲಸಗಾರರು ಬಂದು ಹೇಳಿದರು. ಅದನ್ನು ಕೇಳಿದ ರಾಮಲಕ್ಷ್ಮಣರಿಗೆ ಆಶ್ಚರ್ಯವಾಯಿತು.

ಅಷ್ಟು ಹೊತ್ತಿಗೆ, ಒಬ್ಬ ಋಷಿನಿವೇದಕನು ಅತಿತ್ವರಿತವಾಗಿ ಬಂದು ಸಾಷ್ಟಾಂಗಪ್ರಣತನಾಗಿ, "ದೇವ ಮಹೇಂದ್ರೋದ್ಯಾನವನಕ್ಕೆ ದೇಶಭೂಷಣ ಭಟ್ಟಾರಕರು ಬಿಜ ಮಾಡಿಸಿದ್ದಾರೆ" ಎಂದು ಬಿನ್ನವಿಸಿದ. ಅದನ್ನು ಕೇಳಿದ ಶ್ರೀರಾಮನು ಸಿಂಹಾಸನದಿಂದಿಳಿದು ಆ ದಿಸೆಗೆ ಕೈಮುಗಿದು, ಋಷಿನಿವೇದಕನಿಗೆ ಕಾಮಧೇನುವಿನಂತೆ ಕಾಣಿಕೆಗಳನ್ನು ಕೊಟ್ಟ. ಆನಂತರ ನಾಲ್ವರೂ ಅಣ್ಣತಮ್ಮಂದಿರು ತ್ರಿಜಗದ್ಭೂಷಣ ಗಜವನ್ನೇರಿ ಅಪರಾಜಿತೆ ಮೊದಲಾದ ನಾಲ್ವರು ತಾಯಂದಿರು, ಜಾನಕಿ ಮುಂತಾದ ಅಂತಃಪುರ ಸ್ತ್ರೀಯರು ಮತ್ತು ಸುಗ್ರೀವ ಮೊದಲಾದ ಸಕಲ ವಿದ್ಯಾಧರವಲ್ಲಭರೊಡನೆ ಭಕ್ತಿಯಿಂದ ಮುನಿಗಳಿದ್ದೆಡೆ ಬಂದು ದೂರದಲ್ಲಿಯೇ ವಾಹನದಿಂದಿಳಿದು, ರಾಜಚಿಹ್ನೆಗಳನ್ನು ಅಲ್ಲಿಯೇ ಬಿಟ್ಟು ಭಟ್ಟಾರಕರನ್ನು ಮೂರು ಬಾರಿ ಪ್ರದಕ್ಷಿಣೆಗೈದು ದಿವ್ಯಾರ್ಚನೆಗಳನ್ನು ನೆರವೇರಿಸಿ ತಮ್ಮ ನಿಯಮಿತ ಸ್ಥಾನಗಳಲ್ಲಿ ಕುಳಿತರು. ಧರ್ಮಶ್ರವಣಾನಂತರ ಶ್ರೀರಾಮನು ತ್ರಿಜಗದ್ಭೂಷಣವಾರಿಯು

ನಾಲ್ಕು ದಿನಗಳಿಂದ ಆಹಾರಸೇವನೆ ಮಾಡದಿರಲು ಕಾರಣವೇನೆಂದು ಕೇಳಿದ. ಅದಕ್ಕೆ ಜಾತಿಸ್ಮರವಾದ ವಿಷಯವನ್ನು ಮುನಿಗಳು ತಿಳಿಸಲು, ಜಗದಧಿಪನು ಕೈಗಳನ್ನು ಮುಗಿದುಕೊಂಡು ಅದರ ಭವಾವಳಿಗಳ ಬಗ್ಗೆ ತಿಳಿಸಲು ಬೇಡಿಕೊಂಡ. ಆಗ ದೇಶಭೂಷಣ ಕೇವಲಿಗಳು ಹೀಗೆ ನಿರೂಪಿದರು:

"ವಿನೀತಾನಗರದಲ್ಲಿನ ಸುಪ್ರಭ ಮತ್ತು ಆತನ ಹೆಂಡತಿ ಪ್ರಹ್ಲಾದಿನಿಯರ ಮಕ್ಕಳು ಸೂರ್ಯೋದಯ ಚಂದ್ರೋದಯರು. ಅವರು ವೃಷಭಸ್ವಾಮಿಗಳ ಸಮಕ್ಷದಲ್ಲಿ ದೀಕ್ಷೆ ಕೈಗೊಂಡರು; ಆದರೆ ತಪಸ್ಸಿನ ತೀಕ್ಷ್ಣತೆಯನ್ನು ಸಹಿಸಲಾರದೆ, ತಾಪಸರಾಗಿದ್ದರೂ ಮರೀಚಿಯೊಡನೆ ಸೇರಿ ಕುಧರ್ಮ ಚಟುವಟಿಕೆಗಳಲ್ಲಿ ತೊಡಗಿದರು. ಘೋರಸಂಸಾರಕೂಪದಲ್ಲಿ ಮುಳುಗಿ ಪಾಪಗಳನ್ನು ಮಾಡಿ ನಾನಾ ಭವಗಳನ್ನು ಪಡೆದರು. ಕೊನೆಗೆ ಕುರುಜಾಂಗಣ ವಿಷಯದ ಗಜಪುರದ ರಾಜನಾದ ಹರಿಪತಿ ಮತ್ತವನ ಪತ್ನಿ ಚಂದ್ರಾನನೆಯರಿಗೆ ಚಂದ್ರೋದಯನು ಕುಲಂಕರ ಎಂಬ ಹೆಸರಿನಲ್ಲಿ ಮಗನಾಗಿ ಹುಟ್ಟಿದ; ಅದೇ ಊರಿನಲ್ಲಿ ಸೂರ್ಯೋದಯನು ವಿಶ್ವಾವಸು ಎಂಬ ಬ್ರಾಹ್ಮಣನಿಗೆ ಮೂಢಶ್ರುತಿ ಎಂಬ ಮಗನಾಗಿ ಜನ್ಮ ತಳೆದ. ಕುಲಂಕರನು ರಾಜನಾದ ಮೇಲೆ ಮೂಢಶ್ರುತಿಯು ಅವನ ಪುರೋಹಿತನಾದ. ಕುಲಂಕರನು ಹಿಂಸ್ರಜನಗಳಿಗೆ ತಾಪಸ ರೂಪವನ್ನು ತೊಡಿಸಿ ಅವರನ್ನೇ ಗುರುಗಳೆಂದು ಜನರು ನಂಬುವಂತೆ ಮಾಡಿದ; ಅವನ ದುಶ್ಶೀಲೆಯಾದ ಹೆಂಡತಿ ಶ್ರೀಮತಿ ಎನ್ನುವವಳು ತನಗೆ ಬೇಕಾದವರೊಡನೆ ನೆರೆಯುವ ಪಾಣ್ಬೆಯಾಗಿದ್ದಳು. ತನಗೆ ತಿಳಿಹೇಳ ಬಂದ ಗಂಡನನ್ನೂ ಪುರೋಹಿತನನ್ನೂ ಅವಳು ವಿಷವಿಕ್ಕಿ ಕೊಂದಳು. ಸತ್ತ ಕುಲಂಕರನು ಮೊಲವಾಗಿಯೂ ಮೂಢಶ್ರುತಿಯು ಮುಂಗುಸಿಯಾಗಿಯೂ ಜನ್ಮ ತಾಳಿದರು. ಮುಂದಿನ ಭವದಲ್ಲಿ ಅನುಕ್ರಮವಾಗಿ ಕಪ್ಪೆ ಮತ್ತು ಆನೆಗಳಾದರು; ಕಪ್ಪೆಯನ್ನು ಆನೆ ಮೆಟ್ಟಿದಾಗ ಅದು ಸತ್ತು ಏಡಿಯಾಗಿ ಹುಟ್ಟಿತು. ಆನೆಯು ಸತ್ತು ಕಾಗೆಯಾಗಿ ಹುಟ್ಟಿ ಏಡಿಯನ್ನು ತಿಂದು ಹಾಕಿತು. ಸತ್ತ ಏಡಿಯು ಹುಂಜವಾಗಿ ಹುಟ್ಟಿತು; ಕಾಗೆ ಸತ್ತು ಬೆಕ್ಕಾಯಿತು. ಆ ಬೆಕ್ಕು ಆ ಹುಂಜವನ್ನು ತಿಂದಿತು. ಈ ರೀತಿ ಕುಲಂಕರನು ಮೂರು ಬಾರಿ ಹುಂಜವಾಗಿಯೂ, ಮೂಢಶ್ರುತಿಯು ಮೂರು ಬಾರಿ ಬೆಕ್ಕಾಗಿಯೂ ಜನ್ಮ ತಳೆದರು. ಮೂರು ಬಾರಿಯೂ ಹುಂಜವು ಸತ್ತು ಕೊನೆಗೆ ಕುಲಂಕರನು ಮೀನಾಗಿ ಹುಟ್ಟಿದ. ಮೂಢಶ್ರುತಿ ಆ ಜನ್ಮದಲ್ಲಿ ಮೊಸಳೆಯಾದ.

"ಕರ್ಮಪ್ರೇರಣೆಯನ್ನು ಯಾರು ತಾನೇ ವಿವರಿಸಬಲ್ಲರು? ಶತ್ರುವೇ ಗೆಳೆಯನಾಗಬಹುದು, ಸ್ನೇಹಿತನು ಮಹಾವೈರಿ ಎನಿಸಬಹುದು! ಹೀಗೆ ಮೊಸಳೆಯಾದ ಮೂಢಶ್ರುತಿ ಹಾಗೂ ಮೀನಾಗಿ ಹುಟ್ಟಿದ್ದ ಕುಲಂಕರನನ್ನು ಒಬ್ಬ ಬೆಸ್ತನು ಕೊಂದಾಗ ಸತ್ತು, ಮರುಜನ್ಮದಲ್ಲಿ ಮೂಢಶ್ರುತಿಯು ರಾಜಗೃಹದಲ್ಲಿ ಬಹ್ವಾಶ-ಜಲೂಕೆ ಎಂಬ ಬ್ರಾಹ್ಮಣದಂಪತಿಗಳಿಗೆ ವಿನೋದ ಎಂಬ ಮಗನಾಗಿ ಹುಟ್ಟಿದ. ಮೀನಾಗಿದ್ದ ಕುಲಂಕರನು ಅವರ ಹೊಟ್ಟೆಯಲ್ಲಿಯೇ ರಮಣ ಎಂಬ ಹೆಸರಿನ ಮಗನಾಗಿ ಹುಟ್ಟಿದ. ರಮಣನು ದೂರ ದೇಶಗಳಿಗೆ ಹೋಗಿ ವೇದವಿದನಾಗಿ ಮರಳಿ ಬರುವಾಗ ತನ್ನ ಹಳ್ಳಿಯಾದ ರಾಜಗೃಹದ ಹೊರವಲಯಕ್ಕೆ ಬಂದ. ಅಷ್ಟು ಹೊತ್ತಿಗೆ ಸೂರ್ಯ ಮುಳುಗಿ ದಟ್ಟವಾದ ಕತ್ತಲೆ ಕವಿಯಿತು. ಹಾಗಾಗಿ ಅವನು ಮುಂದುವರಿಯಲಾರದೆ ಯಕ್ಷಗೃಹದಲ್ಲಿ ಮಲಗಿದ. ರಮಣನ ಅಣ್ಣ

ವಿನೋದನ ಹೆಂಡತಿ ಸಮಿತೆಯು ತನ್ನ ಪ್ರಿಯಕರನಿಗಾಗಿ ಕಾಯುತ್ತ ಅಲ್ಲಿಯೇ ಕತ್ತಲಿನಲ್ಲಿ ಕಾಯುತ್ತಿದ್ದಳು. ಅವಳನ್ನು ಸೇರಲು ಬರುತ್ತಿದ್ದ ಅಶೋಕದತ್ತನೆಂಬ ಅವಳ ಪ್ರಿಯಕರನನ್ನು ತಳವಾರರು ಹಿಡಿದು ಕೊಂದುಬಿಟ್ಟರು. ವಿನೋದನಿಗೆ ತನ್ನ ಹೆಂಡತಿಯ ಚಾಳಿ ತಿಳಿದಿತ್ತು. ಆದ್ದರಿಂದ ಅವಳ ಹಿಂದೆಯೇ ಅವನೂ ಬಂದಿದ್ದ. ರಮಣನು ಅವಳೊಡನೆ ಮಾತನಾಡುತ್ತಿದ್ದುದನ್ನು ಕಂಡು ವಿನೋದನು ಅವನೇ ತನ್ನ ಹೆಂಡತಿಯ ಪಾಣ್ಬನೆಂದು ಬಗೆದು ಅವನನ್ನು ಕೊಂದುಹಾಕಿದ. ಹೆಂಡತಿಯನ್ನು ಮನೆಗೆ ಎಳೆತಂದ.

"ಒಂದು ದಿನ ಅವಳು ಗಂಡನನ್ನು ಕೊಂದಳು. ಸತ್ತ ಅವನೂ ರಮಣನೂ ಮುಂದೆ ಹಲವಾರು ಜನ್ಮಗಳನ್ನೆತ್ತಿ ದೊಡ್ಡ ಅರಣ್ಯವೊಂದರಲ್ಲಿ ಎಮ್ಮೆಗಳಾಗಿ ಹುಟ್ಟಿದರು. ಪರಸ್ಪರ ಕಾದಾಡಿ ಸತ್ತು ಕರಡಿಗಳಾಗಿ ಹುಟ್ಟಿ ಕಾಡುಗಿಚ್ಚಲ್ಲಿ ಬೆಂದುಹೋದರು. ಮುಂದಿನ ಜನ್ಮದಲ್ಲಿ ಇಬ್ಬರೂ ಬೇಡನೊಬ್ಬನ ಮಕ್ಕಳಾಗಿ ಹುಟ್ಟಿ ಸಾಕಷ್ಟು ಪಾಪಗೈದು ವನಚರರೊಡನೆ ಕಾದಾಡಿ ಸತ್ತು ಹುಲ್ಲೆಗಳಾಗಿ ಜನ್ಮ ತಳೆದರು. ಒಬ್ಬ ಬೇಡನು ಅವುಗಳನ್ನು ಹಿಡಿದೊಯ್ಯುತ್ತಿದ್ದ. ಅಷ್ಟರಲ್ಲಿ ಈ ಕಡೆ ಸ್ವಯಂಭೂತಿರಥನೆಂಬ ರಾಜನು ವಿಮಲ ಜಿನನಾಥರನ್ನು ವಂದಿಸಿ ಬರುತ್ತ ಆ ಹುಲ್ಲೆಗಳನ್ನು ಕಂಡು ಬೇಡನಿಂದ ಅವುಗಳನ್ನು ಪಡೆದು ಅರಮನೆಗೆ ತಂದು ಅಲ್ಲಿನ ಜಿನಾಲಯದಲ್ಲಿರಿಸಿ ಬೆಳೆಸಿದ. ಅಲ್ಲಿ ರಮಣನಾಗಿದ್ದ ಹುಲ್ಲೆಯು ಋಷಿಗಳ ಸಹವಾಸದಿಂದಾಗಿ ಮನಸ್ಸನ್ನು ಶುಚಿಗೊಳಿಸಿಕೊಂಡು, ಸತ್ತನಂತರ ದೇವಲೋಕಕ್ಕೆ ಹೋಯಿತು. ವಿನೋದನಾಗಿದ್ದ ಹುಲ್ಲೆಯು ಸತ್ತು ನಾನಾ ಹುಟ್ಟುಗಳನ್ನು ತಳೆದು ಕರ್ಮೋಪಶಮನ ಮಾಡಿಕೊಂಡು ಕಾಂಪಿಲ್ಯ ನಗರದಲ್ಲಿ ಧನದತ್ತನೆಂಬ ವ್ಯಾಪಾರಿಯಾಗಿ ಹುಟ್ಟಿ ಮೂವತ್ತೆರಡು ಕೋಟಿ ವರಹಗಳಿಗೆ ಅಧಿಪತಿಯಾಗಿದ್ದ. ದೇವನಾಗಿದ್ದ ರಮಣನು ಆ ಧನದತ್ತ–ವಾರುಣಿಯರ ಮಗನಾಗಿ ಭೂಷಣ ಎಂಬ ಹೆಸರಿನ ಮಗನಾಗಿ ಹುಟ್ಟಿದ. ಇವನು ಜಿನಮುನಿಗಳನ್ನು ನೋಡಿದಾಕ್ಷಣವೇ ತಪಸ್ಸನ್ನು ಕೈಗೊಳ್ಳುತ್ತಾನೆ ಎಂದು ನೈಮಿತ್ತಿಕರು ಭವಿಷ್ಯ ನುಡಿದರು. ಧನದತ್ತ ಆ ಮಾತನ್ನು ಕೇಳಿ, ಮಗನೆಲ್ಲಿ ದೀಕ್ಷೆ ಪಡೆಯುವನೋ ಎಂದು ಹೆದರಿ ಅವನ ಕಣ್ಣಿಗೆ ಯಾವ ಮುನಿಗಳೂ ಬೀಳದಂತೆ ಎಚ್ಚರ ವಹಿಸಿದ.

"ಅಂತು ಸುಖದಿಂದಿರುವಾಗ ಒಂದು ದಿನ, ಶ್ರೀಧರ ಭಟ್ಟಾರಕರಿಗೆ ವಂದನೆ ಸಲ್ಲಿಸಲೆಂದು ಆಕಾಶದಲ್ಲಿ ಹೋಗುತ್ತಿದ್ದ ದೇವರುಗಳನ್ನು ಭೂಷಣನು ನೋಡಿದ. ಅವನಿಗೆ ಜಾತಿಸ್ಮರಣೆಯುಂಟಾಗಿ ಭಟ್ಟಾರಕರಿಗೆ ನಮಸ್ಕರಿಸಲೆಂದು ಮಾಡದಿಂದ ಇಳಿದು ಬಂದ. ಆದರೆ ಬರುವಾಗ ಒಂದು ಹಾವು ಕಚ್ಚಿ ಅವನು ಸತ್ತು ಮಹೇಂದ್ರಕಲ್ಪಕ್ಕೆ ಮರಳಿದ. ಮರುಜನ್ಮದಲ್ಲಿ ಪುಷ್ಕರದ್ವೀಪದ ಚಂದ್ರಾದಿತ್ಯಪುರದ ರಾಜ ಪ್ರಕಾಶಯಶ ಮತ್ತು ಅವನ ದೇವಿ ಉದಿತೆಯರಿಗೆ ಜಗದ್ಯುತಿ ಎಂಬ ಹೆಸರಿನಲ್ಲಿ ಮಗನಾಗಿ ಹುಟ್ಟಿ, ಬೆಳೆದು ರಾಜ್ಯಭಾರವನ್ನು ವಹಿಸಿಕೊಂಡ. ಜಿನಮಾರ್ಗದಲ್ಲಿ ಜಿನಮುನಿಗಳಿಗೆ ಆಹಾರದಾನ ಮಾಡುತ್ತ ಸಂತೋಷದಿಂದಿದ್ದು ಕೊನೆಗೆ ಸತ್ತು ಈಶಾನಕಲ್ಪದಲ್ಲಿ ಜನಿಸಿದ. ಎಂದೂ ಕೆಡದ ಪರಮಾತ್ಮಸುಖವನ್ನು ಕೊಡುವ ಸಾಧುಪದಗಳು, ಕೆಡುವ ಸುರಲೋಕಪದವನ್ನು ಕೊಡುವುದನ್ನೇ ಗಹನವೆಂದು ಬಗೆದು ಕಲ್ಪಜನಾದ. ಸ್ವಲ್ಪ ಕಾಲ ಅಲ್ಲಿ ಸುಖವಾಗಿದ್ದು ಬಂದು ಜಂಬೂದ್ವೀಪದ ಪರವಿದೇಹದ ನಂದ್ಯಾವರ್ತಪುರದ ರಾಜ ಚಲನೆಂಬ ಚಕ್ರವರ್ತಿಗೂ ಆತನ ಮಹಾದೇವಿ ಬಾಲಹರಿಣಿಗೂ ಅಭಿರಾಮನೆಂಬ ಮಗನಾಗಿ ಹುಟ್ಟಿದ. ಅವನಿಗೆ

ಬಹುಬೇಗ ಸಂಸಾರದ ನಶ್ವರತೆಯು ಮನಸ್ಸಿಗೆ ಬಂದು ದೀಕ್ಷೆ ಪಡೆಯಲು ನಿರ್ಧರಿಸಿದ. ಆದರೆ ಅವನ ಮೂರು ಸಾವಿರ ಮಂದಿ ಹೆಂಡಿರು ಅವನನ್ನು ಹೋಗಗೊಡಲಿಲ್ಲ. ಆದರೆ ತಂದೆಯ ಮಾತಿನಂತೆ ಅಡ್ಡಗಟ್ಟಿದ್ದ ಅವರನ್ನು ಹುಲ್ಲುಸಮಾನವಾಗಿ ಭಾವಿಸಿ, ಮನಸ್ಸಿನಲ್ಲಿ ಜಿನಧರ್ಮದ ಹಿರಿಮೆ ಸ್ಥಿರವಾಗಿರಲು ಆ ಹೆಣ್ಣುಗಳಿಗೆ ಮನೆಯಲ್ಲಿಯೇ ಧರ್ಮವನ್ನು ಬೋಧಿಸುತ್ತ ಮುನಿಯಂತೆ ಬಾಳಲು ತೊಡಗಿದ. ಹೀಗೆ ಸಮ್ಯಕ್ತ್ವಶುದ್ಧನಾಗಿ ಪಂಚನಮಸ್ಕಾರದಲ್ಲಿ ಶರೀರವನ್ನು ಹಣ್ಣಾಗಿಸಿ ಶರೀರಭಾರವನ್ನಿಳಿಸಿಕೊಂಡ. ಆನಂತರ ಬಹ್ಮೋತ್ತರ ಕಲ್ಪದಲ್ಲಿ ದೇವನಾಗಿ ಹುಟ್ಟಿದ.

"ಇತ್ತ, ಮುಂಚೆ ಹೇಳಿದ ಧನದತ್ತನು ಸತ್ತು ಸಂಸಾರ ಜಲಧಿಯಲ್ಲಿ ಬಹುಕಾಲ ಮುಳುಗೇಳುತ್ತಿದ್ದ. ದುರ್ವೃತ್ತನಿಗೆ ದುರಂತ ದುಃಖವುಂಟಾಗುವುದರಲ್ಲೇನು ಆಶ್ಚರ್ಯ! ಕೊನೆಗೊಮ್ಮೆ ಪೌದನಪುರದಲ್ಲಿ ಅಗ್ನಿಮುಖನೆಂಬ ಹರದನಿಗೂ ಅವನ ಹೆಂಡತಿ ಶಕುನಿಗೂ ಮಗನಾದ; ಅವನ ಹೆಸರು ಮೃದುಮತಿ. ಬೆಳೆದು ಒಬ್ಬ ದೊಡ್ಡ ಜೂಜುಕೋರನಾದ. ಅವನನ್ನು ತಂದೆತಾಯಿಯರು ಮನೆಯಿಂದ ಹೊರಗಟ್ಟಿದರು. ಅವನಾದರೋ ಋಷಿಯೊಬ್ಬರ ಬಳಿ ಹೋಗಿ ಸಾಕ್ಷರಿಕನಾಗಿ ವಾಪಸ್ಸಾಗಿ ತಂದೆತಾಯಿಯರ ಜೊತೆ ಸಂತೋಷದಿಂದ ಬಾಳುವೆ ಮಾಡುತ್ತಿದ್ದ. ಕೆಲಕಾಲ ಕಳೆದ ಮೇಲೆ ಅವನು ವಸಂತೆ ಮತ್ತು ರಮಣಿ ಎಂಬಿಬ್ಬರು ಸೂಳೆಯರಲ್ಲಿ ಆಸಕ್ತನಾದ. ತನ್ನೆಲ್ಲ ಧನವನ್ನೂ ನಿಧುವನಕ್ಕೆ ವಿನಿಯೋಗಿಸಿದ. ಕೊನೆಗೆ ವಿಕಲಮತಿಯಾದ ಮೃದುಮತಿಯು ಕಳ್ಳತನಕ್ಕಿಳಿದ. ಒಂದು ದಿನ ಶಶಾಂಕಪುರದ ಅರಸು ನಂದಿವರ್ಧನನ ಅರಮನೆಯನ್ನು ಹೊಕ್ಕು ಕಳ್ಳತನ ಮಾಡಬೇಕೆಂದಿದ್ದ ಹೊತ್ತಿಗೆ ಸರಿಯಾಗಿ ನಂದಿವರ್ಧನನು ಶಶಾಂಕಮುಖ ಭಟ್ಟಾರಕರು ಉಪದೇಶಿಸಿದ ಧರ್ಮವಚನಗಳನ್ನು ಕೇಳಿ ವೈರಾಗ್ಯಪರನಾಗಿ ಅರಮನೆಗೆ ಬಂದು ತಾನು ತಪಸ್ಸನ್ನು ಕೈಗೊಳ್ಳಬೇಕೆಂದಿರುವ ನಿರ್ಧಾರವನ್ನು ತನ್ನ ಅರಸಿಗೆ ತಿಳಿಸಿ ದುಃಖಪಡದಿರಲು ಹೇಳುತ್ತಿದ್ದ. ಅದನ್ನು ಕೇಳಿ ಮೃದುಮತಿಯು ತನ್ನ ಹೆಸರಿಗೆ ತಕ್ಕಂತೆ ಸಂಸಾರಭೀರುವಾದ; ಅದೇ ತಪೋನಿಧಿಯ ಸನ್ನಿಧಿಯಲ್ಲಿಯೇ ದೀಕ್ಷೆವಹಿಸಿ ತಪಸ್ಸಿಗೆ ತೊಡಗಿದ.

"ಈ ಕಡೆ ಆಲೋಕಪುರದ ಬಳಿಯಿದ್ದ ಪರ್ವತದ ಮೇಲೆ ಹೆಸರಿಗೆ ಅನ್ವರ್ಥವಾಗಿದ್ದ ಗುಣನಿಧಿ ಎಂಬ ಗಗನಚಾರಣರು ಕೈಯನ್ನು ಮೇಲಕ್ಕೆತ್ತದ ವ್ರತವನ್ನು ತೊಟ್ಟು ನಾಲ್ಕು ತಿಂಗಳಿನಿಂದ ಬೀಡು ಬಿಟ್ಟಿದ್ದರು. ದಿವಿಜರು ಬಂದು ಅವರನ್ನು ಪೂಜಿಸಿ ಸ್ವರ್ಗಕ್ಕೆ ನಡೆದರು. ತಮ್ಮ ವ್ರತದ ಅವಧಿ ಮುಗಿದ ಮೇಲೆ ಚಾರಣಮುನಿಗಳೂ ಆ ಪರ್ವತದಿಂದ ಹೊರಟು ಗಗನ ಮಾರ್ಗದಲ್ಲಿ ಸಾಗಿದರು. ಇತ್ತ ಉಗ್ರೋಗ್ರ ತಪಸ್ಸನ್ನು ಕೈಗೊಂಡಿದ್ದ ಮೃದುಮತಿ ಮುನಿಗಳು ಕೃಶಕಾಯರಾಗಿ ಚರಿಗೆಗೆಂದು ನಗರಕ್ಕೆ ಬಂದರು. ಆ ನಗರದ ಅರಸು ಮೊದಲಾದ ಹಲವರು ಇವರನ್ನೇ ಚಾರಣರೆಂದು ಬಗೆದು ನಾಲ್ಕು ತಿಂಗಳ ಕಾಲ ಕೈಯೆತ್ತದ ಇವರ ತಪೋಮಹಿಮೆಯ ಕಾರಣದಿಂದ ದೇವತೆಗಳೇ ಇವರಿಗೆ ಪೂಜೆ ಸಲ್ಲಿಸಿ ಹೋದರೆಂದು ಹೊಗಳುತ್ತ ಇವರನ್ನೇ ಪೂಜಿಸಿ ಕೊಂಡಾಡಿದರು. ಯಾವುದೋ ಮಾಯೆಗೆ ಇವರೂ ಒಳಗಾಗಿ ಆ ಪೂಜೆಯನ್ನು ಸ್ವೀಕರಿಸಿದರು. ಆಸೆಯನ್ನು ನಿಷೇಧಿಸುವ ಜಿನಧರ್ಮದಲ್ಲಿದ್ದುಕೊಂಡೂ ಆಸೆಗೊಳಗಾಗಿ ಆಹಾರಕಾಂಕ್ಷೆಯಿಂದ ಮಾಯೆಯನ್ನು ಬೆಂಬತ್ತಿದ್ದರಿಂದ ತಪಸನ್ನು ಮಾಡಿದ್ದರೂ ಅಭಿರಾಮನಿದ್ದ ಕೀಳುಮಟ್ಟದ ದಿವವನ್ನು

ಹೊಗಬೇಕಾಯಿತು. ಮೃದುಮತಿಯನ್ನು ಕಂಡ ಅಭಿರಾಮ ಚರಾಮರನು ಅವನಲ್ಲಿ ಸ್ನೇಹವನ್ನು ಹೊಂದಿದ.

"ಆ ಸ್ವರ್ಗದ ಅವಧಿ ಮುಗಿದ ಮೇಲೆ ಮಾಯಾತಪದ ಫಲದಿಂದಾಗಿ ಮೃದುಮತಿಚರನು ಕುಂಜರಗಿರಿಯ ತಪ್ಪಲಿನ ಕಾಡಿನಲ್ಲಿ ಆನೆಯಾಗಿ ಹುಟ್ಟಿದ; ಅದೇ ತ್ರಿಜಗದ್ಭೂಷಣವೆಂಬ ಈ ಆನೆ. ಅಭಿರಾಮನು ಬ್ರಹ್ಮೋತ್ತರ ಕಲ್ಪದಿಂದ ಬಂದು ದಶರಥ ಮಹಾರಾಜ ಮತ್ತು ಕೈಕಾಮಹಾದೇವಿಯರಿಗೆ ಭರತನೆಂಬ ಹೆಸರಿನಲ್ಲಿ ಮಗನಾಗಿ ಹುಟ್ಟಿದ. ಇವನನ್ನು ತ್ರಿಜದ್ಭೂಷಣ ಗಜವು ನೊಡಿ ಜಾತಿಸ್ಮರಣೆಯಿಂದ ಸಂಸಾರನಿರಸನಕ್ಕೆ ಒಳಗಾಯಿತು; ಅದು ವ್ರತಧಾರಣೆ ಮಾಡಿ ಸುಗತಿಯನ್ನು ಪಡೆಯಲಿದೆ" ಎಂದು ನುಡಿದರು. ಈ ರೀತಿ ದೇಶಭೂಷಣ ಮುನಿಗಳು ಆನೆ ಮತ್ತು ಭರತರ ಭವಾಂತರಗಳನ್ನು ತಿಳಿಸಲು ಅದನ್ನು ಕೇಳಿದ ಬಲದೇವ ವಾಸುದೇವ ಮುಂತಾದವರೆಲ್ಲರೂ ವಿಸ್ಮಿತರಾದರು.

ಆಗ ತನ್ನ ಭವಾವಳಿಗಳನ್ನು ಕೇಳಿ ತಪಶ್ಚರಣದಲ್ಲಿ ಲೋಭರತನಾಗಿದ್ದ ಭರತನು ದುಸ್ತರವಾದ ಭವಾಬ್ಧಿಯನ್ನು ದಾಟಲು ಮತ್ತಷ್ಟು ಉತ್ಸುಕಗೊಂಡ. ನಾರಕ ತಿರ್ಯಕ್ ಮನುಷ್ಯ ಯೋನಿಗಳಲ್ಲಿ ಹುಟ್ಟಿದ ತಾನು ಇನ್ನಾದರೂ ಜಿನಚರಣವನ್ನಾರಾಧಿಸಿ ಅಮೃತಸುಖವನ್ನು ಪಡೆಯಲು ನಿರ್ಧರಿಸಿದ. ಅಂತೆಯೇ ಮೂರು ಸಾವಿರ ಮಂದಿ ರಾಜಪುತ್ರರೊಡನೆ ದೀಕ್ಷೆ ಪಡೆದ. ಕೈಕೆ ಕೂಡ ಮುನ್ನೂರು ಮಂದಿ ಸ್ತ್ರೀಯರೊಡನೆ ಹೋಗಿ ಪೃಥುಮತಿ ಕಂತಿಯರ ಪಾದಮೂಲದಲ್ಲಿ ಸಮ್ಯಕ್ತ್ವಪೂರ್ವಕವಾಗಿ ತಪಸ್ಸನ್ನು ಕೈಗೊಂಡಳು. ತ್ರಿಜಗದ್ಭೂಷಣ ಗಜವು ಅಲ್ಲಿಯೇ ಅಣುವ್ರತವನ್ನು ಕೈಕೊಂಡು, ಹಲವು ನೋಂಪಿಗಳನ್ನು ನೆರವೇರಿಸಿ ಸನ್ಯಸನದಿಂದ ಮುಡಿಪಿ ಬ್ರಹ್ಮೋತ್ತರ ಕಲ್ಪವನ್ನು ಸೇರಿತು. ಭರತಮುನಿಗಳೂ ಚತುರಂಗುಲ ಚಾರಣ ಋದ್ಧಿಪ್ರಾಪ್ತರಾಗಿ ವಿಹಾರವನ್ನು ಕೈಗೊಂಡು ಕೇವಲಜ್ಞಾನವನ್ನು ಪಡೆದು ಮೋಕ್ಷಕ್ಕೆ ಹೋದರು. ಇತ್ತ, ಭರತನೊಡನೆ ದೀಕ್ಷೆ ಪಡೆದಿದ್ದ ಸಿದ್ಧಾರ್ಥ ಹಾಗೂ ರತಿವರ್ಧನ ಮೊದಲಾದ ಮೂರು ಸಾವಿರ ಮಂದಿಯೂ ತಮತಮಗೆ ತಕ್ಕ ಸ್ಥಾನದಲ್ಲಿ ಹುಟ್ಟಿ ಸುಖದಿಂದಿದ್ದರು. ಅಂತೆಯೇ ಕೈಕೆ ಮತ್ತಿತರರು ಉಪವಾಸವಿದ್ದು ತಪಸ್ಸನ್ನು ಕೈಗೊಂಡು ಸತ್ತನಂತರ ಸೌಧರ್ಮಕಲ್ಪದಲ್ಲಿ ಹುಟ್ಟಿದರು.

ಇತ್ತ ರಾಮಲಕ್ಷ್ಮಣರು ಖೇಚರಭೂಚರರು ತಮ್ಮ ಆಜ್ಞೆಯನ್ನು ಪಾಲಿಸುವಂತೆ ಧರೆಯನ್ನು ಪರಿಪಾಲಿಸುತ್ತ ನಿರಂತರ ಸುಖದಿಂದಿದ್ದರು. ಹೀಗಿರಲು ಒಂದು ದಿನ ಶತ್ರುಘ್ನನನ್ನು ಕುರಿತು, "ಸಾಕೇತಪುರ ಅಥವಾ ಪೌದನಪುರದ ಅರ್ಧಭಾಗವನ್ನಾಗಲೀ, ಅಥವಾ ಪುಂಡರೀಕಿಣಿಪುರ ಅಥವಾ ರಾಜಗೃಹವನ್ನಾಗಲೀ ಬೇಡಿಕೋ, ಕೊಡುತ್ತೇನೆ" ಎಂದು ಹೇಳಿದ. ಅದಕ್ಕೆ ಅವನು ತಾನು ಇದಾವುದನ್ನೂ ಒಲ್ಲೆನೆಂದೂ, ಉತ್ತರ ಮಧುರೆಯನ್ನು ದಯೆಗೈಯಬೇಕೆಂದೂ ಬೇಡಿಕೊಂಡ. ಅದಕ್ಕೆ ರಾಮನು, "ಉತ್ತರ ಮಧುರೆಯನ್ನಾಳುವ ಮಧುವಿಗೆ ಅಮರೇಂದ್ರನಿತ್ತ ಶೂಲಾಯುಧವು ಶತ್ರುಗಳ ಮೇಲೆ ಪ್ರಯೋಗಿಸಿದರೆ ಸಾವಿರ ಜನರನ್ನು ಕೊಂದು ವಾಪಸಾಗುವಂಥದು. ಅಲ್ಲದೆ, ಅವನ ಮಗ ಲವಣಾರ್ಣವನು ರಾವಣನ ಅಳಿಯ; ಅವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ನೀನು ಹೇಗೆ ತಾನೇ ಅಂಥ ಕಡೆ ಇರಬಲ್ಲೆ?" ಎಂದು ಕೇಳಿದ. ಶತ್ರುಘ್ನ ಸುಮ್ಮನಾಗದೆ ತನಗೆ ಅದೇ ಬೇಕೆಂದು ಹಟಹಿಡಿದ. ಆಗ ಲಕ್ಷ್ಮಣನು ತನ್ನ ತಮ್ಮನಿಗೆ ತನ್ನ ವಜ್ರಕವಚವನ್ನೂ, ಸಾಗರಾವರ್ತ ಚಾಪವನ್ನೂ, ಅಗ್ನಿಮುಖವೆಂಬ ಅಸ್ತ್ರವನ್ನೂ ಕೊಟ್ಟು ಕಳಿಸಿದ.

ಅವುಗಳನ್ನು ಪಡೆದ ಶತ್ರುಘ್ನನು ತನ್ನ ಮಹಾಬಲದೊಡನೆ ಬಂದು ಪುಣ್ಯಭಾಗೆ ಎಂಬ ತೊರೆಯ ಬಳಿ ಬಂದು ಬೀಡು ಬಿಟ್ಟಿದ್ದ. ಗುಪ್ತಚರನೊಬ್ಬನು ತನ್ನ ಒಡೆಯನಿಗೆ ವಿಷಯವನ್ನರುಹಲೆಂದು ತ್ವರಿತಗತಿಯಿಂದ ಬಂದು ನಮಸ್ಕರಿಸಿ ನಿಂತ. ಅಪ್ಪಣೆ ದೊರೆತ ಮೇಲೆ, ಮಧುರೆಯಲ್ಲಿ ಶೂಲಾಯುಧವಿದೆಯೆಂದೂ, ಮಧುವು ಆ ಊರಿನ ಪೂರ್ವದಿಕ್ಕಿನ ನಂದನವನದಲ್ಲಿ ತನ್ನ ವಧುವಿನೊಂದಿಗೆ ರತಿಸುಖಮತ್ತನಾಗಿರುವನೆಂದೂ ಸುದ್ದಿ ಮುಟ್ಟಿಸಿದ. ತಕ್ಷಣವೇ ಶತ್ರುಘ್ನನು ಒಂದು ಲಕ್ಷ ಕುದುರೆಗಳ ಜೊತೆ ಊರ ಮೇಲೆ ದಾಳಿ ಮಾಡಿದ. ಅವನ ಮಂತ್ರಿಯು ಎದುರಾದ ಶತ್ರುಗಳನ್ನು ಊರ ಹೊರಗೆ ಕೊಂದ. ದಾಳಿಯ ವಿಷಯ ತಿಳಿದ ಮಧು ವನದಿಂದ ಹೊರ ಬಂದು ಯುದ್ಧ ಮಾಡಲು ತೊಡಗಿದ. ಈ ಮಧ್ಯೆ ಶತ್ರುಘ್ನನ ಸೇನಾಪತಿಯಾದ ಕೃತಾಂತವಕ್ತ್ರನು ಮಧುವಿನ ಮಗನಾದ ಲವಣಾರ್ಣವನನ್ನು ಕೊಂದು ಹಾಕಿದ. ಮಧು ಕೋಪದಿಂದ ಶತ್ರುಘ್ನನ ಮೇಲೆ ಯುದ್ಧಕ್ಕೆ ಶುರು ಮಾಡಿದ; ಶೂಲಾಯುಧವು ಶತ್ರುಗಳ ಕೈಲಿರುವುದೂ, ತನ್ನ ಮಗನು ಸತ್ತಿರುವುದೂ ಅವನಿಗೆ ತಿಳಿಯಿತು. ಇದರಿಂದ ಖೇದಗೊಂಡು ತಾನೂ ಸಾಯಲು ಬಗೆದು ಅವನು ಕೈದುವಿನತ್ತ ಕೈಯನ್ನುಯ್ಯಲೇ ಇಲ್ಲ; ವಿರೋಧಿಬಲಕ್ಕೆ ತನ್ನ ಮೈಯನ್ನೊಪ್ಪಿಸಿದ. ತನ್ನ ಕೈಯಿಂದ ತಲೆಗೂದಲನ್ನು ಕಿತ್ತುಕೊಂಡು, ಬಾಹ್ಯಾಭ್ಯಂತರ ಪರಿಗ್ರಹಗಳನ್ನು ಪರಿತ್ಯಜಿಸಿ ಮಹಾವ್ರತವನ್ನು ಕೈಗೊಂಡು ಸನ್ಯಸನದಿಂದ ಪ್ರಾಣಪರಿತ್ಯಾಗ ಮಾಡಿ ಸನತ್ಕುಮಾರ ಕಲ್ಪಕ್ಕೆ ಹೋದ. ಹೀಗೆ ಹಗೆಯನ್ನು ಸಾಧಿಸಿದ ಶತ್ರುಘ್ನನು ಜಯಲಕ್ಷ್ಮೀವಲ್ಲಭನಾಗಿ ಮಧುರೆಯಲ್ಲಿ ಸುಖವಾಗಿದ್ದ.

ಇತ್ತ, ವಿಜಯಾರ್ಧಪರ್ವತದ ದಕ್ಷಿಣ ಶ್ರೇಣಿಯ ರತ್ನಪುರವನ್ನು ರತ್ನರಥ ಎಂಬುವವನು ಆಳುತ್ತಿದ್ದ; ಅವನ ಹೆಂಡತಿ ಚಂದ್ರಾನನೆ. ಅವರ ಮಗಳು ಮನೋರಮೆ. ಅವಳಿಗೆ ತಕ್ಕ ವರನಾರು ಎಂದು ತಾಯ್ತಂದೆಯರು ಆಲೋಚಿಸುತ್ತಿದ್ದರು. ಈ ವಿಷಯವನ್ನು ಒಮ್ಮೆ ನಾರದರಲ್ಲಿ ಪ್ರಸ್ತಾಪಿಸಿದಾಗ ಮುನಿಯು ಅಖಂಡ ತ್ರಿಖಂಡಮಂಡಲಾಧಿಪತಿಯಾದ ಲಕ್ಷ್ಮೀಧರನಿಗೆ ಕೊಟ್ಟು ಮದುವೆ ಮಾಡಲು ಸಲಹೆಯಿತ್ತ. ಇದನ್ನು ಕೇಳಿ ರತ್ನರಥನಿಗೆ ಮಾತ್ರವಲ್ಲ, ಅವನ ಮಕ್ಕಳಾದ ಹರಿ ಮತ್ತು ಮನೋವೇಗ ಮತ್ತಿತರರಿಗೂ ಕೋಪ ಬಂತು. ಹಗೆಯೊಡನೆ ಸಂಬಂಧವನ್ನು ಬೆಳೆಸಲು ಹೇಳುವ ಇವನಿಗೆ ನಮ್ಮ ಯೋಗ್ಯತೆ ತಿಳಿಯದು ಎಂದು ಉಚಾಯಿಸಿ ಮಾತನಾಡಿದರು. ನಾರದನಿಗೂ ಕೋಪ ಬಂತು; ಮನೋರಮೆಯ ರೂಪವನ್ನು ತಾನೇ ಚಿತ್ರದಲ್ಲಿ ಬರೆದು ತೋರಿಸಿ, ಅವಳ ತಂದೆ ಮತ್ತು ಸೊದರರು ತನಗೆ ಅವಮಾನ ಮಾಡಿದುದನ್ನು ವಿವರಿಸಿದಾಗ ಲಕ್ಷ್ಮಣನು ಕಡು ಮುಳಿದ.

ಭೂಚರರಿಗೆ ನೆಲ ದೊರೆಯದ ಹಾಗೆ, ಖೇಚರರಿಗೆ ನಭವು ಸಿಗದು ಎಂಬಂತಹ ಸೈನ್ಯದೊಡನೆ ರತ್ನಪುರದ ಮೇಲೆ ದಾಳಿ ಮಾಡಿದ. ರತ್ನರಥನು ತನ್ನ ಮಕ್ಕಳೊಡನೆ ಮಹಾಯುದ್ಧಗೈದು ವಿರಥನಾಗಿ ಪಲಾಯನ ಮಾಡಿದ. ಅವನ ಹಿಂದೆಯೇ ಬಂದ ನಾರದನು, ತನ್ನ ಮುಂದೆ ಕಡುಗಲಿಗಳಂತೆ ಮಾತನಾಡಿ ಈಗ ಬೆಳ್ಳೆರಳೆಯ ಹಾಗೆ ಓಡುತ್ತಿರುವುದನ್ನು ನೋಡಿ ಕುಣಿದಾಡಿದ. ಈ ಮೂದಲಿಕೆಯು ಚುಚ್ಚಲು ರತ್ನರಥನು ಹಿಂದಕ್ಕೆ ಬಂದು ಲಕ್ಷ್ಮಣನಿಗೆ ನಮಸ್ಕರಿಸಿ ಮನೋರಮೆಯನ್ನು ಕೊಟ್ಟು ಮದುವೆ ಮಾಡಿದ; ಶ್ರೀರಾಮನಿಗೆ ತನ್ನ ರಾಜ್ಯವನ್ನೊಪ್ಪಿಸಿ ಅವನ ಆಳಾದ. ಆನಂತರ ಲಕ್ಷ್ಮಣನು

ಅವನೊಡನೆ ದಕ್ಷಿಣ ಶ್ರೇಣಿಯನ್ನೆಲ್ಲ ಸೋಲಿಸಿ ನಿಖಿಲ ತ್ರಿಖಂಡವಲ್ಲಭನಾಗಿ ನಿಂತ. ವಿಶಲ್ಯಸುಂದರಿ ರೂಪವತಿ ವನಮಾಲೆ ಕಲ್ಯಾಣಮಾಲೆ ರತಿಮಾಲೆ ಜಿತಪದ್ಮೆ ಅಭಯಮತಿ ಮನೋರಮೆ ಎಂಬ ಎಂಟು ಮಂದಿಗೂ ಮಹಾದೇವಿ ಪಟ್ಟವನ್ನು ಕಟ್ಟಿದ. ಇವರೊಡನೆ ಅವಾರ್ಯಶೌರ್ಯನಾದ ಲಕ್ಷ್ಮಣನು ಹದಿನೆಂಟು ಸಾವಿರ ಕನ್ನೆಯರನ್ನು ವಿವಾಹವಾಗಿ ತನ್ನ ಅತಃಪುರದಲ್ಲಿ ಸೇರಿಸಿಕೊಂಡ.

ಮಹಾಬಲ ಪರಾಕ್ರಮನಾದ ರಾಘವದೇವನು ಜನಕಸುತೆಯಲ್ಲದೆ ಪ್ರಭಾವತಿ ರತಿ ಶ್ರೀಕಾಂತೆ ಎಂಬ ಮಹಾದೇವಿಯರಲ್ಲದೆ ಎಂಟು ಸಾವಿರ ಮಂದಿ ಅಂತಃಪುರಸ್ತ್ರೀಯರನ್ನು ಹೊಂದಿದ್ದ. ಹೀಗೆ ರಾಮಲಕ್ಷ್ಮಣರು ಹಲವು ಕಾಲ ರಾಜ್ಯಸುಖವನ್ನನುಭವಿಸುತ್ತಿದ್ದರು. ಕಾಲಾನುಕಾಲಕ್ಕೆ ಲಕ್ಷ್ಮಣನ ಮನೋವಲ್ಲಭೆಯಾದ ವಿಶಲ್ಯಸುಂದರಿಗೆ ಶ್ರೀಧರ, ರೂಪವತಿಗೆ ಪೃಥ್ವೀತಿಲಕ, ವನಮಾಲೆಗೆ ಅರ್ಜುನ, ಕಲ್ಯಾಣಮಾಲೆಗೆ ಮಂಗಳ, ರತಿಮಾಲೆಗೆ ಶ್ರೀಕೇಳೀ, ಜಿತಪದ್ಮೆಗೆ ವಿಮಲಪ್ರಭ, ಅಭಯಮತಿಗೆ ಸತ್ಯಕೀರ್ತಿ ಮತ್ತು ಮನೋರಮೆಗೆ ಸುಪಾರ್ಶ್ವ ಎಂಬ ಮಕ್ಕಳು ಹುಟ್ಟಿದರು. ಹೀಗೆ ಅರ್ಧ ಚಕ್ರವರ್ತಿಯ ಎಂಟು ಮಂದಿ ಮಕ್ಕಳು ದಿನದಿನಕ್ಕೆ ಪ್ರವರ್ಧಮಾನರಾಗಿಯೂ ಮನೋಹರಾಕಾರಾಗಿಯೂ ಬೆಳೆಯುತ್ತಿದ್ದರು.

ಒಂದು ದಿನ, ಜನಕಸುತೆ ನಾಲ್ಕು ನೀರು ಮಿಂದು ಬೆಳ್ಳುಡುಗೆಯುಟ್ಟು ವಿರಾಜಿಸುತ್ತಿದ್ದಳು. ಆಕೆ ರಾತ್ರಿ ಕೈಬಳೆಗಳು ನಿನದಿಸುತ್ತಿರಲು ಲಕ್ಷ್ಮಿಯಂತೆ ಸೆಜ್ಜವನೆಗೆ ಬಂದು ಮಲಗಿದಳು, ಬೆಳಗಿನ ಜಾವ ಅವಳಿಗೆ ಎರಡು ಕನಸುಗಳು ಬಿದ್ದವು: ಶರಭಗಳೆರಡು ತನ್ನ ಮುಖವನ್ನು ಹೊಕ್ಕ ಹಾಗೆ ಮತ್ತು ಪುಷ್ಪಕವು ಭೂಮಿಗೆ ಅಪ್ಪಳಿಸಿದ ಹಾಗೆ. ಈ ವಿಚಾರವನ್ನು ತನ್ನ ಗಂಡನಿಗೆ ಅರುಹಿದಳು. ಮೊದಲ ಕನಸಿನ ಅರ್ಥ ಅವಳು ಅಮಿತ ಪರಾಕ್ರಶಾಲಿಗಳಾದ ಇಬ್ಬರು ಮಕ್ಕಳನ್ನು ಪಡಯುವುದೆಂಬುದು; ಆದರೆ ಎರಡನೆಯ ಕನಸು ಖೇದಕರವಾದದ್ದು ಎಂದು ರಾಮ ವಿವರಿಸಿದ. ಇಬ್ಬರಿಗೂ ಬೇಗುದಿಯುಂಟಾಗಿತ್ತು. ಕೆಲವು ದಿನಗಳು ಕಳೆದ ಮೇಲೆ ಸೀತೆಗೆ ಗರ್ಭಚಿಹ್ನೆಗಳು ಕಾಣಿಸಿದವು; ಅವಳಿಗೆ ಜಿನಪೂಜೆ ಮಾಡಬೇಕೆಂಬ ಆಸೆಯುಂಟಾಯಿತು; ಪ್ರತಿದಿನ ಮಹೇಂದ್ರೋದ್ಯಾನದ ಜಿನಾಲಯಗಳಲ್ಲಿ ಪೂಜೆ ಕೈಗೊಂಡಳು.

ಹೀಗಿರುತ್ತ ಒಂದು ದಿನ, ಆಗಬೇಕಾದ್ದನ್ನು ತಪ್ಪಿಸುವುದು ಯಾರಿಂದಲೂ ಸಾಧ್ಯವಿಲ್ಲ ಎಂಬಂತೆಯೂ, ಸತ್ಪಥದಲ್ಲಿ ನಡೆಯುತ್ತಿದ್ದರೂ ಅಶುಭವಾಗುವುದನ್ನು ಸೂಚಿಸುವಂತೆಯೂ ಅವಳ ಬಲಗಣ್ಣು ಅದುರತೊಡಗಿತು. ಅಪಶಕುನದಿಂದ ಸೀತೆಗೆ ವಿಪರೀತ ಭಯವಾಯಿತು. ಗೃಹಮಹತ್ತರರನ್ನು ಕರೆದು ಯಾರು ಏನು ಬೇಡಿದರೂ ದಾನಮಾಡುವಂತೆ ಸೂಚಿಸಿ, ತಾನು ದಿನವೂ ಜಿನಾಭಿಷೇಕ ಜಿನಪೂಜೆಗಳಲ್ಲಿ ಮುಳುಗಿದಳು. ಒಂದು ದಿನ, ಜನರ ಗುಂಪೊಂದು ರಾಮಸ್ವಾಮಿಯ ದರ್ಶನಕ್ಕೆಂದು ಬಂದಿತು. ಹೇಳಬೇಕಾದುದನ್ನು ಹೇಳಲು ಅವರಿಗೆ ರಾಮನು ಸೂಚಿಸಿದ. ಬಂದ ಗುಂಪಿನ ಪರವಾಗಿ ವಿಜಯನೆಂಬ ಮಹತ್ತರ ಹೀಗೆಂದು ಹೇಳಿದ: "ವ್ಯಸನಿಯೂ ದುರಾತ್ಮನೂ ಆದ ದನುಜನು ಮೋಹಗೊಂಡು ಸೀತೆಯನ್ನು ಅಪಹರಿಸಿ ಕರೆದೊಯ್ದು ತನ್ನ ಮನೆಯಲ್ಲಿಟ್ಟುಕೊಂಡಿದ್ದರೂ ಹಿಂದು ಮುಂದು ನೋಡದೆ ಆಕೆಯನ್ನು ಕರೆತಂದು ಮೊದಲಿನ ಹಾಗಿರುವುದು ಸರಿಯೇ? ವಸುಧೇಶನೇ ಹೀಗೆ ಮಾಡಿದರೆ ನಿಯಮ ಪಾಲನೆ ಯಾರು ಮಾಡುತ್ತಾರೆ?" ಈ

ಮಾತುಗಳನ್ನು ಕೇಳಿದ ರಾಮನಿಗೆ ತಾನು ತಪ್ಪು ಮಾಡಿದೆನೆಂಬ ಪಶ್ಚಾತ್ತಾಪವುಂಟಾಯಿತು; ಅವನ ಮನಸ್ಸನ್ನು ಗಾಢವಾದ ವಿಷಾದ ಆವರಿಸಿತು. ಹೆಸರು ಧರ್ಮಗಳು ಕೆಡುವ ಹಾಗೆ ಮಾಡುವುದು ತರವಲ್ಲ ಎಂದು ಬಗೆದು ವೈದೇಹಿಯನ್ನು ತೊರೆಯಲು ನಿರ್ಧರಿಸಿದ.

ಸೀತಾದೇವಿಯ ಮೇಲೆ ಅಪಾರ ಪ್ರೀತಿಯಿದ್ದರೂ ಜನಾಪವಾದಕ್ಕೆ ಸೆಡೆದು ಅದನ್ನು ನಿವಾರಿಸಿಕೊಳ್ಳಲೆಂದು ನಿರ್ಧರಿಸಿದ ರಾಮನು ಲಕ್ಷ್ಮಣನ್ನು ಬರಹೇಳಿದ. ಕಟ್ಟೇಕಾಂತದಲ್ಲಿ ತಮ್ಮನಿಗೆ ತನ್ನ ನಿಶ್ಚಯವನ್ನು ತಿಳಿಸಿದ. ಅಣ್ಣನ ಮಾತು ಕೇಳಿ ಲಕ್ಷ್ಮಣನಿಗೆ ತುಂಬ ಕೋಪ ಬಂತು. "ನಿಮ್ಮಂತಹವರು ಅವಿವೇಕಿಗಳಂತೆ ಹೀಗೆನ್ನಬಹುದೇ?" ಎಂದು ಪ್ರಶ್ನಿಸಿದ. ಸೀತಾದೇವಿಯು ಪತಿವ್ರತಾಗುಣರತ್ನಭೂಷಣಾಲಂಕೃತೆ; ಅಂತಹವಳಲ್ಲಿ ಅವಗುಣವನ್ನು ಕಾಣುವುದು ರಾಮನಂತಹವರಿಗೆ ಸರಿಯಲ್ಲ ಎಂದು ವಾದಿಸಿದ. ಆಗ ರಾಮನು, "ಪುರುದೇವನಿಂದ ಮೊದಲಾದ ಇಕ್ಷ್ವಾಕುವಂಶದ ಅವನೀಶರು ಹೊಂದದ ದುಶ್ಚಾರಿತ್ರ ತನಗೆ ಉಂಟಾಗಲು ನಾನು ಅವಕಾಶವೀಯುವುದಿಲ್ಲ; ನೀನು ಸುಮ್ಮನಿರು" ಎಂದು ಜಬರಿಸಿದ. ಆಗ ಲಕ್ಷ್ಮೀಧರನು, "ಸೀತೆಯ ಗುಣ ಕೆಡಲು ಇಡೀ ಧರೆಯೇ ನಾಶವಾಗುತ್ತದೆ; ಹಾಗಿಲ್ಲದಿದ್ದರೆ ದೇವತೆಗಳೆಲ್ಲ ಆಕೆಯ ಮೇಲೆ ಹೂಮಳೆಯನ್ನು ಸುರಿಸುತ್ತಿದ್ದರೇ?" ಎಂದು ಪರಿಪರಿಯಾಗಿ ನುಡಿದು, ಹೊಲ್ಲ ಮಾತನ್ನಾಡಿದ ಜನರ ನಾಲಿಗೆಯನ್ನು ಸೀಳಿಬಿಡುವೆನೆಂದು ರೌದ್ರಾವತಾರ ತಾಳಿದ. ಆಗ ಅವನ ಕೈಹಿಡಿದು ರಾಮನು ಇದೊಂದು ಮಾತಿಗೆ ವಿರುದ್ಧವಾಡಬೇಡವೆಂದು ಕೇಳಿಕೊಂಡು ತಮ್ಮನನ್ನು ಸುಮ್ಮನಾಗಿಸಿದ. ಆನಂತರ ಕೃತಾಂತವಕ್ತ್ರನನ್ನು ಕರೆದು ಸೀತೆಯೊಬ್ಬಳನ್ನೇ ಕರೆದುಕೊಂಡು ಹೋಗಿ ದಟ್ಟವಾದ ಕಾಡಿನ ನಡುವೆ ಬಿಟ್ಟು ಬರಲು ಅಪ್ಪಣೆ ಮಾಡಿದ. ಈ ಮಾತನ್ನು ಕೇಳಿ ಲಕ್ಷ್ಮಣನು ತಲ್ಲಣಗೊಂಡು ವಿನಮಿತನಾಗಿ, "ಅತ್ತಿಗೆ ಮಹಾಸತಿ, ಗರ್ಭಿಣಿ, ಪಾಪಭೀರು. ಕಾಡಾದರೋ ತುಂಬ ಭಯಂಕರವಾದದ್ದು. ಅಲ್ಲಿ ಆಗಬಹುದಾದ ಅನಾಹುತವನ್ನು ಲೆಕ್ಕಿಸದೆ ಯಾರದೋ ಮಾತು ಕೇಳಿ ಹೀಗೆ ಅಟ್ಟುವಂತೆ ನುಡಿಯಬಹುದೇ?" ಎಂದು ಕಳಕಳಿಯಿಂದ ಪ್ರಾರ್ಥಿಸಿಕೊಂಡ. ತನ್ನ ಮೇಲೆ ಗೌರವವಿರುವುದಾದರೆ ಸುಮ್ಮನಿರಬೇಕೆಂದು ಅವನಿಗೆ ರಾಮನು ಹೇಳಿದ.

ಸೌಮಿತ್ರಿ ಎದ್ದು ಹೊರಟುಹೋದ. ಆಮೇಲೆ ಕೃತಾಂತವಕ್ತ್ರನನ್ನು ಕುರಿತು ಶ್ರೀರಾಮನು, ಅಯೋಧ್ಯಾನಗರದ ಸಮ್ಮೇದಪರ್ವತದ ಸಮೀಪದ ಜಿನಾಲಯಗಳಲ್ಲಿ ಪೂಜೆ ಸಲ್ಲಿಸುವ ತನ್ನ ಬಯಕೆಯನ್ನು ತೀರಿಸಿಕೊಳ್ಳಿರೆಂದು ತಿಳಿಸಿ ಅವಳನ್ನು ದಟ್ಟ ಅರಣ್ಯದಲ್ಲಿ ಬಿಟ್ಟು ಬರುವಂತೆ ಆಜ್ಞಾಪಿಸಿದ. ಸೇವಕನಾಗುವುದು ಕಷ್ಟದ ಕೆಲಸ. ಸೀತಾದೇವಿಯನ್ನು ಅಡವಿಯಲ್ಲಿ ಬಿಟ್ಟು ಬರುವುದಕ್ಕೆ ಅಳುಕುಂಟಾದರೂ ರಾಘವನ ಆಜ್ಞೆಯನ್ನು ನೆರವೇರಿಸಲು ಸಿದ್ಧನಾದ. ಸೀತೆಯ ಬಳಿ ಬಂದು ರಾಮನು ಹೇಳಿಕೊಟ್ಟ ಹಾಗೆಯೇ ಹುಸಿಯಾಡಿ ಆಕೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಅಡವಿಯೆಡೆಗೆ ನಡೆದ. ಮಹಾಗಹನವನ್ನು ಹೊಕ್ಕು ಅದರ ನಡುವೆ ನಿರ್ಝರದ ನೀರಿನಿಂದ ಆವೃತವಾಗಿದ್ದ ಒಂದು ಬೆಟ್ಟ ಸಾನುಪ್ರದೇಶದಲ್ಲಿ ಆಕೆಯನ್ನು ರಥದಿಂದ ಕೆಳಗಿಳಿಸಿದ. ಆನಂತರ ಕೈಮುಗಿದುಕೊಂಡು ದುಃಖದಿಂದ ಕಣ್ಣೀರುಗರೆಯುತ್ತ ನಿಂತುಕೊಂಡ. ಶೋಕವೇಕೆ ಎಂದು ಸೀತೆಯು ಕೇಳಿದಳು. ಆಗ ಕೃತಾಂತವಕ್ತ್ರನು, "ಅಮ್ಮಾ, ಲೋಕವೆಲ್ಲ ತಮ್ಮ ಮೇಲೆ

ಗೌರವವಿರಿಸಿಕೊಂಡಿದ್ದರೂ ಮಹಾಪ್ರಭುಗಳು ತಮ್ಮನ್ನು ಅಡವಿಯಲ್ಲಿ ಬಿಟ್ಟು ಬರಲು ಆಜ್ಞಾಪಿಸಿದ್ದರಿಂದ ಇಲ್ಲಿಗೆ ಕರೆತಂದೆ" ಎಂದು ತಡೆದು ತಡೆದು ಹೇಳಿದ.

ಈ ಮಾತನ್ನು ಕೇಳಿದಾಕ್ಷಣವೇ ಸೀತಾದೇವಿ ಮೂರ್ಛೆವೋದಳು. ಸ್ವಲ್ಪ ಕಾಲಾನಂತರ ಎಚ್ಚೆತ್ತು ಅವನಿಗೆ ಹೀಗೆಂದಳು: "ರಾಮದೇವರು ಭೂತಳವನ್ನು ನ್ಯಾಯದಿಂದ ಪರಿಪಾಲಿಸಲಿ; ದೇವಗುರುಪೂಜೆಯನ್ನು ಮರೆಯದಿರಲಿ; ಜನಾಪವಾದ ಭಯದಿಂದ ನನ್ನನ್ನು ತೊರೆದಂತೆ ಮಿಥ್ಯಾದೃಷ್ಟಿಗಳ ಮಾತನ್ನು ಕೇಳಿ ಅರ್ಹತ್ಪರಮೇಶ್ವರ ಶ್ರೀಧರ್ಮವನ್ನು ಬಿಡದಿರಲಿ; ನನ್ನ ಮೇಲೆ ಕೃಪೆದೋರಿ ಈ ಮಾತುಗಳನ್ನು ನೆರವೇರಿಸುವಂತೆ ತಪ್ಪದೆ ಹೇಳು." ಆಮೇಲೆ ಬಾಷ್ಪಜಲಲುಲಿತಲೋಚನೆಯಾಗಿ ತಲೆ ಬಾಗಿ ನೆಲದ ಮೇಲೆ ಕಾಲ್ಬೆರಳಿಂದ ಬರೆಯುತ್ತ ನಿಂತುಬಿಟ್ಟಳು. ದೇವಿಯನ್ನು ನೋಡಿ ಕೃತಾಂತವಕ್ತ್ರನಿಗೆ ಗರ್ಭಿಣಿಯಾದ ಈಕೆಯನ್ನು ಅರಣ್ಯದಲ್ಲಿ ಬಿಟ್ಟು ಹೋಗಬೇಕಾದ ಕೆಲಸವನ್ನು ತಾನು ಮಾಡಬೇಕಾಯಿತಲ್ಲ; ಸೇವಕತನಕ್ಕಿಂತ ಅಪ್ರಶಸ್ತವಾದದ್ದು ಯಾವುದೂ ಇಲ್ಲ ಎಂದು ಹಳಿದುಕೊಂಡ. ಕಣ್ಣೀರನ್ನು ಮಿಡಿಯುತ್ತ ಸೀತಾದೇವಿಯ ಪಾದಗಳಿಗೆರಗಿ ತನ್ನನ್ನು ಕ್ಷಮಿಸಲು ಬೇಡಿಕೊಂಡು ಆಕೆಯನ್ನು ಬೀಳ್ಕೊಂಡು ಅಯೋಧ್ಯೆಯ ಕಡೆ ಹೊರಟ.

ಇತ್ತ, ಕೃತಾಂತವಕ್ತ್ರನು ಅಯೋಧ್ಯೆಗೆ ಮರಳಿ ರಾಘವನನ್ನು ಕಂಡು ಸೀತೆ ಹೇಳಿದ್ದ ಮಾತೆಲ್ಲವನ್ನೂ ಆತನಿಗೊಪ್ಪಿಸಿದ. ಅದನ್ನು ಕೇಳಿ ರಾಮ ಮೂರ್ಛೆ ಹೋದ. ಕೆಲಕಾಲಾನಂತರ ಎಚ್ಚೆತ್ತು ಪ್ರಲಾಪಿಸತೊಡಗಿದ. ಕೊನೆಗೆ ಚಂದ್ರಕಲಶನೆಂಬ ಸೀತೆಯ ಮಹತ್ತರನನ್ನು ಕರೆದು ಜಿನಪತಿಪೂಜೆ, ಮುನಿಜನಗಳಿಗೆ ಚತುರ್ವಿಧದಾನ ಮುಂತಾದವುಗಳನ್ನು ಸೀತೆಯು ಆಸೆಯಿಟ್ಟುಕೊಂಡಿದ್ದ ರೀತಿಯಲ್ಲಿ ನೆರವೇರಿಸಲು ಪುರೋಹಿತರಿಗೆ ಸೂಚಿಸಲು ಹೇಳಿದ. ಅದೇ ರೀತಿ ಎಲ್ಲ ಸಾಂಗವಾಗಿ ನಡೆಯುತ್ತಿತ್ತು.

* * * * *

# ೧೬. ರಾಮಚಂದ್ರ ಪರಿನಿರ್ವಾಣ

ಈ ಕಡೆ ಗುಣವತಿಯಾದ ಸೀತೆಯು ರಾಘವಲಕ್ಷ್ಮಣರನ್ನು ನೆನೆದಳು; ಅವಳೆದೆಯು ಶೋಕಪಾವಕನಿಂದ ಸುಟ್ಟಿತು; ಕಣ್ಣುಗಳಲ್ಲಿ ಶೋಕಜಲವುಕ್ಕಿತು. ವಿಯೋಗವಿಕಲೆಯಾಗಿ ಸುತ್ತಮುತ್ತ ನೋಡಿದರೂ ಯಾರೂ ಕಾಣಿಸಲಿಲ್ಲ. ತನಗೆ ಈ ಅವಸ್ಥೆ ಬರಲು ತಾನು ಹಿಂದಿನ ಜನ್ಮದಲ್ಲಿ ಜಿನಮುನಿಯನ್ನೂ ಪ್ರಾಣಿನಿಕಾಯವನ್ನೂ ನೋಯಿಸಿದುದೇ ಕಾರಣವಾಗಿರಬೇಕೆಂದು ಆ ಜಿನಾಗಮಕುಶಲೆಯು ಅಂದುಕೊಂಡಳು. ಕೊನೆಗೆ, ಅಡವಿಯಲ್ಲಾಗಲೀ ಊರಿನಲ್ಲಾಗಲೀ ಕೇಡುಂಟಾಗಲು ಮಹಾಋಷಿಗಳು ಅರಣ್ಯವನ್ನು ಹೊಕ್ಕು ನಿರ್ಮಲ ಜೈನಧರ್ಮವನ್ನು ಆಶ್ರಯಿಸಿ ಉಪಸರ್ಗವನ್ನು ಗೆಲ್ಲುವಂತೆ ತಾನೂ ಜೀವವನ್ನು ಬಿಡುವೆನೆಂದು ತೀರ್ಮಾನಿಸಿ ತನ್ನ ದುಃಖವನ್ನು ನಿಯಂತ್ರಿಸಿಕೊಂಡಳು; ಉಪವಾಸ ವ್ರತ ಹಿಡಿದು ಸನ್ಯಸನದಿಂದ ಪರತ್ರೆಯನ್ನು ಸಾಧಿಸುವೆನೆಂದು ನಿರ್ಧರಿಸಿದಳು.

ಅಷ್ಟು ಹೊತ್ತಿಗೆ ಜನಕಜೆಯ ಸುಕೃತವೇ ಮನುಷ್ಯರೂಪಿನಲ್ಲಿ ಕಾಣಿಸಿಕೊಳ್ಳುವಂತೆ ಒಬ್ಬ ರಾಜಕುಮಾರನು ಆನೆಯ ಬೇಟೆಗೆಂದು ತನ್ನ ಬಲಸಮೇತನಾಗಿ ಆ ಮಹಾಕಾನನಕ್ಕೆ ಬಂದ. ಅವನ ಹೆಸರು ವಜ್ರಜಂಘ. ಸ್ವಲ್ಪ ದೂರದಿಂದ ಸೀತೆಯನ್ನು ನೋಡಿದ ಅವನ ಮನಸ್ಸಿನಲ್ಲಿ ಈಕೆಯೇನು ವನದೇವತೆಯೋ ಲಕ್ಷ್ಮಿಯೋ ದೇವವನಿತೆಯೋ ಎಂಬ ಭಾವನೆ ಮೂಡಿತು. ವಿಸ್ಮಯದಿಂದ ಆಕೆಯ ಬಳಿ ಬಂದು, "ತಾಯಿ, ತಾವು ಯಾರು, ಈ ಕಾನನದಲ್ಲಿರಲು ಕಾರಣವೇನು? ದಯವಿಟ್ಟು ಹೇಳಿ" ಎಂದು ಬೆಸಗೊಂಡ. ಅವನ ನಡವಳಿಕೆಯನ್ನು ಕಂಡು ಸೀತೆಗೆ ಅವನು ಅನವದ್ಯಚರಿತನೆಂದೆನಿಸಿತು; ತಾನು ಜನಕತನೂಜೆ, ಪ್ರಭಾಮಂಡಲನ ತಂಗಿ ಹಾಗೂ ರಾಮಸ್ವಾಮಿಯ ಭಾರ್ಯೆಯಾದ ಸೀತಾದೇವಿಯೆಂದೂ, ರಾವಣನು ಒಯ್ದು ಇರಿಸಿಕೊಂಡಿದ್ದ ತನಗೆ ಮಹಾದೇವಿಪಟ್ಟವನ್ನು ಕಟ್ಟಿದುದಕ್ಕಾಗಿ ಜನಪದರು ಟೀಕಿಸಲು ಲೋಕಾಪವಾದಕ್ಕೆ ಹೆದರಿ ಶ್ರೀರಾಮನು ತನ್ನನ್ನು ಕಾಡಿಗೆ ಕಳಿಸಿರುವುದನ್ನೂ ಕಣ್ಣೀರುಗರೆದು ವಿವರಿಸಿದಳು. ಅದನ್ನು ಕೇಳಿ ಸಂಸಾರದ ಬಗೆಯನ್ನು ವರ್ಣಿಸಿ ಸೂಕ್ತ ಮಾತುಗಳೆಂಬ ನೀರಿನಿಂದ ಅವಳ ದುಃಖಾಗ್ನಿಯನ್ನು ಆರಿಸಿದ. ಆನಂತರ ಸ್ವವಿವರಗಳನ್ನು ಹೇಳಿಕೊಂಡ: ಸೋಮವಂಶದ ರಾಜನಾದ ದ್ವಿರದವಾಹನ ಮತ್ತು ಸುಬಂಧು ಮಹಾದೇವಿಯರ ಮಗನಾದ ತನ್ನ ಹೆಸರು ವಜ್ರಜಂಘನೆಂದು, ಪುಂಡರೀಕಿಣೀಪುರದ ಒಡೆಯ; ಜಿನಧರ್ಮದ ಕಾರಣದಿಂದಾಗಿ ಆಕೆ ತನ್ನ ತಂಗಿ ಎಂದು ಸಮಾಧಾನ ಮಾಡಿ ಆಕೆಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು

ಅರಣ್ಯದಿಂದ ಹೊರಟು ಪುಂಡರೀಕಿಣೀಪುರವನ್ನು ಸೇರಿದ. ಅಲ್ಲಿ ಶೀಲವತಿ ಎಂಬ ತನ್ನ ಅಕ್ಕನ ಅರಮನೆಗೆ ಸೀತೆಯನ್ನುಯ್ದು ಪರಿಚಯಿಸಿ ಅವಳ ಜೊತೆ ಬಿಟ್ಟ. ಆ ಮುಂದೆ ಶೀಲವತಿ ಮತ್ತು ಜಾನಕಿಯರು ಒಟ್ಟಾಗಿ ದಿನವೂ ಮುನಿಗಳಿಗೆ ಆಹಾರದಾನ, ಜಿನಪೂಜೆ ಮುಂತಾದವುಗಳನ್ನು ಮಾಡುತ್ತಿದ್ದರು.

ಗರ್ಭಕ್ಕೆ ಒಂಬತ್ತು ತಿಂಗಳು ತುಂಬಿದ ಮೇಲೆ ಸೀತೆಯು ಶ್ರಾವಣಮಾಸದ ಹುಣ್ಣಿಮೆಯ ಹಗಲಿನಲ್ಲಿ ಅವಳಿ ಗಂಡುಮಕ್ಕಳನ್ನು ಹೆತ್ತಳು. ಅವಳ ಆಸೆಯಂತೆ ಶುಭದಿನಮುಹೂರ್ತದಲ್ಲಿ ಅವರಿಗೆ ಲವಕುಶನೆಂದು ನಾಮಕರಣ ಮಾಡಿದರು. ಅವರು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ವೃದ್ಧಿಯಾಗುತ್ತ ಬೆಳೆದು ಶೈಶವವನ್ನು ಕಳೆದರು. ಆಮೇಲೆ ಅವರು ಸಿದ್ಧಾರ್ಥನೆಂಬ ಗುರುವಿನಿಂದ ತಮ್ಮಂತಹವರು ಬೇರಾರೂ ಇಲ್ಲವೆಂಬ ಬಗೆಯಲ್ಲಿ ಅರವತ್ತುನಾಲ್ಕು ಕಲೆಗಳನ್ನೂ ಕಲಿತರು; ಶಸ್ತ್ರಾಸ್ತ್ರವಿದ್ಯೆಗಳೆಲ್ಲವನ್ನೂ ಕರಗತಮಾಡಿಕೊಂಡರು. ನವಯೌನಪ್ರಾಪ್ತರಾದ ಅವರಲ್ಲಿ ಲವನಿಗೆ ವಜ್ರಜಂಘನು ತನ್ನ ಮಗಳಾದ ಶಶಿಮಾಲೆಯನ್ನೂ ಇತರ ಮೂವತ್ತೆರಡು ಮಂದಿ ಕನ್ಯೆಯರನ್ನೂ ಕೊಟ್ಟು ಮದುವೆ ಮಾಡಿದ. ಆನಂತರ ಪೃಥ್ವೀಪುರವನ್ನಾಳುತ್ತಿದ್ದ ಪೃಥು ಮತ್ತು ಅವನ ಮಹಾರಾಣಿ ಅಮೃತಮತಿಯ ಮಗಳಾದ ಕನಕಮಾಲೆಯನ್ನು ಕುಶನಿಗಿತ್ತು ಮದುವೆ ಮಾಡಿ ಕೊಡುವಂತೆ ಕೇಳಿ ತನ್ನ ಹೆಗ್ಗಡೆಯನ್ನು ಕಳಿಸಿಕೊಟ್ಟ. ತನ್ನ ಕುಲದ ಔನ್ನತ್ಯವನ್ನು ಗಮನಿಸದೆ ಕನಕಮಾಲೆಯನ್ನು ಅಜ್ಞಾತಕುಲದವನಿಗೆ ಕೊಡಲು ನಿರಾಕರಿಸಿ ಅವನು ಹೆಣ್ಣು ಕೇಳಿ ಬಂದ ಹೆಗ್ಗಡೆಗಳನ್ನು ಗದರಿ ವಾಪಸು ಕಳಿಸಿದ.

ಈ ವಿಷಯ ತಿಳಿದ ವಜ್ರಜಂಘನು ಅತಿಕುಪಿತನಾಗಿ ಪೃಥುವಿನ ಮೇಲೆ ದಂಡೆತ್ತಿ ಬಂದ. ಪೃಥುವಿನ ಬಂಧು ವ್ಯಾಘ್ರರಥನೆಂಬುವನು ಅವನನ್ನೆದುರಿಸಿದ. ಅವನನ್ನು ಸೆರೆಹಿಡಿಯಲಾಯಿತು. ಇದನ್ನು ಕೇಳಿ ಪೃಥುವೇ ಮೇಲೇರಿ ಬಂದ. ವಜ್ರಜಂಘನು ಹೇಳಿಕಳಿಸಿದ್ದರಿಂದ ಅವನ ಮಗನು ಪುಂಡರೀಕಿಣೀಪುರದಿಂದ ತಕ್ಷಣವೇ ಸಮಸ್ತಸಾಮಗ್ರಿಸಹಿತನಾಗಿ ಬಂದ. ಕನ್ಯೆಯನ್ನು ಕೊಡಲು ನಿರಾಕರಿಸಿದ ಪೃಥುವಿಗೆ ತಮ್ಮ ಕೂರ್ಪನ್ನು ತೋರಿ ಶಾಸ್ತಿಮಾಡಲೆಂದು ಕುಶಲವರೂ ಅವನೊಡನೆ ಬಂದರು. ಈ ವಿಚಾರವನ್ನು ಕೇಳಿದ ಪೃಥುವು ವಂಗ ಮಗಧ ಮುಂತಾದವುಗಳ ರಾಜಕುಮಾರರೊಡನೆ ಅಸಂಖ್ಯಾತಬಲಸಮೇತನಾಗಿ ಹೋರಾಟಕ್ಕೆ ಅನುವಾದ. ಆದರೆ ಲವಕುಶರ ಮುಂದೆ ನಿಲ್ಲಲಾರದೆ ಓಡಲು ತೊಡಗಿದ. ಅದನ್ನು ನೋಡಿ ಅವರು, "ತಿಳಿಯದ ಕುಲದವರಿಗೆ ಬೆನ್ನು ತೋರಿಸುವುದು ನಿಮಗೆ ತಕ್ಕುದಲ್ಲ" ಎಂದು ಮೂದಲಿಸಿ ಅಟ್ಟಿಕೊಂಡು ಬಂದರು. ಮುಂದೆ ಹೋಗಲಾರದೆ ಪೃಥುವು ನಿಂತು ತನ್ನ ತಪ್ಪನ್ನು ಮನ್ನಿಸಬೇಕೆಂದು ಕೈಮುಗಿದು ಬೇಡಿಕೊಂಡ. ಅವನಿಗೆ ಕ್ಷಮಾದಾನ ಮಾಡಿದ ಲವಕುಶರನ್ನು ತನ್ನೂರಿಗೆ ಕರೆದೊಯ್ದು ಮಗಳಾದ ಕನಕಮಾಲೆಯನ್ನು ಕುಶನಿಗಿತ್ತು ಮದುವೆ ಮಾಡಿದ. ಅದೊಂದು ದಿವಸ ಎಲ್ಲರೂ ಆ ಊರಿನಲ್ಲಿ ತಂಗಿ, ಮಾರನೆಯ ದಿನ ವಜ್ರಜಂಘನನ್ನು ಪುಂಡರೀಕಿಣೀಪುರಕ್ಕೆ ಕಳಿಸಿದ ಕುಶಲವರು ದಿಗ್ವಿಜಯ ಭೇರಿಯನ್ನು ಹೊಯಿಸಿ ವಂಗ ಮಗಧ ಮೊದಲಾದ ಎಲ್ಲ ದೇಶಗಳ ಮೇಲೆ ದಾಳಿ ಮಾಡಿ ಎಲ್ಲವನ್ನೂ ಸೋಲಿಸಿ ಗಂಗಾನದಿಯನ್ನು ದಾಟಿ ಸಿಂಧುವನ್ನು ಕಳೆದು ಪಶ್ಚಿಮಸಮುದ್ರತೀರದ ಗುಂಟ ನಡೆದು ಎಲ್ಲ ರಾಜರುಗಳಿಂದ

ಕಪ್ಪವನ್ನು ಪಡೆದು, ಸಕಲ ರಾಜಸಮುದಾಯದೊಡನೆ ಬಂದರು. ಮಹಾವಿಭೂತಿಯಿಂದ ಪುಂಡರೀಕಿಣಿಪುರವನ್ನು ಸೇರಿ ಸುಖದಿಂದಿದ್ದರು.

ಇತ್ತ, ಜಾನಕಿಯಿದ್ದ ಜಾಗವನ್ನು ಹಿಂಸಾನಂದನಾದ ನಾರದನು ತಿಳಿದು ನಭೋಮಾರ್ಗದಿಂದ ಬಂದು ಪುಂಡರೀಕಿಣೀಪುರವನ್ನು ಸೇರಿದ. ಅವನಿಗೆ ಲವಕುಶರು ಮಣಿಮಯಾಸನವನ್ನಿತ್ತು ಉಪಚರಿಸಿದರು. ನಾರದನು "ರಾಮಲಕ್ಷ್ಮಣರಂತೆ ಮಹಾನುಭಾವರಾಗಿ" ಎಂದು ಅವರನ್ನು ಹರಸಿದ. ಇದರಿಂದ ಕುತೂಹಲಗೊಂಡ ಲವಕುಶರು ಅವರ ವಿಷಯವನ್ನು ಹೇಳಲು ಮಾಯಾಜೋಗಿಯನ್ನು ಕೇಳಿಕೊಂಡರು. ನಾರದ ಅವರ ವಿಷಯವನ್ನು ತಿಳಿಸಲು ತೊಡಗಿದ: "ಅವರು ಇಕ್ಷ್ವಾಕುವಂಶದ ದಶರಥ ಮಹೀನಾಥನ ಮಕ್ಕಳು. ಜನಕನ ಮಗಳಾದ ಸೀತಾದೇವಿ ರಾಮನ ಸತಿ. ಎಲ್ಲರೂ ಸುಖಸಂಕಥಾವಿನೋದದಿಂದ ಇದ್ದರು. ಒಂದು ದಿನ ದಶರಥ ಮಹಾರಾಜನು ವೈರಾಗ್ಯಪರನಾಗಿ ದೀಕ್ಷೆ ಪಡೆಯಲು ನಿರ್ಧರಿಸಿ, ರಾಮನಿಗೆ ರಾಜ್ಯಪಟ್ಟವನ್ನು ಕಟ್ಟಲು ತೀರ್ಮಾನಿಸಿದ. ಆ ವಿಷಯವನ್ನು ಕೇಳಿದ ಕೈಕಾಮಹಾದೇವಿಯು ಆತುರದಿಂದ ಬಂದು ತನಗೆ ಕೊಡಬೇಕಾಗಿದ್ದ ಮೆಚ್ಚನ್ನು ದಯಪಾಲಿಸಬೇಕೆಂದು ಬೇಡಿಕೊಂಡಳು. ತನ್ನ ತಪಸ್ಸನ್ನು ತಪ್ಪಿಸುವುದರ ಹೊರತು ಏನನ್ನು ಬೇಕಾದರೂ ಬೇಡಿಕೋ ಎಂದು ಆಶ್ವಾಸನೆಯೀಯಲು ಕೈಕೆಯು ಭರತನಿಗೆ ರಾಜ್ಯವನ್ನು ಕೊಡಬೇಕೆಂದು ಬೇಡಿದಳು. ಇದರಿಂದ ದಶರಥನಿಗೆ ವಿಸ್ಮಯವಾಯಿತು; ಏನು ಹೇಳಲೂ ಅವನಿಗೆ ತೋಚಲಿಲ್ಲ. ಆದರೆ ತಂದೆಯ ಮಾತನ್ನುಳಿಸಬೇಕೆಂಬ ಕರ್ತವ್ಯಪ್ರಜ್ಞೆಯಿಂದ ರಾಮಸ್ವಾಮಿಯು ದಂಡಕಾರಣ್ಯದಲ್ಲಿದ್ದ. ರಾವಣನು ಆಕಸ್ಮಿಕವಾಗಿ ಕಂಡ ಸೀತೆಯ ಮೇಲೆ ಮೋಹಗೊಂಡು ತನ್ನ ಕುಲಾಚಾರವನ್ನು ಬಿಟ್ಟು ಅವಳನ್ನು ಕದ್ದುಯ್ದ. ಈ ವಿಷಯ ತಿಳಿದ ರಾಮಲಕ್ಷ್ಮಣರು ಸಮಸ್ತ ವಿದ್ಯಾಧರರೊಡನೆ ಸುಗ್ರೀವ ಪ್ರಭಾಮಂಡಲ ಹನುಮ ಮುಂತಾದವರೊಡನೆ ದಂಡೆತ್ತಿ ಹೋಗಿ ರಾವಣನನ್ನು ಕೊಂದು ತ್ರಿಖಂಡಮಂಡಲಾಧಿಪತಿಗಳಾಗಿ ವಿಭೀಷಣನಿಗೆ ಲಂಕೆಯ ರಾಜ್ಯಪಟ್ಟ ಕಟ್ಟಿ ಅಯೋಧ್ಯೆಗೆ ಮರಳಿ ಬಂದು ಸುಖದಿಂದಿದ್ದರು. ಆದರೆ ಒಂದು ದಿನ ಜನರ ಗುಂಪೊಂದು ಬಂದು ಸೀತಾದೇವಿಯ ಜೊತೆ ಇರಲಾಗದು ಎಂದು ರಾಮನ ಮೇಲೆ ಒತ್ತಡ ತಂದರು. ಇದಕ್ಕೆ ಮಣಿದ ರಾಮನು ಲಕ್ಷ್ಮೀಧರನನ್ನು ಕರೆದು ಕಟ್ಟೇಕಾಂತದಲ್ಲಿ ಈ ವಿಷಯ ತಿಳಿಸಿದಾಗ, ಅವನು ಸೀತೆಯು ಮಹಾಸತಿಯೂ ಗುಣವತಿಯೂ ಆದವಳು, ಆಕೆಯ ಬಗ್ಗೆ ಇಂಥ ಮಾತುಗಳನ್ನಾಡಬೇಡಿರೆಂದು ಕೇಳಿಕೊಂಡ. ಈ ವಿಷಯದಲ್ಲಿ ಮರುಮಾತು ಬೇಡವೆಂದು ಅವನ ಬಾಯಿ ಮುಚ್ಚಿಸಿದ ರಾಮನು, ಮಕ್ಕಳನ್ನು ಹೊಟ್ಟೆಯಲ್ಲಿ ಹೊತ್ತಿದ್ದ ಸತಿಯನ್ನು ಅರಣ್ಯದಲ್ಲಿ ಬಿಟ್ಟುಬರಲು ಕೃತಾಂತವಕ್ತ್ರನೆಂಬ ಸೇವಕನಿಗೆ ಆಜ್ಞಾಪಿಸಿದ. ಹೀಗೆ ಕಾಡಿನಲ್ಲಿ ಒಂಟಿಯಾಗಿದ್ದ ಸೀತೆಯನ್ನು ವಜ್ರಜಂಘನು ಕಂಡು ಆಕೆಯನ್ನು ಸಲಹಿದ. ಆನಂತರ ಹುಟ್ಟಿದ ಮಕ್ಕಳೇ ನೀವು. ಅದಕ್ಕೇ ನಾನು ರಾಮನ ಪರಾಕ್ರಮ ಸೌಂದರ್ಯಗಳನ್ನು ಪಡೆಯಿರಿ ಎಮದು ಹರಸಿದೆ" ಎಂದು ವಿವರಿಸಿದ.

ಈ ಕತೆಯನ್ನು ಕೇಳಿದ ಕುಶನು ಆ ಶದನಕೇಳೀನಿರಂಕುಶನನ್ನು ಕುರಿತು, "ಯೋಗ್ಯರ ಮಾತನ್ನು ಕೇಳದೆ, ಪಾಪಕ್ಕಂಜದೆ ಗುಣವತಿಯನ್ನು ತೊರೆದ ಜಡಮತಿಯನ್ನು

ಹೊಗಳುವುದು ಸರಿಯೇ?" ಎಂದು ಪ್ರಶ್ನಿಸಿದ. ಆಮೇಲೆ ಅಯೋಧ್ಯಾನಗರವು ಅಲ್ಲಿಂದ ನೂರೈವತ್ತು ಯೋಜನಗಳಷ್ಟು ದೂರವಿದೆಯೆಂಬುದನ್ನು ಕೇಳಿ ತಿಳಿದು ಸಮಸ್ತ ಬಲದೊಡನೆ ಲವಕುಶರು ಅಯೋಧ್ಯೆಯತ್ತ ಹೊರಟರು. ಕೆಲದಿನಗಳ ಬಳಿಕ ಅಲ್ಲಿಗೆ ಬಂದು ಬಹಿಃಪುರದಲ್ಲಿ ಬೀಡುಬಿಟ್ಟರು. ಅಷ್ಟು ಹೊತ್ತಿಗೆ ಸಿದ್ಧಾರ್ಥಕ್ಷುಲ್ಲಕನಾದ ನಾರದನು ಪ್ರಭಾಮಂಡಲನ ಬಳಿ ಹೋಗಿ ಅವನಿಗೆ ಲವಕುಶರ ಸಮಾಚಾರವನ್ನೆಲ್ಲ ಬಿತ್ತರಿಸಿದ. ಈ ವಿಷಯವನ್ನು ಕೇಳಿದ ಪ್ರಭಾಮಂಡಲನು ವ್ಯಾಕುಲಚಿತ್ತನಾಗಿ ಜನಕವಿದೇಹಿಗಳೊಡನೆ ಪುಂಡರೀಕಿಣೀಪುರಕ್ಕೆ ಬಂದ. ಅವರನ್ನು ಕಂಡ ಸೀತಾದೇವಿಯು ಇದಿರೆದ್ದು ಬಂದು ತಂದೆತಾಯಿಅಣ್ಣಂದಿರಿಗೆ ನಮಸ್ಕರಿಸಿ, ದುಃಖ ಒತ್ತರಿಸಿ ಬಂದು ಅತ್ತಳು. ಆನಂತರ, ರಾಮಲಕ್ಷ್ಮಣರಿಂದ ಮಕ್ಕಳಿಗೇನಾದರೂ ಅಪಾಯವಾದೀತೆಂದು ತಿಳಿಸಿದ ಪ್ರಭಾಮಂಡಲನು, ಸೀತಾದೇವಿ ಮತ್ತು ಲವಕುಶರ ರಾಣಿಯರನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಅಯೋಧ್ಯೆಯತ್ತ ಹೋಗಿ ಲವಕುಶರನ್ನು ಸೇರಿಕೊಂಡ.

ಈ ಕಡೆ, ಯಾರದೋ ಶತ್ರುಸೈನ್ಯವು ತಮ್ಮ ರಾಜಧಾನಿಯ ಹೊರಗೆ ಬೀಡುಬಿಟ್ಟಿದೆ ಎಂಬುದನ್ನು ತಿಳಿದ ಬಲಾಚ್ಯುತರು ಯುದ್ಧಕ್ಕೆ ಹೊರಟರು. ಆದರೆ ಲವಕುಶರ ಬಲವು ರಾಮಲಕ್ಷ್ಮಣರ ಸೈನ್ಯವನ್ನು ಗೆದ್ದುಬಿಟ್ಟಿತು. ಲವನ ಬಲದ ಮುಂದೆ ರಾಘವನ ಬಲವು ನಿಲ್ಲಲಾರದೆ ಹೋಯಿತು; ಆಗ ಅವರಿಬ್ಬರೂ ಎದುರಾದರು. ಲವನು ರಾಮನ ಕೇತನ ಧನುಸ್ಸು ರಥಗಳನ್ನೆಲ್ಲ ಮುರಿದೀಡಾಡಿದ. ಮತ್ತೊಂದು ರಥವನ್ನೇರಿದ ರಘುಜನು ಆಕಾಶವನ್ನೆಲ್ಲ ವ್ಯಾಪಿಸುವಂತೆ ಬಾಣಗಳನ್ನು ಬಿಟ್ಟ; ಆದರೆ ಲವನು ಅವನ್ನೆಲ್ಲ ಮನೋವೇಗದಿಮದ ತನ್ನ ಬಾಣಗಳಿಂದ ತುಂಡರಿಸಿದ. ಚಾಪಾಗಮದಲ್ಲಿ ಲವನು ರಾಮನಿಗಿಂತ ಸಾವಿರ ಪಟ್ಟು ಬಲಿಷ್ಠನೆಂದು ಸುರಗಣ ಅಚ್ಚರಿವಟ್ಟಿತು. ಸಾಮಾನ್ಯಾಸ್ತ್ರಗಳು ಪ್ರಯೋಜನಕ್ಕೆ ಬಾರದಿರಲು ರಾಘವನು ಚಿಂತಾಮಗ್ನನಾದ.

ಇತ್ತ ಕುಶನೊಡನೆ ನಿರಂಕುಶನಾದ ಲಕ್ಷ್ಮಣನು ತನ್ನ ಶರಪರಿಣತಿಯನ್ನು ಮೆರೆದು ಕಾದಿದ. ಕುಶನು ತನ್ನ ಪರಶುವಿನಿಂದ ಅನಂತವೀರ್ಯನನ್ನು ಹೊಡೆದ; ಲಕ್ಷ್ಮಣನ ಕಣ್ಣು ಕತ್ತಲೆಯಿಟ್ಟುಕೊಂಡು ಬಂದು ಮೂರ್ಛೆವೋದ. ನಿಡುಗಾಲದ ನಂತರ ಎಚ್ಚೆತ್ತು ಕೋಪಾವಿಷ್ಟನಾಗಿ, ನಾಡಾಡಿ ಕೈದುಗಳಿಂದ ಇವನನ್ನು ಗೆಲ್ಲಲು ಅಸಾಧ್ಯವೆಂದು ಬಗೆದು ತನ್ನ ಚಕ್ರವನ್ನಿಟ್ಟ. ಆದರೆ ಅದು ಕುಶನನ್ನು ಕತ್ತರಿಸಲೊಲ್ಲದೆ ಅತ್ತಿಂದಿತ್ತ ಹರಿದಾಡತೊಡಗಿತು. ಸಾವು ಸಮನಿಸದವರನ್ನು ಯಾವ ಕೈದು ತಾನೇ ಏನು ಮಾಡಬಲ್ಲುದು! ಆಗ ಕುಶನು ನಿರಂಕುಶನಾಗಿ ಎರಡೂ ಕೈಗಳಲ್ಲಿ ಬಾಣ ಬಿಟ್ಟು ಚಿಕ್ಕಪ್ಪನ ಕೈಹಿಡಿದಿದ್ದ ಜಯವಧುವನ್ನು ತನ್ನೆಡೆಗೆ ಬರಮಾಡಿಕೊಂಡ. ತಮ್ಮ ಪುಣ್ಯಪ್ರಭಾವವು ಕ್ಷಯಿಸಿದೆ ಎಂದು ಬಗೆದ ಲಕ್ಷ್ಮಣನು ಈ ಹುಡುಗರು ಬಲದೇವವಾಸುದೇವರಾದ ತಮಗಿಂತಲೂ ಬಲಾಢ್ಯರೆಂದು ಸುರಗತಿಯನ್ನು ನಿಶ್ಚೈಸಿ ಯುದ್ಧಮಾಡುವುದನ್ನು ಕೈಬಿಟ್ಟ.

ಮಗುದೊಂದು ಕಡೆ ನೀರದಪಥದಲ್ಲಿ ಬಂದ ನಾರದನು, ಬಲದೇವವಾಸುದೇವರೆಂಬ ಹೆಸರು ನಿಮಗಲ್ಲದೆ ಬೇರಾರಿಗೆ ಸಲ್ಲುತ್ತದೆ ಎಂದು ನಗುತ್ತ, ಲವಕುಶರು ಸೀತಾದೇವಿಯ ಮಕ್ಕಳು ಎಂಬುದನ್ನು ಲಕ್ಷ್ಮಣನಿಗೆ ತಿಳಿಸಿದ; ತಮ್ಮ ತಾಯಿಯನ್ನು ಅನ್ಯಾಯದಿಂದ ತೊರೆದರೆಂಬ ಕೋಪದಿಂದ ನಿಮ್ಮ ಮೇಲೆ ಅವರು ಹೀಗೆ ದಾಳಿಮಾಡಿದ್ದಾರೆ ಎಂದು

ವಿವರಿಸಿದ. ಅತಿಮುದಿತಹೃದಯನಾದ ಲಕ್ಷ್ಮಣನು ತನ್ನ ಬಿಲ್ಲುಬಾಣಕವಚಗಳನ್ನು ಬಿಸುಟು ರಾಮನಲ್ಲಿಗೆ ಬಂದು ಕೈಮುಗಿದು ಹೀಗೆಂದ: "ನಿಮ್ಮಂತೆಯೇ ರೂಪಶೌರ್ಯಸಮನ್ವಿತರಾದ ಈ ನಿಮ್ಮ ಮಕ್ಕಳು ನಿಮ್ಮನ್ನು ಕಾಣಲೆಂದು ಹೀಗೆ ಬಂದಿದ್ದಾರೆ." ಅನಂತರ ವಿಷಯವನ್ನೆಲ್ಲ ವಿವರವಾಗಿ ಹೇಳಿದ ಮೇಲೆ ರಾಮನಿಗೆ ಅತ್ಯಾಶ್ಚರ್ಯವಾಯಿತು, ಔತ್ಸುಕ್ಯವುಂಟಾಯಿತು. ಆಗ ತಾನೇ ಮಕ್ಕಳು ಜನಿಸಿದಂತೆ ಸಂಭ್ರಮದಿಂದ ರಥದಿಂದಿಳಿದು ಬಂದ. ಆ ಸಮಯದಲ್ಲಿ ಆನೆಯಿಂದ ಇಳಿದು ಬಂದ ಲವಕುಶರು ರಾಘವನಿಗೆ ನಮಸ್ಕರಿಸಿದರು; ಅವರ ಕಿರೀಟ ದೀಪ್ತಿಯೇ ನೀರಿನಂತೆ ತಂದೆಯ ಪಾದಗಳನ್ನು ತೋಯಿಸಿತು. ತನ್ನ ದೇಹಕಾಂತಿಯೆಂಬ ವಾಹಿನಿಯು ಸಂತಾನವಾಹಿನಿಯಲ್ಲಿ ಸೇರುವಂತೆ ರಾಘವನು ಮಕ್ಕಳನ್ನು ತೆಗೆದಪ್ಪಿಕೊಂಡ. ಆನಂತರ ಮಕ್ಕಳು ಚಿಕ್ಕಪ್ಪನಿಗೆ ನಮಸ್ಕರಿಸಿದರು; ಲಕ್ಷ್ಮಣನು ಅವರ ಮೇಲೆ ಆಶೀರ್ವಾದದ ಮಳೆಗರೆದ. ತನ್ನ ಮಕ್ಕಳ ರೂಪವೀರ್ಯಗಳನ್ನು ವಿಮಾನಾರೂಢೆಯಾಗಿ ಕಂಡ ಸೀತೆಯು ಆನಂದಬಾಷ್ಪಲುಲಿತಲೋಚನೆಯೂ ರೋಮಾಂಚಕಂಚುಕಿತಶರೀರೆಯೂ ಆದಳು. ತಂದೆಚಿಕ್ಕಪ್ಪರ ಜೊತೆ ಅವರು ಸೇರಿದುದನ್ನು ನೋಡಿ ಅವಳಿಗೆ ಸಂತೋಷವಾಯಿತು. ವಿಮಾನದಲ್ಲಿ ಪುಂಡರೀಕಿಣೀಪುರಕ್ಕೆ ಮರಳಿ ಹೋದಳು. ಈ ಕಡೆ, ಲವಕುಶರು ಪುಷ್ಪಕವಿಮಾನವನ್ನೇರಿ, ಸುಗ್ರೀವ ವಿರಾಧಿತ ವಿಭೀಷಣ ಹನುಮ ಅಂಗದ ಮುಂತಾದ ವಿಯಚ್ಚರಮುಖ್ಯರು ಹಾಗೂ ಭೂಮಿಯ ರಾಜಮುಖ್ಯರಿಂದಲೂ ಪರಿವೃತರಾಗಿ ಸಾಕೇತಪುರಕ್ಕೆ ಬಂದರು.

ಕೆಲಕಾಲ ಅಲ್ಲಿ ಸುಖವಾಗಿದ್ದ ಮೇಲೆ ಒಂದು ದಿನ ಅವರೆಲ್ಲ ಅನುಕೂಲ ಸಮಯದಲ್ಲಿ ರಾಘವನಲ್ಲಿಗೆ ಬಂದು, "ದೇವ, ಸಚ್ಚರಿತೆಯಾದ ಸೀತೆಯನ್ನು ಬೇರೆಡೆಯಲ್ಲಿರಿಸುವುದೇ? ನಮ್ಮ ಮೇಲೆ ಕೃಪೆ ತೋರಿಸಿ ಇನ್ನಾದರೂ ಆಕೆಯನ್ನು ಬರಮಾಡಿಕೊಳ್ಳಬೇಕು" ಎಂದು ಬಿನ್ನವಿಸಿಕೊಂಡರು. ಆಗ ರಾಮನು, "ಲೋಕಾಪವಾದದ ಭಯದಿಂದ ಆಕೆಯನ್ನು ಬಿಟ್ಟೆನೇ ಹೊರತು ಅಪವಾದವನ್ನು ಹೊರಿಸಿಯಲ್ಲ; ಸಚ್ಚರಿತದಲ್ಲಿ ಆಕೆಗೆ ಯಾರೂ ಸಮರಲ್ಲ. ಎಲ್ಲರಿಗೂ ಅದು ಮನವರಿಕೆಯಾಗುವಂತೆ ದಿವ್ಯದಿಂದ ಆಕೆಯ ಅಪವಾದವು ಕಳೆಯುವಂತೆ ಮಾಡಿ" ಎಂದು ಕಳಿಸಿಕೊಟ್ಟ. ಅಲ್ಲಿಂದ ಅವರು ಪುಂಡರೀಕಿಣಿಪುರಕ್ಕೆ ಬಂದು ಸೀತಾದೇವಿಯನ್ನು ಕಂಡರು. ರಾಮದೇವರು ಹೇಳಿದ್ದ ವಿಷಯವನ್ನು ಕೈಮುಗಿದುಕೊಂಡು ಹೇಳಲು, ಅದರಂತೆ ತಾನು ದಿವ್ಯದಿಂದ ಶುದ್ಧಿಯಾಗುವುದಾಗಿ ವೈದೇಹಿ ನಿರ್ಧರಿಸಿದಳು. ವಿಮಾನವನ್ನೇರಿ ಅಯೋಧ್ಯೆಗೆ ಬಂದು ಮಹೇಂದ್ರೋದ್ಯಾನದಲ್ಲಿ ತಂಗಿದಳು. ಅಷ್ಟು ಹೊತ್ತಿಗೆ ನೇಸರು ಮುಳುಗಿದ.

ಮರುದಿನ ರಾಮನನ್ನು ಕಂಡು ಅವಿಚಾರದಿಂದ ತನಗೆ ತುಂಬ ನೋವನ್ನಿತ್ತುದಕ್ಕಾಗಿ ಜಾನಕಿಯು ವಿಷಾದಿಸಿದಳು. ತಾನು ಲೋಕಾಪವಾದಭಯದಿಂದ ಹಾಗೆ ಮಾಡಿದುದಾಗಿಯೂ, ಲೋಕಪ್ರತ್ಯಯವಾಗುವಂತೆ ಸಚ್ಚಾರಿತ್ರ್ಯವನ್ನು ಮೆರೆಯುವಂತೆ ರಾಘವ ಸೂಚಿಸಿದ. ಮಹಾಪ್ರಸಾದವೆಂದು ಸೀತೆಯು ಚಂದನ ಅಗುರುಗಳ ಇಂಧನದಿಂದ ಕೂಡಿದ ದೊಡ್ಡದೊಂದು ಅಗ್ನಿಕುಂಡವನ್ನು ಸಿದ್ಧಪಡಿಸಲು ಹೇಳಿದಳು. ಆ ಹೊತ್ತಿಗೆ ಸಕಲಭೂಷಣ ಭಟ್ಟಾರಕರ ಕೇವಲಜ್ಞಾನ ಪೂಜೆಗೆಂದು ದೇವನಿಕಾಯದೊಡನೆ ಬರುತ್ತಿದ್ದ ಇಂದ್ರನು ಸೀತೆಯ ನಿರ್ಧಾರವನ್ನು ತಿಳಿದು ಮೇಘಕೇತನನೆಂಬ ದೇವನನ್ನು

ಕರೆದು ಮಹಾಸತಿಯ ಉಪಸರ್ಗವನ್ನು ಹಿಂಗಿಸಿ ಬರುವಂತೆ ಆಜ್ಞಾಪಿಸಿದನು. ಅದರಂತೆ ಮೇಘನಿಕೇತನನು ವಿಮಾನಾರೂಢನಾಗಿ ಗಗನದಿಂದಲೇ ಉರಿಯುತ್ತಿದ್ದ ಕೊಂಡವನ್ನು ನೋಡುತ್ತ ನಿಂತ. ಸೀತೆಯು ಅಗ್ನಿಕುಂಡದ ಮೆಟ್ಟಿಲುಗಳನ್ನು ಹತ್ತಿ ಸುಸ್ವರದಿಂದ "ವಸುಂಧರೆಯ ಒಡೆಯನಾದ ರಾಘವನಲ್ಲಲ್ಲದೆ ರಾವಣನಾದಿಯಾಗಿ ಬೇರಾವನನ್ನಾದರೂ ನನ್ನ ಮನಸ್ಸಿನಲ್ಲಿ ತಂದುಕೊಂಡಿದ್ದರೆ ನಾನು ಬೆಂಕಿಯಲ್ಲಿ ಬೆಂದುಹೋಗುವಂತಾಗಲಿ" ಎಂದು ಜೋರಾಗಿ ಘೋಷಿಸಿ, ಪಂಚಪರಮೇಷ್ಠಿಗಳನ್ನು ಮನಸ್ಸಿನಲ್ಲಿಯೇ ಧ್ಯಾನಿಸಿ ಧಗಧಗನೆ ಉರಿಯುತ್ತಿದ್ದ ಬೆಂಕಿಯಲ್ಲಿ ಬಿದ್ದಳು.

ಇದನ್ನು ನೋಡುತ್ತಿದ್ದ ಮರುದ್ಗಣವು ಮರವಟ್ಟುಹೋಯಿತು; ಪರಿಜನರು ಬೆಚ್ಚಿದರು; ಆಪ್ತಜನರು ಶೋಕಾಗ್ನಿಯಿಂದ ಬೆಂದರು; ಲವಕುಶರು ವಿಹ್ವಲಗೊಂಡರು; ರಘೂದ್ವಹ ಪರಿತಾಪಗೊಂಡ; ಲಕ್ಷ್ಮಣ ಉದ್ವೇಗಕ್ಕೊಳಗಾದ. ಆದರೆ ಶೀಲವತಿಯಾದ ಸೀತೆ ಜಿನಪತಿಯನ್ನು ನೆನೆಯುತ್ತ ಬೆಂಕಿಯ ನಡುವೆ ತಣ್ಣನೆಯ ತಿಳಿಗೊಳದಲ್ಲಿ ಜಲದೇವತೆಯೇ ಇರುವಂತೆ ಹಾಯಾಗಿದ್ದಳು. ಸತಿಯ ವಿಶುದ್ಧ ಚರಿತೆಯು ಹುತವಹನ ಪ್ರಬಲವಾದ ಸುಡುವ ಗುಣವನ್ನೂ ಪ್ರತಿಬಂಧಿಸಿಬಿಟ್ಟಿತು! ಆಗ ಇಂದ್ರನ ಆಣತಿಯಂತೆ ಬಂದಿದ್ದ ದೇವನು ಬೆಂಕಿಯ ಕುಂಡವನ್ನೇ ಕೊಳವನ್ನಾಗಿ ಮಾಡಿ, ಅದರಲ್ಲಿ ಸಹಸ್ರದಳ ಪದ್ಮವೊಂದನ್ನು ರಚಿಸಿ ಅದರ ಕರ್ಣಿಕೆಯ ಮೇಲೆ ಸಿಂಹಾಸನವೊಂದನ್ನು ಇರಿಸಿದ. ತನ್ನ ದೇವಿಯರಿಂದ ಸೀತೆಯನ್ನು ಎತ್ತಿಸಿಕೊಂಡು ಆ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿ, ಆಕಾಶದಿಂದ ಹೂಮಳೆಯನ್ನು ಸುರಿಸಿದ.

ಜನರೆಲ್ಲ ಒಂದೆ ಕೊರಳಿನಲ್ಲಿ ಜನಕಾತ್ಮಜೆಯ ಪತಿವ್ರತಾಗುಣವನ್ನು ಹೊಗಳಿದರು. ಜಾನಕಿಯು ಹೊನ್ನ ಸಲಾಕೆಯಂತೆ ಬೆಂಕಿಯಿಂದ ಶುದ್ಧಳಾಗಲು ಲವಕುಶರು ತಾಯ ಬಳಿ ಪುಲಕಿತರಾಗಿ ಕುಳಿತುಕೊಂಡರು; ರಾಮ ರೋಮಾಂಚನಗೊಂಡ. ಲಕ್ಷ್ಮಣನೂ ಬಂಧುವರ್ಗವೂ ಹರ್ಷಗೊಂಡರು; ಗಂಧವಾಹವು ಸಂಭ್ರಮದಿಂದ ಬೀಸಿತು; ಸಕಲ ಲೋಕವೂ ಆಕೆಯನ್ನು ಹರಸಿತು. ಆಗ ರಾಮಸ್ವಾಮಿಯು ಆಕೆಯ ಬಳಿ ಬಂದು ತನ್ನನ್ನು ಕ್ಷಮಿಸಿ ಮೊದಲಿನಂತೆ ತನ್ನ ವಲ್ಲಭೆಯಾಗಿರಬೇಕೆಂದು ಕೇಳಿಕೊಂಡ. ಆಗ ಅಮೃತಾಂಶುವದನೆಯು, "ನನ್ನ ಕರ್ಮದಿಂದ ಆದ ದುಃಖಕ್ಕಾಗಿ ನಾನು ನಿಮ್ಮನ್ನು ತೆಗಳುವುದಿಲ್ಲ; ಆದರೆ ಕೇಡುಳ್ಳ ಈ ಸಂಸಾರದಲ್ಲಿದ್ದು ಸಾಧಿಸಬೇಕಾದದ್ದೇನಿದೆ? ಕೇಡಿಲ್ಲದ ಮೋಕ್ಷಸುಖಕ್ಕೆ ಕಾರಣವಾದ ತಪಸ್ಸನ್ನು ಕೈಗೊಳ್ಳಲು ನಾನು ನಿರ್ಧರಿಸಿದ್ದೇನೆ" ಎಂದು ಕೂದಲುಗಳನ್ನು ಕಿತ್ತುಕೊಂಡಳು. ಸತಿಯ ಈ ನಿರ್ಧಾರದಿಂದ ರಾಮನಿಗೆ ಅತೀವ ದುಃಖವುಂಟಾಗಿ ಅವನು ಮೂರ್ಚೆಗೊಂಡ.

ಅಷ್ಟು ಹೊತ್ತಿಗೆ ಸೀತೆ ಪೃಥುಮತಿ ಕಂತಿಯರ ಸಮ್ಮುಖದಲ್ಲಿ ದೀಕ್ಷೆ ಪಡೆದು ಮಹೇಂದ್ರೋದ್ಯಾನಕ್ಕೆ ಹೋಗಿ ಸಕಲಭೂಷಣ ಭಟ್ಟಾರಕರ ಸಭೆಗೆ ಬಂದಳು. ಶೀತಲಕ್ರಿಯೆಗಳಿಂದ ಸ್ವಲ್ಪ ಹೊತ್ತಿನಲ್ಲಿ ಎಚ್ಚರಗೊಂಡ ರಾಮನು ಆಕೆಯ ಮೇಲಿನ ವ್ಯಾಮೋಹದಿಂದ ಸಕಲ ಲೋಕಾಧಿಪರಿಂದ ಪರಿವೃತನಾಗಿ ಸಕಲಭೂಷಣ ಕೇವಲಿಗಳ ಸಭೆಯೆಡೆಗೇ ಬಂದ. ಹತ್ತಿರ ಬಂದಾಗ ಅವನ ಮೋಹನೀಯ ಕರ್ಮವು ಅಲ್ಲಿ ಉಪಶಮನಗೊಂಡಿತು. ಆನೆಯಿಂದಿಳಿದು ಕೇವಲಿಗಳನ್ನು ಬಲಗೊಂಡು ಸಭೆಯಲ್ಲಿ

ಬಂದು ಕುಳಿತ. ಅಲ್ಲಿ ಸೀತಾದೇವಿ ಕಾಣಿಸಿದಳು. ಎಲ್ಲರೂ ಸೀತೆಯ ಚರಿತೆಯನ್ನು ಮನದುಂಬಿ ಹೊಗಳಿದರು. ಆನಂತರ ವಿಭೀಷಣನು ಭಟ್ಟಾರಕರಿಗೆ ಕೈಮುಗಿದು, "ಹಿಂದಿನ ಜನ್ಮದಲ್ಲಿ ರಾಮನು ಮಾಡಿದ ಯಾವ ಪುಣ್ಯಬಲದಿಂದ ಈಗ ಸಕಲವಿದ್ಯೆಗಳನ್ನೂ ಕಲಿತು ಮಹಾವಿಭವಸಂಪನ್ನನಾಗಿದ್ದಾನೆ; ಅಂತೆಯೇ ಶೌಚಾಚಾರ ಪರಾಯಣನಾದ ವಿದ್ಯಾಧರವಲ್ಲಭ ರಾವಣನು ಯಾವ ಪಾಪವನ್ನು ಮಾಡಿ ಸೀತೆಯಲ್ಲಿ ಮೋಹಿತನಾದ; ಅಭೇದ್ಯನೂ ಅಸಾಧ್ಯನೂ ಆದ ಅವನನ್ನು ಯಾವ ಸುಕೃತದಿಂದಾಗಿ ಲಕ್ಷ್ಮಣನು ಕೊಲ್ಲುವಂತಾಯಿತು, ದಯವಿಟ್ಟು ಹೇಳಬೇಕು" ಎಂದು ಕೇಳಿಕೊಂಡ.

ಆಗ ಕೇವಲಿಗಳು ಕಾಮಸರ್ಪನಿರ್ವಿಷೀಕರಣ ದಿವ್ಯಮಂತ್ರವೂ ಜರಾಮರಣ ಶಿಲಾವಿದಳನಟಂಕಧ್ವನಿಯೂ ಆದ ತಮ್ಮ ಮಧುರ ಗಂಭೀರ ದನಿಯಿಂದ ಹೇಳತೊಡಗಿದರು. ರಾಮನ ಭವಾವಳಿಯ ವಿವರಗಳು ಇವು: ಈ ಭರತದ ಯಕ್ಷಪುರದಲ್ಲಿ ನಯದತ್ತನೆಂಬ ಹರದನಿದ್ದ; ಅವನ ಹೆಂಡತಿ ಸುನಂದೆ. ಮೊದಲನೆಯ ಜನ್ಮದಲ್ಲಿ ಅವರ ಮಗನಾಗಿ ಧನದತ್ತನೆಂಬ ಹೆಸರಿನ ಮಗನಾಗಿ ಹುಟ್ಟಿ, ಜಿನಧರ್ಮಕ್ಕನುಗುಣವಾಗಿ ತಪ್ಪದೆ ನಡೆದುಕೊಂಡು ಸೌಧರ್ಮಕಲ್ಪದಲ್ಲಿ ಹುಟ್ಟಿದ; ಆನಂತರ ಶ್ರಾವಸ್ತಿ ನಗರದ ವ್ಯಾಪಾರಿ ಸಮ್ಯಗ್ದೃಷ್ಟಿಮೇರು ಮತ್ತು ಅವನ ಮಡದಿ ಧಾರಿಣಿಯರಿಗೆ ಪದ್ಮರುಚಿ ಎಂಬ ಮಗನಾಗಿ ಜನಿಸಿ ಜಿನಮಾರ್ಗದಲ್ಲಿ ಬಾಳಿ, ಸತ್ತನಂತರ ಈಶಾನಕಲ್ಪದಲ್ಲಿ ಹುಟ್ಟಿದ; ಬಳಿಕ ಅಪರ ವಿದೇಹದ ವಿಜಯಾರ್ಧಪರ್ವತದ ನಂದ್ಯಾವರ್ತಪುರದ ರಾಜ ನಂದೀಶ್ವರನೆಂಬ ವಿದ್ಯಾಧರ ಮತ್ತವನ ಅರಸಿ ಕನಕಾಭೆಯರಿಗೆ ನಯನಾನಂದನೆಂಬ ಮಗನಾಗಿ ಹುಟ್ಟಿ ವಿದ್ಯಾಧರರಾಜ್ಯ ಸುಖವನ್ನನುಭವಿಸಿ ಭೋಗನಿರ್ವೇಗದಿಂದ ತಪಸ್ಸಿಗೆ ತೊಡಗಿ ಕೆಲಕಾಲಾನಂತರ ಸಮಾಧಿಮರಣವನ್ನು ಹೊಂದಿ ಮಾಹೇಂದ್ರಕಲ್ಪದಲ್ಲಿ ಸುರಲೋಕಸುಖವನ್ನನುಭವಿಸಿದ; ಮರುಜನ್ಮದಲ್ಲಿ ಪೂರ್ವವಿದೇಹದ ಕ್ಷೇಮಪುರವನ್ನಾಳುತ್ತಿದ್ದ ವಿಮಲವಾಹನ-ಪದ್ಮಾವತಿ ರಾಜದಂಪತಿಗಳ ಮಗನಾಗಿ ಶ್ರೀಚಂದ್ರನೆಂಬ ಹೆಸರಿನಿಂದ ಜನಿಸಿ ಬಹುಸಹಸ್ರ ವರ್ಷಗಳ ಕಾಲ ರಾಜ್ಯಭಾರ ಮಾಡಿ ಸಮಾಧಿಗುಪ್ತರೆಂಬ ಆಚಾರ್ಯರ ಸಮಕ್ಷಮದಲ್ಲಿ ದೀಕ್ಷೆಯನ್ನು ಕೈಗೊಂಡು ಉಗ್ರ ತಪಸ್ಸು ಮಾಡಿ ಬ್ರಹ್ಮಕಲ್ಪಕ್ಕೆ ಹೋಗಿ ಬಂದು ಈ ಜನ್ಮದಲ್ಲಿ ರಾಮದೇವನಾಗಿದ್ದಾನೆ.

ಲಕ್ಷ್ಮಣನ ಭವಾವಳಿ ಎಂತೆಂದರೆ: ಈ ಹಿಂದೆ ಹೇಳಿದ ಯಕ್ಷಪುರದ ನಯದತ್ತನ ಮಗ ವಸುದತ್ತನಾಗಿದ್ದ; ಆನಂತರ ಮೃಣಾಲಕುಂಡಲಪುರದ ರಾಜ ವಿಜಯಸೇನನ ಮಗನಾದ ಶಂಭುವಿಗೆ ಶ್ರೀಭೂತಿಯೆಂಬ ಪುರೋಹಿತನಾಗಿ ಸನ್ಮಾರ್ಗದಲ್ಲಿ ಬಾಳಿ ಕನ್ಯಾನಿಮಿತ್ತವಾಗಿ ತನ್ನ ಯಜಮಾನನಿಂದಲೇ ಸತ್ತು ದೇವಗತಿಯನ್ನು ಪಡೆದ; ಆನಂತರ ಪ್ರತಿಷ್ಠಾಪುರದಲ್ಲಿ ಪುನರ್ವಸು ಹೆಸರಿನ ವಿದ್ಯಾಧರನಾಗಿ ಹುಟ್ಟಿ ದೇವಗತಿಯನ್ನು ಹೊಂದಿದ; ಈಗ ಈ ಜನ್ಮದಲ್ಲಿ ಲಕ್ಷ್ಮಣನಾಗಿದ್ದಾನೆ ಎಂದರು.

ಇನ್ನು ರಾವಣನ ಭವಾವಳಿ: ಮೃಣಾಳಕುಂಡಲಪುರದ ರಾಜ ವಿಜಯಸೇನ ಮತ್ತವನ ರಾಣಿ ರತ್ನಮಾಲೆಯರ ಮಗ ಶಂಭುವಾಗಿ ಹುಟ್ಟಿ ಮದ್ಯ ಮಧು ಮಾಂಸಗಳನ್ನು ಸೇವಿಸುತ್ತ ಹಲವು ನರಕತಿರ್ಯಕ್ ಜನ್ಮಗಳನ್ನು ಪಡೆದು ಪಾಪೋಪಶಮನ ಮಾಡಿಕೊಂಡು ಕುಶಧ್ವಜನೆಂಬ ಬ್ರಾಹ್ಮಣನಿಗೆ ಭಾಸಕುಂಡಲನೆಂಬ ಮಗನಾಗಿ ಚಿತ್ರಸೇನ ಮುನಿಗಳ ಬಳಿ

ಶಿಷ್ಯವೃತ್ತಿ ಕೈಗೊಂಡು ವಂದನಾನಿಮಿತ್ತವಾಗಿ ಸಮ್ಮೇದಗಿರಿಯ ಬಳಿಯ ಜಿನಮಂದಿರಗಳಿಗೆ ಹೋಗುತ್ತ ಕನಕಧರನೆಂಬ ವಿದ್ಯಾಧರನ ವೈಭವವನ್ನು ಕಂಡು ಅಂತದನ್ನು ತಾನೂ ಪಡೆಯುವ ಹಂಬಲದಿಂದ ತಪಸ್ಸುಗೈದು ಸತ್ತು ಸನತ್ಕುಮಾರಕಲ್ಪಕ್ಕೆ ಹೋಗಿ ಈ ಜನ್ಮದಲ್ಲಿ ತ್ರಿಖಂಡಮಂಡಲಾಧಿಪತಿಯಾದ ರಾವಣನಾದ.

ಸೀತೆಯ ಹಿಂದಿನ ಜನ್ಮಗಳ ಕತೆ ಎಂತೆಂದರೆ: ಈ ಭರತದ ಯಕ್ಷಪುರದ ಸಾಗರದತ್ತನೆಂಬ ಹರದ ಮತ್ತವನ ಹೆಂಡತಿ ರತ್ನಪ್ರಭೆಯರ ಪುತ್ರಿ ಗುಣವತಿ, ಮಿಥ್ಯಾಭಾವನೆಯಿಂದ ಜನ್ಮವನ್ನು ಕಳೆದಳು; ಎಷ್ಟೋ ಕಾಲ ತಿರ್ಯಕ್‌ಗತಿಯಲ್ಲಿ ಅಲೆದು ಕಡೆಯಲ್ಲಿ ಹೆಣ್ಣಾನೆಯಾಗಿ ಹುಟ್ಟಿ ಒಮ್ಮೆ ತಿರುಗಾಡುತ್ತ ಗಂಗೆಯ ದಡದಲ್ಲಿ ನೀರು ಕುಡಿಯಲೆಂದು ಹೋಗಿ ಕೆಸರಲ್ಲಿ ಬಿದ್ದು ಹೊರಬರಲಾರದ ಸ್ಥಿತಿಯಲ್ಲಿರಲು ಅದನ್ನು ಆಗಸದಲ್ಲಿ ಹೋಗುತ್ತಿದ್ದ ತರಂಗತಮನೆಂಬ ವಿದ್ಯಾಧರನು ಕಂಡು ಹತ್ತಿರ ಬಂದು ಪಂಚನಮಸ್ಕಾರಮಂತ್ರಗಳನ್ನು ಹೇಳಿದುದನ್ನು ಕೇಳಿ ಸಮಾಧಾನಚಿತ್ತದಿಂದ ಸತ್ತು ಮರುಜನ್ಮದಲ್ಲಿ ಶ್ರೀಭೂತಿ ಎಂಬ ಪುರೋಹಿತ ಮತ್ತವನ ಭಾರ್ಯೆ ಸರಸ್ವತಿಗೆ ವೇದವತಿ ಎಂಬ ಹೆಸರಿನ ಮಗಳಾದರೂ, ತಮ್ಮ ಮನೆಗೆ ಚರಿಗೆಗಾಗಿ ಬಂದ ಋಷಿಗಳನ್ನು ದೂಷಿಸಿದಾಗ ತಂದೆ ಜಿನಧರ್ಮದ ಸ್ವರೂಪವನ್ನು ತಿಳಿಯಹೇಳಲು ಜೈನಮಾರ್ಗದಲ್ಲಿ ನಡೆಯತೊಡಗಿ ಆ ಮುಂದಿನ ಮೂರನೆಯ ಜನ್ಮದಲ್ಲಿ ರಾವಣನಾಗಿ ಹುಟ್ಟಲಿದ್ದ ಶಂಭುವು ಕಂಡು ಅವಳ ಚೆಲುವಿಗೆ ಮಾರುವೋಗಿ ಮದುವೆಯಾಗಲು ಇಚ್ಛಿಸಿದರೂ ಮಿಥ್ಯಾದೃಷ್ಟಿಯವನೆಂದು ಶ್ರೀಭೂತಿ ಅವನಿಗೆ ಹೆಣ್ಣು ಕೊಡಲಿಲ್ಲ; ಕೋಪದಿಂದ ಅವನನ್ನು ಕೊಲ್ಲಿಸಿ ಮತ್ತೆ ಅವಳ ಬಳಿ ಮದುವೆಯ ಪ್ರಸ್ತಾಪ ಮಾಡಿದ ಶಂಭುವನ್ನು ಶೋಕಾಕುಲಿತೆಯಾಗಿದ್ದ ಅವಳು ತಿರಸ್ಕರಿಸಿ ಮರುಹುಟ್ಟಿನಲ್ಲಿಯಾದರೂ ಅವನಿಗೆ ವಿನಾಶಹೇತುವಾಗಿ ಜನಿಸುವ ಛಲದಿಂದ ತಪಸ್ಸು ಮಾಡಿ ಸತ್ತ ವೇದವತಿಯು ಬ್ರಹ್ಮಕಲ್ಪದಲ್ಲಿ ಹುಟ್ಟಿ ಆನಂತರ ಚಿತ್ತೋತ್ಸವೆ ಎಂಬ ಹೆಸರಿನಿಂದ ಜನಿಸಿ ಕ್ರಮವಾಗಿ ಈ ಜನ್ಮದಲ್ಲಿ ಸೀತೆಯಾಗಿರುವಳು.

ಈಗ ಪ್ರಭಾಮಂಡಲನ ಭವಾವಳಿ: ಗುಣವರ್ಮನೆಂಬ ಹರದನಾಗಿ ಕುಂಡಲ ಕೆಳೆಯನಾದ ಯಾಜ್ಞವಲ್ಕಿ ವಿಭಿಷಣನಾಗಿ ಹುಟ್ಟಿ ಮುಂಚಿನ ಗೆಳೆತನದ ಕಾರಣದಿಂದ ಲಕ್ಷ್ಮಣನ ಜೊತೆ ಬಂದು ಸೇರಿದ್ದಾನೆ. ಮೊದಲೇ ಹೇಳಿದ ಪದ್ಮರುಚಿಯ ಕೈಯಲ್ಲಿ ಪಂಚನಮಸ್ಕಾರಮಂತ್ರವನ್ನು ಕೇಳಿದ ವೃಷಭನು ರಾಜಪುತ್ರನಾಗಿ ಹುಟ್ಟಿ ತಪಸ್ಸು ಮಾಡಿ ಸ್ವರ್ಗದಲ್ಲಿ ಜನಿಸಿ ಬಂದು ಈಗ ಸುಗ್ರೀವನಾಗಿ ಹಿಂದಿನ ಉಪಕಾರದ ದೆಸೆಯಿಂದ ರಾಮನಿಗೆ ಸಹಾಯಕನಾಗಿ ನಿಂತ. ಎಲ್ಲವನ್ನೂ ಸಕಲಭೂಷಣ ಕೇವಲಿಗಳು ವಿಸ್ತಾರವಾಗಿ ಹೇಳಿ ಹೀಗೆಂದರು: ಶ್ರೀಭೂತಿ ಎಂಬ ಪುರೋಹಿತನಾಗಿದ್ದಾಗ ರಾವಣನಾಗಿದ್ದ ಶಂಭುವಿನ ಕೈಯಿಂದ ಸಾಯಬೇಕಾಗಿ ಬಂದ ಮುಳಿಸಿನ ಕಾರಣದಿಂದ ಲಕ್ಷ್ಮಣನು ರಾವಣನನ್ನು ಕೊಂದ. ವೇದವತಿಯಾಗಿದ್ದಾಗಿನ ಸೀತೆಯು ಮಂಡಲಾಗ್ರಪುರದಲ್ಲಿ ಋಷಿಸಮೂಹದಲ್ಲಿದ್ದ ಸುದರ್ಶನ ಮುನಿಗಳನ್ನೂ ಅವರ ತಂಗಿಯಾದ ಸುದರ್ಶನೆ ಎಂಬ ಕಂತಿಯನ್ನೂ ಸಲ್ಲದ ಮಾತುಗಳಿಂದ ನಿಂದಿಸಿದ ಕಾರಣದಿಂದಾಗಿ ವೇದವತಿಯ ಮುಖದಲ್ಲಿ ಬಾವುಂಟಾಯಿತು, ಆನಂತರ ಅದನ್ನರಿತು ಅವಳು ಪ್ರಾಯಶ್ಚಿತ್ತ ಮಾಡಿಕೊಂಡು ಒಳ್ಳೆಯ ನಡತೆಯನ್ನು

ಪಡೆದುದರಿಂದ ದೇವಲೋಕಕ್ಕೆ ಹೋಗಿ ಬಂದು ಈ ಅಪವಾದಕ್ಕೆ ಗುರಿಯಾಗಬೇಕಾಯಿತು ಎಂದು ವಿವರಿಸಿ, ಜಿನಮುನಿ ಜೈನಮತಗಳನ್ನು ಪಾಪಬುದ್ಧಿಯಿಂದ ದೂಷಿಸಿದರೆ, ಜಿನಧರ್ಮದವರನ್ನು ಅಕಾರಣವಾಗಿ ಬೈದರೆ, ಅವರ ಮೇಲೆ ಮುನಿದರೆ ಉಂಟಾಗುವ ಕರ್ಮಬಂಧನವು ಎಣಿಕೆಗೆ ನಿಲುಕೀತೇ ಎಂದು ಉದ್ಗರಿಸಿದರು.

ಕೊನೆಗೆ ಕೃತಾಂತವಕ್ತ್ರನು ರಾಮನನ್ನು ಒಡಂಬಡಿಸಿ ಇತರ ಹಲವರ ಜೊತೆಗೂಡಿ ಸಕಲಭೂಷಣ ಕೇವಲಿಗಳ ಸನ್ನಿಧಾನದಲ್ಲಿ ದೀಕ್ಷೆ ಪಡೆಯಲು ನಿರ್ಧರಿಸಿದ. ಇನ್ನು ಸ್ವಲ್ಪ ದಿನಗಳ ಬಳಿಕ ತಾನೂ ದೀಕ್ಷೆ ಹೊಂದಲು ನಿಶ್ಚೈಸಿದ ರಾಮನು ಭಟ್ಟಾರಕರಿಗೆ ನಮಸ್ಕಾರಗೈದು ಸೀತಾಂಬಿಕೆಯ ಬಳಿ ಹೋಗಿ ಲಕ್ಷ್ಮಣಾದಿಗಳ ಜೊತೆಯಲ್ಲಿ ದಿವ್ಯಮುನಿಗಳ ಸಭೆಯಿಂದ ಸಮಾಧಾನಚಿತ್ತದಿಂದ ಹೊರಟ. ಆನಂತರ ಮಹೋತ್ಸಾಹದಿಂದ ಲಕ್ಷ್ಮಣಸಮೇತನಾಗಿ ಲವಕುಶರಿಂದೊಡಗೂಡಿ ಅಯೋಧ್ಯಾಪುರವನ್ನು ಪ್ರವೇಶಿಸಿದ. ಅಲ್ಲಿ ಎಲ್ಲರೂ ಸುಖದಿಂದಿದ್ದರು.

ಅತ್ತ ಸೀತಾರ್ಯಿಕೆಯು ಹಲವುಕಾಲ ತಪಸ್ಸು ಮಾಡಿ ಮೂವತ್ತಾರು ದಿನಗಳ ಕಾಲ ಸನ್ಯಸನವನ್ನು ಕೈಕೊಂಡು ಮುಡಿಪಿ ಅಚ್ಯುತಕಲ್ಪದಲ್ಲಿ ಸ್ವಯಂಪ್ರಭನೆಂಬ ವ್ರತೀಂದ್ರನಾಗಿ ಹುಟ್ಟಿದಳು. ಇತ್ತ ಕಾಂಚನಪುರವನ್ನಾಳುವ ಕಾಂಚನರಥ ಮತ್ತವನ ಹೆಂಡತಿ ವಿದ್ಯುನ್ಮಾಲೆಯರ ಮಗಳಂದಿರಾದ ಮಂದಾಕಿನಿ ಚಂದ್ರವಕ್ತ್ರೆ ಎಂಬ ಕನ್ನಿಕೆಯರು ತಮಗಾಗಿ ಏರ್ಪಡಿಸಿದ್ದ ಸ್ವಯಂವರಕ್ಕೆ ಬಂದಿದ್ದ ಅರಸುಮಕ್ಕಳಲ್ಲಿ ಯಾರನ್ನೂ ಒಲ್ಲದೆ, ಮಂದಾಕಿನಿ ಲವನಿಗೆ ಮಾಲೆಯನ್ನು ಸೂಡಿದರೆ, ಚಂದ್ರವಕ್ತ್ರೆಯು ಕುಶನನ್ನು ವರಿಸಿದಳು. ಅಲ್ಲಿದ್ದ ಲಕ್ಷ್ಮಣನ ಎಂಟು ಮಂದಿ ಕುಮಾರರು ಅದನ್ನು ಕಂಡು ನಿರ್ವೇಗಪರಾಯಣರಾಗಿ ಮಹಾಬಲ ಭಟ್ಟಾರಕರ ಕಾಲ ಬಳಿ ದೀಕ್ಷೆ ಪಡೆದರು.

ಇತ್ತ, ಪ್ರಭಾಮಂಡಲನು ನಿಡುಗಾಲ ವಿದ್ಯಾಧರ ರಾಜ್ಯಸುಖವನ್ನನುಭವಿಸಿ ಒಮ್ಮೆ ತನ್ನರಮನೆಯ ಏಳನೆಯ ಮಹಡಿಯ ಮೇಲಿದ್ದಾಗ ಸಿಡಿಲು ಬಡಿದು ಸತ್ತು ದೇವಕುರುವಿನಲ್ಲಿ ಹುಟ್ಟಿದ. ಅಂತೆಯೇ ಹನುಮನು ಕರ್ಣಮಂಡಲಪುರದಲ್ಲಿ ಹಲವು ಕಾಲ ಅರಸುಗೈದು ಕೃಷ್ಣಪಕ್ಷದ ಒಂದಿರುಳು ಮಣಿಮಾಡದಲ್ಲಿದ್ದಾಗ ಉಲ್ಕೆಯು ಆಗಸದಿಂದ ಉರುಳಿ ಬಿದ್ದುದನ್ನು ಕಂಡು, ಸಂಸಾರಿಗಳ ಧನ ಜೀವನ ಯೌವನಗಳೂ ಹೀಗೇ ಅಧ್ರುವವೆಂದು ಬಗೆದು ವೈರಾಗ್ಯಪರನಾಗಿ ಸುಶ್ರುತನೆಂಬ ತನ್ನ ಮಗನಿಗೆ ರಾಜ್ಯವನ್ನಿತ್ತು ವಿದ್ಯುದ್ದ್ಯುತಿ ಮೊದಲಾದ ಏಳುನೂರೈದು ಮಂದಿ ವಿದ್ಯಾಧರ ಪ್ರಮುಖರೊಡನೆ ಧರ್ಮಾಭರಣರೆಂಬ ಚಾರಣಋಷಿಗಳ ಸಮಕ್ಷಮದಲ್ಲಿ ದೀಕ್ಷೆಯನ್ನು ಹೊಂದಿದ. ಹನುಮನ ಅರಸಿಯರೆಲ್ಲ ಸುಮತಿ ಕಂತಿಯರ ಬಳಿ ತಪಸ್ಸನ್ನು ಕೈಗೊಂಡರು. ಮುಂದೆ ಹನುಮಮುನಿಯು ಘಾತಿಅಘಾತಿ ಕರ್ಮಗಳನ್ನು ಕ್ಷಯಿಸಿ ನಿರ್ವಾಣವನ್ನು ಪಡೆದ.

ಬಲದೇವವಾಸುದೇವರು ಅನೇಕ ವರ್ಷಗಳ ಕಾಲ ನಿರವಧಿ ಸಂಪತ್ತಿಗೆ ಒಡೆಯರಾಗಿ ರಾಜ್ಯಸುಖವನ್ನನುಭವಿಸುತ್ತಿದ್ದರು. ಅಂತಿರುವಾಗ ಒಮ್ಮೆ ಸುರಪರಿಷತ್ತಿನಲ್ಲಿ ಸೌಧರ್ಮೇಂದ್ರನು ಧರ್ಮನಿರೂಪಣಪ್ರವಣನಾಗಿ, "ಬೇರೆ ಜನ್ಮಗಳು ಅಪವರ್ಗಸೌಖ್ಯವನ್ನೀಯಲಾರವು, ಆದರೆ ಮನುಷ್ಯಗತಿಯಿಂದ ಅದರ ಸಾಧನೆ ಸಾಧ್ಯ; ಆ ಕಾರಣದಿಂದ ಅದು ಮಿಕ್ಕೆಲ್ಲದಕ್ಕಿಂತ ಪಾವನವಾದುದು" ಎಂದು ಹೇಳಿದ. ಅದನ್ನು

ಕೇಳಿ ಸಮ್ಯಗ್ದೃಷ್ಟಿಯನ್ನು ಹೊಂದಿದ್ದ ವಿಭಾವಸುವೆಂಬ ದೇವನು, "ಮಲರಹಿತವಾದ ತಪಸ್ಸನ್ನು ಕೈಗೊಂಡು ಅಪವರ್ಗವನ್ನು ಪಡೆಯುವ ಮನುಷ್ಯಗತಿಯನ್ನು ಪಡೆಯುವುದು ಹೇಗೆ?" ಎಂದು ಕೇಳಿದ. ಆಗ ಮತ್ತೊಬ್ಬ ಗೀರ್ವಾಣನು, "ಹಾಗಾದರೆ ಮನುಷ್ಯಗತಿಯನ್ನು ಪಡೆದಿದ್ದರೂ ಬ್ರಹ್ಮಕಲ್ಪದಿಂದ ಬಂದ ರಾಮನು ದೀಕ್ಷೆಯನ್ನೇಕೆ ಕೈಗೊಂಡಿಲ್ಲ? ಮನುಷ್ಯ ಜನ್ಮವೊಂದೇ ದೀಕ್ಷೆಗೆ ನೆಲೆಯೇ?" ಎಂದು ಪ್ರಶ್ನಿಸಿದ. ಲಕ್ಷ್ಮಣನೊಡನಿರುವ ಗಾಢ ಪ್ರೀತಿಯಿಂದಾಗಿ ರಾಮನು ತಪಸ್ಸನ್ನು ಉಪೇಕ್ಷಿಸಿದ್ದಾನೆ; ಏಕೆಂದರೆ ಪೂರ್ವಜನ್ಮದ ಸ್ನೇಹವನ್ನು ತೊರೆಯುವುದು ಕಷ್ಟ; ಲಕ್ಷ್ಮಣನ ವಿಯೋಗವುಂಟಾದರೆ ಆಗುವ ಸಂತಾಪದಿಂದ ರಾಮ ವೈರಾಗ್ಯವನ್ನು ಹೊಂದುತ್ತಾನೆ; ಅಂತೆಯೇ ಲಕ್ಷ್ಮಣನಿಗೂ ರಾಮನ ಮೇಲೆ ಅತೀವ ಪ್ರೀತಿ ಎಂದು ವಿಭಾವಸು ವಿವರಿಸಿದ.

ಅಣ್ಣತಮ್ಮಂದಿರ ನಿಸರ್ಗಪ್ರೀತಿಯನ್ನು ನೋಡಲೆಂಬ ಕುತೂಹಲದಿಂದ ರತ್ನಚೂಲ ಮತ್ತು ಅಮೃತಚೂಲ ಎಂಬ ಇಬ್ಬರು ದೇವರುಗಳು ಅಯೋಧ್ಯಾಪುರಕ್ಕೆ ಬಂದರು. ದಶರಥಸುತನು ಪರಲೋಕಪ್ರಾಪ್ತನಾದನೇನೋ ಎಂಬಂತೆ ಅರಮನೆಯಲ್ಲೆಲ್ಲ ಶೋಕವು ತುಂಬಿರುವಂತೆ, ಪೆಂಡವಾಸವು ಜೋರಾದ ಅಳುವಿನಿಂದ ಕೂಡಿರುವಂತೆ ರತ್ನಚೂಲನು ತನ್ನ ಮಾಯೆಯನ್ನು ಬೀರಿದ. ಉಸಿರಾಡದ ಬಲದೇವನ ಆಕೃತಿಯೊಂದನ್ನು ಅವನು ನಿರ್ಮಿಸಲು ಲಕ್ಷ್ಮಣನು ಅದನ್ನು ನೋಡಿ ನಿಸ್ಸೀಮ ಭಯದುಃಖಗಳಿಂದ ಹಾ ಎಂದು ಚೀರುತ್ತ ಕೆಳಗೆ ಬಿದ್ದು ಗತಪ್ರಾಣನಾದ. ಲಕ್ಷ್ಮಣನ ಅಂತಃಪುರಸ್ತ್ರೀಯರು ಅತಿಪ್ರಲಾಪಗೈದರು. ಈ ವಾರ್ತೆಯನ್ನು ಕೇಳಿದ ರಾಮನು ಮೂರ್ಛೆಗೊಂಡು, ನಿಡುಗಾಲದ ಬಳಿಕ ಎಚ್ಚೆತ್ತು ಲಕ್ಷ್ಮಣನ ಕಳೇಬರದ ಬಳಿ ಹೋದಾಗ ಮತ್ತೆ ಮೂರ್ಛೆಗೊಳಗಾದ, ಮತ್ತೆ ಮೇಲೆದ್ದು ಜೋರಾಗಿ ಪ್ರಲಪಿಸಲು ತೊಡಗಿದ. ತಂದೆಯ ಅಚಿಂತ್ಯ ದುಃಖವೇ ಲವಕುಶರು ನಿರ್ವೇಗಗೊಳ್ಳಲು ಕಾರಣವಾಯಿತು. ಅವರು ಬಂದು ರಾಮನಿಗೆ ಪೊಡೆವಟ್ಟು ಬೀಳ್ಕೊಂಡು ಮಹೇಂದ್ರೋದ್ಯಾನದಲ್ಲಿದ್ದ ಅಮೃತೇಶ್ವರ ಭಟ್ಟಾರಕರ ಸನ್ನಿಧಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿದರು.

ಇತ್ತ ವಿಭೀಷಣನು ಸಂಸಾರದ ಅನಿತ್ಯತೆಯನ್ನು ವಿವರಿಸಿದರೂ ರಾಮನ ದುಃಖವನ್ನು ಉಪಶಮಿಸಲು ಸಾಧ್ಯವಾಗಲಿಲ್ಲ. ಅಷ್ಟು ಹೊತ್ತಿಗೆ ಸುಗ್ರೀವಾದಿಗಳು ಬಂದು ಲಕ್ಷ್ಮಣನ ಶವವನ್ನು ಸುಡುವ ಏರ್ಪಾಟು ಮಾಡಲು ರಾಮನ ಅಪ್ಪಣೆ ಬೇಡಿದರು. ಆದರೆ ಆತನು ಅವರನ್ನು ನಾನಾವಿಧವಾಗಿ ಬೈದು ಹೊಡೆದು ಮಾಡಿದ; ತಾನು ಇವರ ಬಳಿ ಇರಬಾರದೆಂದು ಹೇಳಿಕೊಳ್ಳುತ್ತ ಲಕ್ಷ್ಮಣನ ಶವವನ್ನು ಹೊತ್ತುಕೊಂಡು ಹೋದ. ವಾಸುದೇವನ ಸಾವಿನಿಂದ ರಾಮನಿಗೆ ಹುಚ್ಚು ಹಿಡಿದಿದೆ; ಅದಕ್ಕೇ ಅವನು ಹೆಣಕ್ಕೆ ವಸ್ತ್ರಾಭರಣಾಲೇಪನಗಳನ್ನಿತ್ತು ಕೊಂಡೊಯ್ದ; ಮೋಹಾತಿರೇಕದಿಂದ ಇಂಥವನಿಗೇ ಹೀಗಾದರೆ ಸಾಮಾನ್ಯರ ಗತಿಯೇನು ಎಂದು ಎಲ್ಲರೂ ವಿಸ್ಮಿತರಾದರು. ಆದರೆ ಬಲದೇವನ ಹೆಗಲ ಮೇಲಿನ ಶವವು ಕೆಡದು ಎಂಬ ಗಾದೆಯಾಗುವಂತೆ ಅವನು ತಮ್ಮನ ಹೆಣವನ್ನು ಆರು ತಿಂಗಳ ಕಾಲ ಹೊತ್ತೇ ಇದ್ದ.

ಹೀಗೆ ಲಕ್ಷ್ಮಣವಿಯೋಗದಿಂದ ರಾಮನು ರಾಜ್ಯಸಂರಕ್ಷಣೆಯನ್ನೂ ಮರೆಯುವಂತೆ ವಿಕಲನಾಗಿರಲು ಮಿಕ್ಕವರೆಲ್ಲ ಧೈರ್ಯಗುಂದಿ ಸುಮ್ಮನಿದ್ದರು. ಇತ್ತ, ಇಂದ್ರಜಿತುವಿನ ಮಗನಾದ ವಜ್ರಮಾಲಿಯು ಸುಂದರನ ಮಗ ಚಾರುರತ್ನ ಮತ್ತಿತರ ಹಲವರೊಡನೆ ಬಂದು

ಅಯೋಧ್ಯೆಯ ಸಮೀಪದಲ್ಲಿ ಬೀಡು ಬಿಟ್ಟಿರುವನೆಂಬುದನ್ನು ಕರ್ಣಾಕರ್ಣಿಕೆಯಾಗಿ ಕೇಳಿದ ರಾಮನು ಲಕ್ಷ್ಮಣನನ್ನು ಬಿಟ್ಟು ಹೋಗಲಾರದೆ ಅತಿ ದುಃಖಿತನಾಗಿ ವಜ್ರಾವರ್ತಚಾಪವನ್ನೂ ಅಗ್ನಿಮುಖಶರವನ್ನೂ ಸುಮ್ಮನೆ ನೋಡುತ್ತ ಕುಳಿತ. ಈ ಮಧ್ಯೆ ದೇವಗತಿಯನ್ನು ಹೊಂದಿದ್ದ ಜಟಾಯು ಹಾಗೂ ಕೃತಾಂತವಕ್ತ್ರರಿಗೆ ಆಸನಕಂಪವಾಗಲು ಅವಧಿಜ್ಞಾನದಿಂದ ಲಕ್ಷ್ಮಣನ ಸಾವಿನ ವಿಚಾರವೂ, ಶೋಕಪೂರಿತ ರಾಮನ ಮೇಲೆ ದಾಳಿ ಮಾಡಲು ಹಗೆಪಡೆಯು ಅಯೋಧ್ಯೆಯನ್ನು ಸುತ್ತುವರಿದಿರುವ ವಿಷಯವೂ ತಿಳಿಯಿತು. ಆ ಇಬ್ಬರು ದೇವರೂ ಬಂದು ಮಾರ್ಪಡೆಯನ್ನೋಡಿಸಿದರು. ಇದರಿಂದಾಗಿ ವಜ್ರಮಾಲಿ-ಚಾರುರತ್ನರಿಬ್ಬರೂ ನಿರ್ವೇಗಗೊಂಡು ಅನೇಕ ಅರಸುಮಕ್ಕಳೊಡನೆ ಹೋಗಿ ರತಿವೇಗ ಭಟ್ಟಾರಕರ ಸಮಕ್ಷಮದಲ್ಲಿ ತಪಸ್ಸನ್ನು ಕೈಗೊಂಡರು.

ಈ ಕಡೆ ಜಟಾಯು ಕೃತಾಂತವಕ್ತ್ರದೇವರುಗಳು ರಾಮನ ಬಳಿ ಬಂದು ಹಲವು ಬಗೆಯಿಂದ ಧರ್ಮನಿರೂಪಣೆ ಮಾಡಿದರೂ ಅವನ ವಿಕಲತೆಯನ್ನು ಹೋಗಲಾಡಿಸಲು ಶಕ್ಯರಾಗಲಿಲ್ಲ. ಆಗ ರಾಮನಿಗೆ ಕಾಣಿಸುವಂತೆ ಒಂದು ಮಡಕೆಯಲ್ಲಿ ನೀರನ್ನು ತುಂಬಿ ಕಡೆದರು, ಮರಳನ್ನು ಹಾಕಿ ಗಾಣವಾಡಿಸಿದರು, ಬಂಡೆಗಲ್ಲಿನ ಮೇಲೆ ಬೀಜಗಳನ್ನು ಬಿತ್ತಿದರು, ಒಣಗಿದ ಮರಕ್ಕೆ ನೀರೆರೆದರು. ಅದನ್ನು ಕಂಡ ರಾಮನು ಹೀಗೇಕೆ ನಿಷ್ಫಲವಾದುದನ್ನು ಮಾಡುತ್ತಿರುವಿರಿ ಎಂದು ಕೇಳಿದ. ಅದಕ್ಕವರು, "ಅಣ್ಣ, ನೀನು ಹೀಗೆ ಹೆಣವನ್ನು ಹೊತ್ತಿರಬಹುದೇ?" ಎಂದು ಪ್ರಶ್ನಿಸಿದರು. ಅವನಿಗೆ ಕೋಪ ಬಂದು, ಅಮಂಗಳವನ್ನು ನುಡಿಯದಿರುವಂತೆ ಗದರಿಸಿದ. ಆ ಹೊತ್ತಿಗೆ ಜಟಾಯುವು ಒಂದು ಹೆಣವನ್ನು ಹೊತ್ತು ಅವನ ಮುಂದೆ ಬಂದ. ಅದನ್ನು ಕಂಡ ರಾಮನು, "ವ್ಯರ್ಥವಾಗಿ ಈ ಹೆಣ ಹೊತ್ತು ತಿರುಗುವುದೇ?" ಎಂದು ಕೇಳಿದ. "ನೀನು ಮಾಡುತ್ತಿರುವುದೂ ಅದನ್ನೇ ತಾನೇ?" ಎಂದು ಜಟಾಯುವು ನುಡಿದ. ಹೀಗೆಯೇ ಅನೇಕ ದೃಷ್ಟಾಂತಗಳನ್ನೂ ಹೋಲಿಕೆಗಳನ್ನೂ ಕೊಟ್ಟು ಆ ದೇವರುಗಳು ಕೊನೆಗೂ ರಾಮನ ಮೋಹಾಂಧಕಾರವನ್ನು ಹೋಗಲಾಡಿಸಿದರು. ತಮ್ಮ ದಿವ್ಯಸ್ವರೂಪವನ್ನು ತೋರಿ, ತಾವು ಇಲ್ಲಿಗೆ ಬಂದ ಕಾರಣವನ್ನೂ, ರಾಮನ ಮೇಲೆತ್ತಿ ಬಂದಿದ್ದ ವಜ್ರಮಾಲಿ-ಚಾರುರತ್ನರು ಸೋತು ಅದರಿಂದ ನಿರ್ವೇಗಪರರಾಗಿ ದೀಕ್ಷೆ ಪಡೆದುದನ್ನೂ ತಿಳಿಸಿದರು.

ಮೋಹದಿಂದಾದ ವಿಕಲತೆಯನ್ನು ಕಳೆದುಕೊಂಡ ರಾಮನು ಅಡ್ಡವಿದ್ದ ಮೋಡಗಳು ಸರಿದಾಗ ಕಾಣುವ ಸೂರ್ಯನಂತೆ, ಕಲ್ಮಷ ಹೋದ ಚಿನ್ನದಂತೆ, ಆವರಿಸಿದ್ದ ಹೊಗೆ ಹೋದ ಬೆಂಕಿಯಂತೆ ಹೊಳೆದ. ತನ್ನನ್ನೇ ಮರೆತು ಬನ್ನಕ್ಕೊಳಗಾಗಿದ್ದೆನೆಂಬುದನ್ನು ತಿಳಿದ ರಘುಕುಲತಿಲಕನು ದೇಹದಿಂದ ತನ್ನನ್ನು ಬೇರ್ಪಡಿಸಿಕೊಳ್ಳಲು ನಿರ್ಧರಿಸಿದ. ವೈರಾಗ್ಯಪರಾಯಣನಾದ ಆತನು ವಿಭೀಷಣ ಸುಗ್ರೀವ ನಳ ನೀಲ ಜಾಂಬವ ಪ್ರಸನ್ನಕೀರ್ತಿ ವಿರಾಧಿತ ಮುಂತಾದ ಪ್ರಧಾನ ಪುರುಷರಿಗೆ ಹೇಳಿಕಳಿಸಿದ. ಅವರು ಬಂದು ಲಕ್ಷ್ಮಣನ ಶವವನ್ನು ಸರಯು ನದಿ ತೀರದಲ್ಲಿ ಯಥಾವಿಧಿಯಿಂದ ಸಂಸ್ಕಾರ ಮಾಡಿ ಬಂದರು. ಆಗ ರಾಮನು ಲವನ ಹಿರಿಯ ಮಗನಿಗೆ ರಾಜ್ಯಪಟ್ಟವನ್ನು ಕಟ್ಟಿ ಹಲವು ಮಂದಿ ರಾಜಕುಮಾರರೊಡನೆ ಸುವ್ರತ ಚಾರಣರ ದಿವ್ಯ ಸಮಕ್ಷಮದಲ್ಲಿ ದೀಕ್ಷೆ ಪಡೆದು ತಪಸ್ಸಿಗೆ ತೊಡಗಿದ. ತನ್ನ ಮಗನಾದ ಸುಭೂಷಣನಿಗೆ ಲಂಕೆಯ ಆಧಿಪತ್ಯವನ್ನು ವಹಿಸಿದ ವಿಭೀಷಣ ಹಾಗೂ ತನ್ನ ಮಗನಾದ ಅಂಗದನಿಗೆ ರಾಜ್ಯವೊಪ್ಪಿಸಿದ ಸುಗ್ರೀವರೂ ದೀಕ್ಷೆ

ಕೈಗೊಂಡರು. ಅವರನ್ನು ಶತ್ರುಘ್ನ ನಳ ನೀಲ ವಿರಾಧಿತ ಚಂದ್ರರಶ್ಮಿ ಮೊದಲಾದವರೂ ಅನುಸರಿಸಿದರು. ಅಂತೆಯೇ ಅಂತಃಪುರದ ಕಾಂತೆಯರೆಲ್ಲ ಶ್ರೀಮತಿ ಆರ್ಯಿಕೆಯರ ಕಾಲ ಬಳಿ ದೀಕ್ಷೆ ಸ್ವೀಕರಿಸಿದರು.

ರಾಮಯತಿಯು ಪರಮಾಗಮಮಾರ್ಗವನ್ನನುಸರಿಸಿ ಮೂಲಗುಣೋತ್ತರ ಗುಣಗಳನ್ನು ತನ್ನ ಶೀಲದಲ್ಲಿ ಅಳವಡಿಸಿಕೊಂಡು ಸಮಿತಿ ಗುಪ್ತಿಗಳನ್ನು ಪಾಲಿಸಿ ಪಂಚಮಹಾವ್ರತಲೀಲೆಯಿಂದೊಪ್ಪಿದ. ದಶಧರ್ಮವನ್ನು ಹಿಡಿದು ಎಲ್ಲ ಕಾಮಗಳನ್ನೂ ಗೆದ್ದ. ಪರೀಷಹಗಳನ್ನು ತೂಳ್ದು ಏಕವಿಹಾರವನ್ನು ಕೈಗೊಂಡು ಕೊನೆಗೆ ಕೇವಲಬೋಧೆಯನ್ನು ಪಡೆದ. ಹೀಗೆ ಸರ್ವಾವಧಿ ಸಂಪದವನ್ನು ಹೊಂದಿ ತನ್ನ ಮತ್ತು ಲಕ್ಷ್ಮಣನ ಹಿಂದಿನ ಜನ್ಮಾಂತರಗಳನ್ನು ನೆನಪಿಸಿಕೊಂಡ. ಲಕ್ಷ್ಮಣನು ಹನ್ನೆರಡು ಸಾವಿರ ವರ್ಷಗಳಿಗೆ ಇಪ್ಪತ್ತೊಂದು ವರ್ಷಗಳ ಕಾಲ ಕಡಿಮೆಯಾಗಿ ಬಾಳಿದ ಮೇಲೆ ಅಧೋಲೋಕಗತನಾದುದನ್ನೂ, ಸ್ನೇಹವನ್ನು ಪರೀಕ್ಷಿಸಲು ಬಂದ ದೇವನ ಕಾರಣದಿಂದ ಲಕ್ಷ್ಮಣನು ಸತ್ತನೇ ಹೊರತು ಅವನ ಆಯುಸ್ಸು ಮುಗಿದುದರಿಂದಲ್ಲವೆಂಬುದನ್ನೂ ಅರಿತು ರಾಮ ಭಟ್ಟಾರಕರು ಉಗ್ರೋಗ್ರ ತಪವನ್ನು ಕೈಗೊಂಡರು.

ಹನ್ನೆರಡು ದಿನಗಳ ಕಾಲ ಉಪವಾಸ ವ್ರತವನ್ನು ಕೈಗೊಂಡು ಪಾರಣೆಯ ದಿನದಂದು, ನಗರಅರಣ್ಯಗಳ ವ್ಯತ್ಯಾಸವಿಲ್ಲದೆ ಕಾಲನಿಯಮಕ್ಕನುಗುಣವಾಗಿ ಚರಿಗೆಗೆಂದು ನಡೆದರು; ಕೊನೆಗೆ ನಂದನಸ್ಥಲಿ ಎಂಬ ನಗರವನ್ನು ಸೇರಿದರು. ತಪಃಪ್ರಭಾವದಿಂದಾಗಿ ಅವರು ಪಡದಿದ್ದ ದಿವ್ಯಶರೀರವನ್ನು ನೋಡಿ ಅಲ್ಲಿನ ಜನ ಕೌವರೆಗೊಂಡರು; ರಾಮ ಭಟ್ಟಾರಕರನ್ನು ತಮ್ಮ ತಮ್ಮ ಮನಗೆ ಆಹ್ವಾನಿಸಿದರು. ಅಷ್ಟು ಹೊತ್ತಿಗೆ ಅವರನ್ನು ಇದಿರುಗೊಳ್ಳಲು ಆ ನಗರದ ರಾಜ ಪ್ರತಿನಂದಿಯು ತನ್ನ ಮಣಿಮಾಡದಿಂದಿಳಿದು ಬಂದ. ಚರ್ಯಾವಿಘ್ನವಾದರೂ ಭಟ್ಟಾರಕರು ಸಂತುಷ್ಟಿಯಿಂದ ಆ ನಗರದಿಂದ ಹೊರಟರು. ಅವರಿಗೆ ಚರ್ಯಾವಿಘ್ನವಾದುದರಿಂದ ಪ್ರತಿನಂದಿ ಚಿಂತೆಗೀಡಾದ. ಆದರೆ ಇತ್ತ ಮುನಿಪತಿಯು ಹನ್ನೆರಡು ದಿನಗಳ ಉಪವಾಸವನ್ನು ಮುಂದುವರಿಸಿ ಇನ್ನೆಂದೂ ಊರನ್ನು ಹೊಗುವುದಿಲ್ಲವೆಂಬ ಕಾಂತಾರಭಿಕ್ಷೆಯನ್ನು ಕೈಗೊಂಡರು.

ಒಂದು ದಿನ ತುಂಟ ಕುದುರೆಯು ಪ್ರತಿನಂದಿ ಮಹಾರಾಜನನ್ನೂ ಅವನ ಅಂಗರಕ್ಷಕನನ್ನೂ ಆ ಮಹಾಮುನಿಯಿದ್ದ ಕಾನನಕ್ಕೆಳೆದು ತಂದಿತು. ದೊರೆ ನೆಲಕ್ಕೆ ನೆಗೆದು ಸುತ್ತ ಮುತ್ತ ದೃಷ್ಟಿ ಹರಿಸಿದ; ಹತ್ತಿರದಲ್ಲಿಯೇ ಒಂದು ಕೊಳ ಕಾಣಿಸಿತು. ಅದರಲ್ಲಿ ಮಿಂದ ಅವನು ಹೊಂದಾವರೆಗಳಿಂದ ಒಂದು ಪೀಠವನ್ನು ಮಾಡಿ ಅದರ ಮೇಲೆ ಜಿನಪ್ರತಿಮೆಯನ್ನು ನಿಲ್ಲಿಸಿ ಅರ್ಚಿಸಲು ತೊಡಗಿದ. ಅಷ್ಟರಲ್ಲಿ ಪ್ರಭಾವತಿಯೆಂಬ ಅವನ ಮಹಾರಾಣಿಯು ಕುದುರೆಯ ಹೆಜ್ಜೆಗುರುತುಗಳನ್ನು ಅನುಸರಿಸಿ ಬಂದು ಅರಸನನ್ನು ಕಂಡಳು. ಅವಳೂ ಆ ಸರೋವರದಲ್ಲಿ ನೀರಾಟವಾಡಿ ಅಲ್ಲಿಗೇ ಊಟವನ್ನು ತರಿಸಿದಳು. ಈ ಹೊತ್ತಿಗೆ ಇಪ್ಪತ್ತನಾಲ್ಕು ದಿನಗಳ ಉಪವಾಸವನ್ನು ಮುಗಿಸಿದ್ದ ರಾಮ ಭಟ್ಟಾರಕರು ಕಾಂತಾರಭಿಕ್ಷೆಗೆಂದು ಆ ದಾರಿಯಲ್ಲೇ ಬಂದರು. ಅವರನ್ನು ಕಂಡ ರಾಜನು ಸಂಭ್ರಮದಿಂದ ಎದ್ದು ಹೋಗಿ ನಮಸ್ಕರಿಸಿ ದಿವ್ಯಾಹಾರಗಳನ್ನು ನೀಡಿದ. ಆಗ ಹೊನ್ನಿನ ಮಳೆ, ಹೂಮಳೆ, ದೇವರ ಅಹೋಧ್ವಾನ, ತಂಗಾಳಿಯ ತೀಡುವಿಕೆ, ದೇವತೆಗಳ ಜಯಘೋಷಗಳೆಂಬ

ಪಂಚಾಶ್ಚರ್ಯಗಳುಂಟಾದವು. ಪೂಜೆಯನ್ನು ಸ್ವೀಕರಿಸಿದ ರಾಮಭಟ್ಟಾರಕರು ದುರ್ಧರ ತಪೋಮಾರ್ಗದಲ್ಲಿ ನಡೆದು ಲಕ್ಷ್ಮಣನೆತ್ತಿದ ಸಿದ್ಧಶಿಲೆಯನ್ನೇರಿ ಪ್ರತಿಮಾಯೋಗದಿಂದ ಕರ್ಮಕ್ಷಯವನ್ನು ಸಾಧಿಸಿದರು.

ಇದನ್ನು ಅವಧಿಬೋಧದಿಂದ ಅರಿತ ಸೀತೇಂದ್ರನು ಅಚ್ಯುತಕಲ್ಪದಿಂದ ಬಂದು, ಈತನು ಹೇಗಾದರೂ ಪರಮಪದವನ್ನು ಸಾಧಿಸುತ್ತಾನೆ, ಮುಂದಿನ ಶುಕ್ಲಧ್ಯಾನವನ್ನು ಹಾಳುಮಾಡುತ್ತೇನೆ ಎಂದು ರಾಮನಿದ್ದ ಸ್ಥಾನವನ್ನು ಸೇರಿದ. ವಿನಯವಿಕಲನೂ ರಾಜಯೋಗಪ್ರಮತ್ತನೂ ಆದವನು ಏನು ತಾನೇ ಮಾಡಲಾರ! ಹೀಗೆ ಹೊಕ್ಕು ಆರು ಋತುಗಳನ್ನು ಹೆದರಿಸಿ ತಾನು ಸೀತೆಯ ರೂಪವನ್ನು ಧರಿಸಿದ, ವಿದ್ಯಾಧರ ಕನ್ಯೆಯರು ಸುತ್ತುವರಿದಿದ್ದರು. ಹತ್ತಿರ ಬಂದು, "ನೀವಿನ್ನೂ ವಯಸ್ಸಾದವರಲ್ಲ, ಈ ಚೆಲುವಾದ ಶರೀರವನ್ನು ಸುಮ್ಮನೇ ಹಾಳುಮಾಡಬೇಡಿ; ನನ್ನನ್ನೂ ಈ ವಿದ್ಯಾಧರಕನ್ಯೆಯರನ್ನೂ ಸೇರಿ ಸುಖವನ್ನನುಭವಿಸಿರಿ. ಆನಂತರ ನಿಮ್ಮ ಜೊತೆಯಲ್ಲಿಯೇ ನಾನೂ ಈ ಕನ್ಯೆಯರೂ ತಪಸ್ಸಿಗೆ ಬರುತ್ತೇವೆ" ಎಂದು ನಾನಾ ಬಗೆಯಲ್ಲಿ ತಪಸ್ಸನ್ನು ಕೆಡಿಸುವ ಮಾತುಗಳನ್ನಾಡಿದ. ಆದರೆ ರಾಮಭಟ್ಟಾರಕರು ಅಸ್ಖಲಿತಚಿತ್ತರಾಗಿಯೇ ಇದ್ದು ಶುಕ್ಲಧ್ಯಾನಪ್ರವಿಷ್ಟರಾದರು. ಕೊನೆಗೆ. ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯಂದು ಬೆಳಗಿನ ಜಾವ ಅವರನ್ನಾವರಿಸಿದ್ದ ಘಾತಿಕರ್ಮವೆಂಬ ಪರದೆ ಸರಿಯಲು, ದಿವ್ಯಭಾಷಾವಧುವಿಗೆ ರಾಘವ ಯತಿಪ್ರವರರು ವರನಾಗಿ, ಸಕಲಜೀವಾಜೀವ ವಸ್ತುಗಳನ್ನೂ ಗುಣಪರ್ಯಯಗಳನ್ನೂ ಪ್ರತಿಬಿಂಬಿಸುವಂತೆ ಕೇವಲಜ್ಞಾನವೆಂಬ ಮಣಿದರ್ಪಣವು ಉಜ್ವಲವಾಗಿ ಗೋಚರಿಸಿತು.

ರಾಮಸ್ವಾಮಿಗೆ ಹೀಗೆ ಕೇವಲಬೋಧವಾಗಿ ದೇವಸಂಕುಲಕ್ಕೆಲ್ಲ ಆಸನಕಂಪವಾಗಲು ಅವರು ಅದನ್ನು ಅವಧಿಜ್ಞಾನದಿಂದರಿದು ಕೇವಲಿಗಳ ಪೂಜೆಗೆಂದು ಆಗಮಿಸಿದರು; ದುಂದುಭಿನಾದವು ಎಲ್ಲೆಡೆ ಆವರಿಸಿತು, ಅವರ ರತ್ನವಿಮಾನಗಳ ಕಾಂತಿ ದಿಕ್ತಟವನ್ನು ಮುಟ್ಟಿತು, ಭವನಾವಾಸದ ಹತ್ತು ಮಂದಿ ಅಮರೇಂದ್ರರು, ವ್ಯಂತರಾವಾಸದ ಎಂಟು ಮಂದಿ ಚಂದ್ರಸೂರ್ಯರು, ಬೇರೆ ಹನ್ನೆರಡು ಜನ ಇಂದ್ರರು ಮೂರೂ ಲೋಕಗಳನ್ನೊಡಗೂಡಿ ಬಂದಂತೆ ಕೈವಲ್ಯಮಾಂಗಲ್ಯವನ್ನು ಆಚರಿಸುವ ಉದ್ದೇಶದಿಂದ ಬಂದರು. ಅವರೊಂದಿಗೆ ಸೀತೇಂದ್ರನೂ ರಾಮಭಟ್ಟಾರಕರಿಗೆ ಪೂಜೆಯನ್ನು ಮಾಡಿ ನಮಸ್ಕರಿಸಿ, ಲಕ್ಷ್ಮೀಧರನಿಗೆ ಧರ್ಮವನ್ನು ಬೋಧಿಸಲು ಶರ್ಕರಾಪ್ರಭೆಯೆಂಬ ನರಕಕ್ಕೆ ಹೋದ. ಅಲ್ಲಿ ಅನೇಕವಿಧದಿಂದ ನವೆಯುತ್ತಿದ್ದ ನಾರಕರೂ, ತೀವ್ರವೇದನೆಯನ್ನನುಭವಿಸುತ್ತಿದ್ದ ರಾವಣಲಕ್ಷ್ಮಣರೂ, ಅವರಿಬ್ಬರನ್ನು ಕಾಡಿಸುತ್ತಿದ್ದ ಶಂಭುಕ ಇವರನ್ನು ಕಂಡು ಕರುಣೆಯಿಂದ ಅವರಿಗೆ ಧರ್ಮೋಪದೇಶ ಮಾಡಿದ. ಸಮ್ಯಕ್ತ್ವವನ್ನು ಮರೆಯದಿರಲು ಹೇಳಿ ಅವರೆಲ್ಲ ಅಲ್ಲಿಂದ ಮತ್ತೆ ರಾಮಭಟ್ಟಾರಕರ ಬಳಿ ಬಂದರು. ಪೂಜೆ ಸಲ್ಲಿಸಿದ ಬಳಿಕ ಧರ್ಮಶ್ರವಣಾನಂತರ ದಶರಥಾದಿಗಳ ಗತಿಯೇನಾಗಿದೆಯೆಂದು ತಿಳಿಸಲು ಬೇಡಿಕೊಂಡರು.

ಚಂದ್ರಮಂಡಲದಿಂದ ಸುರಿಯುವ ಅಮೃತಾಂಶುವಿನಂತೆ ಕೇವಲಿಗಳು ಸಂಯಮಫಲದಿಂದ ದಶರಥನಿಗೆ ಕಲ್ಪಾವಾಸವು ದೊರೆಕೊಂಡುದನ್ನು ತಿಳಿಸಿದರು. ಅಪರಾಜಿತೆ ಕೈಕೆ ಹಾಗೂ ಸುಮಿತ್ರೆಯರಿಗೂ ಜನಕನಿಗೂ ಕರ್ಮೋಪಶಮನದಿಂದ ಸುಗತಿ ದೊರೆತಿದೆಯೆಂದೂ, ಲವಕುಶರಿಗೂ ಇದೇ ಜನ್ಮದಲ್ಲಿಯೇ ಮುಕ್ತಿಯು ಸಿಕ್ಕುವುದೆಂದೂ

ಹೇಳಿದರು. ಪ್ರಭಾಮಂಡಲನು ಸುಕೌಶಲಪುರಕ್ಕೆ ಹೋಗುತ್ತ ಆಕಾಶದಲ್ಲಿಯೇ ನಾಲ್ಕು ತಿಂಗಳು ಉಪವಾಸವಿದ್ದ ಮೂವರು ಮಹಾಋಷಿಯರನ್ನು ಕಂಡು ಧರಾಮಂಡಲಕ್ಕೆ ಇಳಿದು ವಿಧಿಪೂರ್ವಕವಾಗಿ ಅವರಿಗೆ ಆಹಾರದಾನವನ್ನು ಮಾಡಿ ತನ್ನೂರಿಗೆ ಹೋಗಿ ತಾನೂ ಸುಂದರಮಾಲೆಯೆಂಬ ತನ್ನ ಅರಸಿಯೂ ಕರುಮಾಡದಲ್ಲಿದ್ದಾಗ ಸಿಡಿಲು ಹೊಡೆದು ಸತ್ತರು; ಇಬ್ಬರೂ ಮಂದರದ ದಕ್ಷಿಣ ಕುರುವದಲ್ಲಿ ಮೂರು ಪಳಿತಗಳಷ್ಟು ಕಾಲ ಆಯುಷ್ಯ ಹೊಂದಿ ಹುಟ್ಟಿದರು ಎಂದರು.

ರಾವಣಲಕ್ಷ್ಮಣರ ಮುಂದಿನ ಭವಾವಳಿಗಳನ್ನು ರಾಮಮುನಿಪರು ಮೃದು ಮಧುರಾರಾವದಿಂದ ಸೀತೇಂದ್ರನಿಗೆ ಹೀಗೆಂದು ವಿವರಿಸಿದರು: "ರಾವಣಲಕ್ಷ್ಮಣರು ನರಕವಾಸ ಮುಗಿದ ಬಳಿಕ ಮಂದರದ ಪೂರ್ವದಿಕ್ಕಿನ ವಿಜಯಾವತಿ ನಗರದಲ್ಲಿ ನಂದನೆಂಬ ಒಕ್ಕಲಿಗ ಮತ್ತವನ ಕುಲವಧುರೋಹಿಣಿಯರಿಗೆ ಅರ್ಹದ್ದಾಸ-ಋಷಿದಾಸರೆಂಬ ಹೆಸರಿನ ಮಕ್ಕಳಾಗಿ ಹುಟ್ಟುತ್ತಾರೆ. ಶ್ರಾವಕವ್ರತಗಳನ್ನು ಕೈಗೊಂಡು ಸರಿದಾರಿಯಲ್ಲಿ ಬಾಳಿ ಸತ್ತನಂತರ ದೇವಲೋಕಕ್ಕೆ ಹೋಗಿ ಮತ್ತೆ ಬಂದು ವಿಜಯಪುರದಲ್ಲಿ ಹುಟ್ಟಿ ಋಷಿಗಳಿಗೆ ಆಹಾರದಾನ ಮಾಡಿ ಆ ಜನ್ಮವು ಕೊನೆಗೊಂಡ ಬಳಿಕ ಮೊದಲು ಹೇಳಿದ ವಿಜಯಪುರದ ರಾಜದಂಪತಿಗಳಾದ ಕುಮಾರಕೀರ್ತಿ-ಲಕ್ಷ್ಮೀಮತಿಯರಿಗೆ ಅನುಕ್ರಮವಾಗಿ ಜಯಕಾಂತ-ಜಯಭದ್ರ ಎಂಬ ಮಕ್ಕಳಾಗಿ ಹುಟ್ಟುತ್ತಾರೆ. ನಿಡುಗಾಲ ಅವರು ರಾಜ್ಯಸುಖವನ್ನನುಭವಿಸಿ ದೀಕ್ಷೆ ಪಡೆದು ಸತ್ತ ಬಳಿಕ ಲಾಂತವಕಲ್ಪದಲ್ಲಿ ಹುಟ್ಟಿ ಕೆಲಕಾಲ ಸುಖವಾಗಿರುತ್ತಾರೆ. ನೀನು ಅಚ್ಯುತಕಲ್ಪದಿಂದ ಬಂದು ಭರತಕ್ಷೇತ್ರದಲ್ಲಿ ಸಕಲ ಚಕ್ರವರ್ತಿಯಾಗಿರುವಾಗ, ಲಾಂತವಕಲ್ಪದಿಂದ ಅವರು ಬಂದು ನಿನಗೆ ಇಂದುರಥ-ಮೇಘರಥರೆಂಬ ಮಕ್ಕಳಾಗುತ್ತಾರೆ. ಅವರಲ್ಲಿ ಹಿರಿಯ ಮಗನಾದ ರಾವಣನು ಸಂಸಾರಸುಖವಿಮುಖನಾಗಿ ತಪಸ್ಸು ಮಾಡಿ ಷೋಡಶ ಭಾವನೆಗಳಿಂದ ಕೂಡಿ ಮುಂದೆ ಹುಟ್ಟುವ ಹದಿನಾರನೆಯ ತೀರ್ಥಂಕರರ ನಾಮಕರ್ಮವನ್ನು ಕಟ್ಟಿ ವೈಜಯಂತೀ ವಿಮಾನದಲ್ಲಿ ಹುಟ್ಟಿ ಮತ್ತೆ ಬಂದು ಭರತಕ್ಷೇತ್ರದ ರತ್ನಪುರದಲ್ಲಿ ಆ ತೀರ್ಥಂಕರಕುಮಾರನೂ ಚಕ್ರವರ್ತಿಯೂ ಆಗಿ ಹುಟ್ಟುತ್ತಾನೆ. ಭೂಮಂಡಲವನ್ನೆಲ್ಲ ಆಳುವ ಚಕ್ರವರ್ತಿ ಪದವಿಯನ್ನು ಪಡೆದು, ಅದನ್ನು ತೊರೆದು ತೀರ್ಥಂಕರತ್ವವನ್ನು ಪಡೆಯುತ್ತಾನೆ; ಆ ಭಾವಿ ತೀರ್ಥಂಕರನಿಗೆ ನೀನು ಗಣಧರನಾಗುತ್ತೀಯೆ; ಆ ಬಳಿಕ ಮುಕ್ತಿ ಪಡೆಯುತ್ತೀಯೆ ಎಂದು ಹೇಳಲು ಸೀತೇಂದ್ರನು ಉತ್ಸಾಹಗೊಂಡ.

"ಲಕ್ಷ್ಮಣನು ಮೋಕ್ಷಕ್ಕೆ ಸಲ್ಲುವವರೆಗಿನ ಭವಾವಳಿಗಳನ್ನು ರಾಮಭಟ್ಟಾರಕರು ಹೀಗೆಂದು ಬೆಸಸಿದರು: ಮೇಘರಥನು ತಪಸ್ಸು ಮಾಡಿ ದೇವಗತಿಯನ್ನು ಹೊಂದಿ ಅಲ್ಲಿಂದ ಬಂದು ಪೃಥ್ವೀಪುರದಲ್ಲಿ ಸುವ್ರತಕೀರ್ತಿಯೆಂಬ ಅರಸನಾಗಿ ಹುಟ್ಟುವನು. ಆಗಲೂ ತಪಸ್ಸುಗೈದು ಷೋಡಶಭಾವನೆಗಳನ್ನು ಹೊಂದಿ ದೇವಲೋಕಕ್ಕೆ ಹೋಗಿ ದಿವಿಜಸುಖವನ್ನು ಅನುಭವಿಸಿ ಬಂದು ಪುಷ್ಕರವರ ದ್ವೀಪದ ಪೂರ್ವವಿದೇಹದ ಪದ್ಮಪುರದಲ್ಲಿ ಚಕ್ರವರ್ತಿಯೂ ತೀರ್ಥಂಕರಕುಮಾರನೂ ಆಗಿ ರಾಜ್ಯಸುಖವನ್ನೊಲ್ಲದೆ ತಪಸ್ಸು ಮಾಡಿ ತೀರ್ಥಂಕರ ಜಿನೇಶ್ವರನಾಗಿ ಮೋಕ್ಷಕ್ಕೆ ಹೋಗುತ್ತಾನೆ. ನಾವು ಇಂದಿಗೆ ಎರಡು ವರ್ಷಕ್ಕೆ ಮೋಕ್ಷಕ್ಕೆ ಸಲ್ಲುತ್ತೇವೆ" ಎಂದು ಮುಗಿಸಿದರು. ಇದನ್ನೆಲ್ಲ ಕೇಳಿ ಸಂತಸಗೊಂಡ ಸೀತೇಂದ್ರನು ರಾಮಕೇವಲಿಗಳನ್ನು ಜಲಗಂಧಾಕ್ಷತಗಳಿಂದಲೂ ನಾನಾವಿಧವಾದ ಹೂಗಳಿಂದಲೂ

ಪೂಜಿಸಿ ಭಕ್ತಿಯಿಂದೆರಗಿ ಹೊಟು ಅಚ್ಯುತಕಲ್ಪವನ್ನು ಸೇರಿಕೊಂಡನು.

ಇತ್ತ, ರಾಮಭಟ್ಟಾರಕರು ಹದಿನಾರು ಬಿಲ್ಲು ಉದ್ದ ಮತ್ತು ಹದಿನಾರು ಸಾವಿರ ವರ್ಷ ಆಯುಸ್ಸನ್ನು ಹೊಂದಿ ಸಮಯಸ್ಥಿತಿಯನ್ನು ಪರಿಪಾಲಿಸುತ್ತಿದ್ದರು. ದೇವಮರ್ತ್ಯಖೇಚರ ರಾಜರುಗಳಿಂದ ಇಪ್ಪತ್ತೈದು ವರ್ಷಗಳ ಕಾಲ ಪೂಜೆವಡೆಯುತ್ತ, ಭವ್ಯರೆಂಬ ಸಸಿಗಳಿಗೆ ನಿರ್ವೃತಿಧರ್ಮವೆಂಬ ಮಳೆ ಸುರಿಸುತ್ತ ನಿರ್ಬಾಧಬೋಧಜ ಯಶೋಲತೆಯಿಂದ ಮೂರು ಲೋಕಗಳನ್ನೂ ಕಟ್ಟಿದರು. ಕುಮತಗಳ ತೇಜಸ್ಸನ್ನು ಕೆಡಿಸುತ್ತ ಒಳನಾಡಿನಲ್ಲೆಲ್ಲ ಸುತ್ತಾಡುತ್ತ, ಭವ್ಯ ಜನರನ್ನು ರತ್ನತ್ರಯಗಳಿಂದ ಅಲಂಕರಿಸುತ್ತ, ದೆಸೆವೆಣ್ಣಿನೆಡೆಗೆ ಧರ್ಮವಿಜಯದ ನೋಟವನ್ನು ಬೀರುತ್ತ ಕೇವಲಿಗಳು ಕುಬೇರಪರ್ವತವನ್ನು ಬಂದು ಸೇರಿದರು. ಗಿರಿರಾಜನೆನಿಸಿದ ಕೈಲಾಸ ಶೈಲದಲ್ಲಿ, ಕಲ್ಪತರುಗಳ ಹಾಗೂ ಕನಕಜಲಜಷಂಡಗಳ ನಡುವೆ ಇದ್ದ ಅತ್ಯಂತ ಶುದ್ಧ ಸ್ಫಟಿಕಮಣಿಶಿಲೆಯ ಪೀಠದ ಮೇಲೆ ರಾಮಚಂದ್ರಭಟ್ಟಾರಕರು ಪ್ರತಿಮಾಯೋಗದಲ್ಲಿ ಗುಣಭವನ ಮಣಿಸ್ತಂಭದಂತೆ ನಿಂತರು. ಸೂಕ್ಷ್ಮಶರೀರಯೋಗದಿಂದ ಸೂಕ್ಷ್ಮಕ್ರಿಯಾಪ್ರಾತಿಯೆಂಬ ಪರಮ ಶುಕ್ಲಧ್ಯಾನದಲ್ಲಿ ನೆಲೆಸಿ, ಲಘುಕರ್ಮಪರಿಪಾತನಶಕ್ತಿಯನ್ನು ಗಳಿಸಿ, ದಂಡ ಕವಾಟಪ್ರತರ ಲೋಕಪೂರಣಕ್ರಿಯೆಗಳನ್ನು ಪ್ರಯೋಗಿಸಿ ನಾಲ್ಕು ಅಘಾತಿಕರ್ಮಸ್ಥಿತಿಯ ಕಾಲವನ್ನು ಒಂದೇ ಬಗೆಯಾಗಿ ಮಾಡಿ ಶರೀರಪ್ರಮಾಣದಲ್ಲಿ ನಿಂತು ವಾಙ್ಮನಃಕಷಾಯಗಳನ್ನು ನಾಶಮಾಡಿಕೊಂಡು ಸಕಲಬದ್ಧಾಶ್ರವ ನಿರೋಧದಿಂದ ಅಯೋಗಿಕೇವಲಿ ಸ್ಥಾನವನ್ನು ಪಡೆದು ಸಮುಚ್ಛಿನ್ನ ಪ್ರಾಣಾಪಾನಪ್ರಚಾರ ಹಾಗೂ ಸಮುಚ್ಛಿನ್ನ ಕ್ರಿಯಾವೃತ್ತಿ ಧ್ಯಾನಪ್ರವರ್ತನಾಪರನಾಗಿದ್ದರು. ಗುಣಪರಿಕರಗಳಿಂದ ಪರಿಪೂರ್ಣನೆನಿಸಿ ಮುಕ್ತಿರಂಭೆಯನ್ನು ಹೊಂದಲುತ್ಸುಕರಾದರು. ಇಪ್ಪತ್ತೆರಡು ಬಗೆಯ ವೇದನೀಯ ದೇವಗತಿ ಪ್ರಕೃತಿಗಳನ್ನು ದೂರಮಾಡಿ ಚಿಪ್ಪಿನಿಂದ ಹೊರಬಂದ ಮುತ್ತಿನಂತೆಯೂ, ಕಲ್ಪದೂರವಾದ ಕನಕದಂತೆಯೂ ಆದರು. ಆನಂತರ ಹದಿಮೂರು ಬಗೆಯ ವೇದನೀಯ ಮನುಷ್ಯಗತಿ ಪ್ರಕೃತಿಗಳನ್ನು ನಿರ್ಮೂಲ ಮಾಡಿ ಸಕಲಸಂಸಾರಭಾರ ದುಃಖಭಾರಭಂಜನಗೈದು ನಿರಂಜನರಾದರು. ಅಘಾತಿಕರ್ಮಗಳು ನಿಶ್ಶೇಷವಾಗಿ ತನ್ನ ಎಂಟು ಗುಣಗಳು ಹೊಳೆಯಲು ಮೂರುಲೋಕಗಳ ಮೇಲೆ ಬೆಳ್ಗೊಡೆಯಂತಿದ್ದ ಸಿದ್ಧನಿಲಯಕ್ಕೆ ಆನಂದದಿಂದ ಹೋಗಿ ಶ್ರೀರಾಮಭಟ್ಟಾರಕರು ಶಾಶ್ವತವಾದ ಮುಕ್ತಿವಧುವನ್ನು ಸೇರಿದರು.

ಶ್ರೀರಾಮಭಟ್ಟಾರಕರು ಪರಮಪದವನ್ನು ಹೊಂದಲು ಹೂಮಳೆಯಾಯಿತು, ಎಲ್ಲ ದಿಕ್ಕುಗಳಲ್ಲಿಯೂ ದೇವದುಂದುಭಿಗಳು ಮೊಳಗಿದವು, ಅಮೋದಕರವಾದ ಮಂದಮಾರುತವು ತೀಡಿತು. ದೇವನಿಕಾಯವೆಲ್ಲ ನಿರ್ವಾಣಪೂಜೆಗೆಂದು ಬಂದರು. ಸುರವನಿತೆಯರು ಪಳಿಕಿನ ಕೊಡಗಳಲ್ಲಿ ಗಂಗೆಯ ನೀರನ್ನು ತುಂಬಿ ತಂದರು; ಮತ್ತೆ ಕೆಲವರು ಚಂದನ ಕರ್ದಮವನ್ನೂ ಹೂಗೊಂಚಲನ್ನೂ ಹಿಡಿದು ಬಂದರು. ಮತ್ತೂ ಕೆಲವರು ಬಗೆಬಗೆಯ ಹಣ್ಣುಗಳನ್ನು ಹೊತ್ತು ತಂದರು. ಯಮನನ್ನು ಗೆದ್ದ ರಾಮಜಿನರನ್ನು ಇಂದ್ರರುಗಳೆಲ್ಲ ಅರ್ಚಿಸುವಾಗ ಕರ್ಣಾಮೃತದಂತೆ ವಿವಿಧ ವಾದ್ಯಗಳು ಲಯಬದ್ಧವಾಗಿ ಮೊಳಗಿದವು.

* * * * *

ಕನ್ನಡದ ಮುಖ್ಯಚಂಪೂಕವಿಗಳು ಹಳೆಯ ಕಾವ್ಯವಸ್ತುವನ್ನಾರಿಸಿಕೊಂಡರೂ ಅದಕ್ಕೆ ಹೊಸ ಆಯಾಮವನ್ನು ಜೋಡಿಸುವುದರ ಮೂಲಕ ಕಾವ್ಯಕ್ಕೆ ವಿಶಿಷ್ಟತೆಯನ್ನು ತಂದಿತ್ತವರು. ಆ ಸಾಲಿನಲ್ಲಿ, ಹನ್ನೊಂದು-ಹನ್ನೆರಡನೆಯ ಶತಮಾನಗಳ ತಿರುವಿನಲ್ಲಿದ್ದ, ಅಭಿನವ ಪಂಪನೆಂದು ತನ್ನನ್ನು ಕರೆದುಕೊಂಡ ನಾಗಚಂದ್ರನೂ ಸೇರುತ್ತಾನೆ. ಜೈನ ಪರಂಪರೆಯ ರಾಮಾಯಣವನ್ನು ಬರೆದು ಅದನ್ನು 'ರಾಮಚಂದ್ರಚರಿತಪುರಾಣ'ವೆಂದು ಕರೆದರೂ ಅದರಲ್ಲಿ ಬದುಕಿನ ಬಹುಮುಖ್ಯ ಶಕ್ತಿಯಾದ ಕಾಲದ ಬಗೆಗಿನ ಸೂಕ್ಷ್ಮ ಚಿಂತನೆಯನ್ನು ಮೇಳಯಿಸಿದ್ದಾನೆ. ಇದು ನಡೆದಿರುವುದು ರಾವಣನ ಪಾತ್ರಚಿತ್ರಣದಮೂಲಕ.ರಾವಣ 'ಪರಾಂಗನಾವಿರತಿ' ಎಂಬ ಅನ್ಯಸ್ತ್ರೀಯಲ್ಲಿ ಮೋಹಗೊಳ್ಳದ ವ್ರತವನ್ನು ತೊಟ್ಟು ಅದನ್ನು ಕಟ್ಟುನಿಟ್ಟಾಗಿ ಪಾಲಿಸಿದವನು. ಆದರೆ ಕಾಡಿನಲ್ಲಿ ಸೀತೆಯನ್ನು ಕಂಡಕ್ಷಣವೇ 'ಪದ್ಮಪತ್ರದ ಜಲಬಿಂದು'ವಿನಂತೆ ಅವನ ಮನಸ್ಸು ಚಂಚಲಗೊಳ್ಳುತ್ತದೆ. 'ಅಬ್ಧಿಯುಮೊರ್ಮೆ ಕಾಲವಶದಿಂದ ಮರ್ಯಾದೆಯಂ ದಾಂಟದೇ' ಎಂಬುದು ಕವಿಯ ಆಗಿನ ಉದ್ಗಾರ. ಸ್ವಭಾವ ಪಲ್ಲಟಕ್ಕೆ ಈ ಕಾಲಮಹಿಮೆ ಮುಖ್ಯಕಾರಣ. ಗೌರವಾರ್ಹನಾಗಿದ್ದ ರಾವಣ 'ಕಾಲವಶ'ದಿಂದ ದುರಂತವನ್ನೆದುರಿಸುತ್ತಾನೆ; ಅವನೊಬ್ಬ 'ದುರಂತನಾಯಕ'ನಾಗುತ್ತಾನೆ. ಇಂಥ ರಾವಣನ ಪಾತ್ರ ಓದುಗರ ಮನಕಲಕುತ್ತದೆ;

ರಾವಣಪಾತ್ರವನ್ನು ವಿಶಿಷ್ಟ ಹದದಲ್ಲಿ ಕಡೆದಿರಿಸುವ ಜೊತೆಗೆ ನಾಗಚಂದ್ರ ರಾಮನ ಸೀತಾವಿರಹದ ದುಃಖವನ್ನು ಮನಮಿಡಿಯುವಂತೆ ವರ್ಣಿಸುತ್ತಾನೆ. ಇವುಗಳಜೊತೆಗ ''ಅರ್ಥಾಂತರನ್ಯಾಸ' ಅಲಂಕಾರದ ಬಳಕೆ ಮತ್ತು ಹದವಾದ ಸಂಸ್ಕೃತ-ಕನ್ನಡಗಳ ಹೊಂದಾಣಿಕೆಯ ಭಾಷೆ ನಾಗಚಂದ್ರನಿಗೆ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಗಟ್ಟಿಸ್ಥಾನವನ್ನು ದೊರಕಿಸಿವೆ. ಇಂಥ ಕೃತಿಯನ್ನು ಈಗಿನ ಓದುಗರೂ ಸವಿಯಬೇಕೆಂಬ ಆಸೆಯಿಂದ ಇಡೀ ಕಾವ್ಯವನ್ನು ಹೊಸಗನ್ನಡ ಗದ್ಯಕಥನದ ರೂಪದಲ್ಲಿ ನಿರೂಪಿಸಲಾಗಿದೆ; ಈ ನಿರೂಪಣೆ ಮೂಲದ ಶೈಲಿಯ ಪರಿಚಯ ಮಾಡಿಸಬೇಕೆಂಬ ಹಂಬಲವನ್ನು ಹೊತ್ತಿದೆ.

ಡಾ॥ ಪಿ.ವಿ. ನಾರಾಯಣ



ಕಾಮಧೇನು
ಪುಸ್ತಕ ಭವನ

5/1, ನಾಗಪ್ಪ ರಸ್ತೆ, ಶೇಷಾದ್ರಿಪುರ, ಬೆಂಗಳೂರು-560 020

ಕಾಮಧೇನು ಪುಸ್ತಕ ಭವನ-ಶಾಸಕರ ಭವನ-ಬೆಂಗಳೂರು 560 001 ದೂ: 944 944 6328

ಬೆಲೆ : ₹ 150/